# ಸಂಜೆಗತ್ತಲು

ಅ.ನ.ಕೃಷ್ಣರಾಯ



ವಿಜಯ ಸಾಹಿತ್ಯ, ಬೆಂಗಳೂರು ೪

" Prostitution is the dehumanization of womanhood, the outlawry of the female body, the destruction of all spiritual qualities, degradation to the status of a slave, the transformation of the human being into a mere commodity . . . The prostitute represents a regression into the uncivilized love-life of primitive times, which tolerated promiscuity, in which every male would perform the sex act fortuitously and with any female at hand ; afterwards they would separate without any scruples only to indulge in the same promiscuous gratification with other persons. . . . . And yet the prostitute in her innermost being is a human being like you and I, with human heeds for attach ment and affection with ineradicable roots of shame and love, with indestructible feelings for her family and child, though all this care is covered and made unrecognizable by her sordid occupation."

—*KISCH.*

" I have seen passion wallowing in the mire of prostitution, as sordid and abject as a piece of silk on a dung-heap ; I have seen love bought and sold, passing from hand to hand, from shame to vice—but even in these sordid creatures I could still find a spot which was not soiled, bearing witness to previous innocence . . . . It is a very rare thing even in the case of a woman who has offered her love to a thousand men, to find all her treasures of modesty and chastity, provided by nature, completely gone. Even in the life of the most profligate woman, nay in the slime of prostitution, we may perceive many a diamond, which, strangely enough, has resisted the fire of debauchery and mercenary love."

—*MANTEGAZZA.*

(*Quoted by Dr Erich Wulffen in*
"*WOMAN AS A SEXUAL CRIMINAL.*")

# ಮುನ್ನುಡಿ

ವೇಶ್ಯಾವೃತ್ತಿಯ ವಿವಿಧ ಮುಖಗಳನ್ನು ತೋರುವ ಉದ್ದೇಶದಿಂದ ನಾನು **'ನಗ್ನಸತ್ಯ'(೧೯೫೦), 'ಶನಿಸಂತಾನ'(೧೯೫೧)** ಕಾದಂಬರಿಗಳನ್ನು ಪ್ರಕಟಿಸಿದ ಮೇಲೆ **'ಸಂಜೆಗತ್ತಲು'** (೧೯೫೨) ಪ್ರಕಟಿಸುತ್ತಿದ್ದೇನೆ. 'ನಗ್ನಸತ್ಯ'ದಲ್ಲಿ ಸಮಸ್ಯೆಯ ಆರ್ಥಿಕ ಮುಖವನ್ನು ಪ್ರಧಾನವಾಗಿಟ್ಟುಕೊಂಡು ಉಳಿದ ಸಮಸ್ಯೆಗಳ ಮೇಲೆ ತೋರು ಬೆಳಕನ್ನು ಚೆಲ್ಲಿದ್ದೇನೆ. 'ಶನಿಸಂತಾನ'ದಲ್ಲಿ ಮನೋವ್ಯಾಪಾರದ ಮುಖಕ್ಕೆ ಪ್ರಾಧಾನ್ಯಕೊಟ್ಟಿದ್ದೇನೆ. 'ಸಂಜೆಗತ್ತಲು' ಕಾದಂಬರಿಯಲ್ಲಿ ಈ ಸಮಸ್ಯೆಯ ಪರಿಣಾಮದ ಚಿತ್ರ ಕೊಟ್ಟಿದ್ದೇನೆ. 'ಸಂಜೆಗತ್ತಲು' ಹೊರಬೀಳುವುದಕ್ಕೂ ಕಾಯದೆ ಕೆಲವು ಕನ್ನಡ ಪತ್ರಿಕೆಗಳು (ಮುಖ್ಯವಾಗಿ 'ಪ್ರಜಾವಾಣಿ'–'ಚಿತ್ರಗುಪ್ತ'–'ಕರ್ಮವೀರ') ನಗ್ನಸತ್ಯ, ಶನಿಸಂತಾನ ಕಾದಂಬರಿಗಳ ಮೇಲೆ ಕಟುಟೀಕೆಯ ಸುರಿಮಳೆಯನ್ನೂ ಅವುಗಳ ಲೇಖಕನಾದ ನನ್ನ ಮೇಲೆ ಅಪಪ್ರಚಾರದ ಶರವರ್ಷವನ್ನೂ ಕರೆದವು. ಈ ವಿಮರ್ಶೆ, ಟೀಕೆಗಳಿಗೆ 'ಸಂಜೆಗತ್ತಲು' ಹಿನ್ನುಡಿಯಲ್ಲಿ ಉತ್ತರ ಕೊಡಬೇಕೆಂದಿದ್ದ ನಾನು **'ಸಾಹಿತ್ಯ ಮತ್ತು ಕಾಮಪ್ರಚೋದನೆ'** (೧೯೫೨)* ಎಂಬ ಗ್ರಂಥವನ್ನೇ ಬರೆದು ಪ್ರಕಟಿಸಬೇಕಾಯಿತು.

ಅಚ್ಚಿನಲ್ಲಿ ಬಂದ ಟೀಕೆಗಳಿಗಿಂತ ಹೆಚ್ಚಾಗಿ 'ಪಿಸುಮಾತಿನ ಅಪಪ್ರಚಾರ (Whispering Campaign) ಬಲವಾಗಿ ನಡೆಯಿತು. ಅವುಗಳಲ್ಲಿ ಹೊರಟಿರುವ ಕೆಲವು ವಿಷಯಗಳನ್ನು ಓದುಗರ ಗಮನಕ್ಕೆ ತರಲಿಚ್ಛಿಸುತ್ತೇನೆ.

೧. 'ನಗ್ನಸತ್ಯ' 'ಶನಿಸಂತಾನ' ಕಾದಂಬರಿಗಳು ಅಶ್ಲೀಲವೆಂದು ಪರಿಗಣಿಸಲ್ಪಟ್ಟು ಸರ್ಕಾರದಿಂದ ಮುಟ್ಟುಗೋಲು ಹಾಕಿಸಿಕೊಂಡಿವೆ. 'ಸಂಜೆಗತ್ತಲು' ಬರೆಯಕೂಡದೆಂದು ಅ. ನ. ಕೃ ಅವರಿಗೆ ಎಚ್ಚರಕೊಡಲಾಗಿದೆ. 'ಸಂಜೆಗತ್ತಲು' ಪ್ರಕಟವಾಗುವುದಿಲ್ಲ.

---

* "ಸಾಹಿತ್ಯ ಮತ್ತು ಕಾಮಪ್ರಚೋದನೆ" ; ಪ್ರಕಾಶಕರು : ವಾಹಿನಿ ಪ್ರಕಾಶನ ಬೆಂಗಳೂರು-೪.

೨. ಅ. ನ. ಕೃ. ಕಮ್ಯೂನಿಸ್ಟ್ ಪಾರ್ಟಿಯ ಹಾಗೂ ರಷ್ಯಾದ ವಿರೋಧಿಗಳಾಗಿದ್ದಾರೆ. ಅವರು ಅಮೆರಿಕನ್ ಪಕ್ಷ ವಹಿಸಿದ್ದಾರೆ.

೩. ವೇಶ್ಯಾಸಮಸ್ಯೆ ಅಲ್ಪಸಂಖ್ಯಾತರಿಗೆ ಸಂಬಂಧಪಟ್ಟ ಪ್ರಶ್ನೆ. ಭಾರತದಲ್ಲಿ ಅನೇಕ ಸಮಸ್ಯೆಗಳಿರುವಾಗ ಈ ಸಣ್ಣ ಸಮಸ್ಯೆಗೆ ಇಷ್ಟೊಂದು ಮಹತ್ವ ಕೊಡುವುದೇಕೆ ?

**ಇವುಗಳಿಗೆ ನನ್ನ ಉತ್ತರ :**

೧) ನಗ್ನಸತ್ಯ–ಶನಿಸಂತಾನ ಕಾದಂಬರಿಗಳನ್ನು ಅಶ್ಲೀಲವೆಂದೂ, ಕಾಮಪ್ರಚೋದಕವೆಂದೂ ಪರಿಗಣಿಸುವವರ ವಿಚಾರ ವೈಖರಿ ಹಾಸ್ಯಾಸ್ಪದವಾಗಿದೆ. ಅನೀತಿಜೀವನದ ಪರಿಣಾಮವನ್ನು ಇಷ್ಟು ಉಗ್ರವಾಗಿ ಚಿತ್ರಿಸಿ ಜನತೆಯ ಲಕ್ಷ್ಯವನ್ನು ಸಮ್ಯಕ್ ಬೋಧ, ಸಮ್ಯಕ್ ಚಾರಿತ್ರ್ಯ, ಸಮ್ಯಕ್ ಜ್ಞಾನದಕಡೆಗೆ ಸೆಳೆದಿರುವ ನೀತಿಪ್ರಸಾರದ ಪ್ರಬಲಸಾಧನಗಳೆಂದು ನಾನು ಧೈರ್ಯವಾಗಿ ಹೇಳಬಲ್ಲೆ. ಸರ್ಕಾರ ಈ ಕಾದಂಬರಿಗಳನ್ನು ಮುಟ್ಟಗೋಲು ಹಾಕಿಕೊಂಡಿಲ್ಲ; ಸಂಜೆಗತ್ತಲು ಬರೆಯಕೂಡದೆಂದು ಎಚ್ಚರಿಕೆ ಕೊಟ್ಟಿಲ್ಲವೆನ್ನುವುದಕ್ಕೆ ' ಸಂಜೆಗತ್ತಲು ' ಪ್ರಕಟವಾಗಿರುವುದೇ ಸಾಕ್ಷಿ.

೨) ಭಾರತದ ಮೇಲೆ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಪ್ರಭಾವ ಬೀರುತ್ತಿರುವ ಅಮೆರಿಕನ್ ರಾಜಕಾರಣವನ್ನು ನಾನು ನನ್ನ ಕಮ್ಯೂನಿಸ್ಟ್ ಮಿತ್ರರಿಗಿಂತಲೂ ಹೆಚ್ಚು ಉಗ್ರವಾಗಿ ಖಂಡಿಸಿದ್ದೇನೆ. ಈ ಬಗ್ಗೆ ನನ್ನ ಸ್ಪಷ್ಟ ಧೋರಣೆಯೇನೆಂದು ತಿಳಿಯಲಿಚ್ಛಿಸುವವರು ನನ್ನ **' ಶ್ರೀಮತಿ '** ಕಾದಂಬರಿಯನ್ನೂ ಅದರ ಮುನ್ನುಡಿಯನ್ನೂ ಓದಬಹುದು.

' ಶನಿಸಂತಾನ '(ಪುಟ ೭)ದಲ್ಲಿ ನಾನು ಆಧುನಿಕ ರಷ್ಯಾ ಸಾಹಿತ್ಯ ಯಾವ ಮಟ್ಟಕ್ಕಿಳಿದಿದೆಯೆಂದು ಸೂಚಿಸಿದ್ದೇನೆ. ಲೆನಿನ್, ಸ್ಟಾಲಿನ್ ರಷ್ಯಾಗಳ ಆರಾಧಕರಾಗಿ ಭಾರತಕ್ಕೆ ಹಲವು ಬಗೆಯಲ್ಲಿ ದ್ರೋಹ ಬಗೆಯುತ್ತಿರುವ ಕಮ್ಯೂನಿಸ್ಟರನ್ನು ನಿರ್ದಾಕ್ಷಿಣ್ಯವಾಗಿ ನನ್ನ ಲೇಖನಗಳಲ್ಲಿ, ಭಾಷಣಗಳಲ್ಲಿ ಖಂಡಿಸಿದ್ದೇನೆ.

ಭಾರತಕ್ಕೆ ಬೇಕಾದುದು ಸಾಮ್ಯವಾದದ ತಳಹದಿಯ ಮೇಲೆ ಕಟ್ಟಲ್ಪಟ್ಟಿರುವ ರಾಜ್ಯಘಟನೆ. ಈ ದೇಶದ ಪ್ರಜೆಯಾದ ಪ್ರತಿಯೊಂದು

ವ್ಯಕ್ತಿಗೂ ಅನ್ನ, ವಸತಿ, ವಿಹಾರ ಶಿಕ್ಷಣ ಸೌಕರ್ಯವಿರಬೇಕು. † ಆದರೆ ಸಂತುಷ್ಟ ಭಾರತ ನಿರ್ಮಾಣಕ್ಕೆ ನಾವು ಚೀಣ, ರಷ್ಯಾ, ಅಮೇರಿಕಾ ದೇಶಗಳ ಮರೆಹೊಕ್ಕು ಅವರ ಎಂಜಲುಗೂಳಿಗೆ ಕೈನೀಡಿದರೆ ನಮ್ಮ ಸ್ವಾತಂತ್ರ್ಯವನ್ನು ನೀಗಿಕೊಂಡು ಮತ್ತೆ ಪರಕೀಯರ ಪದತಲದಲ್ಲಿ ಕೊಳೆಯಬೇಕಾಗುತ್ತದೆ. ಅಮೆರಿಕೆಯ ಹಿಮ್ಮಡಿಯಡಿಯಲ್ಲಿ ಭಾರತವನ್ನು ಕೆಡವಬೇಕೆಂದು ಭಾರತದ ಬಂಡವಳಿಗರು ಪ್ರಯತ್ನಿಸುತ್ತಿರುವಂತೆ, ರಷ್ಯದ ಹಿಮ್ಮಡಿಯ ಕೆಳಗೆ ಭಾರತವನ್ನು ಹಾಕಬೇಕೆಂದು ಭಾರತದ ಕಮ್ಯುನಿಸ್ಟರು ಪ್ರಯತ್ನಿಸುತ್ತಿದ್ದಾರೆ. ಕಳೆದ ಮಹಾಯುದ್ಧದಲ್ಲಿ ಫ್ರಾನ್ಸ್‌ದೇಶದಲ್ಲಿ ಲೇಗಾ, ಪಿತಾ ಯಾವ ಪಾತ್ರ ವಹಿಸಿದರೋ ಅದೇ ಪಾತ್ರ ಭಾರತದಲ್ಲಿ ವಹಿಸಲು ನಮ್ಮ ಕಮ್ಯೂನಿಸ್ಟರು ಪ್ರಯತ್ನಿಸುತಿದ್ದಾರೆ.* ಈ ಎರಡು ದುಷ್ಟಶಕ್ತಿಗಳನ್ನು ಎದುರಿಸಬೇಕಾದುದು ಭಾರತದ ಸತ್ಪ್ರಜೆಯ ಪವಿತ್ರಕರ್ತವ್ಯ.

ಕೆಲವು ಸಾಮಾಜಿಕ ಸಮಸ್ಯೆಗಳನ್ನು (ಮುಖ್ಯವಾಗಿ ವೇಶ್ಯಾ ಸಮಸ್ಯೆಯನ್ನು) ಬಿಡಿಸಿ, ನಿರ್ಮೂಲಮಾಡುವುದರಲ್ಲಿ ರಷ್ಯಾ ಹಾಕಿಕೊಟ್ಟಿರುವ ಮೇಲ್ಪಂಕ್ತಿಯನ್ನು ನಾನು ಓದುಗರ ಗಮನಕ್ಕೆ 'ಸಾಹಿತ್ಯ ಮತ್ತು ಕಾಮ ಪ್ರಚೋದನೆ' ಗ್ರಂಥದಲ್ಲಿ (ಪುಟ ೨೯೯) ತಂದಿದ್ದೇನೆ. ರಾಜಕೀಯ ಸಾಮಾಜಿಕ, ಸಾಹಿತ್ಯ, ಕಲಾರಂಗಗಳಲ್ಲಿ ರಷ್ಯಾ ಮಾಡುತ್ತಿರುವ ಪ್ರಯೋಗಗಳನ್ನು ನಾನು ಶ್ರದ್ಧೆಯಿಂದ, ಕುತೂಹಲದಿಂದ ಗೌರವದಿಂದ ನೋಡುತ್ತಿದ್ದೇನೆ. ಆದರೆ ಅದೇ ಪ್ರಯೋಗ ತಂತ್ರವನ್ನೂ ಧೋರಣೆಯನ್ನು ಭಾರತಕ್ಕೆ ಆಮದು ಮಾಡಿಕೊಳ್ಳಬೇಕೆಂಬ ತತ್ವವನ್ನು ಮಾತ್ರ ನಾನು ಪ್ರಬಲವಾಗಿ ವಿರೋಧಿಸುತ್ತೇನೆ. ರಷ್ಯಾ ಪ್ರಭಾವವನ್ನಂಗೀಕರಿಸಿರುವ ಭಾರತದ ಸಾಹಿತಿಗಳು, ಕಲಾವಿದರ ದುರಂತ ನೋಡಿರುವವರಿಗೆ, ತೆಲಂಗಾಣದ ಹತ್ಯಾಕಾಂಡದ ಕಥೆಯನ್ನು ಬಲ್ಲವರಿಗೆ ನನ್ನ ಮಾತಿನ ನಿಷ್ಠುರ ಸತ್ಯ ಮನವರಿಕೆಯಾಗುತ್ತದೆ.

---

† ನನ್ನ ರಾಜಕೀಯ ಧೋರಣೆಯನ್ನು ತಿಳಿಯಲಪೇಕ್ಷಿಸುವವರು 'ಯುಗಾಂತರ' ಪತ್ರಿಕೆಯಲ್ಲಿ ನಾನು ಬರೆದಿರುವ ಲೇಖನ ನೋಡಬಹುದು.

* ಸದ್ಯದಲ್ಲೇ ಪ್ರಕಟವಾಗುವ ನನ್ನ 'ಕಾಮ್ರೇಡ್ ಗಣೇಶ' ಕಾದಂಬರಿಗೆ ಇದೇ ವಸ್ತು.

ವೇಶ್ಯಾಸಮಸ್ಯೆಯೊಂದನ್ನೇ ಕುರಿತು ನಾನು ಬರೆಯುತ್ತಿದ್ದೇನೆಂದು ಪ್ರಚಾರಮಾಡುತ್ತಿರುವ ಎದೆಗಾರಿಕೆ ನಿಜವಾಗಿಯೂ ಮೆಚ್ಚತಕ್ಕದ್ದೆ. ಸಾಹಿತಿ ಸಂಗೀತಗಾರ, ನಟ, ಚಿತ್ರಗಾರರ ಸಮಸ್ಯೆಗಳು (ಸಂಧ್ಯಾರಾಗ ಉದಯರಾಗ, ನಟಸಾರ್ವಭೌಮ, ಸಾಹಿತ್ಯರತ್ನ), ಧರ್ಮದ ದುರಂತ (ಅರುಳು ಮರುಳು), ವಾಮಾಚಾರ (ಮುಯ್ಯಿಗೆ ಮುಯ್ಯಿ), ಸಮಾಜದಲ್ಲಿ ಹೆಣ್ಣಿನ ಸ್ಥಾನ (ಕಣ್ಣೀರು ಕಾಲಚಕ್ರ, ಮಂಗಳಸೂತ್ರ, ತಾಯಿಯ ಕರುಳು) ಮಿಶ್ರಜಾತಿವಿವಾಹ (ಶ್ರೀಮತಿ), ಸ್ವಾತಂತ್ರ್ಯಾವೇಶ (ಅಮರ ಆಗಸ್ಟ್), ಸ್ವಾತಂತ್ರ್ಯದ ತರುವಾಯದ ಸ್ಥಿತಿ (ಹೊಸಲುದಾಟಿದ ಹೆಣ್ಣು), ಸಿನಿಮಾದಿಂದ ಆಗುತ್ತಿರುವ ಅನರ್ಥ (ಚಿತ್ರವಿಚಿತ್ರ) ಇವಿಷ್ಟೂ ನಾನು ಈಗಾಗಲೇ ವಿಚಾರಮಾಡಿ ಬರೆದಿರುವ ವಿಷಯಗಳು. ಕಮ್ಯುನಿಸ್ಟರ ಹಾವಳಿ (ಕಾಮ್ರೇಡ್ ಗಣೇಶ) ಜಾತ್ಯಂಧತೆ (ಶೋಕಚಕ್ರ), ಪತ್ರಿಕಾಪ್ರಪಂಚ (ಗಾಜಿನ ಮನೆ)–ಇವು ನಾನು ಸದ್ಯದಲ್ಲೇ ಬರೆಯುವ ವಿಷಯಗಳು.

೩) ಭಾರತದ ಅನೇಕ ಸಮಸ್ಯೆಗಳು ನಿವಾರಣೆಯಾಗದಿರುವುದಕ್ಕೆ ಈ ತಾಟಸ್ಥ್ಯನೀತಿಯೇ (Laissez - faire) ಕಾರಣ. ವೇಶ್ಯಾಸಮಸ್ಯೆಯ ವ್ಯಾಪ್ತಿ, ಪ್ರಭಾವ, ಪರಿಣಾಮವೆಂಥದು ಎನ್ನುವುದರ ಪೂರ್ಣಕಲ್ಪನೆಯೇ ನಮಗಿಲ್ಲ. ತಾಟಸ್ಥ್ಯನೀತಿಪ್ರಿಯರು ತಿಳಿದಿರುವಷ್ಟು ಈ ಸಮಸ್ಯೆ ಹಗುರವಾದುದೂ ಅಲ್ಲ; ಅಲ್ಪಸಂಖ್ಯಾತರಿಗೆ ಅಡಕವಾದುದೂ ಅಲ್ಲ. ಊರಿನಲ್ಲಿ ಒಬ್ಬನಿಗೊ ಇಬ್ಬರಿಗೊ ಕಾಲರಾಬೇನೆ ಬಂದರೆ ಇಡಿಯ ಊರೇ ಎಚ್ಚರ ದಿಂದಿರುವುದೇಕೆ? ಅಲ್ಪಸಂಖ್ಯಾತರ ಪ್ರಶ್ನೆಯೆಂದು ಊರು ನೆಮ್ಮದಿಯಾಗಿರ ಬಹುದಲ್ಲ!

'ಲೀಗ್ ಆಫ್ ನೇಷನ್ಸ್' (League of Nations) ಸಂಸ್ಥೆ ಈ ಸಮಸ್ಯೆಯನ್ನಳಿಯುವ ಮುನ್ನ ಯೂರೋಪ್ ಕೂಡಾ ಹಾಗೇ ಭಾವಿಸಿತ್ತು. ಕಿನ್ಸೆ ರಿಪೋರ್ಟ್ ಹೊರಬೀಳುವವರೆಗೆ ಅಮೇರಿಕಾ ಇದೇ ತಾಟಸ್ಥ್ಯ ಧೋರಣೆ ತಳೆದಿತ್ತು. ಲೀಗ್ ಆಫ್ ನೇಷನ್ಸ್ ಅವರ 'ವೈಟ್ ಸ್ಲೇವ್ ಟ್ರಾಫಿಕ್' (White Slave Traffic) ವರದಿ, ಕಿನ್ಸೆ ವರದಿಯಂಥ ವರದಿ ಭಾರತದಲ್ಲಿ ಪ್ರಕಟವಾದರೆ ಆಗ ವೇಶ್ಯಾಸಮಸ್ಯೆಯ ಬಾಹುಳ್ಯ ಹಾಗೂ ಅದರ ಪರಿಣಾಮದ ಕಲ್ಪನೆ ನಮ್ಮ ಜನಗಳಿಗುಂಟಾಗುತ್ತದೆ. **ಭಾರತ ಸರ್ಕಾರ ಕೂಡಲೆ ಒಂದು**

**ಕಮಿಷನ್ ಏರ್ಪಡಿಸಿ ಈ ಸಮಸ್ಯೆಯ ಬಗ್ಗೆ ಅಂಕೆ ಸಂಖ್ಯೆಗಳನ್ನೂ ಇದರ ಇತಿಹಾಸ ಹಾಗೂ ಪ್ರಕೃತ ಪರಿಸ್ಥಿತಿಯನ್ನೂ ಜನತೆಯ ಮುಂದಿಡಬೇಕೆಂದು ನಾನು ಕೋರುತ್ತೇನೆ.** ದೇಶಪ್ರಿಯರಾದ ವ್ಯಕ್ತಿಗಳ ಗಮನವತ್ತ ಬೀಳಲೆಂದೇ ನಾನು ಈ ಸಮಸ್ಯೆಯನ್ನು ಕುರಿತು ಕಾದಂಬರಿಗಳನ್ನು ಬರೆಯುತ್ತಿರುವುದು. ನನ್ನ ಪ್ರಯತ್ನ ಇಂದಲ್ಲ ನಾಳೆ ಫಲಕಾರಿಯಾಗಿ ದೇಶದ ಮಾನಸಿಕ, ದೈಹಿಕ ಆರೋಗ್ಯವನ್ನು ಸುಧಾರಿಸುವುದಕ್ಕೆ ಸಹಾಯಕವಾಗುವುದೆಂಬ ನಂಬಿಕೆ ನನಗಿದೆ.

ನನ್ನ ಅಪಪ್ರಚಾರಕರು (ಇವರನ್ನೇ ವಿಮರ್ಶಕರೆಂದು ಜನ ತಪ್ಪು ತಿಳಿದುಕೊಂಡಿದ್ದಾರೆ.) 'ಸಂಜೆಗತ್ತಲು' ಹೊರಬರದಂತೆ ಮಾಡಲು ಎಲ್ಲ ಪ್ರಯತ್ನವನ್ನೂ ಕೈಗೊಂಡರು. ಆದರೆ 'ಸಂಜೆಗತ್ತಲು' ಪ್ರಕಟಿಸಿ ಅವರಿಗೆ ನಿರಾಶೆಯನ್ನುಂಟುಮಾಡಬೇಕಾಯಿತು. ಈ ವಸ್ತುವನ್ನು ನಾನು ಇಲ್ಲಿಗೇ ಕೈಬಿಡುತ್ತೇನೆಂದು ಅವರು ಸಂತೃಪ್ತರಾಗಲೂ ನಾನು ಅವಕಾಶ ಕೊಡುವುದಿಲ್ಲ. ವೇಶ್ಯಾಸಮಸ್ಯೆಯ ಪೃಥಕ್ಕರಣ 'ಸಂಜೆಗತ್ತಲು' ಕಾದಂಬರಿಗೆ ಮುಗಿದಿಲ್ಲ. ಇದರ ಉಳಿದ ಮುಖಗಳನ್ನೂ ಮತ್ತೆ ಕೆಲವು ಕಾದಂಬರಿಗಳಲ್ಲಿ ಎತ್ತಿ ತೋರಿಸುತ್ತೇನೆ. ಮುಂದಿನ ಕಾದಂಬರಿ **'ಅಪರಂಜಿ'.** ಅದನ್ನು ಪ್ರಕಟಿಸುವ ದಿನವನ್ನು ನಾನು ಈಗಲೇ ಹೇಳಲಾರೆ. 'ಅಪರಂಜಿ' ಬೇಗ ಹೊರಬೀಳಬಹುದು–ತಡವಾಗಿ ಹೊರಬೀಳಬಹುದು. ತಮ್ಮ ಟೀಕೆಗಳಿಗೆ ಅಂಜಿ ಅ. ನ. ಕೃ. 'ಅಪರಂಜಿ' ಪ್ರಕಟಿಸುವುದಿಲ್ಲ ಎಂದು ಅಪಪ್ರಚಾರಕರು ಸಾರಿದರೆ ಅವರ ಮಾತಿಗೆ ಓದುಗರು ಬೆಲೆ ಕೊಡಬೇಕಾದ ಅಗತ್ಯವಿಲ್ಲ. **ಅ. ನ. ಕೃ. ಶಬ್ದ ಕೋಶದಲ್ಲಿ 'ಅಂಜಿಕೆ' ಎನ್ನುವ ಶಬ್ದವೇ ಇಲ್ಲ.**

**ಕಥೆ ಮುಗಿದಿಲ್ಲ**

'ನಗ್ನಸತ್ಯ'–'ಶನಿಸಂತಾನ'–'ಸಂಜೆಗತ್ತಲು' ಬಗೆಯ ಕಾದಂಬರಿಗಳನ್ನು ಬರೆಯುವ ಉದ್ದೇಶವೇನು? ಆತ್ಮೋಲ್ಲಾಸವೇ, ಕೀರ್ತಿಕಾಮನೆಯೇ, ಧನಸಂಗ್ರಹವೇ? ಎನ್ನುವ ಪ್ರಶ್ನೆ ಮೇಲಿಂದ ಮೇಲೆ ಬಂದಿದೆ. ಕ್ಯಾನ್ಸರ್ ಹುಣ್ಣಿನ ಬಗ್ಗೆ ಬರೆಯುವವನು ಆತ್ಮೋಲ್ಲಾಸಕ್ಕೆ ಬರೆಯಲಾರ. ಹಕ್ಕಿ, ಹೂವು, ಹಣ್ಣುಗಳಂತೆ ಕ್ಯಾನ್ಸರ್ ಚೇತೋಹಾರಿಯಲ್ಲ. ಆದರೆ ಹಕ್ಕಿ, ಹೂವು, ಹಣ್ಣುಗಳ

**ಉದ್ದೇಶವೇನು?**

ಚೆಲುವನ್ನು ಕ್ಯಾನ್ಸರ್ ವ್ಯಾಧಿಗ್ರಸ್ತ ಅನುಭವಿಸಲಾರ. ವ್ಯಕ್ತಿಯನ್ನು ಕ್ರಮ ಕ್ರಮೇಣ ಕಬಳಿಸುತ್ತಿರುವ ಕ್ಯಾನ್ಸರ್ ನಿವಾರಣೆ ಮಾಡಿ, ಹೂವು, ಹಕ್ಕಿ, ಹಣ್ಣುಗಳ ಸೊಬಗನ್ನು ಅವನೂ ಅನುಭವಿಸಬಲ್ಲಂತೆ ಮಾಡುವುದು ಶೀಲವೋ ಅಶ್ಲೀಲವೋ ? ಇಂದು ಭಾರತ ಸಮಾಜಕ್ಕೆ ವೇಶ್ಯಾ ಸಮಸ್ಯೆಯೆಂಬ ಕ್ಯಾನ್ಸರ್ ವ್ಯಾಧಿ ಬಂದಿದೆ. ಅದರ ನಿವಾರಣೆಗೆ ಯತ್ನಿಸುವುದು ಸಾಹಿತಿಗಳ ಹಾಗೂ ಸಮಾಜದ ಹಿರಿಯರ ಕರ್ತವ್ಯವಲ್ಲವೇ ?

ಕೀರ್ತಿ ಕಾಮನೆಯುಳ್ಳ ಲೇಖಕ, ಶನಿಸಂತಾನ, ನಗ್ನ ಸತ್ಯ ಬರೆದು ಅನಾಮಧೇಯರಿಂದ ಅವಾಚ್ಯ ಶಬ್ದಗಳನ್ನಾಡಿಸಿಕೊಳ್ಳಲು ಹೋಗುತ್ತಿರಲಿಲ್ಲ. ನಮ್ಮ ಮಡಿಸಾಹಿತಿಗಳಂತೆ ಜನಪ್ರಿಯವಾದ ನಿರಾಪದ ವಸ್ತುಗಳನ್ನೇ ಆಯ್ದು ಕೊಂಡು ಅವುಗಳಿಗೆ ಬಂಗಾರದ ಗಿಲೀಟು ಕೊಡಲೆತ್ನಿಸುತ್ತಿದ್ದ. ನನ್ನ ಕಾದಂಬರಿಗಳಲ್ಲಿ ಓದುಗರು ಕಾಣುವುದು ಬಂಗಾರವೂ ಅಲ್ಲ; ಬಂಗಾರದಂತೆ ಕಾಣುವ ಹಿತ್ತಾಳೆ ಸಾಮಾನೂ ಅಲ್ಲ; ಕಾಮಕ್ಕೆ, ಲೋಭಕ್ಕೆ, ಮೋಹಕ್ಕೆ ಸಿಕ್ಕಿ-ಸಮಾಜದ ಅರ್ಥಹೀನ ಕಟ್ಟುಕಾಯಿದೆಗಳಿಗೆ, ಸುಲಿಗೆಗೆ ಪಕ್ಕಾಗಿ ಉರುಳಿ ಬೀಳುತ್ತಿರುವ ನಿರ್ಭಾಗ್ಯ ಹುತಾತ್ಮರ ಚಿತ್ರ. ಅನುಕಂಪವಿಲ್ಲದ ಹೃದಯಕ್ಕೆ ಇವರ ಜೀವನ ಅರ್ಥವಾಗುವುದಿಲ್ಲ–ಮಾನವ ಕಲ್ಯಾಣ ಬಯಸದ ವ್ಯಕ್ತಿ ಇವುಗಳಲ್ಲಿ ಕಾಣುವುದು ಅಶ್ಲೀಲವೊಂದೇ !

ಒಂದು ವೇಳೆ ಈ ಸಮಸ್ಯೆಯ ಮೇಲೆ ಬರೆಯುವುದನ್ನು ನಾನು ನಿಲ್ಲಿಸುತ್ತೇನೆಂದು ಇಟ್ಟುಕೊಳ್ಳೋಣ. ಅದರಿಂದ ನಾಡಿಗೆ ಕಿಂಚಿತ್ತಾದರೂ ಉಪಕಾರವಾಗುತ್ತದೆಯೇ ? ನನ್ನನ್ನು ತೆಗಳಲು ನಾಲಗೆ ಉದ್ದಮಾಡುವ ವಿಮರ್ಶಕರು ಬೇರೆ–ನಿವಾರಣೋಪಾಯವನ್ನು ಸೂಚಿಸಲು ಸಿದ್ಧರಾಗಿದ್ದಾರೆಯೇ–ಸಮರ್ಥರಾಗಿದ್ದಾರೆಯೇ ?

ನಗ್ನಸತ್ಯ–ಶನಿಸಂತಾನದ ಬಗ್ಗೆ ನಡೆದ ಅಪಪ್ರಚಾರವನ್ನು ನಂಬಿ ಕೊಂಡಿರುವವರಿಗೆ ನಾನು ಏನೂ ಹೇಳಬೇಕಾದ ಅಗತ್ಯವಿಲ್ಲ. ಆದರೆ ಈ ಬಗ್ಗೆ ತೆರೆದ ಮನವುಳ್ಳವರಿಗೆ ಒಂದು ಮಾತು ಹೇಳಬಯಸುತ್ತೇನೆ. ನಗ್ನಸತ್ಯ–ಶನಿಸಂತಾನ ಪ್ರಕಟಿಸುವ ಮುನ್ನ ನಾನು ಹದಿನೈದು ಕಾದಂಬರಿಗಳನ್ನು ಪ್ರಕಟಿಸಿದ್ದೇನೆ—ವಿವಿಧ ವಿಷಯಗಳ ಮೇಲೆ ಒಟ್ಟು ಎಪ್ಪತ್ತು ಗ್ರಂಥಗಳನ್ನು ಪ್ರಕಟಿಸಿದ್ದೇನೆ. 'ಮದುವೆಯೊ–ಮನೆ ಹಾಳೊ' ಕೃತಿಯಿಂದ ಈವರೆಗೆ

ನಾನು ಪ್ರಕಟಿಸಿರುವ ಎಲ್ಲ ಕೃತಿಗಳಲ್ಲಿಯೂ ನನ್ನ ಅಂತರಂಗವನ್ನು ಬಿಚ್ಚಿಡುತ್ತ ಬಂದಿದ್ದೇನೆ. ಈ ಲೇಖಕನ ಚಿತ್ತವೃತ್ತಿಯನ್ನರಿಯಬೇಕೆನ್ನುವವರು ಅಪಪ್ರಚಾರಕರ ಸುಳ್ಳು ನಂಬಬೇಕಾಗಿಲ್ಲ; ನನ್ನ ಗ್ರಂಥಗಳೇ ನನ್ನ ವಿಷಯ ಸಾಕಷ್ಟು ಹೇಳುವಾಗ. ಹಣದಾಸೆಗೆ ನಾನು ವೇಶ್ಯಾಸಮಸ್ಯೆಯನ್ನು ಕುರಿತು ಬರೆಯುತ್ತಿದ್ದರೆ ಅದರಲ್ಲಿ ಓದುಗರಿಗೆ ಜಿಗುಪ್ಸೆ ಹುಟ್ಟುವಂತೆ ಮಾಡುತ್ತಿರಲಿಲ್ಲ. ಹಳೆಯ ಕವಿಗಳ ಜಾಡು ಹಿಡಿದು ಅದರಲ್ಲಿ ಅನುರಕ್ತಿ ಹುಟ್ಟುವಂತೆ ಬರೆಯುತ್ತಿದ್ದೆ. ಶೂದ್ರಕನ ವಸಂತಸೇನೆ, ಕಾಳಿದಾಸನ ಊರ್ವಶಿಯಿಂದ ದೊರೆಯುವ ಮೋಹಾಕರ್ಷಣೆ ನನ್ನ ಸರಸ್ವತಿ, ಕಮಲಾ, ಅಪರಂಜಿ, ಪಾಪ, ಬಾಲೂ ಇವರಿಂದ ದೊರೆಯಲು ಶಕ್ಯವೇ? ಈ ನಿರ್ಭಾಗ್ಯ ಜೀವಿಗಳನ್ನು ನೋಡಿ ಅನುಕಂಪ ಮಿಡಿಯುವುದಲ್ಲದೆ ಕಾಮಪ್ರಚೋದನೆಯಾಗುತ್ತದೆಯೇ?

ವೇಶ್ಯಾಸಮಸ್ಯೆಯನ್ನು ಕುರಿತು ವಿಸ್ತಾರವಾಗಿ ನಾನು ಬರೆಯುತ್ತಿರುವ ಕಾರಣವನ್ನು ಓದುಗರಿಗೆ ತಿಳಿಸಲಿಚ್ಛಿಸುತ್ತೇನೆ. ಸುಲಿಗೆ-ದಬ್ಬಾಳಿಕೆ ಎಲ್ಲಿ, ಯಾವ ಸ್ವರೂಪದಲ್ಲಿ ಕಂಡುಬಂದರೂ ಅದನ್ನು ಎದುರಿಸಬೇಕಾದುದು ಕ್ರಿಯಾಶಾಲಿಯಾದ, ಮಾನವಪ್ರೇಮಿಯಾದ, ಸತ್ಯಸಾಧಕನಾದ ಲೇಖಕನ ಕರ್ತವ್ಯ. ವ್ಯಕ್ತಿ ಸಮಾಜವನ್ನು ಸುಲಿಯುವುದೂ, ಸಮಾಜ ವ್ಯಕ್ತಿಯನ್ನು ಸುಲಿಯುವುದೂ ಒಂದೇ ಪ್ರಮಾಣದ ದೋಷಗಳೆನಿಸಿಕೊಳ್ಳುತ್ತವೆ. ಹಾಗೇ ಗಂಡು ಹೆಣ್ಣನ್ನು ಸುಲಿಯುವುದಾಗಲಿ, ಹೆಣ್ಣು ಗಂಡನ್ನು ಸುಲಿಯುವುದಾಗಲಿ ಮಹಾಪರಾಧ. ವೇಶ್ಯಾಸಮಸ್ಯೆಯಲ್ಲಿ ನನಗೆ ಕಂಡುಬರುವುದು ಗಂಡಿನ ಅನಂತ, ಅವಿಶ್ರಾಂತ, ಅಬಾಧಿತ ಸುಲಿಗೆಯ ಚಿಹ್ನೆ. ಆ ಸುಲಿಗೆಯ ಚಿತ್ರವೇ ನನ್ನ ಮೂರು ಕಾದಂಬರಿಗಳ ತಂತುವಾಗಿದೆ. ಅದರ ಜತೆ ಸರಸ್ವತಮ್ಮನಂಥ ಹೆಂಗಸು ಗಂಡಸರನ್ನು ಸುಲಿದು ಬಾಳುವ ಚಿತ್ರವನ್ನೂ ಕೊಟ್ಟಿದ್ದೇನೆ. ಸುಲಿಗೆಯ ಸ್ವರೂಪದರ್ಶನ, ಅದರ ಹೇಯ ಬೆಳವಳಿಗೆಗೆ ತಡೆಹಾಕಲೆಂದೇ ನನ್ನ ಬಯಕೆ.

ನನ್ನ ಇತರ ಕಾದಂಬರಿಗಳಿಗೆ ಕನ್ನಡ ಓದುಗರಿಂದ ಸಿಕ್ಕಿರುವಷ್ಟೇ ಸ್ವಾಗತ ನಗ್ನಸತ್ಯ, ಶನಿಸಂತಾನ ಕಾದಂಬರಿಗಳಿಗೂ ಸಿಕ್ಕಿದೆ. ಪುಸ್ತಕಗಳನ್ನು ಓದುವವರೆಲ್ಲಾ ಅದನ್ನು ಕೊಂಡು ಓದಿದ್ದಾರೆಂದು ತಿಳಿಯುವುದು ಎಂಥ

ಮೌಢ್ಯ. ಇಂದು ಕನ್ನಡದಲ್ಲಿ ನೂರು ಜನ ಓದುಗರಿಗೆ, ಒಬ್ಬರು ಕೊಳ್ಳುವವರಿಲ್ಲ. ನೂರಾರು ಜನ-ಸಾವಿರಾರು ಜನ ಈ ಪುಸ್ತಕಗಳನ್ನು ಓದುತ್ತಿದ್ದಾರೆಂದು ಅಷ್ಟು ನೂರು, ಅಷ್ಟು ಸಾವಿರ ಪುಸ್ತಕಗಳು ಖರ್ಚಾಗಿ ಲೇಖಕನಿಗೆ ಬೊಗಸೆ ಬೊಗಸೆ ಹಣ ಬಂದಿದೆಯೆಂದು ಭಾವಿಸುವುದು ಸತ್ಯ ಸ್ಥಿತಿಯ ವಿಪರ್ಯಾಸ.

ಆತ್ಮೋಲ್ಲಾಸ†, ಕೀರ್ತಿಕಾಮನೆ, ಹಣ ಸಂಗ್ರಹಣೆಗಳೊಂದನ್ನೂ ಬಯಸದೆ ಸತ್ಯಪ್ರಿಯತೆಯಿಂದ ಒಬ್ಬ ಲೇಖಕ ಬರೆಯಬಲ್ಲ ಎನ್ನುವ ಉದಾರ ವಿವೇಚನೆ ನಮ್ಮ ಓದುಗರಲ್ಲಿ ಏಕೆ ಹುಟ್ಟಬಾರದು? ಈ ನಾಡು ಸರ್ವತೋಮುಖ ಪ್ರಗತಿ ಪಡೆಯಬೇಕು-ಇದರ ಸಾಹಿತ್ಯ, ಕಲೆ, ರಾಜಕಾರಣ, ಜನಜೀವನ ಪರಿಶುದ್ಧವಾಗಿ, ಪ್ರಾಗತಿಕವಾಗಿ ಮುನ್ನಡೆಯಬೇಕು ಎಂದು ನಾವು ಕೆಲವರು ಎರಡು ಮೂರು ದಶಕಗಳಿಂದ ಬಯಸುತ್ತಿಲ್ಲವೇ—ಅದಕ್ಕಾಗಿ ಸರ್ವಸ್ವವನ್ನೂ ತ್ಯಾಗಮಾಡಿ ದುಡಿಯುತ್ತಿಲ್ಲವೇ—ನಮ್ಮ ಪ್ರಯತ್ನ ತಕ್ಕಮಟ್ಟಿಗೆ ಫಲಕಾರಿಯಾಗಿ ಕನ್ನಡ ಸಾಹಿತ್ಯಕ್ಕೆ ಭಾರತೀಯ ಸಾಹಿತ್ಯದಲ್ಲಿ, ವಿಶ್ವಸಾಹಿತ್ಯದಲ್ಲಿ ಸ್ಥಾನ ದೊರೆತಿಲ್ಲವೇ?

ಈ ಬಗೆಯ ಮನಸ್ಸು ಕೆರಳಿಸುವ ಸಾಹಿತ್ಯದಿಂದ ಏನು ಪ್ರಯೋಜನ?

---

† "Irony is a gift of the Gods, the most subtle of all the modes of speech. It is an armor and a weapon; it is a philosophy and a perpetual entertainment; it is food for the hunger of wit and drink to those thirsting for laughter. How much more elegant is it to slay your foe with the roses of irony than to massacre him with the axes of sarcasm or to belabor him with bludgeons of invective. And the adept in irony enjoys its use when he alone is aware of his meaning, and he sniggers up his sleeve to see all and sundry chained to their obtuseness, take him seriously. In a strenuous world it is only safeguard of the flippant. To the man of letters it is a missile that he can fling in the reader's face to disprove the pestilent heresy that a man writes books for the subscriber to Mudie's Library, rather than for himself. Be not deceived, gentle reader, no self-respecting writer cares a twopenny damn for you."

*Somerset Maugham in "Mrs.CRADDOCK"*

ಸಾಹಿತ್ಯ ಮನಸ್ಸನ್ನು ಪ್ರಶಾಂತಗೊಳಿಸಬೇಕು, 'ಮನಸ್ಸನ್ನು ಕದಡಬಾರದು ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಮೊಲೆಯಲ್ಲಿ ಶಾಶ್ವತ ಸಾಹಿತ್ಯ ಹಾಲಿಲ್ಲದ ತಾಯಿ ಮಗುವಿಗೆ ಬೆರಳು ಕೊಟ್ಟು ಚೀಪಿಸಿ ಮಲಗಿಸುತ್ತಾಳೆ. ಈ ಬಗೆಯ ಪ್ರಶಾಂತಿಯನ್ನು ನಮ್ಮ ಜೀವನದ ಸಮಸ್ಯೆಗಳ ಬಗ್ಗೆ ಓದುಗರು ನಿರೀಕ್ಷಿಸಲಾರರೆಂದು ನಾನು ನಂಬಿದ್ದೇನೆ. ವಿಶ್ವಸಾಹಿತ್ಯದಲ್ಲಿ ಹೆಸರಾದ ಯಾವ ಕೃತಿಯನ್ನು ನೋಡಿದರೂ ಅದು 'ಪ್ರಶಾಂತ ವರ್ಗ'ಕ್ಕೆ ಸೇರಲಾರದು. ರಾಮಾಯಣ, ಭಾರತ, ಫೌಸ್ಟ್, ಡಿವೈನ್ ಕಾಮೆಡಿ, ಷೇಕ್ಸ್‌ಪಿಯರ್, ವ್ಹಿಟ್‌ಮನ್, ಷೆಲ್ಲಿ, ಈಲಿಯಟ್ ಇವರ ಕೃತಿಗಳು, ಬೈಬಲ್, ಕುರಾನ್, ಭಗವದ್ಗೀತೆಗಳು ಭಾವ, ವಿಚಾರ ಪ್ರಚೋದಕಗಳೇ ವಿನಾ ಪ್ರಶಾಂತಿದಾಯಕ ಕೃತಿಗಳಲ್ಲ. ಓದುಗನ ಮನಸ್ಸಿನಲ್ಲಿ ಸಾಕಷ್ಟು ಆಂದೋಲನವಾಗದೆ ಆವನ ಚೇತನಗಳು ಒಂದು ಮಹಾಕೃತಿಯ ಪೂರ್ಣಕಳೆಯನ್ನರಿಯಲು ಸಾಧ್ಯವಿಲ್ಲ. ಆದರೆ ಮಹಾ ಕೃತಿಗಳ ಮನನದಿಂದ ಓದುಗನಿಗೆ ಶಾಂತಿ ಸಿಕ್ಕಬಹುದು. ನಗ್ನಸತ್ಯ-ಶನಿಸಂತಾನ-ಸಂಜೆಗತ್ತಲು ಓದುವುದರಿಂದ ಮನಸ್ಸು ಅಲ್ಲಕಲ್ಲೋಲವಾಗುವುದರಲ್ಲಿ ಸಂದೇಹವಿಲ್ಲ. ಆದರೆ ಓದುಗನ ಸಹಾನುಭೂತಿ ಆವನ ಅಂತಃಕರಣವನ್ನು ಶುಚಿಮಾಡಿ, ಆವನಿಗೆ ಮನಃಶಾಂತಿಯನ್ನು ದೊರಕಿಸುವುದಿಲ್ಲವೇ? ಪ್ರಾಚೀನ ರುದ್ರ ನಾಟಕಗಳ ಗುರಿಯೂ ಇದೇ ಆಗಿತ್ತೆಂಬುದನ್ನು ಸಾಹಿತ್ಯ ಶಾಸ್ತ್ರ ಬಲ್ಲವರು ಒಪ್ಪಿಕೊಳ್ಳುತ್ತಾರೆ.

ರಾಮಾಯಣ, ಭಾರತಗಳಂತೆ ಈ ಕೃತಿಗಳು ಉಳಿಯುತ್ತವೆಯೋ? ಉಳಿಯಬಹುದು-ಉಳಿಯದೆ ಹೋಗಬಹುದು-ವ್ಹಿಟಮನ್, ಡಿಕೆನ್ಸ್, ಇಬ್ಸನ್, ಬೋಜರ್, ಷಾ, ಬತ್ರ, ಎರ್ಸ್ಕಿನ್, ಕಾಲ್ಡ್‌ವೆಲ್ ಇವರ ಕೃತಿಗಳ ಬಗ್ಗೆಯೂ ಇಂಥ ನಿರರ್ಥಕ ಚರ್ಚೆ ನಡೆದಿದೆ. ವೇಶ್ಯಾಸಮಸ್ಯೆಯನ್ನು ಎದುರಿಸಲು ಅವಶ್ಯಕವಾದ ಮನೋಭಾವವನ್ನು-ಧೀಶಕ್ತಿಯನ್ನು ನಿರ್ಮಾಣ ಮಾಡಿದ 'ಮೇಲೆ ನನ್ನ ಕೃತಿಗಳು ಅಳಿದರೂ ನಾನು ವ್ಯಥೆಪಡುವುದಿಲ್ಲ. ಆಲಿವರ್ ಟ್ವಿಸ್ಟ್, ಡೇವಿಡ್ ಕಾಪರ್‌ಫೀಲ್ಡ್, ನಿಕ್ಲಾಸ್ ನಿಕಲ್‌ಬೀ ಕೃತಿಗಳು ಸಮಕಾಲೀನ ಜೀವನದ ಮೇಲೆ ಪ್ರಭಾವ ಬೀರಿ, ಶಾಶ್ವತ ಪರಿಣಾಮಕಾರಿಯಾದ ಕೆಲವು ಸುಧಾರಣೆಗಳಿಗೆ ಬುನಾದಿ ಹಾಕಿತೆನ್ನುವುದನ್ನು ಮರೆಯಲಾಗದು.

ಇಂದಿಗೂ ಅವು ಅಚ್ಚಳಿಯದೆ ಉಳಿದಿವೆ. ಆ ಭಾಗ್ಯ ನನ್ನ ಕೃತಿಗಳಿಗೂ ದೊರೆತರೆ ನಾನು ಬೇಡವೆನ್ನಲಾರೆ.

ಇದುವರೆವಿಗೆ ಪತ್ರಿಕೆಗಳಲ್ಲಿ ಪ್ರಕಟವಾಗಿರುವ ವಿಮರ್ಶೆಗಳಲ್ಲಿ ಒಂದೂ ಮೂಲಭೂತ ಸಮಸ್ಯೆಯನ್ನು ಚರ್ಚಿಸುವುದಕ್ಕಾಗಲಿ, ಅದರ ಬಗ್ಗೆ ನನ್ನ ಸಂಶೋಧನೆಯನ್ನು ತೂಗಿ ನೋಡುವುದಕ್ಕಾಗಲಿ

**ಕೊನೆಯ ಮಾತು**

ಪ್ರಯತ್ನಿಸಿಲ್ಲ. ಕನ್ನಡದಲ್ಲಿ ಪತ್ರಿಕಾವೃತ್ತಿ ಹುಟ್ಟಿ ಅರ್ಧ ಶತಮಾನವಾಗುತ್ತ ಬಂತು. ಇಷ್ಟು ದೀರ್ಘಾವಧಿಯಲ್ಲೂ ನಮ್ಮ ಪತ್ರಿಕೆಗಳು ಬೆಳೆಯಲಿಲ್ಲವೆನ್ನುವುದು ಹೆಮ್ಮೆಯ ಮಾತಲ್ಲ. ಪತ್ರಿಕೆಗಳ ಮಟ್ಟ, ಅವುಗಳ ಲೇಖಕರ ಮಟ್ಟ ಹೆಚ್ಚಬೇಕು. ಕೈಯಲ್ಲಿ ಒಂದು ಪತ್ರಿಕೆಯಿದೆ-ಬರೆದದ್ದು ಅಚ್ಚಾಗುತ್ತದೆ–ತಪ್ಪೋ ನೆಪ್ಪೋ ನಾಲ್ಕು ಪಂಕ್ತಿ ಬರೆದರಾಯಿತು ಎನ್ನುವ ನಿಸ್ಸೀಮ ಅಹಂಕಾರ, ಅಲ್ಪತೃಪ್ತಿ ಹೋಗಬೇಕು. ತನಗೆ ಒಬ್ಬ ವ್ಯಕ್ತಿ, ಒಂದು ಅಭಿಪ್ರಾಯ, ಒಂದು ಕೃತಿ ಪ್ರಿಯವೆನ್ನುವುದಲ್ಲ ಮಾನದಂಡ; ಕೃತಿಯಲ್ಲಿ ಸತ್ಯಾವೇಶ, ಮಾನವಾಂತಃಕರಣ, ವಿಚಾರ ನೈಪುಣ್ಯ ಯಾವ ಪ್ರಮಾಣದಲ್ಲಿದೆಯೆನ್ನುವುದನ್ನು ವಿಮರ್ಶಕ ಅಳೆಯಲು ಸಮರ್ಥನಾಗಿರಬೇಕು. ಈ ಸಾಮರ್ಥ್ಯ ಅವನಲ್ಲಿ ಬರಬೇಕಾದರೆ ಅವನ ಪಾಂಡಿತ್ಯ, ಪ್ರಭಾವ, ಪರಿಶುದ್ಧತೆ ಲೇಖಕನ ಮಟ್ಟಕ್ಕಾದರೂ ಇರಬೇಕು. ಇಂದು ನಮ್ಮ ಕೃತಿಗಳನ್ನು ಪತ್ರಿಕೆಗಳಲ್ಲಿ ವಿಮರ್ಶೆ ಮಾಡಿ, ಅಪಪ್ರಚಾರ ಮಾಡುತ್ತಿರುವವರನ್ನು ಯಾವ ಗುಣದಲ್ಲಿಯಾದರೂ ನಮ್ಮ ಸರಿಸಮರೆಂದು ಒಪ್ಪಿಕೊಳ್ಳಲು ಸಾಧ್ಯವೇ ? ಕನ್ನಡ ಪತ್ರಿಕೆಗಳೆಲ್ಲಾ ಕೀಳು ಮಟ್ಟದಲ್ಲಿವೆಯೆಂದು ನಾನು ಆಪಾದನೆ ಮಾಡುತ್ತಿಲ್ಲ. ಕೆಲವು ಪತ್ರಿಕೆಗಳು ಗಾಂಭೀರ್ಯ ಬಿಡದೆ, ಸತ್ಯದ ವಿಪರ್ಯಾಸ ಮಾಡದೆ ನಡೆಯುತ್ತಿವೆ. ಆದರೆ ಕನ್ನಡದಲ್ಲಿ ಯಾವ ಪತ್ರಿಕೆಯೂ ವಿಮರ್ಶೆಯನ್ನು ಒಂದು ಶಾಸ್ತ್ರವಾಗಿ ಪರಿಗಣಿಸಿ, ಅದಕ್ಕೆ ಸಲ್ಲಬೇಕಾದ ಗೌರವ ಕೊಟ್ಟು, ಓದುಗರಲ್ಲಿ ವಿಚಾರಶಕ್ತಿಯನ್ನು ಕೆರಳಿಸುತ್ತಿಲ್ಲವೆಂದು ನಾನು ಖಂಡಿತವಾಗಿ ಹೇಳಬೇಕಾಗಿದೆ. "ವಿಶ್ವಕರ್ನಾಟಕ" ವಾರ ಪತ್ರಿಕೆಯ ಸಂಪಾದಕರಾಗಿದ್ದ ಶ್ರೀ ತಿರುಮಲೆ ತಾತಾಚಾರ್ಯ ಶರ್ಮರು ತಮ್ಮ 'ಸಾಹಿತ್ಯ ಸಂಚಿಕೆ'ಗಳಲ್ಲಿ ವಿಮರ್ಶೆಯ ಶುದ್ಧ ಮಾರ್ಗವನ್ನು ನಿರ್ದೇಶಿಸಿದ್ದಾರೆ. ಇಂಗ್ಲೆಂಡ್, ಅಮೇರಿಕಾ, ರಷ್ಯಾಗಳಿಂದ ಕಲಿಯಲು ಹಿಂಜರಿಯದಿರುವ ನಮ್ಮ ಪತ್ರಿಕಾಕರ್ತರು, ಲೇಖಕರು ಶ್ರೀ ಶರ್ಮರ

ದಿವ್ಯ ಮೇಲ್ಪಂಕ್ತಿಯಿಂದೇಕೆ ಪಾಠ ಕಲಿಯಬಾರದು? ಸಾಹಿತ್ಯ, ಕಲೆಯ ಪ್ರಗತಿಯ ಬಗ್ಗೆ ನಾನು ಎಷ್ಟು ಆಸ್ಥೆಯುಳ್ಳವನಾಗಿದ್ದೇನೆಯೋ ಪತ್ರಿಕಾವೃತ್ತಿಯ ಬಗ್ಗೆಯೂ ಅಷ್ಟೇ ಆಸ್ಥೆಯುಳ್ಳವನಾದುದರಿಂದ ಈ ಮಾತನ್ನು ಹೇಳುತ್ತಿದ್ದೇನೆ.

ಕಾದಂಬರಿಯ ವ್ಯಾಪ್ತಿಯನ್ನು ವಿಸ್ತರಿಸಿ, ಅದನ್ನು ಕನ್ನಡದ ಒಂದು ಶಾಶ್ವತ ಸಾಹಿತ್ಯ ರೂಪವನ್ನಾಗಿ ಉಳಿಸಲು ನಾನು ಹಲವಾರುವರ್ಷಗಳಿಂದ ಪ್ರಯತ್ನಿಸುತ್ತಿದ್ದೇನೆ. ವಾತಾವರಣ, ಪಾತ್ರಸೃಷ್ಟಿ, ಸಂಭಾಷಣೆಗಳಲ್ಲಿ ಕೆಲವು ವಿಶಿಷ್ಟ ಪ್ರಯೋಗಗಳನ್ನು ಮಾಡುತ್ತ ಬಂದಿದ್ದೇನೆ–ನಗ್ನಸತ್ಯ ಮಾಲೆಯಲ್ಲಿಯೂ ಈ ಪ್ರಯೋಗ ವೈಶಿಷ್ಟ್ಯವನ್ನು ಓದುಗರು ಕಾಣಬಹುದು. ಜನಜೀವನದಲ್ಲಿ ಬಳಕೆಯಲ್ಲಿರುವ ಹಲವಾರು ಶಬ್ದಗಳನ್ನು ಧಾರಾಳವಾಗಿ ಬಳಸಿದ್ದೇನೆ. ಜನಜೀವನವನ್ನು ಅನುಲಕ್ಷಿಸದೆ ಕೇವಲ ಮಡಿ ಮನೋಭಾವದಲ್ಲಿ ಕನ್ನಡ ಭಾಷೆಯನ್ನು ಬೆಳಸಲು ಸಾಧ್ಯವಿಲ್ಲವೆನ್ನುವುದು ನನ್ನ ಸ್ಪಷ್ಟ ಅಭಿಪ್ರಾಯ.

**ನನ್ನ ತಂತ್ರ ಹಾಗೂ ಧೋರಣೆ**

ನನ್ನ ಕಾದಂಬರಿಗಳ ಎರಡು ಮುಖ್ಯ ಲಕ್ಷಣಗಳ ಕಡೆಗೆ ಓದುಗರ ಗಮನ ಸೆಳೆಯಲಿಚ್ಛಿಸುತ್ತೇನೆ. ಒಂದು—ನಾನು ಸಮಸ್ಯೆಗಳನ್ನು ನೋಡುವ ದೃಷ್ಟಿ—ಎರಡು, ಅದರ ಅಚ್ಚ ಭಾರತೀಯತ್ವ. ನಮ್ಮ ಸಮಸ್ಯೆಗಳನ್ನು ನಾವು ಮೊದಲು ಅರ್ಥ ಮಾಡಿಕೊಳ್ಳಬೇಕು—ಅವುಗಳ ಪರಿಹಾರ ಮಾರ್ಗವನ್ನು ನಾವೇ ನಿರ್ದೇಶಿಸಬೇಕು. ಭಾರತೀಯರ ಬಡತನ ಹೋಗಲಾಡಿಸುವುದಕ್ಕೆ ಅಮೇರಿಕಾದಿಂದ ಗೋಧಿ ಬೇಡುವುದು ಎಷ್ಟು ಹೀನಾಯವೋ ಭಾರತೀಯ ಸಮಸ್ಯೆಗಳ ಬಿಡುಗಡೆಗೆ ರಷ್ಯಾದ ಬುದ್ಧಿಯನ್ನು ಬಯಸುವುದೂ ಅಷ್ಟೇ ಅವಿವೇಕ. ಭಾರತೀಯ ಅಚ್ಚ ಭಾರತೀಯನಾಗಬೇಕು. ಆರಂಭಕಾಲದಲ್ಲಿ ತಪ್ಪುಗಳಾಗುವುದು ಸಹಜ. ನಮ್ಮ ತಪ್ಪುಗಳನ್ನು ನಾವೇ ತಿದ್ದಿಕೊಳ್ಳಬೇಕು–ಇತರರ ನೆರವು ಕೋರುವುದು ನಮ್ಮ ದಾಸ್ಯದ ಚಿನ್ಹೆ. ಭಾರತ ಆರ್ಥಿಕ, ರಾಜಕೀಯ ದಾಸ್ಯದಿಂದ ಬಿಡುಗಡೆ ಹೊಂದಿದರೆ ಸಾಲದು. ಭಾವ ದಾಸ್ಯದಿಂದ, ವಿಚಾರ ದಾಸ್ಯದಿಂದ, ಸಂಪ್ರದಾಯದ ಹೊರೆಯಿಂದ ಮುಕ್ತಿ ಪಡೆಯಬೇಕು.

"ಅನ್ನಪೂರ್ಣ"
ವಿಶ್ವೇಶ್ವರಪುರಂ, ಬೆಂಗಳೂರು-೪.
೧೫-೧೦-೧೯೫೨

ಅ. ನ. ಕೃ.

## ೧

ಬೆಳಿಗ್ಗೆ ವಿಷವೇಳೆ ಹುಡುಕಿಕೊಂಡೇ ಮುತ್ತಮ್ಮ ಹಾಸಿಗೆ ಬಿಟ್ಟೇಳು ತಿದ್ದಳು. ಅವಳು ಎದ್ದಕೂಡಲೆ ಎದುರಿಗೆ ಬೆಕ್ಕು ಬಂದರೆ–ಕಾಗೆ ಕರ್ರೆಂದರೆ–ಮೂಲೆಯಲ್ಲಿದ್ದ ಪೊರಕೆ ಕಣ್ಣಿಗೆ ಬಿದ್ದರೆ ಮುಗಿದೇ ಹೋಗುತ್ತಿತ್ತು. ಮುತ್ತಮ್ಮ ಮಾರಮ್ಮ ಆಗುತ್ತಿದ್ದಳು.

ಅಂದು ಮುತ್ತಮ್ಮ ಏಳುವ ವೇಳೆಗೆ ಯಾವ ಅಪಶಕುನವೂ ಆಗಿರಲಿಲ್ಲ ವಾದರೂ ಅವಳು ಸಿಡಿಗುಟ್ಟಿಕೊಂಡೇ ಮೇಲಕ್ಕೆದ್ದಿದ್ದಳು.

ಹಾಸಿಗೆ ಬಿಟ್ಟು ಬೇಗ ಏಳುವುದಕ್ಕೆ ಮುತ್ತಮ್ಮನಿಗೆ ಲವಲವಿಕೆ ಇಲ್ಲದಿರುವುದಕ್ಕೆ ಕಾರಣವಿತ್ತು. ಮನೆಯಲ್ಲಿದ್ದ ಕಾಫಿಪುಡಿಯ ಡಬ್ಬ ಖಾಲಿಯಾಗಿತ್ತು. ಅಡಿಗೆಯ ಮನೆಯಲ್ಲಿ ಗೃಹಸೋಪಸ್ಕರದ ಯಾವ ಸಾಮಾನೂ ಇರಲಿಲ್ಲ.

ಎದ್ದೇನು ಮಾಡಬೇಕು ? ಎಂದು ಗೊಣಗಿಕೊಂಡೇ ಎದ್ದಳು. ಮುಖ ತೊಳೆದುಕೊಂಡು ಅವಳು ಬರುವ ಹೊತ್ತಿಗೆ ಭಾಗ್ಯಮ್ಮ ಒಂದು ಲೋಟಾ ಕಾಫಿ ತಂದು ಕೈಯ್ಯಲ್ಲಿಡಲು ಮುತ್ತಮ್ಮನ ಮುಖವರಳಿತು.

" ಕಾಫಿ ಎಲ್ಲಿತ್ತು ಭಾಗ್ಯಮ್ಮ " ಎಂದು ಕೇಳಿದಳು.

" ಸೀಸದ ಎರಡಾಣೆಯೊಂದನ್ನು ಕಲ್ಲುಮರಿಗೆ ಹಿಂದೆ ಬಿಸಾಡಿದ್ದೆ. ಅದು ಇವತ್ತು ಪ್ರಯೋಜನಕ್ಕೆ ಬಂತು ?

" ಕಾಸು ನಡೀತಾ ? "

“ ಕಾಫಿ ತೊಗೊಂಡೆ – ಓಟ್ಲ ನೋನ ಮೇಜಿನ ಮೇಲೆ ಕಾಸಿಟ್ಟುಬಂದೆ– ಕಾಸು ಹಿಡಿಯುವುದಿಲ್ಲವಲ್ಲಮ್ಮ ಎಂದ – ನಾಳೆ ಬರ್ತೀನಿ ಹಿಡಿದಿದ್ರೆ ನನಗೇ ಕೊಡು ಎಂದು ಹೇಳಿ ಬಂದೆ.”

“ ಆ ಕಿಪಣಾಸಿ ಕೀರೇಬೇರು ಕೊಟ್ಟದ್ದು ಹೆಚ್ಚೆ ! ”

“ ನಾವಿರೋದೇ ಅದಕ್ಕಲ್ವಾ ಮುತ್ತಮ್ಮ – ಸಮೆಕಲು ಕಾಸನ್ನ ಚಲಾವಣೆ ಮಾಡೋಕೆ ? ”

“ ಇನ್ನೂ ಒಸಿ ಉಡುಕಿ ನೋಡು–ರುಪಾಯಿಯೇನಾದರೂ ಸಿಕ್ಕೀತು.”

“ ಇಲ್ಲಾ ಕಣಮ್ಮ–ಕುಂತು ತಿಂದರೆ ಕುಡಿಕೆ ಅಣ ಉಳೀತ್ತೈತಾ ! ”

“ ಪಿಂಡಕ್ಕೆ ಏನು ಮಾಡಾಣಾ ಬಾಗ್ಯಮ್ಮ.”

“ ನಾನು ಏಳಿದ್ರೆ ನನ್ನ ಮಾತು ನೀನು ಕೇಳಾಕಿಲ್ಲ.”

“ ಏನಮ್ಮ ನಿನ್ನ ಮಾತು ಕೇಳ್ದಾ ಇರೋದು.”

“ ಮಹಡಿ ಖಾಲಿಐತೆ – ಮನೆಯಾಗ ಮೂರು ರೂಮು ಕೊಳಿತಾ ಬಿದ್ದೈತೆ. ಒಂದೋ, ಎರಡೋ ಹುಡುಗೀರ್ನ ತಂದು ಮಡಿಕೊಂಡ್ರೆ ಜೀವಣ ಸಾಗ್ತೈತೆ.”

“ ಸಾಗ್ತೈತೆ ಸರಿ – ಪೋಲೀಸಿನೊರ ಕೈಗೆ ಸಿಕ್ಕಿಬಿದ್ದರೆ ಜೇಲೊಳಗೆ ಸಲೀಸಾಗಿ ಜೀವಣ ಸಾಗ್ತೈತೆ.”

“ ಓಗ್ಲಿ – ಅಂಗೇ ಯಾರ್ಗಾದ್ರೂ ಬಾಡಿಗ್ಗೆ ಕೊಡಬೈದಲ್ಲ.”

“ ಎಂಗಾಗ್ತೈತೆ ಬಾಗ್ಯಮ್ಮ. ಮನೀಕೆ ಅವರೂ ಇವರೂ ಬತ್ತಿರ್ತಾರೆ– ಮರ್ವ್ಯಾದಸ್ಥರು ಬಾಡಿಗ್ಗೆ ಬಂದ್ರೆ ನಾವು ಕಸುಬು ಮಾಡಾಕಾಗ್ತೈತಾ ? ”

“ ಕಸಬು ಮಾಡಾಕೂ ಒಲ್ಲೆ – ಬಿಡಾಕೂ ಒಲ್ಲೆ. ಎಂಗಾಗ್ತೈತವ್ವ.”

“ ಏನ್ಮಾಡಾಣವ್ವ. ಅಂಗಾಗೈತೆ ನನ್ನ ಗಾಸಾರ.”

“ ರಾಮರಾಜಪ್ಪನ್ನಾದರೂ ನೋಡ್ಕೊಂಡು ಬರಬಾರ್ದಾ.”

“ ನಡೆಯೋಕಾದ್ರೂ ತ್ರಾಣ ಬ್ಯಾಡವಾ ? ”

“ ಇನ್ನೇನು ಮಾಡಾಣ – ನಾನೇ ಓಗಿಬತ್ತೀನಿ.”

“ ಅಂಗೇ ಬಾಲೂಗೊ ಬಾಯಿಗೊ ಏಳಿ ಬಾ.”

ಭಾಗ್ಯಮ್ಮನನ್ನು ಕಳುಹಿಸಿಕೊಟ್ಟು ಮುತ್ತಮ್ಮ ಚಿಂತಿಸುತ್ತ ಕುಳಿತಳು. ತಾನು ಮಾಡುತ್ತಿದ್ದ ಕಸುಬಿನಿಂದ ಒಂದಲ್ಲ ಒಂದು ದಿನ ಬಸವನಗುಡಿಯಲ್ಲಿ

ಬಂಗಲೆ ಕೊಳ್ಳುತ್ತೇನೆಂದು ಅವಳು ಭಾವಿಸಿಕೊಂಡಿದ್ದಳು. ಆ ಕನಸು ಒಡೆದು ನುಚ್ಚುನೂರಾಗಿತ್ತು. ಕೈಗೆ ಸಿಕ್ಕಿದ ಹಕ್ಕಿಗಳೆಲ್ಲಾ ಗೂಡು ಸಿಕ್ಕಿದೊಡನೆಯೇ ಮಾಯವಾಗುತ್ತಿದ್ದವು. ಅವಳನ್ನು ಹಾಡಿ ಹೊಗಳಿ, ತಮ್ಮ ಕೆಲಸ ಸಾಧಿಸಿಕೊಳ್ಳುತ್ತಿದ್ದ ವಿಲಾಸಿಗಳು ದೂರವಾಗಿದ್ದರು.

'ಪರ-ಪಂಚ'ದ ಕ್ರೌರ್ಯವನ್ನು ಶಪಿಸುತ್ತ ಮುತ್ತಮ್ಮ ಕುಳಿತಿರುವಂತೆ, ಅವಳಿಗೆ ಪುಟ್ಟನ ನೆನಪಾಯಿತು. ಅರ್ಧ ಕುಡಿದಿದ್ದ ಕಾಫಿ ಲೋಟವನ್ನು ಕೆಳಗಿಟ್ಟಳು. ಪುಟ್ಟ ಇನ್ನೂ ಮಲಗಿದ್ದುದನ್ನು ಕಂಡು ಬೇಸರಗೊಂಡು

"ಏಳೇ ಬೇವಾರ್ಸಿಮುಂಡೇದೆ. ಅತ್ತು ಗಂಟೆಯಾದರೂ ಬಿದ್ಕೊಂಡವಳೆ. ನನಗಿರೊ ಶನಿಕಾಟ ಸಾಲ್ದೂ ಅಂತ ಈ ಮೂದೇವೀನೂ ಕಾಡ್ತೈತೆ."

ಮುತ್ತಮ್ಮನ ಅಬ್ಬರಕ್ಕೆ ಜಗ್ಗದೆ ಪುಟ್ಟ ಮೈತುಂಬ ಕಂಬಳಿ ಸುತ್ತಿಕೊಂಡು ಮಲಗಿದ್ದಳು.

"ಏಳ್ತೀಯೊ ಇಲ್ವೇ. ನೀರು ತಂದು ಮೊಕದ ಮೇಲೆ ಉಯ್ತೀನಿ ನೋಡು"

"ಎದ್ದು ಏನಮ್ಮ ಮಾಡೋದು?" ಎಂದಳು ಪುಟ್ಟ ಮುಸುಕಿನೊಳಗಿಂದಲೇ.

ಪ್ರಶ್ನೆ ಮುತ್ತಮ್ಮನ ಹೃದಯ ತಾಗಿತು. ಹೌದು! ಅವಳೆದ್ದು ಏನು ಮಾಡಬೇಕು. ತಿನ್ನುವುದಕ್ಕೆ ಅನ್ನವಿಲ್ಲ – ಮನೆ ತುಂಬ ದರಿದ್ರ ಲಕ್ಷ್ಮಿಯ ತಾಂಡವ. ಮುತ್ತಮ್ಮನ ಕಟು ನಾಲಗೆಯೂ ಮೃದುವಾಯಿತು.

"ಏಳು ಪುಟ್ಟ. ಅಂಗೆ ಮಲಗಿರಬಾರದಮ್ಮ – ಅನಿಷ್ಟ ಮುಚ್ಚಿಕೊಳ್ಳತ್ತೈತೆ. ನಿಂಗೆ ಒಸಿ ಕಾಪಿ ಮಡಗಿವ್ನಿ. ಕುಡಿ ಏಳು."

ಕಾಫಿಯ ಹೆಸರು ಕಿವಿಯ ಮೇಲೆ ಬಿದ್ದೊಡನೆಯೇ ಪುಟ್ಟ ಎದ್ದು ಮುಖ ತೊಳೆದುಕೊಂಡು ಬಂದು ತಾಯಿಯ ಮುಂದೆ ಆಕಳಿಸುತ್ತ ಕುಳಿತು, ಮುತ್ತಮ್ಮ ತಾನು ಮಿಗಿಸಿದ್ದ ಕಾಫಿಯನ್ನು ಮಗಳ ಕೈಗಿತ್ತಳು. ಪುಟ್ಟ ಅದನ್ನು ಕುಡಿಯುತ್ತಾ "ತಿನ್ನೋಕೆ ಏನೂ ಇಲ್ವೇನಮ್ಮ" ಎಂದಳು.

ಮುತ್ತಮ್ಮನ ಕರುಳನ್ನು ಯಾರೊ ಕಿತ್ತು ಅದನ್ನು ಸೂಜಿಯಿಂದ ಚುಚ್ಚಿ, ಉಪ್ಪಿನ ನೀರು ಬಿಟ್ಟಂತಾಯಿತು.

"ಬಾಗ್ಯಮ್ಮ ಪೇಟೆ ಕಡೆ ಓಗವ್ಳೆ – ಏನಾದರೂ ತತ್ತಾಳೆ ಸುಮ್ಕಿರು"

"ಏನಾದರೂ ಸಿಕ್ಕಿದ್ರೆ ಅವಳೇ ತಿಂದು ಬರ್ತಾಳೆ."

"ಅಣ್ಣಯ್ಯ ಬತ್ತಾನೆ ಸುಮ್ಕಿರು"

"ಬರ್ತಾನಾ . . ."

"ಹೂ ! ಕರಿಯಾಕೆ ಬಾಗ್ಯಮ್ಮ ಓಗವ್ಳೆ."

"ಊರಿಗೆ ಬಂದವ್ನೋ ಇಲ್ವೋ ?"

"ಅವನು ಓಗಿ ಅತ್ತು ಅನ್ನೆಲ್ಡು ದಿವ್ಸ ಆಗೈತೆ. ಬಂದಿರ್ಬೇಕು."

ಪುಟ್ಟ ಎರಡು ಕೈಯಲ್ಲೂ ತಲೆ ಕೆರೆದುಕೊಳ್ಳುತ್ತಿದ್ದುದನ್ನು ನೋಡಿ ಮುತ್ತಮ್ಮ ಅವಳನ್ನು ಹೊರಗೆ ಕರೆದೊಯ್ದು ಬಿಸಿಲಿನಲ್ಲಿ ಕೂಡಿಸಿಕೊಂಡು ತಲೆ ಬಾಚತೊಡಗಿದಳು.

ಪುಟ್ಟನ ದಟ್ಟವಾದ ನೀಳ ಕೇಶರಾಶಿ ಮುತ್ತಮ್ಮನಿಗೆ ಅಭಿಮಾನಾಸ್ಪದ ವಾಗಿತ್ತು. ಅದರ ಆರೈಕೆ ಮಾಡುವುದಕ್ಕೆ ಅನುಕೂಲವಿಲ್ಲವೆಂದು ಅವಳು ಒಳಗೇ ಕೊರಗುತ್ತಿದ್ದಳು.

"ತಲೆ, ಮೈಕೈ ಎಲ್ಲಾ ಕಡಿಯುತ್ತಮ್ಮ–ರಾತ್ರಿ ನಿದ್ದೆಯೇ ಬರೋಕಿಲ್ಲ."

ಪುಟ್ಟನ ತಲೆಯ ಹೇನುಗಳನ್ನು ಬಾಚಣಿಗೆಯ ಮೇಲೆ 'ಚಿಟಿಕ್-ಚಿಟಿಕ್' ಎಂದು ಕುಕ್ಕುತ್ತಾ ಮುತ್ತಮ್ಮ

"ಔದು ಪುಟ್ಟಾ– ನಿನ್ನ ತಲೆ ಹಂಜೀಕುಕ್ಕೆ ಆಗೈತೆ."

"ಸರಸ್ವತಮ್ಮಕ್ಕ ನಮ್ಮನ್ನ ಮರೆತೇ ಬಿಡೋದಾ ?"

"ಕಾಲ ಅಂಗೈತೆ ಪುಟ್ಟಾ. ಎಲ್ಲಾರ ಕಷ್ಟಕ್ಕೂ ನಾನು ಬೇಕು–ನನ್ನ ಕಷ್ಟಕ್ಕೆ ಯಾರೂ ಆಗಾಕಿಲ್ಲ."

"ಸರಸ್ವತಮ್ಮಕ್ಕಂಗೆ ಕಾಗದ ಬರೀಲಾ"

"ಟಾಂಪಿಗೆ ಕೊಡೊಕೂ ಕೈಯಲ್ಲಿ ಕಾಸಿಲ್ವಲ್ಲ ಪುಟ್ಟ."

"ಹಂಗೇ ಬರೀಬಹುದಮ್ಮ– ಪೋಸ್ಟ್ ಆಫೀಸಿನೋರು ಅವರತಾವಾನೇ ಸ್ಟಾಂಪಿನ ಕಾಸು ವಸೂಲ್ಮಾಡಿಕೊಳ್ತಾರೆ."

"ಅಂಗಾದರೆ ಬರದೇಬುಡು."

ಪುಟ್ಟನ ಕೇಶರಾಶಿಯನ್ನು ಬಿಡಿಸಿ ಬಿಡಿಸಿ ಹೆಕ್ಕುತ್ತಿದ್ದುದು ಮುತ್ತಮ್ಮನಿಗೆ ಸಂತೋಷವನ್ನುಂಟುಮಾಡಿತ್ತು. ತನ್ನೆತ್ತರಕ್ಕೂ ಬೆಳೆದಿದ್ದ ಮಗಳನ್ನು ನೋಡಿದಾಗ ಮುತ್ತಮ್ಮನ ಹೃದಯ ತುಂಬಿತ್ತು.

ಪುಟ್ಟನಿಗೆ ಹದಿನೈದನೆಯ ವಯಸ್ಸು ನಡೆಯುತ್ತಿತ್ತು. ವಯಸ್ಸಿಗನು ಗುಣವಾಗಿ ಮೈತುಂಬಿಕೊಂಡು, ಯೌವನ ವಸಂತದ ಆಗಮನವನ್ನು ಸೂಸುತ್ತಿತ್ತು.

ಪುಟ್ಟನ ಮೈಬಣ್ಣವೊಂದು ಬಿಟ್ಟರೆ ಉಳಿದೆಲ್ಲ ವಿಷಯದಲ್ಲಿಯೂ ಅವಳು ಲಕ್ಷಣವಂತೆಯಾಗಿದ್ದಳು. ಅವಳ ಕೋಲುಮುಖದ ಮೇಲೆ ಸೂರ್ಯಚಂದ್ರ ರಂತೆ ಕಣ್ಣುಗಳು ಬೆಳಗುತ್ತಿದ್ದವು. ಅವಳ ಮುಖಭಂಗಿಗೆ ನಸುನೀಳವಾದ ಮೂಗು ಕಳಶಪ್ರಾಯವಾಗಿತ್ತು. ಎದೆ ಮತ್ತು ಜಘನ ಎದ್ದುಕಾಣಲು ಶಿಲ್ಪಿ ಕಟಿಭಾಗವನ್ನು ಉದ್ದೇಶಪೂರ್ವಕವಾಗಿ ಸಣ್ಣದು ಮಾಡುವಂತೆ ವಿಶ್ವಶಿಲ್ಪಿ ಪುಟ್ಟನನ್ನು ಕಡೆದಿದ್ದ. ಕಾರಿರುಳಿನಂಥ ಅವಳ ಮೈಬಣ್ಣದಲ್ಲಿಯೂ ವಿಚಿತ್ರ ಸಮ್ಮೋಹನಶಕ್ತಿ. ಪುಟ್ಟನ ತಲೆಗೂದಲಿಗಿಂತ ಮೈಬಣ್ಣವೇ ಹೆಚ್ಚು ಕಪ್ಪಾದರೂ ಮೆರಗು ಹಾಕಿದ ಅಮೃತಶಿಲೆಯ ಹಲಗೆಯಂತದು ಮಿನಮಿನ ಮಿಂಚುತ್ತಿತ್ತು.

ಕಣ್ಣು ತುಂಬಿಕೊಳ್ಳುವಂತೆ ಮುತ್ತಮ್ಮ ಅವಳನ್ನೇ ನೋಡುತ್ತಾ ಮನಸ್ಸಿನಲ್ಲಿಯೇ ಲೆಕ್ಕಹಾಕಿಕೊಳ್ಳುತ್ತಿದ್ದಳು. ತನ್ನ ಎಲ್ಲಾ ಕನಸುಗಳೂ ತಿರುಕನ ಕನಸಾಯಿತೆಂದು ಮುತ್ತಮ್ಮ ವ್ಯಸನಾಕ್ರಾಂತಳಾಗಿದ್ದಳು. ಸದ್ಯಕ್ಕೆ ಉಳಿದಿದ್ದುದು ಒಂದೇ ಯೋಚನೆ – ಹೊಟ್ಟೆಗೇನು ಮಾಡುವುದೆಂಬುದು. ಎರಡು ತಿಂಗಳು ಮನೆಬಾಡಿಗೆ ಕೊಟ್ಟಿರಲಿಲ್ಲ. ಸದ್ಯದ ಪರಿಸ್ಥಿತಿಯನ್ನೆದುರಿಸ ಲಾಗದ ಕಷ್ಟವೊಂದು ಕಡೆ; ಮುರಿದುಬಿದ್ದ ಆಶಾಗೋಪುರದ ಅವಶೇಷಗಳನ್ನು ನೋಡುವ ದುಃಖವೊಂದು ಕಡೆ!

ತಾಯಿಯ ಕಣ್ಣು ಹನಿಗೂಡಿದುದನ್ನು ಕಂಡು ಪುಟ್ಟ "ಅಳ್ತಿದ್ದೀಯೇನೇ ಅಮ್ಮ" ಎಂದು ಕೇಳಿದಳು.

ಮುತ್ತಮ್ಮ ಉತ್ತರಕೊಡದೆ ಎದ್ದುಹೋದಳು.

ಪುಟ್ಟನಿಗೂ ಮನೆಯಲ್ಲಿ ನಿಲ್ಲಲು ಮನಸ್ಸಾಗಲಿಲ್ಲ. ಹೇಗಾದರೂ ಹೊತ್ತು ಕಳೆಯಬೇಕಾಗಿತ್ತು. ಸಮೀಪದಲ್ಲಿದ್ದ ತನ್ನ ಗೆಳತಿಯೊಬ್ಬಳನ್ನು ಅರಸುತ್ತ ಹೋದಳು.

ಸ್ವಲ್ಪಹೊತ್ತು ಕಳೆದ ಮೇಲೆ ಮುತ್ತಮ್ಮ ಅಲ್ಲಲ್ಲಿ ಬಿದ್ದಿದ್ದ ಕಟ್ಟಿಗೆ ತುಂಡುಗಳನ್ನು, ತೆಂಗಿನ ಕರಟವನ್ನು, ಒಣಗಿದ ಲಾಂಟಾನಾ ಕಡ್ಡಿಯನ್ನು ಸಂಗ್ರಹಿಸಿಕೊಂಡು ಬಂದು ಬಚ್ಚಲು ಮನೆ ಒಲೆ ಹಚ್ಚಿದಳು.

ಭಾಗ್ಯಮ್ಮ ಹಿಂದಿರುಗುವ ಮುನ್ನ ರಾಮರಾಜಪ್ಪ ಬಂದ. ಬಾಗಿಲಿನಲ್ಲಿ ಬೈಸಿಕಲ್ ನಿಲ್ಲಿಸಿ, ಅದಕ್ಕೆ ತೂಗುಹಾಕಿದ್ದ ಎರಡು ಚೀಲಗಳನ್ನು ಕೈಯಲ್ಲಿ ಹಿಡಿದು ಒಳಕ್ಕೆ ಬಂದ.

ರಾಮರಾಜಪ್ಪನ ಮುಖ ಕಂಡಕೂಡಲೆ ಮುತ್ತಮ್ಮನಿಗೆ ಹೋದ ಜೀವ ಬಂದಂತಾಯಿತು. ಹೊಗೆ ತುಂಬಿದ್ದ ಕಣ್ಣುಗಳನ್ನುಜ್ಜಿಕೊಳ್ಳುತ್ತ ಹೊರಗೆ ಬಂದು

"ಬಡವರ ಗ್ಯಾಪ್ಕ ಬಂತೇನಪ್ಪ" ಎಂದು ಕೇಳಿದಳು.

ರಾಮರಾಜಪ್ಪ ಮುರುಕಲು ಮಂಚದ ಮೇಲೆ ಕುಳಿತು ಸಿಗರೇಟ್ ಹಚ್ಚುತ್ತಾ

"ಊರ್ನಲ್ಲಿ ಇರಲಿಲ್ಲಮ್ಮ."

"ನಿನ್ನ ನೋಡಿ ತಿಂಗಳ ಮೇಲಾಯಿತು. ಇಷ್ಟು ದಿವಸ ಬೇರೆ ಊರಿನಲ್ಲಿದ್ದೆಯಾ?"

"ಇಲ್ಲ – ನಾನು ಬೇರೆ ಊರಿಗೆ ಹೋಗಿ ಎಂಟು ಹತ್ತು ದಿವಸವಾಗಿರಬಹುದು."

"ಯಾವೂರಿಗೆ ಹೋಗಿದ್ದೆಯಪ್ಪ?"

"ಮರ ಖರೀದಿ ಮಾಡಬೇಕಾಗಿತ್ತು, ಶಿವಮೊಗ್ಗೆಗೆ ಹೋಗಿದ್ದೆ"

"ಭಾಗ್ಯಮ್ಮ ಎಲ್ಲಿಗೆ ಹೋದಳು?"

"ಏನೋ ಸಾಮಾನು ತರಬೇಕೂಂತ ಪೇಟೆ ಕಡೆ ಹೋದಳು."

"ಅವಳ ಕೈಗೆ ದುಡ್ಡು ಎಷ್ಟು ಕೊಟ್ಟೆ."

"ಬಹಳ ಏನಿಲ್ಲಮ್ಮ. ಹತ್ತೇ ರೂಪಾಯಿ."

ರಾಮರಾಜಪ್ಪ ಕುಳಿತಿರುವುದನ್ನು ಬಾಗಿಲಿನಲ್ಲಿಯೇ ಕಂಡ ಪುಟ್ಟಿ ಧಾವಿಸಿ ಓಡಿ ಅವನ ಬಳಿಗೆ ಬಂದು

"ನನಗೇನು ತಂದಿರುವೆ ಅಣ್ಣಯ್ಯ" ಎಂದಳು.

"ಚೀಲ ನೋಡು" ಎಂದು ಹೇಳಿದ.

ಪುಟ್ಟಿ ಎರಡು ಚೀಲಗಳಲ್ಲಿದ್ದ ಸಾಮಾನುಗಳನ್ನು ನೆಲದ ಮೇಲೆ ಹರಡಿದಳು. ಅಕ್ಕಿ, ಬೇಳೆ, ಕಾಫಿಪುಡಿ, ಸಕ್ಕರೆ, ತರಕಾರಿ, ಕೋಳೀ ಮೊಟ್ಟೆ– ಅವುಗಳ ಜತೆಗೆ ಹೋಟೇಲ್ 'ತಿಂಡಿ' ಪೊಟ್ಟಣ ಇದ್ದವು. ಪುಟ್ಟಿ

ಪೊಟ್ಟಣ ಬಿಚ್ಚಿ ನೋಡಿದಳು. ಇಡ್ಲಿ, ಬೆಣ್ಣೆ, ಪಲ್ಯ, ಚಟ್ನಿ ಇತ್ತು. ತಾಯಿಗೂ, ರಾಮರಾಜಪ್ಪನಿಗೂ ತಿಂಡಿಯನ್ನಿತ್ತು ತಾನು ಉಳಿದುದನ್ನು ತೋಳದಂತೆ ಗದುಗಲಾರಂಭಿಸಿದಳು. ಪುಟ್ಟಿ ತಿಂಡಿ ತಿನ್ನುತ್ತಿದ್ದ ಬಗೆ ಕಂಡು ರಾಮರಾಜಪ್ಪನಿಗೆ ಮರುಕವಾಯಿತು.

"ಅಷ್ಟು ಹಸಿವಾಗಿತ್ತಾ ಪುಟ್ಟಾ" ಎಂದು ಕೇಳಿದ.

"ಅನ್ನದ ಮೊಕ ಕಂಡು ಮೂರು ದಿವಸವಾಯ್ತು ಅಣ್ಣಯ್ಯ"

ರಾಮರಾಜಪ್ಪನ ಕೈಯಿಂದಲೇ ಚಿಲ್ಲರೆ ಹಣ ತೆಗೆದುಕೊಂಡು ಮುತ್ತಮ್ಮ ಪುಟ್ಟನ ಕೈಯಲ್ಲಿ ಹಾಲು ತರಿಸಿ ಕಾಫಿ ಮಾಡಿದಳು. ಕಾಫಿ ಸೇವನೆ ಮುಗಿದ ಮೇಲೆ

"ಪುಟ್ಟಾ, ಒಲೆ ಹಚ್ಚಿ ಎಸರಿಡು – ಅಣ್ಣಯ್ಯನೂ ಇಲ್ಲೇ ಊಟ ಮಾಡ್ತಾನೆ."

"ಇಲ್ಲಮ್ಮ. ನಾನು ಹೋಗಬೇಕು."

"ಒಗ್ಗೇಡ ಇರಪ್ಪ. ನಿನ್ನತಾವ ನಾನು ಭಾಳ ಮಾತನಾಡಬೇಕಾಗೈತೆ."

ಪುಟ್ಟಿ ಅಡಿಗೆಯ ಮನೆ ಸೇರಿದ ಮೇಲೆ ರಾಮರಾಜಪ್ಪ

"ಇಷ್ಟು ತಾಪತ್ರಯ ಯಾಕೆ ಮಾಡ್ಕೊಂಡೆ ಮುತ್ತಮ್ಮ" ಎಂದು ಕೇಳಿದ.

"ಗ್ರಾಸಾರ ಕಾಣಪ್ಪ."

"ಮನೆ ಯಾವಾಗಲೂ ತುಂಬಿದಂತಿರುತ್ತಿತ್ತು."

"ಒಡವರ ಒಟ್ಟಿಮೇಲೆ ಒಡೆಯೋಕೆ ಪೋಲಿಸಿನೋರು ಅವ್ರಲ್ಲಪ್ಪಾ. ಅವ್ರಿಗೆ ಕಾಫಿ ತಿಂಡಿ ಕೊಟ್ಟು, ಉಡುಗಿ ಒದಗಿಸ್ಕೊಟ್ಟು, ಕೈಗೆ ಕಾಸೂ ಕೊಟ್ಟು ಕಳಿಸ್ಬೇಕು. ಪೋಲೀಸಿನೋರು ಬರ್ತಾರೇಂತ ಬೇರೆಯವ್ರು ಕಾಲಿಕ್ಕಾಕಿಲ್ಲ."

"ಸರಸ್ವತಮ್ಮನೂ ನಿನ್ನ ಮರೆತುಬಿಟ್ಟಳೇ ?"

"ಅಟ್ಟ ಹತ್ತೋತನ್ಕ ಏಣಿ ಬೇಕಪ್ಪಾ. ಅವ್ಯಾಕೆ ಯಾಕೇಳು."

"ಸರಸ್ವತಮ್ಮ ಅವಳ ಮಕ್ಕಳು ನಾಟಕದ ಕಂಪನಿ ಸೇರಿದ್ದಾರಂತೆ !"

"ಅವರಿಗೇನಪ್ಪಾ – ಎಂಗಾದರೂ ನಡೀತೈತೆ. ಬಾಗ್ಯಮ್ಮ ಎಲ್ಲೀಗೆ ಓದಳು."

"ಬಾಲೂಗೆ ಹೇಳಿ, ಪೇಟೆಗೆ ಹೋಗಿ ಬರ್ತೀನೀಂತ ಹೇಳಿದಳು."

" ನನ್ನಗತಿ ಏನಪ್ಪಾ ಮಾಡ್ತೀ."

" ಏನು ಮಾಡಬೇಕು ಹೇಳು."

" ಈ ಕಾಲಕ್ಕೆ ನೀನೇ ಒಬ್ಬ ಧರ್ಮರಾಯನಪ್ಪ. ನನ್ನ ಕಷ್ಟನೋಡಿ ಅಯ್ಯೋ ಅಂತೀ."

" ಸರಿ ಬಿಡಮ್ಮ, ಏನು ದೊಡ್ಡ ವಿಷಯ. ನಿನ್ನ ಮನೆಗೆ ನಾನು ಚಿನ್ನದ ಕಳಶ ಹಾಕಿಸಿರೋದು ಅಷ್ಟರಲ್ಲೇ ಇದೆ."

" ನಂದು ಎಂಗೋ ಆಗ್ತೈತೆ ರಾಮರಾಜಪ್ಪ. ನಿನ್ನ ಮನೆ ಚಾಕರಿ ಮಾಡಿದ್ರೆ ಎಲ್ಡು ಒತ್ತು ಒಸಿ ಇಟ್ಟು ಆಕ್ತೀ. ಪುಟ್ಟನ ಗತಿಯೇನು ಎನ್ನೋದೇ ಚಿಂತೆಯಾಗೈತೆ. ಆ ಮುಂಡೇದೋ ಇದ್ದಲಿನಂಗೈತೆ ! "

" ಕಪ್ಪಗಿದ್ದರೇನಮ್ಮ. ಪುಟ್ಟ ಲಕ್ಷಣವಂತೆ."

" ಅವಳಿಗೆ ಮದುವೆ ಮಾಡೋವ ಎಂದ್ಕೊಂಡಿದ್ದೆ."

" ಮದುವೇನೆ ! "

" ನಮ್ಮನೆ ಉಡುಗೀನ ಯಾರಪ್ಪಾ ತಂದುಕೊಳ್ತಾರೆ ? "

" ನೋಡಬೇಕು. ಹುಡುಕಿದರೆ ಯಾರಾದರೂ ಸಿಕ್ಕಬಹುದು."

" ಈ ಮಗಕ್ಕೊಂದು ದಾರಿ ಮಾಡ್ಬಿಡು ರಾಮರಾಜಪ್ಪ."

" ನನ್ನಿಂದೇನಾಗಬೇಕು ಹೇಳು."

" ಪುಟ್ಟನ್ನ ನೀನೇ ಮಡಿಕ್ಕೊಂಡರೂ ಸರಿ – ನಿನ್ನ ನ್ಯಾಸ್ತರು ಯಾರಿಗಾದರೂ ಕೊಡಿಸಿದರೂ ಸರಿ."

" ಏನು ಮಾತು ಹೇಳುತ್ತೀ ಮುತ್ತಮ್ಮ – ಪುಟ್ಟ ನನ್ನ ಮುಂದೆ ಬೆಳೆದ ಮಗು. ನಾನು ಅದರ ಸಂಬಂಧ ಬೆಳಸೋದೇ ? "

" ಅವತ್ತು ಯಾರೋ ನಿನ್ನ ನ್ಯಾಸ್ತರನ್ನು ಕರ್ಕೊಂಡು ಬಂದಿದ್ದೆ."

" ಇರಲಿ – ಆ ವಿಷಯ ಯೋಚನೆ ಮಾಡಿ ಹೇಳುತ್ತೇನೆ."

ಭಾಗ್ಯಮ್ಮ ಏದುಸಿರು ಬಿಡುತ್ತ ಬಂದಳು. ಅವಳನ್ನು ಕಂಡಕೂಡಲೆ ವ್ಯಂಗ್ಯವಾಗಿ ಮುತ್ತಮ್ಮ

" ಇವತ್ತೇ ಬಂದುಬಿಟ್ಟೆಯಲ್ಲ" ಎಂದಳು.

ಭಾಗ್ಯಮ್ಮ ಅವಳಿಗೆ ಉತ್ತರ ಕೊಡದೆ ರಾಮರಾಜಪ್ಪನ ಕಡೆ ತಿರುಗಿ

" ನೋಡಿದೆಯೇನಪ್ಪಾ. ಬೆಳಿಗ್ಗೆಯಿಂದ ಸತ್ತುಸುಣ್ಣವಾಗಿ ಈಯಮ್ಮ

ಏನದ ಕೆಲ್ಸಾ ಎಲ್ಲಾ ಮಾಡಿಕೊಂಡು ಬಂದ್ರೂ ಇವಳ ಕೈಲಿ ಬಯ್ಯ್ಸಿ ಕೊಳ್ಳೋದು ನಂಗೆ ತಪ್ಪಿಲ್ಲ."

"ನಿಮ್ಮ ಪ್ರೇಮಕಲಹವಿದ್ದೇ ಇರತ್ತೆ. ಹೋಗಲಿ ಬಿಡು – ಏನು ತಂದೆ?"

"ಬಿರಿಯಾನಿ – ಬ್ರ್ಯಾಂದಿ."

"ಪುಟ್ಟ ಅಡಿಗೆ ಮಾಡ್ತಾ ಅವ್ಳೆ. ನೀನು ಒಲೆ ಉರಿ ನೋಡು– ಇವತ್ತಾದರೂ ಮೈಗೆಲ್ಲ ನೀರು ಉಯ್ಕೊಳ್ಳೋಣ. ಬಾಲೂ ಬರ್ಲಿಲ್ಲವಾ?"

"ಊಟ ಮಾಡ್ಕೊಂಡು ಬತ್ತೀನಿ ಅಂದಳು."

ಅಡಿಗೆ ಮುಗಿದ ಕೂಡಲೆ ಪುಟ್ಟ ಊಟ ಮುಗಿಸಿದಳು. ಮುತ್ತಮ್ಮ ಸ್ನಾನ ಮುಗಿಸಿಕೊಂಡು ಬಂದು ಎಲ್ಲರಿಗೂ ಎಲೆ ಹಾಕಿದಳು. ರಾಮರಾಜಪ್ಪ, ಮುತ್ತಮ್ಮ, ಭಾಗ್ಯಮ್ಮ ಊಟಕ್ಕೆ ಕುಳಿತರು. ಪುಟ್ಟನೇ ಬಡಿಸುವುದಕ್ಕೆ ನಿಂತಳು. ಮುತ್ತಮ್ಮ ಊಟ ಮಾಡುತ್ತ

"ಸ್ನಾನ ಮಾಡಲ್ವೇನೇ ಪುಟ್ಟಾ" ಎಂದು ಕೇಳಿದಳು.

"ಆಮೇಲೆ ಮಾಡ್ತೀನಮ್ಮ"

ಎಂದು ಹೇಳಿದಳು. ಆ ವೇಳೆಗೆ ಸರಿಯಾಗಿ ಬಾಲೂ ಬರಲು ಅವಳಿಗೂ ಒಂದು ಎಲೆಹಾಕಿ ತಿನ್ನಲು ಬಿರಿಯಾನಿ, ತರಕಾರಿ, ಮಿಕ್ಕಿದ್ದ ಇಡ್ಲಿ ಚೂರು ಕೊಟ್ಟಳು.

ಊಟ ಮುಗಿದೊಡನೆಯೇ ಭಾಗ್ಯಮ್ಮ ಎಲಡಿಕೆ ಸುಣ್ಣ ತೆಗೆದು ತಟ್ಟೆಯಲ್ಲಿಟ್ಟು ರಾಮರಾಜಪ್ಪನ ಮುಂದಿಟ್ಟಳು. ಮುತ್ತಮ್ಮ

"ಎಲೆ ಮಡಿಚಿಕೊಡೇ – ಮಹಾರಾಣಿ ಕುಂತಂಗೆ ಕುಂತವ್ಳೆ"

ಎಂದು ಬಾಲುವನ್ನು ಗದರಿಸಿಕೊಳ್ಳಲು ಅವಳೆದ್ದು ಬಂದು ನಸುನಗುತ್ತಾ ರಾಮರಾಜಪ್ಪನಿಗೆ ತಾಂಬೂಲ ಸಿದ್ಧಮಾಡಿಕೊಟ್ಟಳು. ರಾಮರಾಜಪ್ಪ, ಬಾಲು ತಾಂಬೂಲಚರ್ವಣ ಮುಗಿಸುವಷ್ಟರಲ್ಲಿ ಮುತ್ತಮ್ಮ ಎದ್ದುಹೋಗಿ ರೂಮಿನ ವ್ಯವಸ್ಥೆ ನೋಡಿ ಬಂದಳು.

ರಾಮರಾಜಪ್ಪ, ಬಾಲು ರೂಮು ಬಿಟ್ಟು ಹೊರಗೆ ಬರುವ ವೇಳೆಗೆ ಐದು ಗಂಟೆಯಾಗಿತ್ತು. ರಾಮರಾಜಪ್ಪ ಹೊರಡಲು ಆತುರನಾದ.

"ನಾನು ಹೇಳಿದ್ದು ಗ್ನ್ಯಾಪ್ಕ ಇರತ್ತೈತೇನಪ್ಪಾ."

" ಇರತ್ತೆಮ್ಮಾ."

" ತಿರುಗಿ ನೀನು ಯಾವಾಗ ಬರೋದು – ಮುಂದಿನ ಉಣ್ಣಿಮೆಗೋ ಅಮಾವಾಸೇಗೊ ! "

" ಇಲ್ಲಮ್ಮಾ – ನಾಳೆಯೊ ನಾಡಿದ್ದು ಬರ್‍ತೀನಿ. ನನ್ನ ಸ್ಥಿತಿ ಮೊದಲಿನ ಹಾಗಿಲ್ಲ ಮುತ್ತಮ್ಮ."

" ಏನಾಗೈತಪ್ಪ"

" ಹಟಕ್ಕೆ ಬಿದ್ದು ಒಂದು ಕಂಟ್ರ್ಯಾಕ್ಟು ಒಪ್ಪಿಕೊಂಡೆ. ನಾನು ಟೆಂಡರ್ ಕೊಟ್ಟ ಮೇಲೆ ಮರ, ಕಬ್ಬಿಣ, ಸಿಮೆಂಟ್ ಬೆಲೆ ಏರಿಬಿಟ್ಟಿತು-ಮರ್ಯಾದೆ ಉಳಿಸಿಕೊಳ್ಳೋಕೆ ಕೆಲಸ ಮುಗಿಸಿಕೊಟ್ಟೆ. ಅದರಲ್ಲಿ ಭಾರಿ ಹೊಡೆತ ಬಿದ್ದುಬಿಟ್ಟಿತು. ಈಗ ನಷ್ಟ ಸರಿಹೋಗಿಸಿಕೊಳ್ಳೋದೆ ಕೆಲಸವಾಗಿ ಹೋಗಿದೆ."

" ನೀನು ಚೆಂದಾಕಿರ್‍ಬೇಕಪ್ಪ. ಗಿಡದ ಮರೇಲಿ ಹಕ್ಕಿ ಬದುಕೋ ಅಂಗೆ ನಿನ್ನ ಮರೇಲಿ ನಾನು ಬದುಕಿರೋದು."

" ನಿನ್ನ ಬದುಕಿಸೋಕೆ ನಾನು ಯಾರಮ್ಮ – ಎಲ್ಲಾರನ್ನೂ ಕಾಪಾಡುವುದಕ್ಕೆ ಭಗವಂತ ಇರುವಾಗ."

" ನನ್ನ ಭಾಗಕ್ಕೆ ನೀನೇ ಭಗವಂತನಪ್ಪಾ."

ಪುಟ್ಟಿ ಎರಡು ಕಾಗದ ಬರೆದು ತಂದು ರಾಮರಾಜಪ್ಪನ ಕೈಯಲ್ಲಿಟ್ಟು

" ಇದನ್ನು ಪೋಸ್ಟಿಗೆ ಹಾಕಿಬಿಡು ಅಣ್ಣಯ್ಯ" ಎಂದಳು.

ರಾಮರಾಜಪ್ಪ ವಿಳಾಸಗಳನ್ನು ನೋಡಿಕೊಂಡು

" ಸರಸ್ವತಮ್ಮನಿಗೆ ಏನು ಬರೆದಿದ್ದೀ ಪುಟ್ಟಾ."

" ನಿನ್ನ ನೋಡಿ ಬಹಳ ದಿವಸವಾಯಿತು – ನಾಲ್ಕು ದಿವಸ ಬಂದು ಹೋಗು ಎಂದು ಬರೆದಿದ್ದೇನೆ."

" ಈಗವಳು ಮೊದಲಿನ ಸರಸ್ವತಮ್ಮನಲ್ಲ ಪುಟ್ಟಾ. ದೊಡ್ಡ ನಾಟಕದ ಕಂಪೆನಿ ಯಜಮಾನಿತಿ – ಅವಳೆಲ್ಲಿ ಬರುತ್ತಾಳೆ ಹೇಳು."

" ಬಂದೇ ಬರುತ್ತಾಳೆ ಅಣ್ಣಯ್ಯ – ಅಮ್ಮನ್ನ ಕಂಡರೆ ಅವಳಿಗೆ ತುಂಬ ಪ್ರೀತಿ. ಅವಳು ಬಂದರೆ ನನಗೇನು ಕೊಡುತ್ತೀ ? "

" ನಿನಗೊಂದು ಸೀರೆ ತೆಗೆದುಕೊಡುತ್ತೇನಮ್ಮಾ."

" ಹಾಗೇ ಆಗಲಿ – ನೋಡುವೆಯಂತೆ ! " ಎಂದಳು.

ಪುಟ್ಟನ ಮುಗ್ಧ ಆಶಾವಾದ ಕಂಡು ಮುತ್ತಮ್ಮ, ರಾಮರಾಜಪ್ಪ ಇಬ್ಬರೂ ಒಬ್ಬರ ಮುಖ ಒಬ್ಬರು ನೋಡಿಕೊಂಡು ಮುಗುಳ್ನಗೆ ನಕ್ಕರು.

ರಾಮರಾಜಪ್ಪ ಹೊರಗೆ ಬಂದು ಕೈಗೆ ಸೈಕಲ್ ತೆಗೆದುಕೊಂಡ. ಮುತ್ತಮ್ಮ ಅವನನ್ನನುಸರಿಸಿ ಬಂದು

" ನಾಳೆ ಬತ್ತೀಯಾ ? "

" ಇಲ್ಲ – ನಾಡಿದ್ದು."

" ಬಾಲೂನೇ ಬರಹೇಳಲಾ ? "

" ಬೇಡ – ಇನ್ನು ಯಾರೂ ಇಲ್ಲವೇ ? "

" ನಾನು ಎಲ್ಲೂ ಹೊರಗೇ ಹೋಗಿಲ್ಲಪ್ಪಾ."

" ಹಾಗಾದರೆ ಬಾಯೀನ ಬರಹೇಳು."

" ಯಾಕೆ – ಬಾಲೂ ಪಸಂದಾಗಲಿಲ್ವಾ."

" ಎಲ್ಲಾ ಬಿಡಿಸಿ ಬಿಡಿಸಿ ಕೇಳ್ತೀಯಲ್ಲ – ನಿನಗೇನು ಹೇಳಲಿ ! "

" ನಾಡ್ದು ಒಂದೈವತ್ತು ರೂಪಾಯಿ ಕೊಡಪ್ಪ – ಮನೆಯವನ ಕಾಟ ತಡೆಯೋಕೆ ಆಗಾಕಿಲ್ಲ. ಬಾಡಿಗೆ ಬಿಸಾಕಿದ ಹೊರತೂ ಉಳಿಬಾಳಿಲ್ಲ."

" ಆಗಲಿ, ನಾಡಿದ್ದು ಬರುತ್ತೇನಲ್ಲ "

ಎಂದು ಹೇಳಿ ರಾಮರಾಜಪ್ಪ ಹೊರಟುಬಿಟ್ಟ.

ಅಂದಿನ ಸಮಸ್ಯೆ ಬಗೆಹರಿದುದಕ್ಕೆ ಮುತ್ತಮ್ಮನ ಮನಸ್ಸಿಗೆ ಸ್ವಲ್ಪ ಸಂತೋಷವಾಗಿದ್ದರೂ ಅವಳ ಚಿಂತೆ ಹರಿದಿರಲಿಲ್ಲ. ಪುಟ್ಟನ ಯೋಚನೆ ಅವಳ ಮನಸ್ಸು ಕೊರೆಯುತ್ತಿತ್ತು. ಪುಟ್ಟ ಇನ್ನೊಂದು ಬಣ್ಣ ತೆಳ್ಳಗಿದ್ದಿದ್ದರೆ ಚೆನ್ನಾಗಿತ್ತಲ್ಲ ಎಂದುಕೊಂಡಳು.

ಪುಟ್ಟ ತಾಯಿಯ ಬಳಿಗೆ ಬಂದು

" ಅದೇಕಮ್ಮ – ಅಣ್ಣಯ್ಯ ಹಾಗೆ ಹೇಳಿದ ? " ಎಂದು ಕೇಳಿದಳು.

" ಏನು ಹೇಳಿದನೇ ? ಯಾರ ವಿಷಯ ? "

" ಅಕ್ಕಯ್ಯನ ವಿಷಯ."

" ಅವಳು ಈಗ ಸಾವುಕಾರಳು ಪುಟ್ಟ."

" ಸಾಹುಕಾರರು ಬಡವರನ್ನು ಮರೆಯಬೇಕೇನು ? "

"ಲೋಕವೇ ಹಾಗೆ ಪುಟ್ಟ."

"ಅಣ್ಣಯ್ಯ ಹಾಗಿಲ್ಲ."

"ಅಣ್ಣಯ್ಯ ದೇವರ ಮಗ ಪುಟ್ಟಾ."

"ಎಲ್ಲರೂ ದೇವರ ಮಕ್ಕಳು ಏಕಾಗಬಾರದಮ್ಮ."

"ನಾಕಾಣೆ ಪುಟ್ಟ"

ಎಂದು ಮುತ್ತಮ್ಮ ಮಾತು ಮುಗಿಸಿದಳು. ಆದರೆ ಅವಳ ಮನಸ್ಸೂ ಪುಟ್ಟನ ಪ್ರಶ್ನೆಯನ್ನೇ ಕೇಳುತ್ತಿತ್ತು–ಎಲ್ಲರೂ ಏಕೆ ದೇವರ ಮಕ್ಕಳಾಗಬಾರದು?

ಸ್ವಲ್ಪ ಮಸಕುಕತ್ತಲೆ ಕವಿದಮೇಲೆ ಮುತ್ತಮ್ಮ ಬಾಲುವನ್ನು ಭಾಗ್ಯಮ್ಮನ ಜತೆಮಾಡಿ ಕಳುಹಿಸಿಕೊಟ್ಟಳು.

ಭಾಗ್ಯಮ್ಮ ಹಿಂದಿರುಗಿ ಬಂದ ಮೇಲೆ ಎಲ್ಲರೂ ಕುಳಿತು ಬೆಳಿಗ್ಗೆ ಮಾಡಿದ್ದ ಅಡಿಗೆ, ಮಿಕ್ಕಿದ್ದ ಬಿರಿಯಾನಿ ತಿಂದು ಮುಗಿಸಿದರು.

ಇದ್ದಕ್ಕಿದ್ದಂತೆ ಮುತ್ತಮ್ಮನ ಲಕ್ಷ್ಯ ಭಾಗ್ಯಮ್ಮನ ಕಡೆ ಹೋಯಿತು.

"ನೀನು ಸರಿ ಬುಡು – ಮಹಾರಾಯ್ತಿ – ಯಾವ ಯೋಚ್ನೇನೂ ಹಚ್ಕೊಳ್ಳಲ್ಲ."

"ನಾನೇನು ಮಾಡಬೇಕಮ್ಮ."

"ಪೇಟೇಲಿ ತಿರುಗಾಡಿ ಯಾರ್ನಾದರೂ ಇಡ್ಕೊಂಡು ಬರಬಾರದಾ ?"

"ಎಲ್ರಿಗೂ ಬಲೇ ದಿಮಾಕು ಬಂದೈತಮ್ಮಾಂದ್ರೆ !"

"ಸಾಬೀನ ಔಷ್ತಕ್ಕೆ ಕಳಿಸ್ದಂಗೆ ಮಾಡ್ತೀ ? ಓಗಿ ನೋಡಬಾರದಾ ?

"ನಾಳೆ ಅದೇ ಕೆಲ್ಸಾ ಮಾಡ್ತೀನಿ ಸುಮ್ಕಿರು."

ಎಂದು ಸಮಾಧಾನ ಹೇಳಿದಳು.

ಪುಟ್ಟ ಮಲಗಲು ಹಾಸಿಗೆ ಸರಿಮಾಡಿಕೊಳ್ಳುತ್ತಾ

"ನಾಯಿ ತರೋಕಿಲ್ವೇನಮ್ಮ ?" ಎಂದಳು.

"ನಾಯಿ ಯಾಕೇ ?"

"ನಾಯಿ ಇಲ್ದೆ ಬೇಸರ ಆಗುತ್ತೆ."

"ನಮ್ಗೇ ಒಟ್ಟೇಗೆ ಇಟ್ಟಿಲ್ಲ. ನಾಯೀಗೆ ಏನೇ ಆಕೋದು."

"ನಾವು ತಿನ್ನೋದೇ ಅದಕ್ಕೂ ಹಾಕೋದು–ನಾವು ಉಪಾಸ ಇದ್ರೆ ಅದಕ್ಕೂ ಉಪಾಸವೇ."

"ನಾಡಿದ್ದು ಅಣ್ಣಯ್ಯ ಬರ್‍ತಾನಲ್ಲ–ಅವನಿಗೆ ಏಳು–ತಂದುಕೊಡ್ತಾನೆ.'

"ಹೊ ! ಅದೇ ಸರಿ."

ಎಂದು ಪುಟ್ಟ ಪವಡಿಸಿದಳು. ಮುತ್ತಮ್ಮನೂ ಅವಳ ಬಳಿ ಹೋಗಿ ಮಲಗಿದಳು. ಅವರೆದುರು ಭಾಗ್ಯಮ್ಮ ಹಾಸಿಕೊಂಡು ಮಲಗಿದಳು.

ಪುಟ್ಟನ ಕಣ್ಣಿಗೆ ನಿದ್ರೆ ಹತ್ತಲು ತಡವಾಗಲಿಲ್ಲ.

ಭಾಗ್ಯಮ್ಮ ಮಲಗಿದ ಹತ್ತು ನಿಮಿಷಗಳಲ್ಲಿ ಗೊರಕೆ ಹೊಡೆಯಲಾರಂಭಿಸಿದಳು.

ಮುತ್ತಮ್ಮನಿಗೆ ಮಾತ್ರ ನಿದ್ರೆ ಬರಲಿಲ್ಲ.

೨

ದಾವಣಗೆರೆಯಲ್ಲಿ 'ಗೌರಿ ಮನೋಹರಿ ಪ್ರಾಸಾದಿಕ ನಾಟಕ ಮಂಡಳಿ'ಯ ಸೀಸನ್ (season) ಒಳ್ಳೆ ಅದ್ಧೂರಿಯಿಂದ ಆರಂಭವಾಗಿತ್ತು. ಶ್ರೀಕಂಠಮೂರ್ತಿ ತನ್ನ ಕಲಾಪ್ರತಿಭೆಯಿಂದ ಜನಗಳ ಮೇಲೆ ಪ್ರಭಾವ ಬೀರದಿದ್ದರೂ, ಚಾಕಚಕ್ಯದಿಂದ, ರಂಗಸಿದ್ಧತೆಯಿಂದ ಜನರನ್ನು ಮರುಳು ಗೊಳಿಸಿದ್ದ. ನಾಟಕ ನೋಡಿ ಬಂದವರು 'ಅದರಲ್ಲಿ ಏನೈತಪ್ಪಾ–ಬರೀ ಲೈಟು, ದಿರ್ಸು' ಎಂದನ್ನುತ್ತಿದ್ದರು. ಆದರೆ ಅವರೇ ಮಾರನೆಯ ದಿನದ ನಾಟಕಕ್ಕೆ ಎಲ್ಲರಿಗಿಂತ ಮುಂಚೆ ಬಂದು ಕೂಡುತ್ತಿದ್ದರು.

ನಾಟಕ ಸಾಹಿತ್ಯವನ್ನೂ, ಅದರ ಪ್ರದರ್ಶನವನ್ನೂ ಕಾಲೋಚಿತವಾಗಿ, ಸಮಯೋಚಿತವಾಗಿ, ದೇಶೋಚಿತವಾಗಿ ಬದಲಾಯಿಸಿಕೊಳ್ಳುವ ಕಲೆ ಶ್ರೀಕಂಠಮೂರ್ತಿಗೆ ಚೆನ್ನಾಗಿ ಸಾಧಿಸಿತ್ತು. ಮೈಸೂರು–ಈ ಊರಿಗೆ ಹೆಚ್ಚು ಸಂಗೀತ ಬೇಕು ; ಶಿವಮೊಗ್ಗೆ–ಈ ಊರಿಗೆ ಜಬರದಸ್ತು ಮಾತು ಬೇಕು ; ದಾವಣಗೆರೆ–ಈ ಊರಿಗೆ 'ಭಭಕ' ಬೇಕು ಎಂದು ಶ್ರೀಕಂಠ ಮೂರ್ತಿ ಆಯಾ ಊರಿನ ಜಾತಕ ತೋರಿಸಿ, ಅವುಗಳ ಹಣೆಯ ಬರಹ ಬರೆದಿಟ್ಟುಕೊಂಡಿದ್ದ.

ಊರುಗಳ ಅಭಿರುಚಿಯ ಮೇಲೆ ಅವನಿಗೆ ಸಿಕ್ಕಿದ್ದ ಹಿಡಿತ, ನಟರ

ಮೇಲೂ ಸಿಕ್ಕಿತ್ತು. ಒಂದೊಂದು ಊರಿನಲ್ಲಿ ಒಬ್ಬೊಬ್ಬ ನಟನಿಗೆ ಪ್ರಾಧಾನ್ಯ ಕೊಡುತ್ತಿದ್ದ. ಪರಮೇಶ್ವರಯ್ಯ ಕಂಪೆನಿಯಲ್ಲಿ, ಹೆಸರಾಂತ ಗಾಯಕನಾಗಿದ್ದ. ನಾಟಕದ ಕಂಪೆನಿಗಳಲ್ಲಿ ಅವನ 'ಸರ್ವೀಸು' ಎಲ್ಲರನ್ನೂ ಮೀರಿಸಿತ್ತು. ಪರಮೇಶ್ವರಯ್ಯ ತಾರುಣ್ಯದಲ್ಲಿ ಕಣಿವೇ ಕೆಳಗೆ ಹೋಗಿ ಸಂಗೀತ ಅಭ್ಯಾಸ ಮಾಡಿ ಬಂದನೆಂಬ ಪ್ರತೀತಿಯೂ ಹಬ್ಬಿತ್ತು. ಆ ವದಂತಿಯ ಬಲದ ಮೇಲೇ ಅವನು ಸಂಗೀತದ ವಿಷಯದಲ್ಲಿ ತನ್ನ ಮಾತು 'ವೇದವಾಕ್ಯ' ಮಾಡಿಕೊಂಡಿದ್ದ. ಮೈಸೂರು ಕ್ಯಾಂಪಿನಲ್ಲಿ ಪರಮೇಶ್ವರಯ್ಯ, ಯಜಮಾನರ ಆರಾಧ್ಯ ದೇವತೆಯಾಗುತ್ತಿದ್ದ. 'ಪರಮೇಶ್ವರಯ್ಯನವರಿಗೆ ಕಾಫಿ ಕೊಟ್ಟರೇನೋ–ಚೆನ್ನಾ, ಪರಮೇಶ್ವರಯ್ಯನವರ ಸ್ನಾನಕ್ಕೆ ನೀರು ಕಾದಿದೆಯೇನು ನೋಡೋ–ದಡ್ಡಮುಂಡೇ ಗಂಡರು, ಇವರಿಗೆ ಪರಮೇಶ್ವರಯ್ಯನವರ ಯೋಗ್ಯತೆ ಹೇಗೆ ಅರ್ಥವಾಗಬೇಕು' ಎಂದು ಶ್ರೀಕಂಠಮೂರ್ತಿ ಸಮಯ ಸಿಕ್ಕಿದಾಗ ಅವನನ್ನು ಉಬ್ಬಿಸುತ್ತಿದ್ದ.

ಮೈಸೂರು ಕ್ಯಾಂಪ್ ಮುಗಿದು ಶಿವಮೊಗ್ಗೆಗೆ ಬಂದ ಕೂಡಲೆ ಆ 'ಶುಕ್ರದೆಸೆ' ದೊರೆಸ್ವಾಮಿಯ ಪಾಲಿಗೆ ಬರುತ್ತಿತ್ತು. ಪರಮೇಶ್ವರಯ್ಯ ಹತ್ತರಲ್ಲಿ ಹನ್ನೊಂದು ಲೆಕ್ಕಕ್ಕೆ ಸೇರುತ್ತಿದ್ದ. ಆದರೆ ದೊರೆಸ್ವಾಮಿ ಯಜಮಾನರ ಮರುಳು ಮಾತಿಗೆ, ಬಾಯಿ ಉಪಚಾರಕ್ಕೆ ಮಾರುಹೋಗುವ ಆಸಾಮಿಯಾಗಿರಲಿಲ್ಲ. ತನ್ನ ಅಜ್ಞಾತವಾಸ ಮುಗಿದು ದೆಸೆ ಆರಂಭವಾದ ಕೂಡಲೆ ಅದರ ಪ್ರಯೋಜನವನ್ನು ಕೂಡಲೆ ರೂಪಾಯಿ, ಆಣೆ, ಪೈಗಳಿಗೆ ರೂಪಿಸಿಕೊಳ್ಳುವ ಶಕ್ತಿಯನ್ನು ಅವನು ಅನ್ಯಾದೃಶವಾಗಿ ಸಾಧಿಸಿಕೊಂಡಿದ್ದ. ದೊರೆಸ್ವಾಮಿ ಹೈಸ್ಕೂಲ್‌ವರೆಗೆ 'ಚೊಟ್ಟೆ' ಹಾಕಿದ್ದುದರಿಂದ ಅವನ ಬಾಯಲ್ಲಿ ಮಾತುಗಳು ಸ್ಪಷ್ಟವಾಗಿ, ಶಕ್ತಿಯುತವಾಗಿ ಬರುತ್ತಿದ್ದವು. ನಾಟಕಕ್ಕೆ ಸಂಗೀತದ ಅವಶ್ಯವಿಲ್ಲವೆನ್ನುವ ಮಟ್ಟಿಗೆ ಅವನು ಒಂದೊಂದು ದಿನ ಮೈಮರೆತು ಅಭಿನಯಿಸುತ್ತಿದ್ದ. ಮುಖಲಕ್ಷಣ, ವಯಸ್ಸು ಎರಡೂ ದೊರೆಸ್ವಾಮಿಯ ಅಭಿನಯಕ್ಕೆ ಇಂಬುಗೊಟ್ಟಿದ್ದವು.

ಇಳಿವಯಸ್ಸಿಗೆ ಬಂದಿದ್ದ ಪರಮೇಶ್ವರಯ್ಯನಿಗೆ ಯಜಮಾನರನ್ನು ಕಂಡರೆ ಸ್ವಲ್ಪ ಭಯವೂ ಇತ್ತು. ಕಂಪೆನಿ ಬಿಟ್ಟು ಹೋದರೆ ಇಷ್ಟು ಮರ್ಯಾದೆ, ವರಮಾನ ತನಗೆ ಬೇರೆ ಕಡೆ ಸಿಕ್ಕುವ ಸಂಭವವಿಲ್ಲವೆಂದು

ಅವನು ಚೆನ್ನಾಗಿ ತಿಳಿದಿದ್ದ. ವಯಸ್ಸಿನ ಹಮ್ಮು ದೊರೆಸ್ವಾಮಿಯನ್ನು ಕಬಳಿಸಿತ್ತು. ನಾಟಕಕ್ಕೆ ಒಳ್ಳೆಯ ಸೀಸನ್ ನಡೆಯುತ್ತಿದ್ದಾಗ ಅವನು ಮುನಿಸಿಕೊಂಡು ನಿರ್ದಾಕ್ಷಿಣ್ಯವಾಗಿ ಯಜಮಾನರಿಗೆ ಕೈಕೊಡುತ್ತಿದ್ದ. ಕಂಪೆನಿಯ ಎಲ್ಲ ನಟ, ನಟಿಯರನ್ನೂ ಹೆದರಿಸಿಕೊಳ್ಳುತ್ತಿದ್ದ. ಶ್ರೀಕಂಠ ಮೂರ್ತಿ ದೊರೆಸ್ವಾಮಿಗೆ ಅಂಜುತ್ತಿದ್ದ.

ಸರ್ಕಾರಿ ಉದ್ಯೋಗಗಳಲ್ಲಿರುವಂತೆ ಶ್ರೀಕಂಠಮೂರ್ತಿಯ ನಾಟಕದ ಕಂಪೆನಿಯಲ್ಲಿಯೂ 'ಗ್ರೇಡು'ಗಳಿದ್ದವು. ಕಂಪೆನಿಯ 'ಸಿವಿಲ್ ಲಿಸ್ಟ್'ನಲ್ಲಿ ಮೊದಲನೆಯ ಸ್ಥಾನ ಯಜಮಾನರು, ಅಮ್ಮಾವರು ; ಎರಡನೆಯ ಸ್ಥಾನ ಪರಮೇಶ್ವರಯ್ಯ ಮತ್ತು ದೊರೆಸ್ವಾಮಿ ; ಮೂರನೆಯ ಸ್ಥಾನ ಕಂಪೆನಿಯ ನಟಿಯರು ; ನಾಲ್ಕನೆಯ ಸ್ಥಾನ ಉಳಿದ ನಟರು ; ಐದನೆಯ ಸ್ಥಾನ ಪರಿವಾರ ದೇವತೆಗಳು ; ಆರನೆಯ ಸ್ಥಾನ ಉಳಿದ ನೌಕರರು.' ಈ ವಿಂಗಡನೆಯಿಂದ ಕಂಪೆನಿಯಲ್ಲಿ ಆಗಾಗ್ಗೆ ಸಣ್ಣಪುಟ್ಟ ಕ್ರಾಂತಿಗಳಾಗುತ್ತಿದ್ದವು. ಅತೃಪ್ತರಾಗಿದ್ದವರು ದಂಗೆಯೇಳುತ್ತಿದ್ದರು. ಅಂಥ ಸಮಯದಲ್ಲಿ ಯಜಮಾನರ ಹಿತಕ್ಕೆ ಧಕ್ಕೆ ಬಾರದಂತೆ ಪರಿಸ್ಥಿತಿಯನ್ನು ಹತೋಟಿಗೆ ತರುತ್ತಿದ್ದವನು ರಾಮಚಂದ್ರ ದೀಕ್ಷಿತ. ದೀಕ್ಷಿತ ತನ್ನದೇ ಆದ ಒಂದು ವಿಶಿಷ್ಟಸ್ಥಾನವನ್ನು ಕಂಪೆನಿಯಲ್ಲಿ ದೊರಕಿಸಿಕೊಂಡಿದ್ದ. ನಟನಾಗಿ ಕಂಪೆನಿ ಪ್ರವೇಶಿಸಿದ್ದ ದೀಕ್ಷಿತ ಕಾಲಕ್ರಮೇಣ ತಾನು ನಾಟಕಕಾರ ಆಗಿದ್ದ ವಿಷಯವನ್ನು ಬಹಿರಂಗಪಡಿಸಿದ. ಅವನೇ ಬರೆದಿದ್ದ ಮೂವತ್ತು ನಲವತ್ತು ನಾಟಕಗಳು, ಅವನ ಕಾವ್ಯದ ಬೃಹದ್ಗ್ರಂಥವೊಂದು ಅವನ ಟ್ರಂಕಿನಲ್ಲಿ ಶೇಖರವಾಗಿತ್ತು.

'ಕಂಪೆನಿ ಕವಿ'ಗಳಲ್ಲಿ ದೀಕ್ಷಿತನಷ್ಟು ಸಮಯಸ್ಫೂರ್ತಿ ಪಡೆದಿದ್ದವರು ವಿರಳ. ಅವನ 'ಕಾವ್ಯ ಸಂಗ್ರಹ'ದಲ್ಲಿ ಕಂದ ಪದ್ಯಗಳು, ಸೀಸಪದ್ಯಗಳು, ವೃತ್ತಗಳು, ಹಾಡುಗಳು ಸುಮಾರು ಎರಡು ಸಾವಿರಕ್ಕೂ ಹೆಚ್ಚಾಗಿದ್ದುದಲ್ಲದೆ, ಅವು ನಾಟಕದ ಸಮಸ್ತ ಸನ್ನಿವೇಶಕ್ಕೂ ಅಳವಡುತ್ತಿದ್ದವು. ಶೃಂಗಾರ-ಕರುಣ-ಭಯಾನಕ-ರುದ್ರ-ಹಾಸ್ಯ ಸನ್ನಿವೇಶಗಳೆಲ್ಲದರ ಮೇಲೂ ಅವನು ಪದ್ಯಗಳನ್ನು ಬರೆದಿಟ್ಟುಕೊಂಡಿದ್ದ. ಯಜಮಾನರಾಗಲಿ, ನಟನಟಿಯರಾಗಲಿ ಕೇಳಿದ ಕೂಡಲೆ ಅವರ ಕೈಯಲ್ಲೊಂದು ಕಂದವನ್ನೋ ವೃತ್ತವನ್ನೋ ಹಾಡನ್ನೋ ಇಟ್ಟುಬಿಡುತ್ತಿದ್ದ.

ತನ್ನ ಜೀವಾವಧಿಯಲ್ಲಿ ಒಮ್ಮೆಯಾದರೂ ತನ್ನ ಯಾವದಾದರೊಂದು ನಾಟಕವನ್ನು ಆಡಿಸಬೇಕೆಂಬುದು ದೀಕ್ಷಿತನ ಮಹತ್ವಾಕಾಂಕ್ಷೆಯಾಗಿತ್ತು. ಆದರೆ ಶ್ರೀಕಂಠಮೂರ್ತಿಗೆ ರಾಮಾಯಣ, ಮಹಾಭಾರತ ಕೃಷ್ಣಲೀಲೆ, ಗುಲೇಬಕಾವಲಿ, ಸದಾರಮೆ, ವೀರಸಿಂಹ, ಶನಿಪ್ರಭಾವ, ಸತೀ ಸುಲೋಚನೆ ಮೊದಲಾದ ನಾಟಕಗಳ ಮೇಲಣ ಗೀಳು ಕಡಿಮೆಯಾಗಿರಲಿಲ್ಲವಾದ್ದರಿಂದ ದೀಕ್ಷಿತನ ಅಮರ ಕೃತಿಗಳು ಟ್ರಂಕಿನಲ್ಲಿಯೇ ಕೊಳೆಯಬೇಕಾಗಿತ್ತು.

ದೀಕ್ಷಿತನ ಕಾವ್ಯ ದೀಧಿತಿಯನ್ನು ಅಪಹಾಸ್ಯ ಮಾಡದೆ ಸಹಿಸಿಕೊಳ್ಳುತ್ತಿದ್ದವನು ರಾಜಶೇಖರನೊಬ್ಬನೇ. ದೀಕ್ಷಿತನ ಉದ್ಗಾರ ಕೇಳಿ ಕೇಳಿ ರಾಜಶೇಖರನಿಗೆ ಸಾಕಷ್ಟು ಬೇಸರವಾಗಿದ್ದರೂ ಅದನ್ನು ತೋರಿಸಿಕೊಳ್ಳುತ್ತಿರಲಿಲ್ಲ.

"ಕಾಲ ಬರಬೇಕು ಸ್ವಾಮಿ. ಷೇಕ್ಸ್‌ಪಿಯರ್ ಕೂಡ ನಾಟಕಗಳನ್ನು ಬರೆದಿಟ್ಟುಕೊಂಡು, ಅವುಗಳನ್ನು ಆಡಿಸುವುದಕ್ಕೆ ಶ್ರೀಮಂತರ ಮನೆ ಮನೆ ಅಲೆದ. ಒಂದು ಕಾಲಕ್ಕೆ ಜನ ಅವನ ಮೇಲೆ ನಾಯಿ 'ಛೂ' ಬಿಡುತ್ತಿದ್ದರು. ಈಗ ವಿಶ್ವವೇ ಅವನನ್ನು ಪೂಜಿಸುತ್ತಿದೆ." ರಾಜಶೇಖರನ ಮಾತು ಕೇಳಿದ ಕೂಡಲೆ ದೀಕ್ಷಿತ ತನ್ನನ್ನು ತಾನು ಷೇಕ್ಸ್‌ಪಿಯರಿನ ಸ್ಥಾನದಲ್ಲಿಟ್ಟುಕೊಂಡು ಸಂತೋಷಪಡುತ್ತಿದ್ದ. ದೀಕ್ಷಿತನ ಮುಗ್ಧತೆ ಕಂಡು ರಾಜಶೇಖರನಿಗೊಮ್ಮೊಮ್ಮೆ ನಗೆ ಬರುತ್ತಿತ್ತು. ಆದರೆ ಅದರಲ್ಲಿ ತಿರಸ್ಕಾರಕ್ಕಿಂತ ಕರುಣೆಯೇ ಹೆಚ್ಚು ತುಂಬಿರುತ್ತಿತ್ತು.

ರಾಜಶೇಖರ ಕಂಪೆನಿ ಜನಗಳ ಅಚ್ಚುಮೆಚ್ಚಿಗೆ ಪಾತ್ರನಾಗಿರಲಿಲ್ಲ. ಅವನಾಗಿಯೇ ಯಾರ ಸ್ನೇಹ, ವಿಶ್ವಾಸವನ್ನೂ ದೊರಕಿಸಲೆತ್ನಿಸುತ್ತಿರಲಿಲ್ಲ. ರಾಜಶೇಖರ ಯಾರ ಬಗ್ಗೆಯೂ ಒಂದು ಅಪಶಬ್ದವನ್ನಾಡುತ್ತಿರಲಿಲ್ಲ; ಆದರೆ ಯಾರನ್ನೂ ಸಮೀಪಕ್ಕೆ ಬಿಟ್ಟುಕೊಳ್ಳುತ್ತಿರಲಿಲ್ಲ. ಮಾತನಾಡಿಸಿದವರಿಗೆ ಉತ್ತರ ಕೊಡುತ್ತಿದ್ದ–ಆದರೆ ತಾನಾಗಿಯೇ ಯಾರನ್ನೂ ಮಾತನಾಡಿಸಿಕೊಂಡು ಹೋಗುತ್ತಿರಲಿಲ್ಲ. ತಾನಾಯಿತು, ತನ್ನ ಕೆಲಸವಾಯಿತು. ರಿಹರ್ಸಲ್ ವೇಳೆಗೆ ಸರಿಯಾಗಿ ಬರುತ್ತಿದ್ದ–ರಿಹರ್ಸಲ್ ಮುಗಿದೊಡನೆಯೇ ತನ್ನ ಮನೆಗೆ ಹೋಗುತ್ತಿದ್ದ. ನಾಟಕಕ್ಕೂ ಅಷ್ಟೇ–ಎಲ್ಲರಿಗಿಂತ ಮುಂಚಿತವಾಗಿಯೇ ತನ್ನ ಪಾತ್ರ ಸಿದ್ಧತೆ ಮಾಡಿಕೊಂಡು, ಕರ್ತವ್ಯ ದಕ್ಷನಾದ ಸೇವಕನಂತೆ ತನ್ನ ಪಾತ್ರ ನಿರ್ವಹಿಸುತ್ತಿದ್ದ.

ಕಂಪೆನಿ ಜನಗಳಲ್ಲಿ ಯಾರಿಗೂ ರಾಜಶೇಖರನ ಮೇಲೆ ಪ್ರೀತಿಯಿರದಿದ್ದರೂ ಎಲ್ಲರೂ ಅವನನ್ನು ಗೌರವಿಸುತ್ತಿದ್ದರು ; ಅವನಿಗೆ ಹೆದರುತ್ತಿದ್ದರು. ಅವನ ಮುಖ ಗಂಭೀರವೂ ತೇಜಃಪುಂಜವೂ ಆಗಿತ್ತು. ಸದಾ ಶುಭ್ರವಾದ ಖಾದಿ ಅರಿವೆಗಳನ್ನೇ ಅವನು ತೊಡುತ್ತಿದ್ದ. ಭ್ರೂಮಧ್ಯೆ ಕುಂಕುಮ ಧರಿಸುತ್ತಿದ್ದ. ಕಂಪನಿಯಲ್ಲೆಲ್ಲಾ ರಾಜಶೇಖರನಷ್ಟು ಇಂಗ್ಲಿಷ್ ಬಲ್ಲವರು ಯಾರೂ ಇರಲಿಲ್ಲ. ಅವನ ಇಂಗ್ಲಿಷ್ ಪಾಂಡಿತ್ಯ ಇತರ ನಟರನ್ನು ಹೆದರಿಸಿತ್ತು. 'ಇಂಗ್ಲಿಷ್ ಕಲಿತು ನಾಟಕದ ಕಂಪೆನಿ ಏಕೆ ಸೇರಿದ' ಎನ್ನುವುದೇ ಕಂಪೆನಿಯವರಿಗೆ ಒಂದು ಸಮಸ್ಯೆಯಾಗಿತ್ತು.

ಕಂಪೆನಿ ಯಾವ ಊರಿಗೆ ಹೋಗಿ ಬೀಡು ಬಿಟ್ಟರೂ ಕಂಪೆನಿ ಮನೆಯಲ್ಲಿರಲೊಪ್ಪದೆ ಬೇರೆ ಕಡೆ ರೂಮ್ ಮಾಡಿಕೊಂಡು, ಹೊಟೇಲಿನಲ್ಲಿ ಊಟಮಾಡುವುದು ರಾಜಶೇಖರನ ಪದ್ಧತಿಯಾಗಿತ್ತು.

ಶ್ರೀಕಂಠಮೂರ್ತಿಯ 'ಗೌರಿ ಮನೋಹರಿ ಪ್ರಾಸಾದಿಕ ನಾಟಕ ಮಂಡಳಿ' ಒಳ್ಳೆಯ ಭರಾಟೆಯಲ್ಲಿ ಬೆಂಗಳೂರಿನಲ್ಲಿ ನಡೆಯುತ್ತಿದ್ದಾಗ ಪ್ರಧಾನ ಸ್ತ್ರೀ ಪಾತ್ರಗಳನ್ನು ಅಭಿನಯಿಸುತ್ತಿದ್ದ ಗೌರಿ, ಮನೋಹರಿ ಇಬ್ಬರೂ ಕಳಚಿಕೊಂಡಿದ್ದರು. ಚಲನ ಚಿತ್ರ ನಿರ್ಮಾಪಕರು ಅವರ ಕಣ್ಮನ ಸೂರೆಗೊಳ್ಳುವಂತಹ ಕಂಟ್ರ್ಯಾಕ್ಟ್ ಇತ್ತು ಕರೆದುಕೊಂಡು ಹೋಗಿದ್ದರು. ಶ್ರೀಕಂಠಮೂರ್ತಿಯ ತಲೆಯ್ಮ ಮೇಲೆ ಆಕಾಶವೇ ಕಳಚಿ ಬಿದ್ದಂತಾಗಿತ್ತು. ಗೌರಿ, ಮನೋಹರಿ ಇಬ್ಬರೂ ಕಂಪೆನಿಯ ಆಧಾರಸ್ತಂಭರಾಗಿದ್ದರು. ಅವರ ಹೆಸರನ್ನೇ ಕಂಪೆನಿಗೆ ಇಟ್ಟಿದ್ದುದಲ್ಲದೆ, ಅವರಿಗೆ ಯಾವದಕ್ಕೂ ಕಡಿಮೆ ಮಾಡಿರಲಿಲ್ಲ. ಇಂಥ ಸಿಡಿಲು ಹೊಡೆತ ಬಿದ್ದರೂ ಶ್ರೀಕಂಠಮೂರ್ತಿ ಕಂಪೆನಿ ನಿಲ್ಲಿಸುವ ಹಾಗಿರಲಿಲ್ಲ. ಎಪ್ಪತ್ತು ಜನಗಳ ಜೀವನ ಸಾಗಬೇಕಾಗಿತ್ತು ; ದಾವಣಗೆರೆಯ ಕಂಟ್ರ್ಯಾಕ್ಟು ಫಲಿಸಿತ್ತು. ಗೌರಿ, ಮನೋಹರಿಯರ ಬಲದ ಮೇಲೆ ದಾವಣಗೆರೆ ಕೊಳ್ಳೆಹೊಡೆಯಬಹುದೆಂಬ ಆಕಾಂಕ್ಷೆ ಗಾಳಿಪಾಲಾಗಿತ್ತು. ಶ್ರೀಕಂಠಮೂರ್ತಿ ತಲೆಯಮೇಲೆ ಕೈ ಹೊತ್ತು ಕುಳಿತಾಗ ಅವನ ಭಾಗದ ದೇವರಂತೆ ಬಂದವರು ಸಂಗೀತದ ಮೇಷ್ಟ್ರು ರಾಘವಾಚಾರ್ಯರು. ಆಚಾರ್ಯರು ಶ್ರೀಕಂಠಮೂರ್ತಿಯ ಸ್ನೇಹಿತರಾಗಿದ್ದುದಲ್ಲದೆ ಅವನ ಕಂಪೆನಿಯ ಹಿತೈಷಿಗಳೂ ಆಗಿದ್ದರು. ಬಂದವರೇ ಶ್ರೀಕಂಠಮೂರ್ತಿಯ ಅವಸ್ಥೆ ನೋಡಿ

"ಇದೇನು ಸ್ವಾಮಿ, ಹೀಗೆ ಕುಳಿತುಬಿಟ್ಟಿರಿ ಪ್ರಾಕ್ಟೀಸ್ ಇಲ್ಲವೇನು?"

"ಒಳ್ಳೆಯ ಸಮಯಕ್ಕೆ ಬಂದಿರಿ ರಾಘವಾಚಾರ್ಯರೇ-ಬನ್ನಿ. ನಾನೇ ನಿಮಗೆ ಹೇಳಿಕಳಿಸಬೇಕೆಂದಿದ್ದೆ."

"ಏನಾಯಿತು-ಅನಾಹುತವೇನೂ ನಡೆದಿಲ್ಲವಷ್ಟೆ !"

"ಅನಾಹುತವಲ್ಲದೆ ಮತ್ತೇನು ಆಚಾರ್ರೇ. ಕೊನೆಗೂ ಗೌರಿ, ಮನೋಹರಿ ಕೈಕೊಟ್ಟರು."

"ಓಡಿಹೋದರೇನು ?"

"ಫಿಲಂ ಕಂಪೆನಿಯವರನ್ನು ಕಟ್ಟಿಕೊಂಡು ಹಾಳಾಗಿ ಹೋದರು."

"ಈ ಕಾಲದಲ್ಲಿ ನೀಯತ್ತೇ ಹೋಗಿಬಿಟ್ಟಿತು ಸ್ವಾಮಿ. ಸಂಗೀತಗಾರರು, ನಾಟಕದವರು ಎಂದರೆ ಜನಗಳಲ್ಲಿ ತಿರಸ್ಕಾರ ಹುಟ್ಟುವುದಕ್ಕೆ ಇದೇ ಕಾರಣ."

"ಈಗ ನನ್ನ ಗತಿಯೇನು ಆಚಾರ್ರೇ."

"ಪಂಚಾಂಗ ಹೋದರೆ ನಕ್ಷತ್ರ ಹೋಗುತ್ತದೆಯೇ ಸ್ವಾಮಿ."

"ಅದು ಸರಿ. ಸೀಸನ್ ನೋಡಿ ಹೇಗೆ ನಡೆಯುತ್ತಿದೆ-ದಾವಣಗೆರೆ ಕಂಟ್ರ್ಯಾಕ್ಟು ಬೇರೆ ಒಪ್ಪಿಕೊಂಡುಬಿಟ್ಟದ್ದೇನೆ."

"ಸುಬ್ಬಲಕ್ಷ್ಮಿ, ನಾಗರತ್ನ, ಸುಂದರಿ ಕೆಲಸ ತೂಗಿಸಲಾರರೇನು ?"

"ಸದ್ಯಕ್ಕೆ ಹಾಗೆ ಮಾಡಬಹುದು. ಮುಂದಕ್ಕೆ-ಸರಿಯಾದ ಸ್ತ್ರೀ ಪಾರ್ಟುಗಳಿಲ್ಲದಿದ್ದರೆ ದಾವಣಗೆರೆಯಲ್ಲಿ ಕಲ್ಲುಗಳು ಬಿದ್ದುಬಿಡುತ್ತವೆ."

"ನಾಟಕ ಮುಂದುವರಿಯಲಿ. ಸುಬ್ಬಲಕ್ಷ್ಮಿ, ನಾಗರತ್ನ, ಸುಂದರಿ ಯವರ ಕೈಯಲ್ಲಿ ಪಾರ್ಟುಗಳನ್ನು ಮಾಡಿಸುತ್ತಿರಿ. ದಾವಣಗೆರೆಗೆ ಹೋಗುವ ವೇಳೆಗೆ ನಾನು ಬೇರೆಯವರನ್ನು ಗೊತ್ತುಮಾಡಿಕೊಡುತ್ತೇನೆ-"

ರಾಘವಾಚಾರ್ಯರ ಆಶ್ವಾಸನ ಶ್ರೀಕಂಠಮೂರ್ತಿಗೆ ಉಸಿರಾಡಲು ಅವಕಾಶಕೊಟ್ಟಿತು.

ಪ್ರಧಾನ ಸ್ತ್ರೀ ಪಾತ್ರಗಳನ್ನಭಿನಯಿಸುವ ಅವಕಾಶ ಸಿಕ್ಕಿದದುಕ್ಕೆ ಸುಬ್ಬುಲಕ್ಷ್ಮಿ, ನಾಗರತ್ನ ಇಬ್ಬರೂ ಸಂತೋಷಪಟ್ಟುಕೊಂಡರು. ತಮ್ಮ ಪಾತ್ರಗಳನ್ನು ತೃಪ್ತಿಕರವಾಗಿ ಅಭಿನಯಿಸಿ ನಾಯಿಕೆಯರ ಸ್ಥಾನ ಭದ್ರಪಡಿಸಿ ಕೊಳ್ಳಬೇಕೆಂಬುದೇ ಅವರ ಮಹದಾಶಯವಾಯಿತು.

ಬೆಂಗಳೂರು ಸೀಸನ್ ನಡೆಯುತ್ತಿದ್ದಂತೆಯೇ ಸರಸ್ವತಮ್ಮ, ಮಂಜುಳಾ

ಸುಧಾ ಕಂಪೆನಿ ಪ್ರವೇಶಿಸಿದರು. ಸುಬ್ಬುಲಕ್ಷ್ಮಿ, ನಾಗರತ್ನ, ಸುಂದರಿಯರಿಗೆ 'ಪೂರ್ವೇತಿ ಪೂರ್ವಃ' ಆಯಿತು. ಈ ಅಪಮಾನ ಸಹಿಸಿಕೊಂಡು, ಸರಸ್ವತಿ, ಮಂಜುಳಾ, ಸುಧಾ ಇವರ 'ಅಜೂಜಮಾರಿ' ಮಾಡಿಕೊಂಡು ಕಂಪೆನಿಯಲ್ಲಿ ನಿಲ್ಲುವುದೇ - ಕಂಪೆನಿಬಿಟ್ಟು ಹೊರಟುಹೋಗುವುದೇ ಎಂದು ಅವರು ವಿಚಾರ ಮಾಡಿದರು. ಹೋಗುವುದಾದರೂ ಎಲ್ಲಿಗೆ? ಉಳಿದ ನಾಟಕದ ಕಂಪೆನಿಗಳಲ್ಲಿ ಎರಡು ಹೊತ್ತು ಕೂಳು ಕಾಣುವುದೇ ಕಷ್ಟವಾಗಿತ್ತು. ಸಂಬಳವಂತೂ ಸೊನ್ನೆಯೇ. ಶ್ರೀಕಂಠಮೂರ್ತಿ ಹೊಟ್ಟೆತುಂಬ ಅನ್ನಹಾಕುತ್ತಿದ್ದುದು ಮಾತ್ರವಲ್ಲದೆ, ಅಲ್ಪಸ್ವಲ್ಪ ಸಂಬಳವನ್ನಾದರೂ ಕ್ರಮವಾಗಿ ಕೊಡುತ್ತಿದ್ದ. ಸುಬ್ಬಲಕ್ಷ್ಮಿ, ನಾಗರತ್ನ, ಸುಂದರಿ ಯೋಚನೆಮಾಡಿ ಕೊನೆಗೆ, ಕಂಪೆನಿಬಿಟ್ಟು ಹೋಗುವುದು ಜಾಣತನವಲ್ಲವೆಂದು ನಿರ್ಧರಿಸಿದರು. ಆದರೆ ಅವರ ಮನಸ್ಸಿನಿಂದ ಅಪಮಾನದ ನೋವು ಹೋಗಲಿಲ್ಲ. ಒಳಗೇ ಹುದುಗಿ ಕುಳಿತ ಪ್ರತೀಕಾರ ಘಟಸರ್ಪ ಸಮಯ ಕಾಯುತ್ತಿತ್ತು.

'ಗೌರಿ ಮನೋಹರಿ ಪ್ರಸಾದಿಕ ನಾಟಕಮಂಡಳಿ'ಯ ಸ್ಥಿತಿಗತಿ, ರಾಜಕಾರಣ, ಪಕ್ಷ ವಿಪಕ್ಷಗಳನ್ನರಿಯಲು ಸರಸ್ವತಮ್ಮನಿಗೆ ಬಹಳ ದಿವಸ ಬೇಕಾಗಲಿಲ್ಲ. ನಟರಲ್ಲಿ ಹನುಮಂತರಾಯ, ಭುವನೇಶ್ವರಯ್ಯ, ಸಂಪಂಗಿ, ಪ್ರತಿಪಕ್ಷದಲ್ಲಿದ್ದರು; ರಾಜಶೇಖರ ಯಾರಕಡೆಯೂ ಸೇರಿಕೊಳ್ಳುವವನೇ ಅಲ್ಲ; ದೀಕ್ಷಿತ ಎಲ್ಲ ಪಕ್ಷಕ್ಕೂ ಸೇರಿದವನಾಗಿದ್ದ; ಪರಮೇಶ್ವರಯ್ಯ ಯಜಮಾನರು ಯಾವ ಕಡೆ ಇದ್ದರೆ ಆಕಡೆ ಇರುತ್ತಿದ್ದ; ದೊರೆಸ್ವಾಮಿ, ಗುಂಡೂ ಮಾತ್ರ ಸರಸ್ವತಿಯ ಪಕ್ಷ ಹಿಡಿದಿದ್ದರು.

ಇಡಿಯ ಕಂಪೆನಿಯೇ ಸರಸ್ವತಿಯ ವಿರುದ್ಧ ಪಕ್ಷದಲ್ಲಿದ್ದಾಗ ದೊರೆಸ್ವಾಮಿ ಗುಂಡೂ ಸರಸ್ವತಿಯ ಪಕ್ಷ ಸೇರುವುದಕ್ಕೆ ಕಾರಣವಿತ್ತು. ಕಂಪೆನಿ ಬಿಟ್ಟು ಹೋದ ಗೌರಿ ಯಜಮಾನರ ವಿಶ್ವಾಸಕ್ಕೆ ಪಾತ್ರಳಾಗಿದ್ದಳು; ಅವಳ ತಂಗಿ ಮನೋಹರಿ ದೊರೆಸ್ವಾಮಿಯ ವಿಶ್ವಾಸಕ್ಕೆ ಪಾತ್ರಳಾಗಿದ್ದಳು. ಮನೋಹರಿ ಸಿನೀಮಾ ಕಂಪೆನಿಯ 'ನೆಕ್ಚರಲಿ'ಗೆ ತನ್ನ ಕೈಬಿಟ್ಟಳಲ್ಲಾ ಎಂಬ ಕೋಪ ದೊರೆಸ್ವಾಮಿಯನ್ನಾವರಿಸಿತ್ತು. ರಾಮನಿಗೆ ಆಂಜನೇಯನಿದ್ದಂತೆ ದೊರೆ ಸ್ವಾಮಿಗೆ ಗುಂಡೂ. ದೊರೆಸ್ವಾಮಿ ತನ್ನ ಕೈಬಿಟ್ಟರೆ ತನ್ನ ಗತಿ ಅಧೋ ಗತಿಯಾಗುತ್ತದೆಂಬುದನ್ನು ಗುಂಡೂ ಚೆನ್ನಾಗಿ ತಿಳಿದಿದ್ದ.

ಊಟದಮನೆ, ಬಣ್ಣದಮನೆ, ಬಟ್ಟೆಯಮನೆಗಳು ಉಭಯ ಪಕ್ಷಗಳ ಹೋರಾಟದ ರಂಗವಾಗುತ್ತಿದ್ದವು. ನಟವರ್ಗದಲ್ಲಿ ಹುಟ್ಟುತ್ತಿದ್ದ ಕಲಹ ನಿವಾರಿಸುವುದು ಶ್ರೀಕಂಠಮೂರ್ತಿಗೆ ದೊಡ್ಡ ಕೆಲಸವಾಗುತ್ತಿತ್ತು.

ಸರಸ್ವತಿ, ಮಂಜುಳಾ, ಸುಧಾ ಪ್ರತಿನಿತ್ಯ 'ಪ್ರಾಕ್ಟೀಸಿ'ಗೆ ಹೋಗಬೇಕಾಗಿದ್ದುದಲ್ಲದೆ ರಾತ್ರಿ ಬಣ್ಣಬಳೆದುಕೊಂಡು ಗುಂಪಿನ ಜತೆ ರಂಗಪ್ರವೇಶ ಮಾಡಬೇಕಾಗಿತ್ತು. ಪ್ರೇಕ್ಷಕರ ಮುಖಪರಿಚಯ ಮಾಡಿಕೊಂಡು ಅವರು 'ಚಳಿ' ಕಳೆದುಕೊಳ್ಳಲೆಂಬುದೇ ಶ್ರೀಕಂಠಮೂರ್ತಿಯ ಉದ್ದೇಶವಾಗಿತ್ತು. ಪಾತ್ರಗಳ ವಿಶೇಷ ಶಿಕ್ಷಣ ಕೊಡುವ ಭಾರವನ್ನು ದೊರೆಸ್ವಾಮಿ, ರಾಜಶೇಖರ ಹೊತ್ತಿದ್ದರು. ಮಂಜುಳನ ಪಾತ್ರಗಳನ್ನು ದೊರೆಸ್ವಾಮಿ ಹೇಳಿಕೊಡುತ್ತಿದ್ದ; ಸುಧೆಯ ಪಾತ್ರಗಳನ್ನು ರಾಜಶೇಖರ ಹೇಳಿಕೊಡುತ್ತಿದ್ದ; ಸ್ವಯಂ ಶ್ರೀಕಂಠಮೂರ್ತಿಯೇ ಸರಸ್ವತಮ್ಮನಿಗೆ ಶಿಕ್ಷಣ ಕೊಡುತ್ತಿದ್ದ.

ಸರಸ್ವತಮ್ಮ ಅವಳ ಮಕ್ಕಳು ತಮ್ಮ ಪಾತ್ರಗಳಲ್ಲಿ ಪ್ರಾವೀಣ್ಯ ಪಡೆದ ಕೂಡಲೆ, ಸುಬ್ಬುಲಕ್ಷ್ಮಿ, ನಾಗರತ್ನ ಸುಂದರಿ ಹಿಂದಕ್ಕೆ ಸರಿದು, ರಂಗದ ಯಜಮಾನಿಕೆ ಅವರಿಗೆ ಬಿಟ್ಟುಕೊಡಬೇಕಾಯಿತು.

ಸರಸ್ವತಮ್ಮ ರಂಗದ ಮೇಲೆ ಗಿಣಿಯಪಾಠ ಒಪ್ಪಿಸುತ್ತಿದ್ದಳು. ಹೆಚ್ಚು ಮಾತು, ಹಾಡು ಇಲ್ಲದ ರಾಣಿ ಪಾತ್ರಗಳೇ ಅವಳಿಗೆ ಸಿಕ್ಕುತ್ತಿದ್ದುದರಿಂದ, ಸೊಗಸಾದ ಪಿತಾಂಬರ ಧರಿಸಿ ರಂಗದ ಮೇಲೆ ಮೆರೆಯುವುದಷ್ಟೇ ಅವಳ ಕೆಲಸವಾಗಿತ್ತು. ಗೌರಿಯ ಕಲಾನೈಪುಣ್ಯಕ್ಕೆ ಸರಸ್ವತಮ್ಮ ಯಾವ ಬಗೆಯಲ್ಲಿಯೂ ಸರಿಜೋಡಿಯಾಗಿರಲಿಲ್ಲ.

ಮಂಜುಳಾ ತನ್ನ ಕೆಲಸ ತೂಗಿಸಿಕೊಂಡು ಹೋಗುತ್ತಿದ್ದಳು. ಅವಳ ಹಾಡಿನಲ್ಲಿ ರಸವಿರದಿದ್ದರೂ ತಾಳವಿರುತ್ತಿತ್ತು. ಪಾತ್ರಗಳನ್ನವಳು ಕೆಡಿಸುತ್ತಿರಲಿಲ್ಲ; ಆದರೆ ಅವುಗಳಿಗೆ ಜೀವವೂ ತುಂಬುತ್ತಿರಲಿಲ್ಲ. ಮನೋಹರಿಯ ಅಭಿನಯ ನೋಡಿದ್ದವರಿಗೆ ಮಂಜುಳನ ಅಭಿನಯ ತೀರ ನೀರಸವಾಗಿ ಕಂಡುಬರುತ್ತಿತ್ತು.

ತಾಯಿ, ಮಗಳ ಕುಂದುಕೊರತೆಗಳನ್ನು ಮುಚ್ಚಿ ರಂಗದ ಮೇಲೆ ಸಮ್ಮೋಹನಾಸ್ತ್ರ ಬೀರಿದ್ದವಳು ಸುಧಾ. ಹಾಡು, ನೃತ್ಯ, ಅಭಿನಯ ಮಾತುಗಾರಿಕೆ ಎಲ್ಲವೂ ಅವಳಿಗೆ ದೈವದತ್ತವಾಗಿತ್ತು. ಪಾತ್ರ ಎಷ್ಟೇ ಸಣ್ಣದಾದರೂ

ಆದಕ್ಕೆ ಜೀವಕಳೆ ಕೊಡುವ ಶಕ್ತಿ ಸುಧೆಯಲ್ಲಿ ನೈಸರ್ಗಿಕವಾಗಿ ಕೂಡಿ ಬಂದಿತ್ತು.ತಾನು ಕೊಡುವ ಸಂಬಳವೆಲ್ಲಾ ಸುಧೆಗಾಗಿಯೇ ಎಂಬುದನ್ನು ಶ್ರೀಕಂಠಮೂರ್ತಿಯೂ ಬೇಗ ಕಂಡುಕೊಂಡ.

೩

ವಾರದ ಏಳು ದಿವಸಗಳಲ್ಲಿ ಆರು ದಿವಸ ರಾತ್ರಿ ನಾಟಕಗಳಿರುತ್ತಿದ್ದವು. ಭಾನುವಾರ ವ್ಯಾಟನಿ. ಹೊಸನಾಟಕ ಕೈಗೆ ತೆಗೆದುಕೊಂಡರೆ ಮಧ್ಯಾಹ್ನಾ ನಂತರ ಎರಡು ಗಂಟೆಗೆ ನಟನಟಿಯರೆಲ್ಲಾ ಪ್ರ್ಯಾಕ್ಟೀಸಿಗೆ ಸೇರ ಬೇಕಾಗಿತ್ತು.

ಶ್ರೀಕಂಠಮೂರ್ತಿ ನಾಟಕವಾದ ಬೆಳಿಗ್ಗೆ ಹತ್ತುಗಂಟೆಗೆ ನಾಟಕದ ಚಪ್ಪರದಲ್ಲಿದ್ದ ಕಂಪೆನಿಯ ಕಛೇರಿಯಲ್ಲಿ ಕುಳಿತು 'ವಿನೋದತೆರಿಗೆ'– ನೋಟೀಸ್ ಮುದ್ರಣ - ಬೋರ್ಡ್ ಬರೆಸುವುದು - ಪೋಲೀಸ್ ರುಸುಂ, ರಂಗ ಸಲಕರಣಗಳನ್ನು ವಿಚಾರಿಸಿಕೊಳ್ಳುತ್ತಿದ್ದ. ಆಗಲೇ ಯಾರಾದರೂ ಬಂದರೆ ಅವರನ್ನು ಮಾತನಾಡಿಸಿ ಕಳುಹಿಸುತ್ತಿದ್ದ. ನಟ ನಟಿಯರು ಅಡ್ವಾನ್ಸ್ ಕೇಳುವುದಕ್ಕೂ ಊರಿನವರು ಬೆನಿಫಿಟ್ ನಾಟಕ ಕೇಳುವುದಕ್ಕೂ ಅದೇ ವೇಳೆಯಾಗಿತ್ತು.

ತನ್ನ ನಿತ್ಯವ್ಯವಹಾರದಲ್ಲಿ ಯಾವ ಆಪೋಹವೂ ಬರದಂತೆ ಶ್ರೀಕಂಠ ಮೂರ್ತಿ ನಡೆಸಿಕೊಂಡು ಹೋಗುತ್ತಿದ್ದರೂ ಅವನ ಮನಸ್ಸು ವಿಹ್ವಲ ವಾಗಿತ್ತು. ಮನಸ್ಸಿನ ಗಾಯಕ್ಕೆ ಔಷಧೋಪಚಾರವಾಗದೆ ಅದು ಮಾಗದೆ ಕುಳಿತಿತ್ತು.

ಒಂದುದಿನ ಯಜಮಾನರನ್ನು ನೋಡಲಿಕ್ಕೆ ಬಂದಿದ್ದವರು, ಅಡ್ವಾನ್ಸ್ ಅಪೇಕ್ಷಿಗಳು ತೊಲಗಿದ ಮೇಲೆ ಗುಂಡೂ ಬಾಗಿಲು ಮುಂದಕ್ಕೆ ಮಾಡಿ ಒಳಗೆ ಬಂದು ಯಜಮಾನರ ಎದುರಿಗೆ ಕುಳಿತ. ಶ್ರೀಕಂಠಮೂರ್ತಿ ಸಿಗರೇಟ್ ಹಚ್ಚಿಕೊಳ್ಳುತ್ತಾ

" ಏನು ಗುಂಡೂ - ನಿನಗೇನಾಗಬೇಕಾಗಿದೆ. "

“ ನನಗೇನೂ ಆಗಬೇಕಾಗಿಲ್ಲ ಸ್ವಾಮಿ - ನಿಮಗೇನಾಗಿದೆ ಕೇಳೋಣ ಎಂದು ಬಂದೆ.”

“ ನನಗೇನಾಗಿದೆ ! ”

“ ಅದನ್ನು ನೀವು ಹೇಳಬೇಕು. ನನ್ನನ್ನು ಕೇಳಿದರೆ.”

“ ನಿನ್ನ ಊಹೆ ನಿಜ ಗುಂಡೂ–ನನ್ನ ಮನಸ್ಸಿಗೆ ಶಾಂತಿಯಿಲ್ಲ. ಈಕಂಪೆನಿ ಏಕೆ ಕಟ್ಟಿಕೊಂಡೆನೊ ಎಂದು ಯೋಚನೆ ಹುಟ್ಟಿದೆ.”

“ ನಿಮ್ಮನ್ನು ನಂಬಿರುವ ನಮ್ಮ ತಲೆಯಮೇಲೆ ಕಲ್ಲು ಎತ್ತಿಹಾಕುತ್ತೀರಾ ಸ್ವಾಮಿ.”

“ ಕಲ್ಲುಎತ್ತಿಹಾಕುವ ಹಾಗಿದ್ದರೆ ಕಂಪೆನಿ ನಡೆಸುತ್ತಿದ್ದೆನೇ ? ”

“ ನೀವು ಚೆನ್ನಾಗಿದ್ದರೆ ನಾವು ಚೆನ್ನಾಗಿರುವುದು.”

“ ಏನು ಚೆನ್ನವೋ ಬಿಡಪ್ಪ ”

ಎಂದು ಬೇಸರದ ಉದ್ಗಾರ ತೆಗೆದ.

“ ಕಾರಣ ಹೇಳಿ ಸ್ವಾಮಿ. ನನ್ನ ಹತ್ತಿರ ಹೇಳುವುದಕ್ಕೂ ಸಂಕೋಚವೇ ? ”

“ ನಿನಗೆ ಗೊತ್ತೆ ಇದೆಯಲ್ಲ ಗುಂಡೂ–ನಡುನೀರಿನಲ್ಲಿ ಗೌರಿ ನನ್ನ ಕೈ ಬಿಟ್ಟುಬಿಟ್ಟಳು.”

“ ನೀವು ಅನುಭವಸ್ಥರು, ಲೋಕ ತಿಳಿದವರು ಎಂದುಕೊಂಡಿದ್ದೆ. ಶುದ್ಧ ಸ್ಕೂಲು ಹುಡುಗರು ಆಡಿದ ಹಾಗೆ ಆಡುತ್ತೀರಲ್ಲಾ ಸ್ವಾಮಿ.”

“ ನನ್ನ ಸಂಕಟ ನಿನಗೆ ಹೇಗೊ ಅರ್ಥವಾಗತ್ತೆ ? ”

“ ಆಗತ್ತೆ ಸ್ವಾಮಿ. ಲೋಕದಲ್ಲಿದ್ದ ಮೇಲೆ ತಾವರೆಯೆಲೆಯ ಮೇಲಣ ಹಿಮಮಣಿ ಇದ್ದ ಹಾಗಿರಬೇಕೆಂದು ಹಿರಿಯರು ಹೇಳಿಲ್ಲವೇ ? ಗೌರಿ, ಮನೋಹರಿ ನಿಮಗೇ ಕಚ್ಚಿಕೊಂಡು ಇರುತ್ತಾರೆ ಎಂದು ನೀವು ಭಾವಿಸಿದ್ದೇ ತಪ್ಪು. ಹಾರುವುದು ಹಕ್ಕಿಯ ಸ್ವಭಾವ, ನಿಮ್ಮ ಹಕ್ಕಿಯೂ ಹಾರಿ ಹೋಯಿತು.”

“ ಅವಳು ಹೇಗಿದ್ದಳೆಂದು ನಿನಗೇ ಗೊತ್ತಿದೆಯಲ್ಲ.”

“ ಗೊತ್ತಿದೆ. ಅವಳು ಒಂದಲ್ಲ ಒಂದು ದಿವಸ ನಿಮಗೆ ಕೈಕೊಡುತ್ತಾಳೆ ಎನ್ನುವುದೂ ಗೊತ್ತಿತ್ತು.”

"ಹೇಗೆ ಗೊತ್ತಿತ್ತು."

"ಅಷ್ಟು ಚಪಲದ ಹೆಣ್ಣು ಒಂದುಕಡೆ ನಿಲ್ಲುತ್ತದೆಯೇ ಸ್ವಾಮಿ. ನಾನು ಆಗಾಗ್ಗೆ ನಿಮಗೆ ಎಚ್ಚರಿಕೆ ಕೊಟ್ಟೆ. ನನ್ನ ಮಾತು ಅಲಕ್ಷ್ಯಮಾಡಿದಿರಿ."

"ತೋಳ ಹಳ್ಳಕ್ಕೆ ಬಿದ್ದರೆ ಆಳಿಗೊಂದು ಕಲ್ಲಂತೆ"

"ಸತ್ಯವಾಗಿ ನಿಮ್ಮನ್ನು ಹಾಸ್ಯಮಾಡುತ್ತಿಲ್ಲ ಸ್ವಾಮಿ. ನಿಮ್ಮ ಅವಸ್ಥೆ ನೋಡಿ ಮನಸ್ಸಿಗೆ ತುಂಬ ವ್ಯಸನವಾಯಿತು."

"ನನಗೋಸ್ಕರ ಮರುಗುವವನು ನೀನಾದರೂ ಒಬ್ಬ ಇದ್ದೀಯಲ್ಲ–ಅದೇ ಸಂತೋಷ ಈಗ ನನ್ನ ಏನುಮಾಡು ಅಂತೀ ? "

"ಗೌರಿ ದುಃಖ ಹೋಗಬೇಕಾದರೆ ಗಂಗೆ ಬರಮಾಡಿಕೊಳ್ಳುವುದೊಂದೇ ಉಪಾಯ."

"ಗಂಗೇನ ಎಲ್ಲಿಂದ ತರಲೋ ಗುಂಡಾ."

ಆ ಕೆಲಸ ನನಗೆ ವಹಿಸಿಬಿಟ್ಟು ನೀವು ನಿರಾಂತಕವಾಗಿರಿ ಸ್ವಾಮಿ."

"ಏನು ಮಾಡುತ್ತೀಯೊ ಮಾಡಪ್ಪ. ಹೆಸರಿಗೆ ನಾನು ಯಜಮಾನ; ನಿಜವಾದ ಯಜಮಾನಿಕೆ ಮಾಡುತ್ತಿರುವವರು ನೀವು."

"ನಾವಲ್ಲ ಸ್ವಾಮಿ. ಯಜಮಾನಿಯರು."

ಎಂದು ಗುಂಡ ಕುಹಕ ನಗೆ ಬೀರುತ್ತ ನುಡಿದ. ಗುಂಡನ ಸ್ವಾಮಿಭಕ್ತಿ ಕಂಡು ಶ್ರೀಕಂಠಮೂರ್ತಿಗೆ ಸಂತೋಷವಾಯಿತು.

ಯಜಮಾನರ ಮನಸ್ಸಿಗೆ ಸಮಾಧಾನವನ್ನುಂಟುಮಾಡಲು ಅವರಿಗೆ ಗುಂಡು ವಾಗ್ದಾನ ಮಾಡಿದ್ದ. ಮಾತು ಉಳಿಸಿಕೊಳ್ಳುವುದು ಹೇಗೆ ಎನ್ನುವ ಯೋಚನೆ ಅವನ ಮನಸ್ಸನ್ನು ಮುತ್ತಿತು. ಸರಸ್ವತಿಯನ್ನೇ ಗಮನದಲ್ಲಿಟ್ಟುಕೊಂಡು ಯಜಮಾನರಿಗೆ ಆಶ್ವಾಸನಕೊಟ್ಟಿದ್ದ. ಸರಸ್ವತಿ ಏನು ಹೇಳುವಳೋ ಎನ್ನುವ ಸಂದೇಹ ಅವನನ್ನು ಕಾಡತೊಡಗಿತು.

'ಸಂಸಾರ ಮಾಡಿಕೊಂಡು ಮನೆಯಲ್ಲಿ ಗಂಭೀರವಾಗಿರದೆ ನಾಟಕದ ಕಂಪೆನಿಗೆ ಬಂದಿರುವುದೇ ಸಾಲದೇ. ಇದಕ್ಕೇಕೆ ನಾನಿಷ್ಟು ಯೋಚಿಸಬೇಕು' ಎಂದು ಸಮಾಧಾನ ಹೇಳಿಕೊಂಡ.

ಆದರೆ ನಾಟಕದ ಕಂಪೆನಿ ಸೇರಿದ್ದರೂ ಅಲ್ಲಿ ತಮ್ಮ ಶೀಲವನ್ನು ಕಾಪಾಡಿಕೊಂಡು ಗೌರವದಿಂದ ಬಾಳ್ವೆಮಾಡಿದ ಕೆಲವು ಸ್ತ್ರೀಯರ ಪರಿಚಯ

ಗುಂಡುವಿಗಿತ್ತು. ಅವರ ನೆನಪಾದೊಡನೆಯೇ ಗುಂಡುವಿನ ಧೈರ್ಯವೃಕ್ಷದ ಬುಡವನ್ನೇ ಯಾರೋ ಅಲುಗಾಡಿಸಿದಂತಾಯಿತು.

'ಇರಲಿ–ಅವಸರ ಪಟ್ಟರೆ ಆಗುವ ಕೆಲಸವಲ್ಲ–ಸಮಯ ಸಾಧಿಸಬೇಕು' ಎಂದು ಶಾಂತನಾದ.

ಗುಂಡೂ ವಿಷಯದಲ್ಲಿ ಯಜಮಾನರಿಗಿದ್ದ ನಂಬಿಕೆ, ವಿಶ್ವಾಸ ಕಂಡುಕೊಂಡ ಸರಸ್ವತಮ್ಮ ಅವನನ್ನು ನಿರ್ಲಕ್ಷಿಸದಂತೆ ಎಚ್ಚರವಾಗಿದ್ದಳು. ತನಗೂ ತನ್ನ ಮಕ್ಕಳಿಗೂ ಹೋಟೆಲಿನಿಂದ ಕಾಫಿ ತಿಂಡಿ, ತರಿಸಿಕೊಂಡಾಗ ಗುಂಡುವನ್ನು ಕರೆದು ಅವನಿಗೂ ಒಂದು ಪಾಲು ಕೊಡುತ್ತಿದ್ದಳು.

ಒಂದು ದಿನ 'ವಿರಾಟಪರ್ವ' ನಾಟಕ ಮುಗಿದಿದೆ. ಶ್ರೀಕಂಠಮೂರ್ತಿ ಕೀಚಕನ ಪಾತ್ರ ಅಭಿನಯಿಸಿದ್ದ ; ಸರಸ್ವತಮ್ಮ ಸೈರಂಧ್ರಿಯಾಗಿದ್ದಳು. ತನ್ನ ಬಣ್ಣ ಅಳಿಸಿಕೊಂಡು, ಬಟ್ಟೆಬದಲಾಯಿಸಿಕೊಂಡು ಸರಸ್ವತಿ ಹೊರಡಲನುವಾಗಿ ಮಂಜುಳಾ, ಸುಧೆಯನ್ನು ಕಾಯುತ್ತ ಕುಳಿತಳು. ಗುಂಡುವಿಗೆ ಪಾತ್ರ ವಿಲ್ಲದುದರಿಂದ ಅವನು ಪುರಸತ್ತಾಗಿ ಅಲ್ಲೇ ಓಡಿಯಾಡಿಕೊಂಡಿದ್ದ. ಸರಸ್ವತಮ್ಮ ಏಕಾಂಗಿಯಾಗಿ ಕುಳಿತಿದ್ದುದನ್ನು ಕಂಡು ಮೆಲ್ಲನೆ ಅವಳ ಬಳಿ ಬಂದು

"ಇವತ್ತು ಪಾರ್ಟು ಬಹಳ ಚೆನ್ನಾಗಿ ಮಾಡಿದಿರಮ್ಮ. ನಮ್ಮ ಕಂಪೆನಿಯಲ್ಲಿ ಎಷ್ಟೋ ಜನ ಸೈರಂಧ್ರಿಪಾರ್ಟು ಮಾಡಿದ್ದರು. ಆದರೆ ಅವರೆಲ್ಲರನ್ನೂ ನಿಮ್ಮ ಮುಂದೆ ನೀವಾಳಿಸಿ ಹಾಕಬೇಕು."

"ತಮಾಷೆ ಮಾಡಬೇಡಿ ಗುಂಡೂರಾಯರೇ–ನಾನು ಯಾವ ದೊಡ್ಡ ನಟಿ ?"

"ಹಾಗೆಲ್ಲಾ ಒಬ್ಬರನ್ನು ನಿಷ್ಕಾರಣವಾಗಿ ಹೊಗಳುವ ಅಭ್ಯಾಸ ನನಗಿಲ್ಲಮ್ಮ. ಗುಂಡೂರಾಯನ ಮಾತೂಂದರೆ ಗುಂಡು ಹೊಡೆದ ಹಾಗೆ. ನಮ್ಮ ಕಂಪೆನಿಗೆ ಬರುವುದಕ್ಕೆ ಮುಂಚೆ ನಿಮಗೆ ಪಾರ್ಟುಮಾಡಿ ಅಭ್ಯಾಸವಿತ್ತೋ ?"

"ಇಲ್ಲಪ್ಪ ಎಲ್ಲಿ ಬಂತು ? ನಾನು ಬಣ್ಣಮುಟ್ಟಿದ್ದೇ ಇಲ್ಲ."

"ಆಶ್ಚರ್ಯ–ಆಶ್ಚರ್ಯ."

"ಯಜಮಾನರು ಏನು ಹೇಳಿದರು ಗುಂಡೂರಾಯರೇ ?"

"ಗೌರಿ, ಮನೋಹರಿ ಕಂಪೆನಿ ಬಿಟ್ಟು ಹೋದಮೇಲೆ ಯಜಮಾನರು ಭೂಮಿಗಿಳಿದು ಹೋಗಿಬಿಟ್ಟಿದ್ದರು. ಕಂಪೆನಿ ಮುಚ್ಚಿಬಿಡುವ ವಿಚಾರವನ್ನೂ

ಮಾಡಿದ್ದರು. ಅವರು ಹೋದದ್ದೇ ಒಳ್ಳೆಯದಾಯಿತು. ಅವರಿಗಿಂತ ಒಳ್ಳೆಯ ಪಾರ್ಟುದಾರರು ಸಿಕ್ಕಿದರು ಎಂದು ಸಂತೋಷಪಟ್ಟುಕೊಂಡಿದ್ದಾರೆ."

"ಎಲ್ಲಾ ನಿಮ್ಮ ವಿಶ್ವಾಸ ಗುಂಡೂರಾಯರೇ. ದೇವರು ದೊಡ್ಡವನು. ನನಗೂ ನನ್ನ ಮಕ್ಕಳಿಗೂ ಒಂದು ದಾರಿ ತೋರಿಸಿದ."

"ದೇವರನ್ನು ನಂಬಿದವರು ಯಾರೂ ಕೆಡುವುದಿಲ್ಲಮ್ಮ. ನಿಮ್ಮನ್ನು ನೋಡಿದರೆ ನನಗೆ ತುಂಬ ಕನಿಕರವಾಗುತ್ತದೆ."

"ಏಕೆ ?"

"ನಾಟಕದ ಕಂಪೆನಿಯ ಅಗಚಾಟಲು ನಿಮಗಲ್ಲಮ್ಮ. ಮನೆಯಲ್ಲಿ ಸುಖವಾಗಿರಬೇಕಾದವರು, ಹಗಲುರಾತ್ರಿ, ಅನ್ನ ನಿದ್ರೆ ಬಿಟ್ಟು ನಾಟಕದಲ್ಲಿ ದುಡಿಯಬೇಕೆಂದರೆ ಕಷ್ಟವಲ್ಲವೇ ?"

"ಕಷ್ಟವಾಗುತ್ತದೆ ನಿಜ. ಆದರೆ ಏನು ಮಾಡಲು ಸಾಧ್ಯ ? ಪಾಲಿಗೆ ಬಂದದ್ದು ಪಂಚಾಮೃತ."

ಮಂಜುಳಾ, ಸುಧಾ ಬಣ್ಣ ಅಳಿಸಿಕೊಂಡು ಬಂದರು. ಸರಸ್ವತಮ್ಮ ಮಕ್ಕಳೊಂದಿಗೆ ಕಂಪೆನಿ 'ಮನೆಗೆ' ಹೊರಟಳು. ಗುಂಡೂರಾಯನೂ ಅವರ ಜತೆಯಲ್ಲಿಯೇ ಹೊರಟ. ಜತೆಯಲ್ಲಿ ಮಂಜುಳಾ, ಸುಧಾ ಇದ್ದುದರಿಂದ ಗುಂಡೂ ಮಾತು ಮುಂದುವರಿಸಲಾಗಲಿಲ್ಲ.

ಕಂಪೆನಿಯ ನಟನಟಿಯರ ವಾಸಕ್ಕೆ ಗೊತ್ತುಮಾಡಿದ್ದ ಮನೆ ಒಂದು ಕಾಲಕ್ಕೆ ಧರ್ಮಶಾಲೆಯಾಗಿತ್ತೆಂದು ಕಾಣುತ್ತದೆ. ಹಳೆಯ ಧರ್ಮಶಾಲೆಯನ್ನು ಕೊಂಡ ಸಾಹುಕಾರನೊಬ್ಬ ಅದಕ್ಕೇ ತೇಪೆಹಾಕಿ ಮನೆಯನ್ನಾಗಿ ಮಾರ್ಪಡಿಸಿದ್ದ. ಆ ಮನೆಗಿದ್ದುದೆಲ್ಲಾ ಒಂದು ಭವ್ಯವಾದ ಹಜಾರ. ಕಂಪೆನಿಯ ನಟರೆಲ್ಲಾ ಒಂದೊಂದು ಮೂಲೆ ಹಿಡಿದು ಮುದಡಿಕೊಂಡಿದ್ದರು. ಹಜಾರದ ಪಕ್ಕದಲ್ಲಿದ್ದ ರೂಮು ಸ್ತ್ರೀಪಾತ್ರ ಮಾಡುತ್ತಿದ್ದವರಿಗೆ ಮೀಸಲಾಗಿತ್ತು. ಹಜಾರಕ್ಕೆ ಪ್ರವೇಶಮಾಡುವುದಕ್ಕೆ ಮುಂಚೆ ಅತ್ತಿತ್ತ ಎರಡು ರೂಮುಗಳನ್ನು ಮಾಲಿಕ ಹೊಸದಾಗಿ ಕಟ್ಟಿಸಿದ್ದ. ಅದರಲ್ಲಿ ಒಂದು ಯಜಮಾನರ ಪಾಲಾಗಿತ್ತು; ಇನ್ನೊಂದನ್ನು ದೊರೆಸ್ವಾಮಿ ವಶಪಡಿಸಿಕೊಂಡಿದ್ದ. ತನಗೆ ಗಲಭೆ ಸೇರುವುದಿಲ್ಲವೆಂದು ಹೇಳಿ ಪರಮೇಶ್ವರಯ್ಯ ಮೂಲ ಗೃಹದ ಹಿಂದಿದ್ದ ಒಂದು ಸಣ್ಣರೂಮನ್ನು ಆಕ್ರಮಿಸಿಕೊಂಡಿದ್ದ.

ಸಾಮಾನ್ಯವಾಗಿ ನಾಟಕದ ಪ್ರಾೃಕ್ಟೀಸು ಥಿಯೇಟರಿನಲ್ಲಿಯೇ ಆಗುತ್ತಿದ್ದರೂ ಒಮ್ಮೊಮ್ಮೆ ಕಂಪೆನಿಮನೆಯಲ್ಲಿ ಮಾಡಬೇಕಾದ ಪ್ರಸಂಗ ಬೀಳುತ್ತಿತ್ತು. ಹೊಸಪಾತ್ರಧಾರಿಗಳಿಗೆ ಹೆಚ್ಚಿನ ಪ್ರಾೃಕ್ಟೀಸು ಕೊಡಬೇಕಾದ ಸಂದರ್ಭಗಳಲ್ಲಿ ಕಂಪೆನಿಮನೆಯ ಹಜಾರವೇ ಪ್ರಾೃಕ್ಟೀಸ್‌ರೂಮು ಆಗುತ್ತಿತ್ತು. ಆಗ ಕಂಪೆನಿಯ ನಟರು ಹಜಾರ ಬಿಟ್ಟು ಮನೆಯ ಹೊರಗಿದ್ದ ಗೋಣಿಮರ, ಹುಣಿಸೇಮರದ ಕೆಳಗೋ, ರಸ್ತೆಯ ಬದಿಗಿದ್ದ ಕಲ್‌ವರ್ಟಿನ ಮೇಲೋ ಹೊತ್ತುಗಳೆಯುತ್ತಿದ್ದರು.

ಒಂದು ದಿನ ಕಂಪೆನಿಯ ಹೊಸನಾಟಕ 'ಜಯಪಾಲಚರಿತ್ರೆ'ಯ ಪ್ರಾೃಕ್ಟೀಸು ಕಂಪೆನಿಮನೆಯಲ್ಲಿ ನಡೆದಿತ್ತು. ಮಂಜುಳಾ, ಸುಧಾಯವರಿಗೆ ಪರಮೇಶ್ವರಯ್ಯ ಪ್ರಾೃಕ್ಟೀಸುಮಾಡಿಸುತ್ತಿದ್ದ. ಸರಸ್ವತಮ್ಮ ಒಬ್ಬಳೇ ಹೊರಗೆ ತಿರುಗಾಡುತ್ತಿದ್ದಳು. ಆ ಸಮಯ ಸಾಧಿಸಿ ಗುಂಡೂರಾಯ ಮೆಲ್ಲನೆ ಬಂದು

"ನಿಮಗೆ ಪ್ರಾೃಕ್ಟೀಸು ಇಲ್ಲವೇನ್ರಮ್ಮ" ಎಂದು ಕೇಳಿದ,

"ನನ್ನದು ಮುಗಿಯಿತು. ಈಗ ಮಂಜುಳಾ, ಸುಧಾ ಅವರ ಪ್ರಾೃಕ್ಟೀಸು ನಡೆದಿದೆ. ಯಜಮಾನರಿಗೆ ನೀವು ಒಂದುಮಾತು ಹೇಳಬೇಕು ಗುಂಡೂರಾಯರೇ"

"ಏನಮ್ಮ ಅದು ಹೇಳಿ."

"ಕಂಪೆನಿಮನೆ ಊಟಮಾಡುತ್ತಿದ್ದರೆ ನಮ್ಮ ಕೈಕಾಲು ಬಿದ್ದು ಹೋಗುತ್ತದೆ; ಊಟದ ವ್ಯವಸ್ಥೆ ಸ್ವಲ್ಪವೂ ಚೆನ್ನಾಗಿಲ್ಲ."

"ಎಲ್ಲರಿಗೂ ಮಾಡಿದ ಅಡಿಗೆಯನ್ನೇ ಯಜಮಾನರೂ ಊಟ ಮಾಡುತ್ತಾರಲ್ಲ!"

"ಅವರು ಮಾಡಬೇಕಾದದ್ದು ನ್ಯಾಯ. ಆದರೆ ನಮಗೇನು ಗ್ರಹಚಾರ."

"ನೋಡಿ–ಎಲ್ಲರಿಗೂ ಸರಿಯಾದ ವ್ಯವಸ್ಥೆಮಾಡಬೇಕಾದರೆ ಖರ್ಚು ಹೆಚ್ಚಾಗುತ್ತದೆ. ನಿಮಗೆ ಪ್ರತ್ಯೇಕ ವ್ಯವಸ್ಥೆಮಾಡಿದರೆ ಇತರರ ಕಣ್ಣು ಕೆಂಪಾಗುತ್ತದೆ."

"ಹೋಗಲಿ–ನಾವು ಬೇರೆ ಅಡಿಗೆಮಾಡಿಕೊಳ್ಳುತ್ತೇವೆ. ಅದಕ್ಕಾದರೂ ಅನುಕೂಲಮಾಡಿಕೊಡಿ.'

ಗುಂಡೂರಾಯ ಮುಗುಳ್ನಗೆ ಬೀರುತ್ತಾ

"ಅಷ್ಟೇಕೆ ಕಷ್ಟ. ಊಟ ತಿಂಡಿ ವ್ಯವಸ್ಥೆ ನಿಮಗೇ ವಹಿಸಿಬಿಡುತ್ತೇವೆ. ನಿಮಗೆ ಹೇಗೆ ಬೇಕೊ ಹಾಗೆ ಮಾಡಿಸಿ."

"ಕಂಪೆನಿ ಸಂಸಾರ ನಾನು ಕೊರಳಿಗೆ ಕಟ್ಟಿಕೊಳ್ಳಬೇಕೇನು ?"

"ಬರೀ ಯಜಮಾನ ಇದ್ದರೆ ಮನೆ ಹೇಗೆ ನಡೆಯುವುದಿಲ್ಲವೋ ಹಾಗೆ ಕಂಪೆನಿಯೂ ನಡೆಯಲು ಸಾಧ್ಯವಿಲ್ಲ. ಈ ವಿಷಯ ಯಜಮಾನಿತಿಗೆ ತಿಳಿಯುವ ಹಾಗೆ ಯಜಮಾನರಿಗೆ ತಿಳಿಯುವುದಿಲ್ಲ."

"ಕಂಪೆನಿಗೆ ಯಜಮಾನಿತಿ ಯಾರನ್ನು ತರುತ್ತೀರಿ ?"

"ಹೊರಗಿನಿಂದ ತರುವ ಯೋಚನೆಯೇ ಇಲ್ಲ."

ಎಂದು ಮಾರ್ಮಿಕವಾಗಿ ನಕ್ಕ. ಇಂಗಿತಜ್ಞಳಾದ ಸರಸ್ವತಮ್ಮನಿಗೆ ಗುಂಡೂರಾಯನ ಮಾತು ಮಹಾಸಮಸ್ಯೆಯಾಗಿರಲಿಲ್ಲ. ಅವನು ಸೂಚಿಸಿದ ವಿಷಯ ತನ್ನ ಮನವರಿಕೆಯಾಗಿದೆಯೆಂಬುದರ ಸುಳುಹುಕೊಡದೆ

"ನೀವು ಹೇಳಿದ್ದು ನನಗೆ ಅರ್ಥವಾಗಲಿಲ್ಲ. ಗುಂಡೂರಾಯರೇ ಬಿಡಿಸಿ ಹೇಳಿ."

"ಅರ್ಥವಾಗಿದೆಯಮ್ಮ ಅರ್ಥವಾಗಿದೆ. ನನ್ನ ಬಾಯಿಬಿಡಿಸುವ ಪ್ರಯತ್ನ ಏಕೆ ಮಾಡುವಿರಿ ?"

"ಇಲ್ಲ. ಹೇಳಿ."

"ಯಜಮಾನರ ಪಾರ್ಟುಗಳನ್ನು ನೋಡುತ್ತಿರುವಿರಲ್ಲಾ !"

"ನೋಡುತ್ತಿದ್ದೇನೆ."

"ಅವುಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು ?"

"ನನಗೇನು ತಿಳಿಯುತ್ತೆ ಹೇಳಿ—ಪಾರ್ಟುಗಳು ಚೆನ್ನಾಗಿ ಮಾಡುತ್ತಾರೆ."

"ಅದೇ ನೀವು ಮಾಡುತ್ತಿರುವ ತಪ್ಪು. ಅವರ ಪಾರ್ಟುಗಳು ಕುಲಗೆಟ್ಟು ಹೋಗಿವೆ. ಮೊದಲು ಇವೇ ಪಾರ್ಟುಗಳನ್ನು ಅವರು ಮಾಡುತ್ತಿದ್ದರು—ನೀವು ನೋಡಬೇಕಾಗಿತ್ತು."

"ಕಾರಣ ?"

"ಚಿಂತೆ—ಮನಸ್ಸಿಗೆ ನೆಮ್ಮದಿಯಿಲ್ಲ. ಮನಸ್ಸು ಪ್ರಸನ್ನವಾಗಿದ್ದರೆ ತಾನೆ ಕಲೆ ಹೂವರಳಿದಂತೆ ಅರಳುವುದು. ಅಳುತ್ತಾ ಕರೆಯುತ್ತಾ ದುಷ್ಯಂತ, ಕೀಚಕ, ರಾಜಕಿರೀಟಿ ಮಾಡಿದರೆ ಎಷ್ಟು ಚೆನ್ನಾಗಿರುತ್ತದೆ ನಿಮಗೆ ಗೊತ್ತಿಲ್ಲವೇ ?"

"ಯಜಮಾನರ ಪಾರ್ಟಿಗಳು ಕೆಡುತ್ತಿವೆ ಎನ್ನುವ ಮಾತು ಇತರ ನಟರ ಬಾಯಿಂದಲೂ ನಾನು ಕೇಳಿದ್ದೇನೆ."

"ಅವರು ಚೆನ್ನಾಗಿದ್ದರೆ ತಾನೆ ನಾವು ಚೆನ್ನಾಗಿರುವುದು."

"ಅದರಲ್ಲಿ ಸಂದೇಹವೇನು ?"

"ನಿಮ್ಮ ಕರ್ತವ್ಯವೇನೆಂಬುದು ಈಗ ಅರ್ಥವಾಯಿತಲ್ಲಾ !"

"ನಾನು ಅಂಥವಳಲ್ಲ ಗುಂಡೂರಾಯರೇ."

"ಯಜಮಾನರ ವಿಷಯ ನಿಮಗೆ ಗೊತ್ತಿಲ್ಲಮ್ಮ. ಅವರು ಚಿನ್ನದಂಥ ಮನುಷ್ಯರು."

"ನಾನು ಇಲ್ಲವೆನ್ನಲಿಲ್ಲ."

"ಅಭ್ಯಂತರವಿಲ್ಲವೆಂದು ಯಜಮಾನರಿಗೆ ತಿಳಿಸಲೇ ?"

"ಈ ಸಲಹೆಯಾರದು ?-ನಿಮ್ಮದೋ, ಅವರದೋ ?"

"ನನಗೇಕಮ್ಮ ಅಧಿಕಪ್ರಸಂಗ. ಅವರು ಹೇಳಿದ್ದು ಮಾಡುವುದಷ್ಟೇ ನನ್ನ ಕೆಲಸ."

"ಜತೆಯಲ್ಲಿ ನನ್ನ ಮಕ್ಕಳಿವೆ."

"ಇರಲಿ-ಅವರ ಯೋಗಕ್ಷೇಮದ ಬಗ್ಗೆ ನೀವು ಎಳ್ಳಷ್ಟೂ ಯೋಚನೆ ಮಾಡಬೇಡಿ."

"ಉತ್ತರ ಯಾವಾಗ ಹೇಳಬೇಕು."

"ಉತ್ತರ ಹೇಳುವುದೇನಿದೆ. ಒಪ್ಪಿಗೆ ಕೊಟ್ಟರಾಯಿತು."

"ನನಗೆ ಒಂದೆರಡು ದಿವಸ ಕೊಡಿ. ಯೋಚನೆಮಾಡಿ ತಿಳಿಸುತ್ತೇನೆ."

"ಹಾಗೇ ಮಾಡಿ."

ಎಂದು ಗುಂಡೂರಾಯ ಒಳಕ್ಕೆ ಹೋದ. ಸರಸ್ವತಮ್ಮನಿಗೆ 'ರೋಗಿ ಬಯಸಿದ್ದೂ ಹಾಲೂ ಅನ್ನ, ವೈದ್ಯ ಹೇಳಿದ್ದೂ ಹಾಲೂ ಅನ್ನ' ಎಂದು ಹೇಳಿದ ಹಾಗಾಗಿತ್ತು. ತನ್ನ ಮನಸ್ಸಿನ ಬಯಕೆ ಇಷ್ಟುಬೇಗ ಕೈಗೂಡುತ್ತದೆಂದು ಅವಳು ಕನಸು ಮನಸ್ಸಿನಲ್ಲಿಯೂ ಯೋಚಿಸಿರಲಿಲ್ಲ.

ಸರಸ್ವತಮ್ಮ ತನ್ನ ಭವಿಷ್ಯತ್-ಜೀವನದ ಸುಂದರ ಕನಸುಗಳನ್ನು ಕಾಣುತ್ತ ಕುಳಿತಳು. ಜೀವನವೊಂದು ಸಾಹಸಕೃತ್ಯಗಳ ಪರಂಪರೆಯೆಂದು ಭಾವಿಸಿದ್ದ ಸರಸ್ವತಮ್ಮನ, ಮನಸ್ಸು ಈ ಹೊಸ ಅನುಭವಕ್ಕೆ

ಹಾತೊರೆಯುತ್ತಿತ್ತು. ಆದರೆ 'ಶ್ರೀಮದ್ಗಾಂಭೀರ್ಯ' ಅವಳ ಕೈಯಲ್ಲಿ ಎಚ್ಚರಿಕೆಯಿಂದ ಮಾತನಾಡಿಸಿತ್ತು. ತನ್ನ ಲೆಕ್ಕಾಚಾರದಂತೆ ಎಲ್ಲವೂ ನಡೆಯುತ್ತಿರುವುದನ್ನು ಕಂಡು ಸರಸ್ವತಮ್ಮನ ಮನಸ್ಸಿಗೆ ಅಮಿತಾನಂದವಾಗಿತ್ತು. ಅವಳ ಮುಖ ಒಳಗಿನ ಆನಂದದ ಕನ್ನಡಿಯಾಗಿತ್ತು. ತಾಯಿಯನ್ನು ಒಳಗೆ ಕರೆದೊಯ್ಯಲು ಬಂದ ಸುಧಾ

"ನಿನ್ನ ಮುಖಕ್ಕೆ ಹೊಸಕಳೆ ಬಂದಿದೆಯಲ್ಲಮ್ಮ–ಏನಾಯಿತು." ಎಂದು ಕೇಳಿದಳು. ಮಗಳ ಪ್ರಶ್ನೆಗೆ ನೇರವಾದ ಉತ್ತರ ಕೊಡದೆ ಸರಸ್ವತಮ್ಮ ಮಂದಹಾಸ ಬೀರಿ

"ನಮ್ಮ ಶನಿಕಾಟ ತಪ್ಪಿತೆಂದು ಕಾಣುತ್ತದೆ ಸುಧಾ. ಸುಖದ ದಿನಗಳು ಮುಂದಿವೆ ಎನಿಸುತ್ತದೆ" ಎಂದಳು.

'ಸುಖದ ದಿನಗಳು ಮುಂದಿವೆಯೇ ?' ಎನ್ನುವ ಸಂಶಯ ಸುಧೆಯ ಮನಸ್ಸನ್ನು ಕೊರೆಯತೊಡಗಿತು. ಆನಂದೋನ್ಮತ್ತಳಾದ ಸರಸ್ವತಮ್ಮನಿಗೆ ಮಗಳ ಮುಖದ ಮೇಲೆ ಮೂಡಿದ ಸಂಶಯದ ಗೆರೆ ಕಂಡುಬರಲಿಲ್ಲ.

ಸರಸ್ವತಮ್ಮನ ಹಾಸಿಗೆ, ಟ್ರಂಕು ಯಜಮಾನರ ರೂಮಿಗೆ ಬರುವುದಕ್ಕೆ ತಡವಾಗಲಿಲ್ಲ. ಮಂಜುಳಾ, ಸುಧಾ ನಟಿಯರ ರೂಮಿನಲ್ಲಿಯೇ ಉಳಿದುಕೊಳ್ಳಬೇಕಾಯಿತು. ನಾಲ್ಕುದಿನ ಕಂಪೆನಿಯಲ್ಲಿ 'ಗುಸಗುಸ' ನಡೆಯಿತು. ನಟ, ನಟಿಯರು ಗುಂಪುಗುಂಪಾಗಿ ನಿಂತು ಮಾತನಾಡಿಕೊಳ್ಳುತ್ತಿದ್ದರು. ಪರಿಸ್ಥಿತಿ ತಾನೇತಾನಾಗಿ ಹತೋಟಿಗೆ ಬಂದಿತು. ಕಂಪೆನಿಯ ಜನರಿಗೆ ಯಜಮಾನರ ನಡತೆಯಲ್ಲಿ ವಿಚಿತ್ರವಾಗಲಿ ದೋಷವಾಗಲಿ ಕಂಡುಬರಲಿಲ್ಲ. 'ಆಗಬೇಕಾದದ್ದೇ–ಆಯಿತು' ಎನ್ನುವ ಮನೋಭಾವ ಎಲ್ಲರಲ್ಲಿಯೂ ವ್ಯಕ್ತಪಟ್ಟಿತು.

ರಾಜಶೇಖರ ಮಾತ್ರ ಗುಂಪಿನ ಮನೋಭಾವವನ್ನು ಅಂಗೀಕರಿಸಲಿಲ್ಲ. ಆದರೆ ಆ ಬಗ್ಗೆ ಅವನು ತನ್ನ ಅಭಿಪ್ರಾಯ ತಿಳಿಸಲು ಆತುರಪಡಲೂ ಇಲ್ಲ. ಒಂದು ದಿನ ಅವನೊಂದಿಗೆ ಹರಟೆಹೊಡೆಯುತ್ತಿದ್ದ ದೀಕ್ಷಿತ ಈ ವಿಷಯ ಪ್ರಸ್ತಾಪಿಸಿದ. ರಾಜಶೇಖರ ನಿಟ್ಟುಸಿರುಬಿಟ್ಟು

"ನಾಟಕದವರು ಮರ್ಯಾದೆ ಕಳೆದುಕೊಂಡಿರೋದೆ ಇದಕ್ಕೆ ಸ್ವಾಮಿ." ಎಂದ. ದೀಕ್ಷಿತನ ಕುತೂಹಲ ಕೆಣಕಿದಂತಾಯಿತು. ರಾಜಶೇಖರನ ಬಾಯಿ ಬಿಡಿಸಬೇಕೆಂಬ ನಿರ್ಧಾರದಿಂದಲೇ ಮಾತು ಮುಂದುವರಿಸಿದ.

"ಸಹಜಪ್ರವೃತ್ತಿಯ ಮುಂದೆ ಮರ್ಯಾದೆ ಎಲ್ಲಿ ಉಳಿಯುತ್ತದೆ ರಾಜಶೇಖರೂ."

"ಸಹಜಪ್ರವೃತ್ತಿ ನಾಟಕದವರಿಗೆ ಮಾತ್ರ ಇದೆಯೊ–ಉಳಿದವರಿಗೂ ಇದೆಯೊ ?"

"ಎಲ್ಲರಿಗೂ ಇದೆ."

"ಉಳಿದವರು ಮರ್ಯಾದೆಯಾಗಿ ಬಾಳ್ವೆಮಾಡುವಂತೆ ನಾವು ಮಾಡಲು ಸಾಧ್ಯವಿಲ್ಲವೇ ?"

"ನಾಟಕದ ಜೀವನದಲ್ಲಿ ಕ್ರಮವಿಲ್ಲ–ಇದು ಒಂದು ರೀತಿಯಲ್ಲಿ ಅಸಹಜ ಜೀವನ. ಇಲ್ಲಿನ ಅಸಹಜತೆಗನುಗುಣವಾಗಿ ನೀತಿ ನಿಯಮಗಳು ಸೃಷ್ಟಿಯಾಗ ಬೇಕಾದುದು ಅಗತ್ಯ. ನಾಟಕರಂಗವೇ ಬೇರೆ ಲೋಕ ರಾಜಶೇಖರೂ.

"ನಾಟಕದವರು ಮ ನು ಷ್ಯ ರೇ ಅಲ್ಲವೆಂದು ನೀವು ಹೇಳಿದ ಹಾಗಾಯಿತು."

"ಮನುಷ್ಯರೇ ನಿಜ. ಇಂಗ್ಲೆಂಡಿನಲ್ಲಿ ಇರುವ ಜನ ಮನುಷ್ಯರಲ್ಲವೇ ?" ಅವರ ಜೀವನಮಾರ್ಗ, ನೀತಿನಿಯಮ, ಆಹಾರ ವಿಹಾರಗಳನ್ನು ನಾವು ಒಪ್ಪಿಕೊಳ್ಳುತ್ತೇವೆಯೇ ? ಅವರು ನಮ್ಮ ಹಾಗೆ ಇಲ್ಲವೆಂದು ಅವರನ್ನು ಮನುಷ್ಯರಲ್ಲ ಎಂದು ಹೇಳುವುದಕ್ಕಾಗುತ್ತದೆಯೇ ?"

"ನಿಮ್ಮ ತರ್ಕ ಸ್ವಾರಸ್ಯವಾಗಿದೆ ದೀಕ್ಷಿತರೆ – ಆದರೆ ಅದನ್ನು ನಾನು ಒಪ್ಪಿಕೊಳ್ಳಲಾರೆ. ವ್ಯಕ್ತಿ-ಸಮಾಜ-ರಾಷ್ಟ್ರ ಕೆಲವು ಸೂತ್ರಗಳನ್ನು ನಿರ್ದೇಶಿಸಿ ಕೊಳ್ಳುತ್ತವೆ. ಆ ಕಟ್ಟಿನೊಳಗೆ ಅವರಿದ್ದರೇ ವ್ಯಕ್ತಿ-ಸಮಾಜ-ರಾಷ್ಟ್ರ ಸುಸಂಘ ಟಿತವಾಗಿರಲು ಸಾಧ್ಯ. ತಲೆಗೊಂದು ನ್ಯಾಯ–ತಲೆಗೊಂದು ನೀತಿಯಾದರೆ ಅನಾಯಕತ್ವ ತಲೆದೋರುತ್ತದೆ."

"ನಿನ್ನ ದೃಷ್ಟಿಯಲ್ಲಿ ಯಜಮಾನರು, ಸರಸ್ವತಮ್ಮ ಮಾಡಿದ್ದು ತಪ್ಪು."

"ಅವರ ತಪ್ಪು–ಒಪ್ಪುಗಳ ತೂಗಿನೋಡುವುದು ನನ್ನ ಕೆಲಸವಲ್ಲ. ರಂಗಮಂದಿರ ಕಲಾಮಂದಿರ. ಕಲಾಮಂದಿರವೂ ದೇವಮಂದಿರವೇ. ದೇವಮಂದಿರಕ್ಕೆ ಹೋಗುವ ಭಕ್ತ ತನ್ನ ಮೈ-ಮನಸ್ಸನ್ನು ಶುಚಿಯಾಗಿಟ್ಟು ಕೊಳ್ಳುವುದೆಷ್ಟು ಅಗತ್ಯವೋ ಕಲಾಮಂದಿರಕ್ಕೆ ಹೋಗುವ ಕಲಾವಿದನೂ ಅಷ್ಟೇ ಶುಚಿರ್ಭೂತನಾಗಿರಬೇಕು. ನಾವು ದೇವರುಗಳ, ದೇವತೆಗಳ ವೇಷ

ಹಾಕಿಕೊಂಡು ರಂಗದ ಮೇಲೆ ಅಭಿನಯಿಸುತ್ತೇವೆ; ಒಳಗೆ ರಾಕ್ಷಸಕೃತ್ಯಗಳನ್ನು ಮಾಡುವುದು ಯಾವ ನ್ಯಾಯ ? "

" ನಮ್ಮ ನಾಟಕಗಳಲ್ಲಿ ದೇವರುಗಳಷ್ಟೇ ರಾಕ್ಷಸರೂ ಇರುತ್ತಾರಲ್ಲಪ್ಪಾ."

" ಇರುತ್ತಾರೆ ಸ್ವಾಮಿ. ಆದರೆ ರಾಕ್ಷಸರಿಗೆ ಜಯವಾದುದನ್ನು ನಾವು ತೋರಿಸುವುದಿಲ್ಲವಲ್ಲ."

" ನಿಜ ನಿಜ–ನೀನು ಹೇಳುವುದು ನಿಜ "

ಎಂದುಕೊಂಡು ದೀಕ್ಷಿತ ಸೊಂಟದಲ್ಲಿದ್ದ ನಶ್ಯದ ಡಬ್ಬಿ ಕೈಗೆ ತೆಗೆದುಕೊಂಡು ಆ ಸ್ಥಳ ಬಿಟ್ಟು ಕದಲಿದ.

ಸುಧಾ ಈ ಸಂಭಾಷಣೆಯನ್ನು ಸಂಪೂರ್ಣವಾಗಿ ಕೇಳಿಸಿಕೊಂಡಿದ್ದಳು. ರಾಜಶೇಖರನ ನಿರ್ಣಯ ಅವಳ ಹೃದಯಕ್ಕೆ ವೇದನೆಯನ್ನುಂಟುಮಾಡಿತ್ತು. ಕಣ್ಣು ತುಂಬಿ ಬಂದ ಹನಿಗಳನ್ನು ನಿವಾರಿಸಿಕೊಂಡು ಮರೆಯಾದುದನ್ನು ರಾಜಶೇಖರ ಕಂಡ.

" ಯಾವ ಸುದ್ದಿಗೂ ಹೋಗದಿದ್ದವನು ನಾನೇಕೆ ಈ ವಿಷಯಕ್ಕೆ ಇವತ್ತು ಬಾಯಿಹಾಕಿದೆ. ದೀಕ್ಷಿತರು ಅನವಶ್ಯಕವಾಗಿ ನನ್ನನ್ನು ಈ ಚರ್ಚೆಗೆಳೆದರು. ಪಾಪ ಹುಡುಗಿ! ಎಲ್ಲವನ್ನೂ ಕೇಳಿಸಿಕೊಂಡಳು. ನಾನೆಂಥ ಅವಿವೇಕ ಮಾಡಿಬಿಟ್ಟೆ ! "

ಎಂದು ರಾಜಶೇಖರ ಪಶ್ಚಾತ್ತಾಪಪಟ್ಟುಕೊಂಡ. 'ಸಮಯ ಸಿಕ್ಕಿದರೆ ಸುಧೆಯನ್ನು ಮಾತನಾಡಿಸಿ ಅವಳನ್ನು ಸಮಾಧಾನಪಡಿಸಬೇಕು' ಎಂದು ಅವನ ಮನಸ್ಸು ಕಾತುರಪಟ್ಟಿತು.

ಸುಧಾ ಆದಷ್ಟು ರಾಜಶೇಖರನಿಂದ ದೂರವಿರಲು ಪ್ರಯತ್ನಿಸುತ್ತಿದ್ದಳು. ರಂಗದ ಮೇಲೆ ಇಬ್ಬರೂ ಅಬಿನಯಮಾಡಬೇಕಾಗಿ ಬಂದ ಪ್ರಸಂಗಗಳನ್ನುಳಿದರೆ ಮಿಕ್ಕ ವೇಳೆಗಳಲ್ಲಿ ಅವಳು ದೂರ ನಿಲ್ಲುತ್ತಿದ್ದಳು.

ರಾಜಶೇಖರನಿಂದ ಅವಳು ದೂರ ಹೋಗಲು ಯತ್ನಿಸುತ್ತಿದ್ದಷ್ಟೂ ಸಮೀಪಗತವಾಗುತ್ತಿರುವಂತೆ ಭಾಸವಾಗುತ್ತಿತ್ತು. ಯಜಮಾನರು ಮತ್ತು ತನ್ನ ತಾಯಿಯ ನೂತನ ಸಂಬಂಧದ ಬಗ್ಗೆ ಕಂಪೆನಿಯಲ್ಲಿ ಯಾರೂ ಅಸಮಾಧಾನ ವ್ಯಕ್ತಮಾಡದಿದ್ದರೂ ರಾಜಶೇಖರ ವ್ಯಕ್ತಮಾಡಿದ್ದೂ, ಇತರರಂತೆ ನಶ್ಯ ಹಾಕಿಕೊಂಡೋ, ಬೀಡಿ ಸೇದಿಕೊಂಡೋ, ಇಸ್ಪೇಟ್ ಆಡಿ

ಕೊಂಡೋ ಕಾಲಕಳೆಯದೆ ರಾಜಶೇಖರ ಸದಾ ಯಾವದಾದರೂ ಪುಸ್ತಕ ಓದುತ್ತಿದ್ದುದೂ ಅವಳಿಗೆ ಆಶ್ಚರ್ಯವನ್ನುಂಟುಮಾಡಿತ್ತು. 'ನಾಟಕದ ಕಂಪೆನಿಗೆ ಬರಬೇಕಾದ ವ್ಯಕ್ತಿಯ ಹಾಗೆ ಕಾಣುವುದಿಲ್ಲ. ಈತ ಏತಕ್ಕೆ ನಾಟಕದ ಕಂಪೆನಿ ಸೇರಿದ' ಎಂಬ ಕುತೂಹಲ ಅವಳನ್ನೂ ಬಾಧಿಸ ತೊಡಗಿತು.

ಕಂಪೆನಿ ಮನೆಯ ಆವರಣದ ಮೂಲೆಯೊಂದರಲ್ಲಿ ಒಂದು ಪುರಾತನ ಹುಣಿಸೇಮರವಿತ್ತು. ಅವಕಾಶ ಸಿಕ್ಕಿದಾಗ ರಾಜಶೇಖರ ಅದರ ನೆರಳಿನಲ್ಲಿ ಕುಳಿತು ವಿಶ್ರಮಿಸಿಕೊಳ್ಳುತ್ತಿದ್ದ. ಒಂದು ದಿನ ತನ್ನ ರಿಹರ್ಸಲ್ ಮುಗಿಸಿ ಕೊಂಡು ಸುಧಾ ಅತ್ತ ಬಂದಳು. ರಾಜಶೇಖರ ಕುಳಿತಿರುವುದು ಅವಳಿಗೆ ತಿಳಿಯದು. ಅವನ ಮುಖ ಕಂಡೊಡನೆಯೇ ಹಿಂದಿರುಗಲೆತ್ನಿಸಿದಳು. ರಾಜ ಶೇಖರ ಅವಳನ್ನು ನೋಡಿ 'ಸುಧಾ' ಎಂದು ಕರೆದ.

"ಏನು ?"

"ರಿಹರ್ಸಲ್ ಮುಗಿಯಿತೇ ?"

"ಮುಗಿಯಿತು."

"ಒಂದು ನಿಮಿಷ ಇಲ್ಲಿ ಕೂಡು ಬಾ."

"ಏಕೆ ?"

"ನಾನು ಮಾತನಾಡಬೇಕಾಗಿದೆ."

'ನನ್ನೊಂದಿಗೇನು ಮಾತು' ಎಂದು ಹೇಳಲು ಸುಧೆಯ ನಾಲಿಗೆ ಆತುರಪಟ್ಟಿತು. ಆದರವಳು ರಾಜಶೇಖರನಿಗೆ ಉತ್ತರ ಕೊಡದೆ ಅವನ ಮುಂದೆ ಬಂದು ಕುಳಿತಳು.

"ನನ್ನನ್ನು ಕ್ಷಮಿಸು ಸುಧಾ."

"ಏಕೆ ? ನೀವೇನು ತಪ್ಪುಮಾಡಿದಿರಿ ?"

"ನಿನ್ನ ತಾಯಿಯ ಬಗ್ಗೆ ಟೀಕೆ ಮಾಡಬಾರದಾಗಿತ್ತು-ನಾನು ಸಾಮಾನ್ಯ ವಾಗಿ ಯಾರ ಬಗ್ಗೆಯೂ ಮಾತನಾಡುವ ಅಭ್ಯಾಸ ಪಡೆದಿಲ್ಲ. ಅಂದು ಬಾಯಿ ತಪ್ಪಿ ಮಾತುಗಳುರುಳಿದವು. ನನ್ನ ಮಾತುಗಳನ್ನು ನೀನು ಕೇಳಿಸಿಕೊಂಡು ಕಣ್ಣಿನಲ್ಲಿ ನೀರು ತಂದುಕೊಂಡಿದ್ದನ್ನು ಕಂಡಮೇಲಂತೂ ತುಂಬ ವ್ಯಸನ ವಾಯಿತು."

"ಎಲ್ಲರೂ ಆಡುವ ಮಾತನ್ನೇ ನೀವೂ ಆಡಿದಿರಿ. ಅದರಲ್ಲಿ ತಪ್ಪೇನು ?"

"ನಾಟಕದ ಕಂಪೆನಿಯಲ್ಲಿರುವ 'ಎಲ್ಲರಂತೆ' ಇರಬೇಕೆಂದು ನನ್ನಿಚ್ಛೆಯಲ್ಲ. ಈ ಜೀವನ ನನ್ನ ಜೀವನವಲ್ಲ. ನನ್ನ ದುರ್ವಿಧಿ ಈ ಕುಂಭೀಪಾಕ ನರಕಕ್ಕೆ ನನ್ನನ್ನೂ ನೂಕಿದೆ—ಹಾಗೆಯೇ ನಿನ್ನನ್ನೂ ನೂಕಿದೆಯೆಂದು ನನ್ನ ಭಾವನೆ."

"ನಾಟಕ ಜೀವನದಲ್ಲಿ ಅಷ್ಟು ಹೊಲಸು ತುಂಬಿದೆಯೇ ?"

"ಜೀವನದಲ್ಲಿಯೇ ಹೊಲಸು ತುಂಬಿದೆ. ನಾಟಕ ಜೀವನ ಸಮಗ್ರ ಜೀವನದ ರನ್ನಗನ್ನಡಿ. ನಿನ್ನ ತಾಯಿ, ಅಕ್ಕ, ನೀನು ಕಂಪೆನಿಗೆ ಬಂದಾಗ ಬಹಳ ಜನ ವ್ಯಸನಪಟ್ಟರು. – ಈರ್ಷೆಯಿಂದ !"

"ಅದನ್ನು ನಾನು ಬಲ್ಲೆ."

"ಆದರೆ ನಾನು ಸಂತೋಷಪಟ್ಟೆ."

"ನೀವು ಸಂತೋಷಪಟ್ಟರಾ ? ಏಕೆ ?"

"ರಂಗದೇವತೆಯ ಮಂದಿರ ಶೌಚಕೂಪವಾಗಿತ್ತು. ನೀವು ಇದನ್ನು ಶುದ್ಧಿಮಾಡಬಲ್ಲಿರಿ ಎನ್ನುವ ನಂಬಿಕೆ ನನ್ನ ಮನಸ್ಸಿಗಾಯಿತು. ನಿಮ್ಮ ನೆರವು ಪಡೆದು ರಂಗದ ಮೂಲಕ ಜನತೆಗೆ ಅಲ್ಪಸ್ವಲ್ಪ ಸೇವೆಮಾಡಬೇಕೆಂಬ ಆಕಾಂಕ್ಷೆ ನನ್ನ ಹೃದಯದಲ್ಲಿ ಮೊಳೆಯಿತು. ನಿನ್ನ ತಾಯಿಯೂ ಇತರರ ಹಾದಿಯನ್ನೇ ಹಿಡಿದುದನ್ನು ಕಂಡಾಗ ನನ್ನ ಹೃದಯ ಹಿಂಡಿಹೋಯಿತು—ನಿನ್ನ ತಾಯಿಯನ್ನು ಆಕ್ಷೇಪಿಸಿದೆನೆಂದು ಕೋಪವೇ ?"

"ನನಗೂ ದುಃಖವಾಯಿತು. ನಮ್ಮ ಬಗ್ಗೆ ನೀವು ತಳೆದಿದ್ದ ಒಳ್ಳೆಯ ಅಭಿಪ್ರಾಯ ಹೋಗುವಂತಾಯಿತಲ್ಲಾ ಎಂದು ವ್ಯಸನವಾಯಿತು."

"ನೀವು ನಾಟಕದ ಕಂಪೆನಿಗೇತಕ್ಕೆ ಬಂದಿರಿ ?"

ಸುಧಾ ಮೌನ ತಳೆದಳು. ತನ್ನ ಸಂಸಾರದ ಇಡಿಯ ಚಿತ್ರ ಅವಳ ಚಿತ್ತಫಲಕದ ಮೇಲೆ ಹಾದುಹೋಯಿತು. ನಿಟ್ಟುಸಿರು ಬಿಟ್ಟು

"ಅದೊಂದು ದೊಡ್ಡ ಕಥೆ. ನಿಮ್ಮಲ್ಲಿ ಹೇಳಿಕೊಳ್ಳಬೇಕೆಂದು ನನ್ನ ಮನಸ್ಸೂ ಆತುರಪಡುತ್ತಿದೆ."

"ಅದನ್ನು ನಾನೇಕೆ ಕೇಳಬೇಕು."

"ನನಗಾಗಿ ಕೇಳಬೇಕು."

"ಆಗಲಿ – ನೀನು ಕೇಳಬೇಕೆಂದರೆ ಕೇಳುತ್ತೇನೆ. ಯಾವದಾದರೂ ಒಂದು ದಿನ ಪುರಸತ್ತಾಗಿ ಕೂಡೋಣ. ನಿನ್ನ ಕಥೆ ನಾನು ಕೇಳಿದ ಮೇಲೆ ನನ್ನ ಕಥೆಯೂ ನಿನಗೆ ಹೇಳಲೇಬೇಕು."

"ಆಗಬಹುದು. ನನಗೆ ಓದುವುದಕ್ಕೆ ಕೆಲವು ಪುಸ್ತಕಗಳನ್ನು ತಂದು ಕೊಡುವಿರಾ ?"

"ನೀನು ಓದುವಷ್ಟು ಪುಸ್ತಕಗಳನ್ನು ತಂದುಕೊಡುತ್ತೇನೆ. ಯಾವ ವಿಷಯದ ಮೇಲೆ ಪುಸ್ತಕಗಳನ್ನು ಓದಲು ನಿನಗೆ ಇಷ್ಟ."

"ಕಾದಂಬರಿಗಳು, ಕಥೆಗಳು. ನಿಮ್ಮಲ್ಲಿ ಯಾವ ವಿಷಯದ ಮೇಲೆ ಪುಸ್ತಕಗಳಿವೆ."

"ಕಥೆ, ಕಾದಂಬರಿ, ನಾಟಕಗಳೂ ಇವೆ. ದರ್ಶನ ಸಮಾಜಶಾಸ್ತ್ರ, ರಾಜಕಾರಣದ ಮೇಲೂ ಗ್ರಂಥಗಳಿವೆ."

"ದರ್ಶನ ಗ್ರಂಥಗಳನ್ನು ಓದುತ್ತೀರಾ ?"

"ಏಕೆ ? ಓದಬಾರದೇ ?"

"ಅವು ಬಹಳ ಕ್ಲಿಷ್ಟ – ಅರ್ಥವಾಗುವುದು ಕಷ್ಟ."

"ಮನಸ್ಸಿಗೆ ಬೇಡದ ಯಾವ ವಿಷಯವಾದರೂ ಕ್ಲಿಷ್ಟವೇ ?"

"ನೀವು ತುಂಬ ದೈವಭಕ್ತರಾಗಿರಬೇಕು."

"ದರ್ಶನ ಗ್ರಂಥವನ್ನೋದುವವರೆಲ್ಲಾ ಭಕ್ತರಾಗಿರಬೇಕೇ ?"

"ಹಾಗೆಂದು ನನ್ನ ಭಾವನೆ."

"ಸಾಹಿತ್ಯದ ಉದ್ದೇಶ ಸತ್ಯಸಾಧನೆಯಲ್ಲವೇ ?"

"ಇರಬೇಕು."

"ಸಮಾಜಶಾಸ್ತ್ರ, ರಾಜಕಾರಣ, ಅರ್ಥಶಾಸ್ತ್ರ ಇತ್ಯಾದಿ ಗ್ರಂಥಗಳು ಲೌಕಿಕ ಸತ್ಯವನ್ನು ತೋರಿಸಿಕೊಟ್ಟರೆ ದರ್ಶನ ಅಲೌಕಿಕ ಸತ್ಯವನ್ನು ತೋರಿಸಿ ಕೊಡುತ್ತದೆ."

"ಅಲೌಕಿಕವೆನ್ನುವುದು ಸುಳ್ಳೆನ್ನುತ್ತಾರಲ್ಲಾ !"

"ಯಾರು ? ಕಮ್ಯುನಿಸ್ಟರೇ ?"

"ಹೌದು – ಇತರ ಕೆಲವರು."

"ನಾಸ್ತಿಕರೇ !"

"ಅವರೇ ಇರಬೇಕು."

"ನೀನು ಕೇಳಿರುವುದು ಬಹಳ ಗಹನವಾದ ವಿಷಯ. ನಾಲ್ಕು ಮಾತುಗಳಲ್ಲಿ ಹೇಗೆ ಉತ್ತರ ಕೊಡಲಿ."

"ಹೇಳಿ ಪರವಾಯಿಲ್ಲ – ಆ ವಿಷಯ ತಿಳಿದುಕೊಳ್ಳಬೇಕೆಂದು ನನಗೆ ತುಂಬಾ ಆಸೆ. ಸ್ಕೂಲಿನಲ್ಲಿ ಮೇಡಮ್ಮಗಳನ್ನು ಕೇಳಿದೆ – ಅವರು ಬಾಯಿ ಬಡಿದು 'ನಿನಗೇಕೆ ಇವೆಲ್ಲ' ಎಂದರು. ತಿಳಿವಳಿಕೆ ಬರಬೇಕಾದರೆ ಏನು ಮಾಡಬೇಕ್ರೀ ?"

"ಓದಬೇಕು – ಓದಿದ್ದು ವಿಚಾರ ಮಾಡಬೇಕು–ಧ್ಯಾನಮಾಡಬೇಕು–ಬಲ್ಲವರೊಂದಿಗೆ ಚರ್ಚೆಮಾಡಿ ಸತ್ಯದ ವಿವಿಧ ಮುಖಗಳನ್ನು ಅರ್ಥಮಾಡಿ ಕೊಳ್ಳಬೇಕು."



"ನನ್ನ ಆಯುಷ್ಯವೇ ವ್ಯರ್ಥವಾಯಿತು. ನನಗೆ ಯಾರೂ ವಿವೇಕ ಮಾರ್ಗ ತೋರಿಸಿಲ್ಲ."

"ನೀನಿನ್ನೂ ಚಿಕ್ಕವಳು ಸುಧಾ. ವಿವೇಕ ಕಲಿಯುವುದಕ್ಕೆ ಬೇಕಾದಷ್ಟು ಕಾಲಾವಕಾಶವಿದೆ. ನಿನಗೆ ವಿವೇಕ ಕಲಿಸುವಷ್ಟು ನಾನು ಪ್ರಾಜ್ಞನಲ್ಲ–ಆದರೆ ನನ್ನಿಂದಾಗುವ ಸಹಾಯ ಮಾಡಲು ಸಿದ್ಧ."

"ನಾನು ಚಿಕ್ಕವಳಲ್ಲರೀ–ನನಗೆ ಬಹಳ ವಯಸ್ಸಾಗಿದೆ–ಈ ವಯಸ್ಸಿಗೆ ಬೇಕಾದಷ್ಟು ಅನುಭವ ಪಡೆದುಕೊಂಡಿದ್ದೇನೆ – ಅದು ಹೋಗಲಿ. ನೀವು ದರ್ಶನಗಳ ವಿಷಯ ಹೇಳುತ್ತಿದ್ದಿರಿ – ನಾನು ಅಡ್ಡ ಬಂದೆ."

"ಸದಾ ಧ್ಯಾನಾಸಕ್ತರಾಗಿ, ಲೋಕದ ಯಾವ ಯೋಚನೆಗೂ ತುತ್ತಾಗದೆ ನಿರ್ವಿಕಲ್ಪ ಸ್ಥಿತಿಯಲ್ಲಿ ಋಷಿಗಳು ಕಂಡ ಸತ್ಯದ ತಿಳಿಬೆಳಕೇ ದರ್ಶನಗಳು."

"ಅವರನ್ನು ನಾವು ಅರ್ಥಮಾಡಿಕೊಳ್ಳಬೇಕಾದರೆ ಅವರಂತೆಯೇ ಇರಬೇಕು."

"ಇರಬೇಕೆಂದಲ್ಲ – ಆದರೆ ಅದೇ ಮನಶ್ಶಾಂತಿಯನ್ನು ದೊರಕಿಸಿ ಕೊಳ್ಳಬೇಕು. ಒಂದು ಜನ್ಮದ ತಪಸ್ಸಿನಿಂದ ಅವರು ಕಂಡ ಸತ್ಯ ಒಮ್ಮೆಲೇ ನಮಗರ್ಥವಾಗಲಾರದು.

"ಇಂದಿನ ನಮ್ಮ ಜೀವನಸ್ಥಿತಿಯಲ್ಲಿ ಅದು ಸಾಧ್ಯವೇ ?

"ಆಮೆ ಬೇಕಾದಾಗ ತನ್ನ ಚಿಪ್ಪಿನಿಂದ ಹೊರಬರಬಲ್ಲುದು – ಬೇಡವಾದಾಗ ಒಳಗೆ ಹೋಗಿ ಹುದುಗಿಕೊಂಡು ಕುಳಿತಿರಬಲ್ಲುದು. ಮನುಷ್ಯನಲ್ಲಿಯೂ ಆ ಶಕ್ತಿಯಿದೆ – ತನ್ನ ಸಮಸ್ತ ಇಂದ್ರಿಯ ವ್ಯಾಪಾರಗಳನ್ನೂ ಅವನು ಒಳಕ್ಕೆಳೆದುಕೊಂಡು ಲೋಕದಲ್ಲಿದ್ದರೂ ಲೋಕಾತೀತನಾಗಿರಬಹುದು."

"ಇದನ್ನು ಸಾಧಿಸುವುದು ಹೇಗೆ ?"

"ಪರಿಶ್ರಮ – ಶ್ರದ್ಧೆಗಳಿಂದ."

"ಲೋಕದಲ್ಲಿದ್ದೂ ಲೋಕಾತೀತನಾಗಿರಬಹುದೆ ?"

"ಇರಬಹುದು."

"ನೀವು ಪ್ರಯತ್ನಮಾಡಿರುವಿರಾ ?"

"ಮಾಡಿದ್ದೇನೆ."

ಸುಧಾ ಚಕಿತಳಾಗಿ ನಿಂತಳು. ರಾಜಶೇಖರನ ಮಾತಿನಲ್ಲಿ ಒಡೆದು ಕಾಣುತ್ತಿದ್ದ ಶದ್ರೆ, ಪಾವಿತ್ರ್ಯ, ಸತ್ಯಪ್ರಿಯತೆ ಅವಳ ಹೃದಯದಲ್ಲಿ ಸ್ಪಂದನವನ್ನುಂಟುಮಾಡಿತು.

"ನಾನೂ ಪ್ರಯತ್ನ ಮಾಡುತ್ತೇನೆ" ಎಂದಳು.

ರಾಜಶೇಖರ ತೃಪ್ತಿಗೊಂಡು ಮಂದಹಾಸ ಬೀರಿದ.

೫

ಕ್ರಮವಾಗಿ 'ಪ್ರ್ಯಾಕ್ಟೀಸಿ'ಗೇ ಬರಲು ಹಿಂದೆಗೆಯುತ್ತಿದ್ದ ದೊರೆಸ್ವಾಮಿ, ಮಂಜುಳನಿಗೆ ಪಾಠ ಹೇಳಿಕೊಡಲೊಪ್ಪಿಕೊಂಡುದು ಕಂಪೆನಿಯ ಕೆಲವು ನಟರಿಗೆ ಆಶ್ಚರ್ಯವನ್ನುಂಟುಮಾಡಿತ್ತು.

"ಅನ್ನ ಕೊಡುವ ಧಣಿಗಳು ಕೆಲಸ ಹೇಳಿದರೆ ಮಾಡುವುದಕ್ಕಾಗುವುದಿಲ್ಲ ಎನ್ನುವುದಕ್ಕಾಗುತ್ತದೆಯೇ ?"

ಎಂದು ದೊರೆಸ್ವಾಮಿ ನಟರಿಗೆ ಸಮಾಧಾನ ಹೇಳಿದ್ದರೂ ಅವರು

"ಕುರಿ ಕಾಯುತ್ತೀಯಾ ತೋಳ ಎಂದರೆ, ಸಂಬಳವಿಲ್ಲದೆ ಕಾಯುತ್ತೇನೆ ಎಂದಿತಂತೆ" ಎಂದು ಕುಹಕವಾಡಲು ಅನುಮಾನಿಸಿರಲಿಲ್ಲ.

ನಾಲ್ಕು ದಿನ ಗಂಭೀರವಾಗಿ ದೂರ ನಿಂತು, ಅಭಿನಯ ಹೇಳಿ ಕೊಡುತ್ತಿದ್ದ ದೊರೆಸ್ವಾಮಿ ಕ್ರಮಕ್ರಮೇಣ ಸಲಿಗೆ ವಹಿಸಲಾರಂಭಿಸಿದ. ರಂಗ ಪ್ರವೇಶ, ನಿಷ್ಕ್ರಮಣ, ನಡಿಗೆ, ಭಾವ ಭಂಗಿ ಪ್ರದರ್ಶನಗಳನ್ನು ತೋರಿಸಿಕೊಡುವಾಗ ಮಂಜುಳನನ್ನು ಮುಟ್ಟಿ, ಅವಳ ಕೈಯಿಂದ ಅಭಿನಯ ಮಾಡಿಸುತ್ತಿದ್ದ. ದೊರೆಸ್ವಾಮಿ ವಹಿಸುತ್ತಿದ್ದ ಸಲಿಗೆ ಕಂಡು ಮಂಜುಳ ಮುನಿಯದಿದ್ದರೂ ಅವನಿಗೆ ಪ್ರೋತ್ಸಾಹ ಕೊಟ್ಟಿರಲಿಲ್ಲ. 'ವಿರೋಧವಿಲ್ಲ-ಅಷ್ಟೇ ಸಾಕು' ಎಂದುಕೊಂಡು ದೊರೆಸ್ವಾಮಿ ತನ್ನ ಪ್ರಯತ್ನ ಮುಂದುವರಿಸಿದ.

'ಗೌರಿ ಮನೋಹರಿ ಪ್ರಾಸಾದಿಕ ನಾಟಕ ಮಂಡಳಿ'ಯವರು ಅಭ್ಯಾಸ ಮಾಡುತ್ತಿದ್ದ ಹೊಸ ನಾಟಕ 'ಜಯಪಾಲ ಚರಿತ್ರೆ'—ಷೇಕ್ಸ್‌ಪಿಯರ್ ಕವಿಯ 'ರೋಮಿಯೋ ಮತ್ತು ಜ್ಯೂಲಿಯಟ್' ನಾಟಕದ ಆಧಾರದ ಮೇಲೆ ವಿರಚಿತವಾಗಿತ್ತು. ಅದರಲ್ಲಿ ದೊರೆಸ್ವಾಮಿಯೇ ನಾಯಕ; ಮಂಜುಳನೇ ನಾಯಕಿ. ನಾಯಕಿಯ ತಂದೆ ತಾಯಿಗಳ ಪಾತ್ರ ಶ್ರೀಕಂಠಮೂರ್ತಿ, ಸರಸ್ವತಮ್ಮ ವಹಿಸಿದ್ದರು. ಪರಮೇಶ್ವರಯ್ಯ ನಾಯಕಿಯ ಸೋದರಮಾವ.

'ಜಯಪಾಲ ಚರಿತ್ರೆ'ಯ ಒಂದು ಸನ್ನಿವೇಶ ದೊರೆಸ್ವಾಮಿಗೆ ಅನುಕೂಲವಾಗಿತ್ತು.

ರಾಜಕುಮಾರ ಜಯಪಾಲನ ಮನೆತನಕ್ಕೂ ನಾಯಕಿ ಪದ್ಮಿನಿಯ ಮನೆತನಕ್ಕೂ ಇದ್ದಕ್ಕಿದ್ದಂತೆ ವೈಷಮ್ಯವೇರ್ಪಡುತ್ತದೆ. ಈ ವೈಷಮ್ಯದ ಪರಿಣಾಮವಾಗಿ ನಾಯಕಿಯ ಸೋದರಮಾವ ರಣಧೀರ, ಜಯಪಾಲನನ್ನು ಸಂಹರಿಸಲು ಶಪಥ ಮಾಡುತ್ತಾನೆ. ಜಯಪಾಲನ ಮನೆಯವರೂ, ಅವನ ಗೆಳೆಯ ಗುಣಮಲ್ಲನೂ ಅವನ ಮೇಲೆ ಸರ್ಪಕಾವಲಿರುತ್ತಾರೆ.

ಈ ಮಧ್ಯೆ ಪದ್ಮಿನಿಗೂ, ಜಯಪಾಲನಿಗೂ ಅನುರಾಗ ಅಂಕುರಿಸಿರುತ್ತದೆ. ಒಂದು ರಾತ್ರಿ ತನ್ನ ಕಾಪಿನವರ ಕಣ್ಣು ತಪ್ಪಿಸಿ ಜಯಪಾಲ, ಪದ್ಮಿನಿಯ ಅಂತಃಪುರಕ್ಕೆ ಹೋಗಿ ಅವಳೊಂದಿಗೆ ಸಲಿಗೆಯಿಂದ ಇದ್ದು ಬರುತ್ತಾನೆ. ಹೇಗೋ ಸುದ್ದಿ ರಣಧೀರನಿಗೆ ಮುಟ್ಟುತ್ತದೆ. ಜಯಪಾಲನ ಹಾದಿ ಕಾಯ್ದು ಅವನನ್ನು ರಣಧೀರ ಅಪಮಾನಗೊಳಿಸುತ್ತಾನೆ. ಜಯಪಾಲನಿಗೂ, ರಣಧೀರನಿಗೂ ಉಗ್ರಕಾಳಗವೇರ್ಪಟ್ಟು ರಣಧೀರ ಮಡಿದುರುಳುತ್ತಾನೆ. ಜಯಪಾಲ ತಲೆ ಮರೆಸಿಕೊಳ್ಳಬೇಕಾಗುತ್ತದೆ.

ನಾಟಕದ ಎಲ್ಲ ದೃಶ್ಯಗಳಿಗಿಂತ ಜಯಪಾಲ ಪದ್ಮಿನಿಯ ಅಂತಃಪುರ ಹೊಕ್ಕು ಅವಳೊಂದಿಗೆ ಚೆಲ್ಲಾಟವಾಡುವ ದೃಶ್ಯ ದೊರೆಸ್ವಾಮಿಯ ಅಚ್ಚುಮೆಚ್ಚಿನದಾಗಿತ್ತು. ಅದನ್ನೇ ಹಲವಾರು ಸಲ ಬೇಸರವಿಲ್ಲದೆ ಮಂಜುಳನ ಕೈಯಲ್ಲಿ ರಿಹರ್ಸ್ ಮಾಡಿಸುತ್ತಿದ್ದ.

ದೊರೆಸ್ವಾಮಿ ತೀರ ಸಮೀಪಗತನಾಗಿ ಮೈಕೈ ಮುಟ್ಟಲೆಳಸಿದಾಗ ಮಂಜುಳಾ ಮೃದುವಾಗಿ

"ಇಲ್ಲಿ ಮಾಡಬೇಕಾದ ಅಭಿನಯ ನನಗೆ ಅರ್ಥವಾಗಿದೆ"

ಎನ್ನುತ್ತಿದ್ದಳು. ದೊರೆಸ್ವಾಮಿ ನಿರುತ್ಸಾಹಿಯಾಗದೆ

"ಅಭ್ಯಾಸದ ಬಲವಿಲ್ಲದಿದ್ದರೆ ಅಭಿನಯ ಬರುವುದಿಲ್ಲ. ಒಂದು ಸನ್ನಿವೇಶದಲ್ಲಿ ಪಾತ್ರಗಳು ಹೇಗೆ ವರ್ತಿಸುತ್ತವೆ ಎಂಬುದು ಎಲ್ಲರಿಗೂ ಗೊತ್ತು. ಆದರೆ ಅದನ್ನೇ ಅಭಿನಯಿಸಿ ತೋರಿಸುವುದು ಕಷ್ಟ."

"ನನ್ನ ಅಭಿನಯ ಸಮರ್ಪಕವಾಗಿಲ್ಲವೇ ?"

"ಪೂರ್ಣವಾಗಿ ಆಗಿಲ್ಲ, ಇನ್ನೂ ಬಹಳ ನುರಿಯಬೇಕು."

ದೊರೆಸ್ವಾಮಿಯನ್ನು ಎದುರಿಸಿ ಅವನನ್ನು ಹತೋಟಿಗೆ ತರುವುದು ಮಂಜುಳನಿಗೆ ದುಸ್ಸಾಧ್ಯವಾಗಿರಲಿಲ್ಲ. ಆದರೆ ದೊರೆಸ್ವಾಮಿ ತನ್ನ ಅಭಿನಯದ ಬಗ್ಗೆ ಅತೃಪ್ತನಾಗಿರುವ ಸುದ್ದಿ ಯಜಮಾನರ ಕಿವಿಮುಟ್ಟಿ, ತನ್ನ ಪಾತ್ರಕ್ಕೇ ಎಲ್ಲಿ ತುಂಡುಬೀಳುವುದೋ ಎನ್ನುವ ಭಯ ಅವಳನ್ನಾವರಿಸಿತು.

ದಿನ ಸಾಗುತ್ತ ಸಾಗುತ್ತ ದೊರೆಸ್ವಾಮಿಯ ಆವೇಗ ಹೆಚ್ಚಾಗುತ್ತಾ ಬಂತು. ಅಭಿನಯ ಕಲಿಸುವ ವೇಳೆಯಲ್ಲಿ ಮಂಜುಳ ಸಲಿಗೆ ಕೊಡಲು ಹಿಂಜರಿಯುತ್ತಿರಲಿಲ್ಲ. ಆದರೆ ಉಳಿದ ವೇಳೆಯಲ್ಲಿ ಅವಳು ಮಾತಿಗೆ ಉತ್ತರವನ್ನೂ ಕೊಡುತ್ತಿರಲಿಲ್ಲ. ದೊರೆಸ್ವಾಮಿ ಒಳಗೇ ಕೊರಗಲಾರಂಭಿಸಿದ. ದೊರೆಸ್ವಾಮಿಯ ಅಂತರಂಗವನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದವನು ಗುಂಡುವೊಬ್ಬನೇ. ದೊರೆಸ್ವಾಮಿಯೇ ಈ ವಿಷಯ ತನ್ನಲ್ಲಿ ಪ್ರಸ್ತಾಪಿಸಲಿ ಎಂದು ಗುಂಡೂ ಹಲ್ಲುಕಚ್ಚಿಕೊಂಡಿದ್ದ. ದೊರೆಸ್ವಾಮಿಯ ಸಂಕಟ ನೋಡಿ ಗುಂಡೂ ಒಳಗೇ ಆನಂದಿಸುತ್ತ ಈ ನಾಟಕ ಹೇಗೆ ಮುಂದುವರಿಯುವುದೆಂದು ತಿಳಿಯಲು ಕುತೂಹಲಿಯಾಗಿದ್ದ.

ಒಂದು ದಿನ ಕಂಪೆನಿ ಮನೆಯಲ್ಲಿ ಎಲ್ಲರ ಊಟ ಮುಗಿದ ಮೇಲೆ

ಗುಂಡೂ ಸಿಗರೇಟ್ ಹಚ್ಚಿಕೊಂಡು ಹೊರಗೆ ಬಂದ. ಅವನನ್ನೇ ಅನುಸರಿಸಿ ಬಂದ ದೊರೆಸ್ವಾಮಿ

"ನನಗೊಂದು ಸಿಗರೇಟ್ ಕೊಡಯ್ಯಾ" ಎಂದು ಕೇಳಿದ.

"ತೊಗೊಳ್ಳಿ ಸ್ವಾಮಿ-ನಿಮಗಿಲ್ಲವೇ ?"

ಎಂದು ಗುಂಡೂ ಔದಾರ್ಯದಿಂದ ಸಿಗರೇಟ್ ಪ್ಯಾಕೆಟ್ಟನ್ನೂ ಬೆಂಕಿ ಪೊಟ್ಟಣವನ್ನೂ ದೊರೆಸ್ವಾಮಿಯ ಕೈಯಲ್ಲಿತ್ತ. ದೊರೆಸ್ವಾಮಿ ಸಿಗರೇಟ್ ಹಚ್ಚಿಕೊಂಡು ಮಾತನಾಡುತ್ತಾ ಗುಂಡುವನ್ನು ಹುಣಿಸೇಮರದ ನೆರಳಿಗೆ ಕರೆದೊಯ್ದು

"ನೀನು ಈಚೆಗೆ ಏನೋ ಒಂದು ತರಹ ಆಗಿಹೋಗಿಬಿಟ್ಟೆ ಗುಂಡೂ."

"ಏಕೆ ಸ್ವಾಮಿ-ನಾನೇನು ಅಪರಾಧ ಮಾಡಿದೆ."

"ನನ್ನ ಯೋಗಕ್ಷೇಮ ವಿಚಾರಿಸುವುದೇ ಬಿಟ್ಟುಬಿಟ್ಟೆಯಲ್ಲಾ !"

"ನಿಮ್ಮ ಯೋಗಕ್ಷೇಮ ವಿಚಾರಿಸುವುದಕ್ಕೆ ನಾನು ಯಾವ ದಾಸಯ್ಯ ಸ್ವಾಮಿ. ಕಂಪೆನಿಯಲ್ಲಿ ರಾಜಾ ಪಾರ್ಟು ಮಾಡುವವರು ನೀವು-ನಾನೊಬ್ಬ ಬಡಪಾಯಿ ಕೂಲಿ. ಯಜಮಾನರು ಮೊದಲುಗೊಂಡು ಆಳುಕಾಳುಗಳವರೆಗೆ ನಿಮ್ಮ ಮಾತು 'ಹಸಾದ' ಎನ್ನುತ್ತಾರೆ."

"ಇದೆಲ್ಲಾ ಇರಲಿ ಬಿಡೋ ಗುಂಡೂ-ಕಲಿತ ಗರಡಿಯಲ್ಲೇ ವರಸೆ ತೋರಿಸುತ್ತೀಯಲ್ಲಾ !"

"ಸ್ವಾಮಿ, ನೀವು ವಿಶ್ವವಿಖ್ಯಾತ ಗಾಮ ಇದ್ದಹಾಗಿದ್ದೀರಿ-ನಾನು ಬೆನಕನಹಟ್ಟಿ ಹನುಮ ಇದ್ದ ಹಾಗಿದ್ದೇನೆ. ನನಗೂ ನಿಮಗೂ ಜೋಡಿಯೆ! ಸೇವಕನಿಂದ ಏನಾಗಬೇಕು ಅಪ್ಪಣೆ ಕೊಡಿಸಿದರೆ ಸೇವೆ ಅರ್ಪಿಸಲು ಸಿದ್ಧ."

"ನೀನು ಯಾವದಾದರೂ ರಾಜಾಸ್ಥಾನದಲ್ಲಿರಬೇಕಾಗಿತ್ತೋ ಗುಂಡಾ. ಬರೀ ಮಾತಿನಲ್ಲೇ ಸ್ವರ್ಗದ ಹೆಬ್ಬಾಗಿಲು ತೋರಿಸುತ್ತೀ. ನತದೃಷ್ಟ ಮುಂಡೇಮಗ ನೀನು-ನಾಟಕದ ಕಂಪೆನಿ ಸೇರಿದ್ದೀ."

"ಮುಂದಿನ ಜನ್ಮದಲ್ಲಿಯಾದರೂ ರಾಜಾಸ್ಥಾನದ ಸೇವೆಯ ಭಾಗ್ಯ ಸಿಕ್ಕಲಿ ಎಂದು ಹರಸಿ ಸ್ವಾಮಿ."

"ನೀನು ಮುಂದಿನ ಜನ್ಮ ಹೊತ್ತು ಬರುವ ವೇಳೆಗೆ ರಾಜಾಸ್ಥಾನಗಳೇ ನಿರ್ಮೂಲವಾಗಿರುತ್ತವೆ."

"ರಾಜಾಸ್ಥಾನ ಹೋದರೆ ಅದಕ್ಕೆ ಸರಿಸಮವಾಗಿರುವ ಮತ್ತೆ ಯಾವದಾದರೂ ಸ್ಥಾನ."

"ಕಂಪೆನಿ ಬಲೇ ಬೇಜಾರಾಗಿಬಿಟ್ಟಿದೆ ಕಣೋ."

"ಇದೇನು ಸ್ವಾಮಿ ಹೀಗೆ ಹೇಳುತ್ತೀರಿ. ಹೊಸ ನಾಟಕ ತೆಗೆದು ಕೊಂಡಿದ್ದಾರೆ. ಅದರಲ್ಲಿ ನೀವೇ ಸರ್ವಸ್ವ. 'ಜಯಪಾಲ ಚರಿತ್ರೆ' ತಮ್ಮ ಭಾಗ್ಯದ ಭಾಗಿಲು ತೆರೆಸತ್ತೆ ಎಂದು ಯಜಮಾನರು ಲೆಕ್ಕ ಹಾಕಿಕೊಂಡು ಕುಳಿತಿದ್ದಾರೆ."

"ಲೆಕ್ಕ ಹಾಕದೆ ಏನು ಮಾಡುತ್ತಾರೆ ಹೇಳು. ಅವರಿಗೆ ಎಲ್ಲಾ ಅನುಕೂಲವಾಯಿತು. ನಾವು ತಾನೇ ಅಬ್ಬೇಪಾರಿಗಳು."

ದೊರೆಸ್ವಾಮಿಯ ಚಿಂತನೆಯ ಉತ್ತರಮುಖಿ ಯಾವ ದಿಕ್ಕನ್ನು ನಿರ್ದೇಶಿಸುತ್ತಿದೆಯೆಂಬುದನ್ನು ಗುಂಡೂ ಚೆನ್ನಾಗಿ ಬಲ್ಲ. ಅದನ್ನು ತೋರಿಸಿಕೊಳ್ಳದೆ

"ಕಂಪೆನಿ ಯಜಮಾನರ ಪಾಡು ಯಾರಿಗೂ ಬೇಡ. ಅವರ ಕಷ್ಟ ಅವರಿಗೇ ಗೊತ್ತು."

"ಅವರಿಗೇನಯ್ಯಾ ಕಷ್ಟ. ಗೌರಿ ಹೋದಳು ಸರಸ್ವತಿ ಬಂದಳು."

"ಮನೋಹರಿ ಹೋದಳು ಯಾರೂ ಬರಲಿಲ್ಲವೆಂದೇ ನಿಮ್ಮ ಸಂಕಟ?"

"ಒಂಟಿ ಬಾಳುವೆ ಮಾಡುವುದು ಕಷ್ಟ ಗುಂಡೂ."

"ನೀವು ಮದುವೆಯೇಕೆ ಮಾಡಿಕೊಳ್ಳಬಾರದು ದೊರೆಸ್ವಾಮಿಗಳೇ."

"ಮದುವೆ – ಮುಂಜಿಗೂ ನಾಟಕದವರಿಗೂ ದೂರ ಗುಂಡೂ. ಮದುವೆಯಾದ ಹೆಂಡತಿಯನ್ನು ಕಟ್ಟಿಕೊಂಡು ನಾನು ಊರೂರು ಅಲೆಯುವುದು ಸಾಧ್ಯವಿಲ್ಲ; ಅವಳನ್ನು ತೌರುಮನೆಯಲ್ಲಿಯೇ ಬಿಟ್ಟು ನಾನಿರುವುದೂ ಸಾಧ್ಯವಿಲ್ಲ. ನಮಗೆ ಈ ಮನೋಹರಿ–ನೀಲಾಂಬರಿ–ಶ್ವೇತಾಂಬರಿಯರೇ ಗತಿ. ಕಂತೆಗೆ ತಕ್ಕ ಬೊಂತೆ."

ಗುಂಡುವಿಗೆ ನಗೆ ತಡೆಯಲಾಗಲಿಲ್ಲ.

"ನೀವು ಜೀವನ ಬಹಳ ಚೆನ್ನಾಗಿ ಅರ್ಥ ಮಾಡಿಕೊಂಡಿದ್ದೀರಿ ದೊರೆಸ್ವಾಮಿಗಳೇ."

"ತಾನೇ ಅರ್ಥವಾಗುತ್ತೆ ಗುಂಡೂ.....ನೀನು ನನಗೊಂದು ಕೆಲಸ ಮಾಡಿಕೊಡಬೇಕಲ್ಲ."

" ಮೊದಲೇ ಕಂಪೆನಿ ಜನ ನನ್ನ ಮೇಲೆ ವಿಷ ಕಾರುತ್ತಾರೆ. ನೀವು ಹೇಳುವ ಕೆಲಸಗಳನ್ನೂ ಮಾಡಿಕೊಟ್ಟರೆ........"

" ನಾನಿರುವ ತನಕ ಯಾವ ಭಡವನದು ಏನಯ್ಯಾ ಭಯ ? ನಿನ್ನ ಮೇಲೆ ಚಕಾರ ಶಬ್ದವೆತ್ತಿದವನನ್ನು ಕಂಪೆನಿಯಿಂದ ಹೊರಗೆ ಹಾಕಿಸುತ್ತೇನೆ."

" ಇಂಥ ಕೆಲಸವೆಂದು ಹೇಳಿದರೆ ನನ್ನ ಕೈಯಲ್ಲಿ ಆಗುತ್ತದೋ ಇಲ್ಲವೋ ತಿಳಿಸುತ್ತೇನೆ."

" ನಿನ್ನ ಕೈಯಲ್ಲಿ ಆಗುವಂಥಾದ್ದೇ ! ಖದೀಮ–ನಿನ್ನ ಕೈಯಲ್ಲಿ ಆಗದೆ ಇರುವುದು ಯಾವುದು ?"

" ಹೇಳಿ ಸ್ವಾಮಿ."

" ಯಜಮಾನರ ದಾಂಪತ್ಯ ಕೂಡಿಸಿ ಪುಣ್ಯ ಕಟ್ಟಿಕೊಂಡೆ–ಹಾಗೇ ನನ್ನ ದಾಂಪತ್ಯವನ್ನೂ ಕೂಡಿಸಿ........"

" ವಧು !"

" ಮಂಜುಳಾ !"

" ಅವರಮ್ಮ ನನ್ನ ಸಿಗಿದುಹಾಕಿಬಿಟ್ಟಾಳು. ಬಿಡಿ ಬಿಡಿ–ಏನು ಮಾತು ಸ್ವಾಮಿ."

" ತಾಯಿಯಂತೆ ಮಗಳಲ್ಲವೇನೋ ಗುಂಡಾ."

" ಅದೇ ನಿಮ್ಮ ತಪ್ಪು ತಿಳಿವಳಿಕೆ. ಅನೇಕ ಸಲ ತಾಯಂದಿರು ದಾರಿ ಬಿಟ್ಟು ಹೋಗುವುದು ಮಕ್ಕಳ ಸಲುವಾಗಿಯೇ ! ಪಾಪ–ಇದು ಮದುವೆ ಕೂಡ ಆಗದ ಹುಡುಗಿ."

" ಮಂಜುಳಾ ಅನಾಘ್ರಾತ ಕುಸುಮವಲ್ಲ ಕಣೋ ಗುಂಡಾ. ಅವಳೂ ಸಾಕಷ್ಟು ಆಡಿಯೇ ಇಲ್ಲಿಗೆ ಬಂದಿದ್ದಾಳೆ. ಗೃಹಸ್ಥರಾಗಿದ್ದರೆ ನಾಟಕದ ಕಂಪೆನಿಗೆ ಏಕೆ ಬರುತ್ತಿದ್ದರೋ ?"

" ನಾಟಕದ ಕಂಪೆನಿ ಸೇರುವವರೆಲ್ಲಾ ಲಫಂಗರು ಎಂದೋ ನಿಮ್ಮ ಭಾವನೆ."

" ಅಲ್ಲ. ಲಫಂಗರಿಗೆ ನಾಟಕದ ಕಂಪೆನಿಯೇ ದಿಕ್ಕು ಎಂದು ನನ್ನ ಭಾವನೆ."

" ನಾವೆಲ್ಲಾ........"

“ದೊಡ್ಡ ಮನುಷ್ಯರು ಎಂದುಕೊಂಡು ಲೋಕದ ಕಣ್ಣಿಗೆ ಮಣ್ಣು ಹಾಕೋಣ – ಆದರೆ ನಮ್ಮ ಕಣ್ಣಿಗೇ ಮಣ್ಣು ಹಾಕಿಕೊಳ್ಳುವುದು ಬೇಡ.”

“ನಿಮ್ಮ ವಿಚಾರ ನಾನೊಪ್ಪದಿದ್ದರೂ ನಿಮ್ಮ ಮಾತಿಗೆ ತಲೆ ದೂಗುತ್ತೇನೆ.”

“ನನ್ನ ಕೆಲಸ ಏನು ಮಾಡುತ್ತೀ ಹೇಳು.”

“ನೀವೇ ಪ್ರಯತ್ನ ಮಾಡುತ್ತಿದ್ದಿರಿ.”

“ಅದೂ ಕಂಡುಕೊಂಡಿರುವೆಯಾ ?”

“ನಾನು ದೇವೇಂದ್ರನ ಪಾರ್ಟು ಮಾಡಿದ್ದೆ ದೊರೆಸ್ವಾಮಿಗಳೇ– ಮೈಯೆಲ್ಲಾ ಕಣ್ಣು.”

“ಹೌದಯ್ಯಾ ನೀನು ಸಾಕ್ಷಾತ್ ದೇವರಾಜ.”

“ಊರ್ವಶಿಯನ್ನು ಪುರೂರವನಲ್ಲಿ ಕಳಿಸಿಕೊಡುವ ಕೆಲಸ ಈಗ ದೇವರಾಜ ನಿರ್ವಹಿಸಬೇಕಾಗಿದೆ.”

“ದೇವರಾಜ ವಿಶ್ವಬಂಧುವಲ್ಲವೇ !”

“ವಿಶ್ವಬಂಧುತ್ವಕ್ಕೆ ಒಳ್ಳೆಯ ಅರ್ಥ ಕಲ್ಪನೆ ಮಾಡಿದಿರಿ ಬಿಡಿ.”

“ಅಭಯ ಕೊಡಯ್ಯಾ ದೇವರಾಜ.”

“ಹುತ್ತದಲ್ಲಿ ಕೈಯಿಡು ಎಂದು ಹೇಳುತ್ತಿರುವಿರಲ್ಲ.”

“ಗರುಡ ಮಂತ್ರ ಸಾಧಿಸಿಕೊಂಡಿದ್ದೀಯಲ್ಲ.”

“ಇದು ನಮ್ಮ ತನಕ ಬರುವ ವಿಷಯವೇ ಅಲ್ಲ ದೊರೆಸ್ವಾಮಿಗಳೇ– ನೀವು ನೀವೇ ಸರಿಮಾಡಿಕೊಳ್ಳಬೇಕು.”

“ಅದಕ್ಕೆ ನಾನು ಪ್ರಯತ್ನಿಸಿದೆ – ಮಂಜುಳನ ಮನೋಗತವೇ ಅರ್ಥ ವಾಗುವುದಿಲ್ಲ. ನನ್ನ ಮೇಲೆ ವಿಶ್ವಾಸವೂ ತೋರಿಸುತ್ತಾಳೆ – ನನ್ನ ದೂರವೂ ಇಟ್ಟಿದ್ದಾಳೆ.”

“ಅವಳಿಗೇ ಬೇಡವಾದ ಮೇಲೆ ನಾನೇನು ಮಾಡಲಿ ಸ್ವಾಮಿ.”

“ಬೇಡ ಅಂತಾ ಅಲ್ಲಯ್ಯ–ತಾಯಿ ಭಯವಿರಬೇಕು. ಅವರಮ್ಮನನ್ನು ಕುದುರಿಸಿದರೆ ಎಲ್ಲ ಸರಿಹೋಗುತ್ತದೆ.”

“ಸರಿಹೋಗದಿದ್ದರೆ !”

"ಸರಿಹೋಗದಿದ್ದರೆ ಹಾಳಾಗಲಿ – ಈ ಸುಡುಗಾಡು ಕಂಪೆನಿಯನ್ನೇ ಬಿಟ್ಟುಬಿಡುತ್ತೇನೆ."

ದೊರಸ್ವಾಮಿಯ ಬೆದರಿಕೆ ಗುಂಡನ ಮೇಲೆ ವಿಲಕ್ಷಣ ಪರಿಣಾಮ ವನ್ನುಂಟುಮಾಡಿತು. ಕಂಪೆನಿಯ ನಟರಲ್ಲಿ ದೊರಸ್ವಾಮಿಗೆ ಮಾತ್ರ ಭವಿಷ್ಯ ವಿದ್ದುದೂ, ಅವನು ಕಂಪೆನಿ ಬಿಟ್ಟುಹೋದರೆ ಆಗುವ ಅನರ್ಥವೂ ಗುಂಡನಿಗೆ ತಟ್ಟನೆ ಹೊಳೆಯಿತು. ದೊರೆಸ್ವಾಮಿಯ ನಿಷ್ಕ್ರಮಣಕ್ಕೆ ಕಾರಣರಾದ ಸರಸ್ವತಿ, ಮಂಜುಳಾ ಇವರ ಪರಿಸ್ಥಿತಿಯೂ ಕೆಡುವುದೆಂಬುದನ್ನು ಅವನು ತಿಳಿದುಕೊಂಡಿದ್ದ.

"ದುಡುಕಬೇಡಿ ಸ್ವಾಮಿ – ನನಗೆ ಸ್ವಲ್ಪ ಕಾಲಾವಕಾಶ ಕೊಡಿ. ಸರಸ್ವತಮ್ಮನ ಕೈಯಲ್ಲಿ ಮಾತನಾಡಿ ತಿಳಿಸುತ್ತೇನೆ."

"ಇನ್ನು ಎರಡು ಮೂರು ದಿನಸದಲ್ಲಿ ಈ ವಿಷಯ ಇತ್ಯರ್ಥವಾಗಿ ಬಿಡಬೇಕು."

ಎಂದು ದೊರೆಸ್ವಾಮಿ ಹುಕುಂ ದಯೆಪಾಲಿಸಿದ.

ಸರಸ್ವತಿಯ ಜತೆ ಆಪ್ತಾಲೋಚನೆ ಮಾಡುವುದಕ್ಕೆ ಗುಂಡನಿಗೆ ಮಾರನೆಯ ಬೆಳಿಗ್ಗೆಯವರೆಗೆ ಅವಕಾಶ ಸಿಕ್ಕಲಿಲ್ಲ. ಬೆಳಿಗ್ಗೆ ಯಜಮಾನರು ಥಿಯೇಟರಿನಲ್ಲಿದ್ದ ತಮ್ಮ ಕಛೇರಿಗೆ ದಯೆಮಾಡಿಸಿದ ಮೇಲೆ ಗುಂಡ ಮೆಲ್ಲನೆ ಸರಸ್ವತಿಯ ರೂಮು ಪ್ರವೇಶಿಸಿ

"ಏನಮ್ಮ ಏನು ಮಾಡುತ್ತಿದ್ದೀರಿ. ಕಾಫಿ ತಿಂಡಿ ಆಯಿತೋ ?"

"ಬನ್ನಿ ಗುಂಡೂರಾಯರೆ – ಕಾಫಿ ತರಿಸಿಕೊಡಲೇನು ?"

"ಬೇಡಿಯಮ್ಮ."

"ನಿಂತೇ ಇದ್ದೀರಲ್ಲಾ – ಕುಳಿತುಕೊಳ್ಳಿ".

ಗುಂಡೂ ಬಾಗಿಲು ಮುಂದಕ್ಕೆ ಮಾಡಿ ಸುತ್ತಿಟ್ಟಿದ್ದ ಹಾಸಿಗೆ ಒರಗಿ ಕೊಂಡು ಚಾಪೆಯ ಮೇಲೆ ಕುಳಿತ.

"ಏನಾದರೂ ವಿಶೇಷವಿತ್ತೇನು ?"

"ಇತ್ತು. ಅದಕ್ಕೇ ಬಂದೆ."

"ಏನು ಸಮಾಚಾರ."

"ನಿನ್ನೆ ನನಗೂ ದೊರೆಸ್ವಾಮಿಗಳಿಗೂ ತುಂಬ ಮಾತಾಯಿತು."

" ಯಾವ ವಿಷಯಕ್ಕೆ ? "

" ಹೇಳುತ್ತೇನೆ – ಅವರು ಕಂಪೆನಿ ಬಿಡುತ್ತಾರಂತೆ ! "

" ಹಾ ! — ಕಾರಣ ? "

" ಅಸೂಯೆ."

" ಯಾರ ಮೇಲೆ "

" ಯಜಮಾನರ ಮೇಲೆ."

" ಏಕೆ ? "

" ಅವರಿಗೆ ನಿಮ್ಮ ಸ್ನೇಹವಾಯಿತೆಂದು."

" ದೊರೆಸ್ವಾಮಿಗಳಿಗೆ ನನ್ನ ಮೇಲೆ ಮನಸ್ಸಿತ್ತೇ ? "

" ಅದನ್ನು ನಾನು ಕೇಳಲಿಲ್ಲ."

" ಹಾಗಾದರೇಕೆ ಅಸೂಯೆ."

" ಯಜಮಾನರ ವ್ಯವಸ್ಥೆ ನೆಟ್ಟಗಾಯಿತು – ನಮ್ಮ ಗತಿಯೇನು ಎಂದು ಕೇಳುತ್ತಾರೆ."

" ಇದೇನು ಮಾತು ಗುಂಡೂರಾಯರೇ "

" ಅರ್ಥವಿಲ್ಲದ ಮಾತಮ್ಮ – ಅರ್ಥವಿಲ್ಲದ ಮಾತು. ದೊರೆಸ್ವಾಮಿ ಮಹಾ ತಲೆಹೋಕ. ಈಗವನಿಗೆ ಗುರುದೆಶೆ ನಡೆಯುತ್ತಾ ಇದೆ. ಅವನು ಕೇಳಿದಷ್ಟು ಅಡ್ವಾನ್ಸ್ ಕೊಟ್ಟು ಕರೆದುಕೊಂಡು ಹೋಗಲು ಬೇರೆ ಕಂಪೆನಿಯವರು ಸಿದ್ಧವಾಗಿದ್ದಾರೆ."

" ಅವರು ಹೊರಟು ಹೋದರೆ 'ಜಯಪಾಲ ಚರಿತ್ರೆ' ಮೂಲೆಗೆ ಬೀಳುತ್ತದೆ."

" ನನಗೂ ಅದೇ ಯೋಚನೆ."

" ಮಂಜುಳನಿಗೆ ಕೀರ್ತಿ ತರುವ ಪಾರ್ಟೇ ಇಲ್ಲವಾಗುತ್ತದಲ್ಲಾ ಗುಂಡೂರಾಯರೇ. ಅವಳ ಪದ್ಮಿನಿ ಪಾತ್ರದ ಮೇಲೆ ನಾನು ಆಶಾಗೋಪುರ ಕಟ್ಟಕೊಂಡಿದ್ದೆ. ಪರಿಹಾರಕ್ಕೆ ಮಾರ್ಗವಿಲ್ಲವೇ ? "

" ಇದೆ."

" ಹೇಳುವುದಕ್ಕೆ ಅನುಮಾನಿಸುತ್ತಿರುವಿರಲ್ಲ."

" ವಿಷಯ ಅಂಥದ್ದು. ಕೇಳಿದರೆ ನಿಮಗೆ ಅಸಮಾಧಾನವಾಗಬಹುದು.."

"ಕಂಪೆನಿಯ ಹಿತ ಈಗ ನನಗೂ ಸೇರಿದ್ದು ಗುಂಡೂರಾಯರೇ"

"ಹೌದಮ್ಮಾ ಹೌದು. ಎಷ್ಟಾದರೂ ನೀವು ಯಜಮಾನಿತಿ !"

"ಹಾಸ್ಯ ಮಾಡುತ್ತಿರುವಿರಿ."

"ಉಂಟೇ ! ಇದ್ದ ಸಂಗತಿ ಹೇಳಿದೆ."

"ದೊರೆಸ್ವಾಮಿಗಳು ಕಂಪೆನಿ ಬಿಡದ ಹಾಗೆ ನೋಡಿಕೊಳ್ಳಬೇಕು ಗುಂಡೂರಾಯರೇ-ಅದಕ್ಕೇನು ಮಾಡಬೇಕು ಹೇಳಿ."

"ಅವರನ್ನು ನೀವು ಅಳಿಯನಾಗಿ ಸ್ವೀಕರಿಸಬೇಕು."

"ಮಂಜುಳಾ........"

"ಹೌದು ಮಂಜುಳಾ !"

"ಅವಳು ಒಪ್ಪಬೇಕಲ್ಲ."

"ಅವಳನ್ನೊಪ್ಪಿಸುವುದು ನಿಮ್ಮ ಭಾರ."

"ಮಂಜುಳಾ ಮಹಾ ಹಟಮಾರಿ."

"ನೀವೇ ಅವಳನ್ನು ಪಳಗಿಸಬೇಕು."

"ಯಜಮಾನರಿಗೆ ಅಸಮಾಧಾನವಾದರೆ........"

"ಆ ವಿಷಯ ನನಗೆ ಬಿಡಿ. ಯಜಮಾನರಿಗೆ ನಾನು ಉತ್ತರ ಹೇಳುತ್ತೇನೆ."

"ಈ ಬಗ್ಗೆ ನಿಮ್ಮ ಸಲಹೆಯೇನು ?"

"ಕಂಪೆನಿ ಒಡೆಯದಿರಬೇಕೆನ್ನುವುದೇ ನನ್ನ ಅಭಿಲಾಷೆ. ಇದೇ ನಮ್ಮ ಕಾಮಧೇನು."

"ಸ್ವಲ್ಪ ಕಾಲಾವಧಿ ಕೊಡಿ. ಮಂಜುಳನ ಜತೆ ಮಾತನಾಡಿ ತಿಳಿಸುತ್ತೇನೆ-"

"ಎರಡು ಮೂರು ದಿವಸಗಳಲ್ಲಿ ಇತ್ಯರ್ಥವಾಗಬೇಕೆಂದು ದೊರೆಸ್ವಾಮಿ ಬೆದರಿಕೆ ಹಾಕಿದ್ದಾನೆ."

"ಮುಂದಿನ ವಾರದಿಂದ 'ಜಯಪಾಲ ಚರಿತ್ರೆ' ಆರಂಭಿಸಬೇಕು. ಬೇಕಾದಷ್ಟು ಅಡ್ವರ್ಟೈಸ್ ಮಾಡಿದ್ದಾರೆ."

"ಅದೆಲ್ಲಾ ಲೆಕ್ಕ ಹಾಕಿಕೊಂಡೇ ದೊರೆಸ್ವಾಮಿ ಈ ಬಾಣ ಪ್ರಯೋಗಿಸಿದ್ದಾನಮ್ಮ

"ನೋಡೋಣ–ದೇವರಿದ್ದಾನೆ."

ಎಂದು ಸರಸ್ವತಮ್ಮ ಹೇಳಿದಳು. ಗುಂಡೂ 'ಅರ್ಧ ಕೆಲಸವಾಯಿತು' ಎಂದು ದೊರೆಸ್ವಾಮಿಗೆ ಭರವಸೆಯಿತ್ತ. ದೊರೆಸ್ವಾಮಿ ಆಕಾಂಕ್ಷೆ ಖಂಡಿತ ವಾಗಿಯೂ ಈಡೇರುತ್ತದೆಯೆಂದು ಗುಂಡೂ ನಂಬಿರಲಿಲ್ಲ.

ಗುಂಡೂ ಸಲಹೆಯನ್ನು ಹತ್ತಾರು ಸಾರಿ ಸರಸ್ವತಮ್ಮ ಅಳೆದು ಸುರಿದು ನೋಡಿದಳು. ಯಾವ ಯಾವ ದೃಷ್ಟಿಕೋನದಿಂದ ನೋಡಿದರೂ, ದೊರೆಸ್ವಾಮಿಯ ವೈಷಮ್ಯ ಕಟ್ಟಿಕೊಳ್ಳುವುದು ಸಮಂಜಸವಲ್ಲವೆಂದು ಅವಳಿಗೆ ತೋರಿ ಬಂದಿತು.

ಕಂಪೆನಿಮನೆಯಲ್ಲಿ ಎಲ್ಲರೂ ಒಟ್ಟಿಗೆ ವಾಸಮಾಡುತ್ತಿದ್ದರೂ ಮಂಜುಳಾ ಯಾರ ಸ್ನೇಹವನ್ನೂ ಬೆಳಸಿಕೊಳ್ಳುವ ಹವ್ಯಾಸಕ್ಕೆ ಹೋಗಿರಲಿಲ್ಲ. ಇತರರನ್ನು ಕಾಣುತ್ತಿದ್ದಂತೆ ಅವಳು ಸರಸ್ವತಮ್ಮನನ್ನು ಕಾಣುತ್ತಿದ್ದುದು ಕಂಪೆನಿಯ ಜನರಿಗೆ ವಿಚಿತ್ರವಾಗಿತ್ತು. ತಾನಾಗಿಯೇ ತಾಯಿಯ ಜತೆ ಮಾತನಾಡಲೂ ಮಂಜುಳಾ ಮುಂದುವರಿಯುತ್ತಿರಲಿಲ್ಲ.

ಗುಂಡೂರಾಯ ಹೋದಮೇಲೆ ಸರಸ್ವತಮ್ಮ ಮಗಳಿಗೆ ಹೇಳಿಕಳುಹಿಸಿ ಕರೆಸಿಕೊಂಡಳು. ಮಂಜುಳಾ ರೂಮಿನ ಬಾಗಿಲಿನ ಒಳಗೆ ಬಂದು ನಿಂತು

"ಏನಮ್ಮ–ಹೇಳಿಕಳಿಸಿದೆಯಂತೆ!" ಎಂದಳು.

"ಕೂತುಕೊ ಬಾ ಮಂಜುಳಾ. ಇದೇಕೆ ಹೀಗಾಡುತ್ತೀ ?"

"ಹೇಗಾಡುತ್ತಿದ್ದೇನೆ."

"ಪರಕೀಯರನ್ನು ಕಂಡಂತೆ ನನ್ನನ್ನು ಕಾಣುತ್ತಿರುವೆಯಲ್ಲಾ."

"ಸ್ವಕೀಯರು ಯಾರು, ಪರಕೀಯರು ಯಾರು ಎನ್ನುವುದೇ ನನಗೆ ಗೊತ್ತಿಲ್ಲ."

"ನಾನು ನಿನ್ನ ತಾಯಿಯಲ್ಲವೇನೇ ?"

"ಅಲ್ಲವೆನ್ನಲು ಸಾಧ್ಯವೇ ?"

"ನಿನ್ನ ಹಿತಾಹಿತ ನನಗೆ ಸೇರಿದ್ದಲ್ಲವೇ ?"

"ಆ ವಿಷಯ ಚರ್ಚೆಮಾಡುವುದು ಬೇಡ."

"ಕಳೆದುಹೋದುದನ್ನು ಜ್ಞಾಪಿಸಿಕೊಂಡು ಮನಸ್ಸಿಗೆ ವ್ಯಥೆ ತಂದು ಕೊಂಡರೆ ಏನು ಸಾರ್ಥಕ."

" ಸಾರ್ಥಕವಿಲ್ಲವೆನ್ನುವುದು ನನಗೆ ಗೊತ್ತಾಗಿದೆ."

" ನಿಮ್ಮನ್ನು ಮುಂದಕ್ಕೆ ತರಲು ನಾನು ಪಟ್ಟ ಕಷ್ಟ ನಿನಗೆ ಗೊತ್ತಿಲ್ಲವೇ ? "

" ನಮ್ಮನ್ನು ಮುಂದಕ್ಕೆ ತರಲು ನೀನು ಪ್ರಯತ್ನಪಟ್ಟೆ ಎನ್ನುವುದು ನಿಜ. ಆದರೆ ಅದಕ್ಕಾಗಿ ನೀನು ಕಷ್ಟಪಟ್ಟೆ ಎಂದು ಒಪ್ಪಿಕೊಳ್ಳಲಾರೆ."

" ಲೋಕ ನನಗೆ ಶತ್ರುವಾಗಿದೆ. ನನ್ನ ಮಕ್ಕಳೂ ಶತ್ರುಗಳಾಗುತ್ತಾರೆಂದು ನಾನು ಭಾವಿಸಿರಲಿಲ್ಲ."

" ನಿನ್ನ ಮಕ್ಕಳನ್ನು ನೀನು ಮಕ್ಕಳೆಂದು ಭಾವಿಸಲಿಲ್ಲ ; ಸವತಿಯರೆಂದು ಭಾವಿಸಿದೆ."

" ನನ್ನದು ತಪ್ಪಾಯಿತೆಂದು ಒಪ್ಪಿಕೊಂಡೆನಲ್ಲ."

" ಒಪ್ಪಿಕೊಂಡೆ. ಆದರೆ ನನ್ನ ಮನಸ್ಸಿನ ಗಾಯ ಮಾಗಿಲ್ಲ."

" ಮಾಗಿಸಲೆತ್ನಿಸಬೇಕು."

" ಹೇಗೆ ? "

" ನನ್ನಮಾತು ನೀನು ಕೇಳುವುದಾದರೆ ಮಾಗುತ್ತದೆ."

" ನಿನ್ನ ಮಾತು ನಾನು ಮೀರಿಯೇ ಇಲ್ಲವಲ್ಲ."

" ಅದು ನಿಜ. ಈಗ ನಾನು ಹೇಳುವುದೂ ಮೀರುವುದಿಲ್ಲತಾನೆ ? "

" ಅದರಿಂದ ನಿನಗೆ ಸುಖವಾಗುತ್ತದೆಯೋ."

" ನಿನಗೆ ಸುಖವಾಗುತ್ತದೆ."

" ನನ್ನ ಸುಖವನ್ನು ಎಂದೋ ಗಾಳಿಗೆ ತೂರಿಬಿಟ್ಟಿದ್ದೇನೆ. ನಿನಗೆ ಸುಖವಾಗುವ ಯಾವ ಕೆಲಸವನ್ನಾದರೂ ಮಾಡಲು ನಾನು ಸಿದ್ಧ."

" ನಿನ್ನ ಮಾತುಕೇಳಿ ನನಗೆ ತುಂಬ ವ್ಯಸನವಾಗುತ್ತದೆ ಮಂಜುಳಾ."

" ವ್ಯಸನಪಡುವುದು ನಿನ್ನ ಜಾಯಮಾನವೇ ಅಲ್ಲ. ಈಗ ನನ್ನಿಂದೇನಾಗ ಬೇಕು ಹೇಳು. ನೀನು ಹೇಳಿದ್ದು ಮಾಡುತ್ತೇನೆ."

" ನೀನು ಯಾವಾಗಲೂ ನನ್ನಮೇಲೆ ಕತ್ತಿಹಿರಿದು ನಿಲ್ಲುವುದು ತರವಲ್ಲ. ನಾನು ತಪ್ಪುಮಾಡಿದ್ದರೂ ನಿನ್ನ ಹಿತದ ಸಲುವಾಗಿಯೇ ಮಾಡಿರುವುದು."

" ನೀನು ಮಾಡಿದುದರ ಬಗ್ಗೆ ನಾನು ಚರ್ಚೆಮಾಡುತ್ತಲೇ ಇಲ್ಲವಲ್ಲ."

" ಮಕ್ಕಳೆಂದರೆ ನನಗೂ ಪ್ರೀತಿಯಿದೆ."

" ಚಿರತೆ, ಹುಲಿ, ಕಾಡುಕೋಣಗಳಿಗೇ ತಮ್ಮ ಮಕ್ಕಳನ್ನು ಕಂಡರೆ ಪ್ರೀತಿಯಿರುವಾಗ ಮನುಷ್ಯರಿಗೆ ಇಲ್ಲದೆ ಇರುತ್ತದೆಯೇ ? "

" ತಾಯಿತಂದೆ ಮಕ್ಕಳನ್ನು ಪ್ರೀತಿಸುವಷ್ಟು ಮಕ್ಕಳು ತಾಯಿತಂದೆಯನ್ನು ಪ್ರೀತಿಸುವುದಿಲ್ಲ."

" ಅದು ಪ್ರೀತಿ ಶಬ್ದಕ್ಕೆ ನಾವು ಕೊಡುವ ಅರ್ಥವನ್ನವಲಂಬಿಸುತ್ತದೆ. ಹೋಗಲಿ–ವೃಥಾ ಚರ್ಚೆಯೇಕೆ ?–ನಾನೇನು ಮಾಡಬೇಕು."

" ಯಾವದೊ ಧರ್ಮಕರ್ಮ ಸಂಯೋಗದಿಂದ ನಮಗೆ ಈ ನಾಟಕದ ಕಂಪೆನಿ ಗಂಟುಬಿದ್ದಿದೆ. ಇದರ ಆಶ್ರಯದಲ್ಲಿಯೇ ನಾವು ಬದುಕಬೇಕಾಗಿದೆ."

" ಹೌದು. ನಾನೂ ನನ್ನ ಕರ್ತವ್ಯ ನಿರ್ವಹಿಸುತ್ತಿರುವೆನಲ್ಲ."

" ಇಲ್ಲವೆಂದು ನಾನು ಹೇಳಿದೆನೇ ? ಕಂಪೆನಿಯಲ್ಲಿ ನಾವೂ ಇತರರ ಹಾಗೆ ಕೂಲಿಮಾಡಿಕೊಂಡಿದ್ದರೆ ಸಾಲದು."

" ಅದಕ್ಕೇನು ಮಾಡಬೇಕು ? "

" ಕಂಪೆನಿ ನಮ್ಮ ಕೈಯಲ್ಲಿಟ್ಟುಕೊಳ್ಳಬೇಕು."

" ನೀನು ಆ ಕೆಲಸ ಮಾಡಿಯೇ ಇದ್ದೀಯೆ."

" ಸಾಲದು–ನೀನೂ ಮಾಡಬೇಕಾಗಿದೆ."

" ನಾನೇನು ಮಾಡಬೇಕು."

" ಕಂಪೆನೀಗೆ ದೊರೆಸ್ವಾಮಿಗಳೇ ಆಧಾರಸ್ತಂಭ."

" ಹೌದು – ಅವರು ಒಳ್ಳೆಯ ನಟರು."

" ಈಗವರು ಕಂಪೆನಿ ಬಿಟ್ಟು ಹೋಗುವುದರಲ್ಲಿದ್ದಾರೆ."

" ಏಕೆ ? ಯಾರೇನು ಮಾಡಿದರು."

" ದೋಷ ನಮ್ಮ ತಲೆಗೆ ಸುತ್ತಿಕೊಂಡಿದೆ."

" ನಾವು ಯಾರೂ ಅವರ ಮನಸ್ಸು ನೋಯಿಸಿಲ್ಲ."

" ನೀನು ಅವರ ಕೈಯ್ಯಲ್ಲಿ ಸರಿಯಾಗಿ ಮಾತೇ ಆಡುವುದಿಲ್ಲವಂತೆ ! "

"ನಾಟಕಕ್ಕೆ ಎಷ್ಟುಬೇಕು ಅಷ್ಟು ಆಡುತ್ತಿದ್ದೇನೆ."

" ಮಾತು ಕತೆಯನ್ನೂ ರೇಷನ್ ಮಾಡುವುದಕ್ಕಾಗುತ್ತದೆಯೇ ? "

" ಅವರು ಬಯಸುತ್ತಿರುವುದು ಬರಿಯ ಮಾತನ್ನಲ್ಲ."

" ನಿನ್ನ ಸ್ನೇಹವನ್ನು."

" ಹೌದು."

" ನನ್ನ ಸ್ಥಿತಿಗತಿ ಚೆನ್ನಾಗಿದ್ದರೆ ಈ ವೇಳೆಗೆ ನಾನು ನಿನಗೆ ಮದುವೆ ಮಾಡಬೇಕಾಗಿತ್ತು."

" ಆ ಪ್ರಕರಣ ಮುಗಿದುಹೋಯಿತಲ್ಲ."

" ದೊರೆಸ್ವಾಮಿ ಅವಿವಾಹಿತರು."

" ಹಾಗೇನು ?"

" ಅವರನ್ನೇಕೆ ನಿರಾಕರಿಸುತ್ತೀ ?

" ಅವರೊಂದಿಗೆ ಸಂಸಾರ ಮಾಡಬೇಕೇನು ? "

" ಸ್ನೇಹದಿಂದಿರಲು ಅಭ್ಯಂತರವೇನು ? "

ಮಂಜುಳಾ ವಿಕಟ ನಗೆ ನಕ್ಕಳು. ಅವಳ ಹೃದಯಾಂಗಣ ಮಿಶ್ರ ಭಾವನೆಗಳ ರಣರಂಗವಾಗಿತ್ತು.

" ಮೈಯೊಪ್ಪಿಸಿಕೊಳ್ಳದೆ ಹೆಣ್ಣು ಬಾಳುವುದೇ ಸಾಧ್ಯವಿಲ್ಲ."

" ಇದು ಪುರುಷರ ಜಗತ್ತು ಮಂಜುಳಾ."

" ಬರಿಯ ಪುರುಷರಿಂದಲೇ ಜಗತ್ತು ಬೆಳೆಯುವುದಿಲ್ಲ.'

" ಹೌದು–ಆದರದನ್ನು ಪುರುಷರು ಅರ್ಥಮಾಡಿಕೊಂಡಿಲ್ಲ."

" ಅವರಿಗೆ ಅರ್ಥಮಾಡಿಸುವ ಪ್ರಯತ್ನ ಸ್ತ್ರೀಯರು ಮಾಡಿಲ್ಲ."

" ಪುರುಷ ಪುರುಷನಾಗಿಯೇ ಬಾಳಬೇಕಾಗಿಲ್ಲ–ಸ್ತ್ರೀ ಸ್ತ್ರೀಯಾಗಿಯೇ ಬಾಳಬೇಕಾಗಿದೆ. ಇದು ವಿಧಿನಿಯಮ."

" ನಾನು ಪುರುಷನಿಗೆ ಸ್ತ್ರೀಯಾಗಿ ಬಾಳುವ ಕಾಲ ಹೋಯಿತು."

" ಹಾಗೆಂದರೆ........"

" ಕುಡಿ ಮಿಡಿಯುತ್ತಿದ್ದ ಗಿಡಕ್ಕೆ ಆಡು ಬಾಯಿ ಹಾಕಿದರೆ ಗಿಡ ಕಮರುವುದಲ್ಲವೇ ? "

" ಕೆಲವು ಗಿಡಗಳು ಕಮರುವುದಿಲ್ಲ."

" ನಾನು ಆ ಜಾತಿಯೇ ? "

" ನೀನು ನನ್ನ ಮಗಳು. ಪ್ರಕೃತಿಯೊಂದಿಗೆ ಹೋರಾಡುವುದು ಮೌಢ್ಯ."

" ರಕ್ತಗುಣ ಪ್ರಬಲವಾದುದೆಂದು ವಿಜ್ಞಾನಿಗಳೂ ಹೇಳಿದ್ದಾರೆ."

" ನೋಡಿದೆಯಾ ! "

"ಆದರದನ್ನು ಮನುಷ್ಯ ಸ್ವಪ್ರಯತ್ನದಿಂದ ಅಡಗಿಸಬಹುದು."

"ಪ್ರಕೃತಿಯನ್ನಡಗಿಸಿದಲ್ಲಿ ಅದು ಸಿಡಿಯುತ್ತದೆ."

"ಮನುಷ್ಯನಿಗೂ ಮೃಗಕ್ಕೂ ವ್ಯತ್ಯಾಸವೇ ಇಲ್ಲವೇ ?"

"ಇದೆ – ಮನುಷ್ಯ ತನ್ನ ಸಂತೋಷ ತಾನು ಸೃಷ್ಟಿಸಿಕೊಳ್ಳಬಲ್ಲ."

"ಸಂತೋಷಸಾಧನೆಯೊಂದೇ ಮನುಷ್ಯನ ಗುರಿಯಲ್ಲ."

"ಅದು ಒಣ ವೇದಾಂತ. ಸಂತೋಷವಿಲ್ಲದ ಬಾಳು ಮನುಷ್ಯ ಏಕೆ ಬಾಳಬೇಕು."

"ಒಟ್ಟಿನಲ್ಲಿ ನೀನು ಹೇಳುತ್ತಿರುವುದೇನು ? ದೊರೆಸ್ವಾಮಿಗಳೊಂದಿಗೆ ನಾನು ಸ್ನೇಹ ಬೆಳಸಬೇಕೆಂದಲ್ಲವೇ ?"

"ನೀನು ಸಂತೋಷವಾಗಿರಬೇಕೆಂದು ನನ್ನ ಆಸೆ."

"ನನ್ನ ಸಂತೋಷದ ಮಾತು ಹಾಗಿರಲಿ. ನಿನಗೆ ಸಂತೋಷ ವಾಗುವುದಷ್ಟೆ !"

"ಕಂಪೆನಿಯಲ್ಲಿ ನಮ್ಮ ಸ್ಥಾನ ಭದ್ರವಾಗುವುದು."

"ನಿನ್ನ ಇಷ್ಟದಂತೆಯೇ ಆಗಲಿ."

ಎಂದು ಹೇಳಿ ಮಂಜುಳಾ ಅಲ್ಲಿ ನಿಲ್ಲದೆ ಹೊರಕ್ಕೆ ಬಂದುಬಿಟ್ಟಳು.

ಮಂಜುಳಾ ಆಡಿದ ಮಾತುಗಳು ಸರಸ್ವತಮ್ಮನ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡದಿರಲಿಲ್ಲ. 'ನಾನು ಮಾಡುತ್ತಿರುವುದು ಸರಿಯೇ? ನನ್ನ ಬಾಳಿನಂತೆಯೇ ಮಂಜುಳನ ಬಾಳನ್ನೂ ರೂಪಿಸುತ್ತಿರುವೆನಲ್ಲಾ!' ಎನ್ನುವ ಪ್ರಶ್ನೆ ಎದ್ದಿತು. ಅದಕ್ಕೆ ತಾನೇ ಉತ್ತರ ಕೊಡಲೆತ್ನಿಸಿದಳು. 'ಇನ್ನೇನು ಮಾಡಬೇಕು – ಒಬ್ಬಂಟಿಗಳಾಗಿ ಅವಳಾದರೂ ಎಷ್ಟು ದಿನವಿರಲು ಸಾಧ್ಯ ? ಆ ಸ್ಕೂಲ್ ಮೇಷ್ಟ್ರ **ಸ್ಮೃತಿ** ಅವಳು ಮರೆಯಬೇಕಾದರೆ ದೊರೆಸ್ವಾಮಿಯ ಸ್ನೇಹವೇ ಗತಿ.'

ಶ್ರೀಕಂಠಮೂರ್ತಿ, ದೊರೆಸ್ವಾಮಿ ಇಬ್ಬರನ್ನೂ ಕೈಯಲ್ಲಿಟ್ಟುಕೊಂಡು ತಾನು ಕಂಪೆನಿಯನ್ನು ಆಳಬಹುದೆಂಬ ಧೈರ್ಯ ಅವಳ ಮನಸ್ಸಿನಲ್ಲಿ ನಾಟಿತು.

ತಾಯಿಯ ರೂಮಿನಿಂದ ಮಂಜುಳಾ ಹೊರಬಿದ್ದುದನ್ನು ಸುಧಾ ಕಂಡಿದ್ದಳು. ಅದೇ ವೇಳೆಗೆ ಪೋಸ್ಟ್‌ಮನ್ ಬಂದು ಕೈಯಲ್ಲಿಟ್ಟ ಕಾಗದ ತೆಗೆದುಕೊಂಡು ತಾಯಿಯ ಬಳಿಗೆ ಬಂದಳು.

"ಯಾರದೇ ಸುಧಾ ಕಾಗದ."

"ನಿನ್ನ ಹೆಸರಿಗೆ ಬಂದಿದೆಯಮ್ಮ. ಬೆಂಗಳೂರ ಮುದ್ರೆ ಇದೆ."

ಸರಸ್ವತಮ್ಮ ಆತುರದಿಂದ ಕಾಗದ ಒಡೆದು ಗಟ್ಟಿಯಾಗಿಯೇ ಓದಲಾರಂಭಿಸಿದಳು.

ಬೆಂಗಳೂರು.
೧೭ ಶನಿವಾರ

ಮಾ॥ಶ್ರೀ॥ ಅಕ್ಕನವರ ಸ॥ಕ್ಕೆ. ಬಾಲಕಿಯ ನಮಸ್ಕಾರಗಳು. ಉಭಯ ಕುಶಲೋಪರಿ – ಸಾಂಪ್ರತ.

ನೀವು ಬೆಂಗಳೂರು ಬಿಟ್ಟು ಹೋದಮೇಲೆ ಒಂದೂ ಕಾಗದ ಬರೆಯಲಿಲ್ಲ. ಅಮ್ಮ ನಿಮ್ಮನ್ನು ನೆನಸಿಕೊಂಡು ದುಃಖಪಡುತ್ತಿದ್ದಾಳೆ. ನಾನು ಸ್ಕೂಲಿಗೆ ಹೋಗುವುದನ್ನು ಬಿಟ್ಟಿದ್ದೇನೆ. ಅಣ್ಣಯ್ಯನೂ ಹುಣ್ಣಿಮೆಗೋ ಅಮಾವಾಸೆಗೋ ಬರುತ್ತಾರೆ. ಬಂದಾಗಲೆಲ್ಲಾ ನಿಮ್ಮನ್ನು ಕೇಳುತ್ತಾರೆ. ಈ ಕಾಗದ ಅವರ ಕೈಗೇ ಕೊಟ್ಟು ಪೋಸ್ಟು ಮಾಡಿಸುತ್ತಿದ್ದೇನೆ. ನೀವು ಇಲ್ಲಿಗೆ ಯಾವಾಗ ಬರುತ್ತೀರಿ.

ಮನೆಯೆಲ್ಲಾ ಲೊಳಲೊಳ ಆಗಿದೆ. ಮೂರು ದಿನದಿಂದ ಉಪಾಸ. ಬಡವರನ್ನು ಮರೆಯಬಾರದೆಂದು ಬೇಡಿಕೊಳ್ಳುತ್ತೇನೆ. ನಿಮ್ಮ ಕ್ಷೇಮ ಸಮಾಚಾರಕ್ಕೆ ಒಂದು ಕಾರ್ಡು ಬರೆಯಿರಿ.

ಇಂತೀ ನಮಸ್ಕಾರಗಳು
'ಪುಟ್ಟ'

ಕಾಗದದ ಒಕ್ಕಣೆ ನೋಡಿ ಸುಧೆಯ ಕಣ್ಣಲ್ಲಿ ನೀರೂರಿತು.

"ಕಾಗದ ಬರಿಯಮ್ಮ" ಎಂದಳು.

"ಬರೆಯುತ್ತೇನೆ ಸುಧಾ. ಸ್ವಲ್ಪ ಅನುಕೂಲವಾದರೆ ಬೆಂಗಳೂರಿಗೂ ಹೋಗಿ ಬರುತ್ತೇನೆ. ನನ್ನ ಕಷ್ಟಕಾಲದಲ್ಲಿ ಮುತ್ತಮ್ಮ ಸಹಾಯ ಮಾಡಿದಳು. ಈಗವಳನ್ನು ಮರೆತರೆ ದೇವರು ಮೆಚ್ಚುತ್ತಾನೆಯೇ ?"

"ಸ್ವಲ್ಪ ದುಡ್ಡು ಕಳಿಸಿದರೆ ಒಳ್ಳೆಯದು."

“ ಖಂಡಿತ ಕಳಿಸುತ್ತೇನೆ ಗುಂಡೂರಾಯರಿದ್ದರೆ ಇಲ್ಲಿಗೆ ಬರಹೇಳು.” ಎಂದಳು.

ಸುಧೆ ಹೊರಗೆ ಹೋಗಿ ಗುಂಡೂರಾಯನನ್ನು ಕಳಿಸಿಕೊಟ್ಟಳು. ಗುಂಡೂರಾಯ ಬಂದಕೂಡಲೆ

“ ಸ್ವಲ್ಪ ಹಣ ಕೊಡುತ್ತೇನೆ – ಮನಿಯಾರ್ಡರ್ ಮಾಡುತ್ತೀರಾ ? ”

“ ಯಾರಿಗಮ್ಮಾ”

“ ನನ್ನ ಹಿತೈಷಿಗಳೊಬ್ಬರು ಬೆಂಗಳೂರಿನಲ್ಲಿದ್ದಾರೆ ಅವರಿಗೆ.”

“ ಅವಶ್ಯಕವಾಗಿ ಆಗಲಿ.”

ಸರಸ್ವತಮ್ಮ ಐವತ್ತು ರೂಪಾಯಿ, ಮೇಲೆ ಖರ್ಚಿಗೆ ಒಂದು ರೂಪಾಯಿ ಗುಂಡೂ ಕೈಯಲ್ಲಿಟ್ಟು, ಮುತ್ತಮ್ಮನ ವಿಳಾಸ ಗುರುತುಹಾಕಿಕೊಟ್ಟು

“ ಮರೆಯಬೇಡಿ ಇವತ್ತೇ ಕಳಿಸಿಬಿಡಿ.” ಎಂದಳು.

“ ಈಗಲೇ ಕಳಿಸಿಬರುತ್ತೇನಮ್ಮಾ. ನಾನು ಹೇಳಿದ ವಿಷಯ ಏನು ಮಾಡಿದಿರಿ.”

“ ಆ ವಿಷಯ ಈಗ ತಾನೆ ಮಂಜು ಹತ್ತಿರ ಮಾತನಾಡಿದೆ.”

“ ಅವಳೇನು ಹೇಳಿದಳು ? ”

“ ಇದರ ವ್ಯವಸ್ಥೆ ಹೇಗೆ ? ದೊರೆಸ್ವಾಮಿಗಳು ತಿಂಗಳಿಗಿಷ್ಟು ಎಂದು ಕೊಡುತ್ತಾರೋ – ಒಟ್ಟಿಗೆ ಏನಾದರೂ ಕೊಡುತ್ತಾರೋ ? ”

“ ನೀವು ಹೇಗೆ ಹೇಳಿದರೆ ಹಾಗೆ.”

“ ಹತ್ತು ಸವರನ್ನದು ಒಂದು ಸರ – ಎರಡೆರಡು ಸವರನ್ನದು ಒಂದು ಜೊತೆ ಬಳೆ ಮೊದಲು ಮಾಡಿಸಿ ತರಲಿ – ಅನಂತರ ತಿಂಗಳಿಗೆ ಐವತ್ತು ರೂಪಾಯಿ ಕೊಟ್ಟುಕೊಂಡು ಹೋಗಲಿ. ಆಗಬಹುದೋ ? ”

“ ಕೇಳಿ ನೋಡುತ್ತೇನೆ. ಅವರು ಒಪ್ಪಬಹುದು.”

“ ಒಡವೆಗಳು ಬರುವವರೆಗೆ ಮುಂದಿನ ಮಾತು ಸಾಗಲಾರದು ಎಂದು ಹೇಳಿಬಿಡಿ ಗುಂಡೂರಾಯರೇ ? ”

“ಒಡವೆಗಳು ಬರಬೇಕಾದರೆ ಎಂಟು ಹತ್ತು ದಿವಸವಾದರೂ ಆಗುತ್ತದೆ”

“ಆದರೆ ಆಗಲಿ – ಅಷ್ಟರಲ್ಲಿಯೇ ಏನು ಪ್ರಾಣ ಹೋಗುವುದು.”

“ ಹಾಗೇ ಆಗಲಮ್ಮ ಹೇಳಿ ಒಪ್ಪಿಸುತ್ತೇನೆ.”

"ಸದ್ಯಕ್ಕೆ ವಿಷಯ ಗೋಪ್ಯವಾಗಿರಲಿ."

"ನಾಟಕದ ಕಂಪೆನಿಯಲ್ಲಿ ಮುಚ್ಚುಮರೆ ಸಾಧ್ಯವೇನಮ್ಮ ?"

"ವಿಷಯ ತಾನಾಗಿಯೇ ಹೊರಗೆ ಬಂದರೆ ಬರಲಿ–ಆದರೆ ನಾವಾಗಿಯೇ ಡಂಗುರ ಸಾರುವುದು ಬೇಡ."

"ಅದೂ ನ್ಯಾಯವೇ ?"

"ಮಂಜುವಿಗೆ ಸಾಕಷ್ಟು ಬಟ್ಟೆಬರೆ ಇಲ್ಲ. ಅದನ್ನೂ ಸ್ವಲ್ಪ ಗಮನಿಸಿ ಎಂದು ಹೇಳಿ."

"ಅದೆಲ್ಲಾ ನಾವೇಕಮ್ಮ ಹೇಳಬೇಕು. ವಿಶ್ವಾಸ ಬೆಳೆದರೆ ತಾವೇ ತಂದುಕೊಡುತ್ತಾರೆ."

ಎಂದು ಗುಂಡೂರಾಯ ಸೂಚಿಸಿದ.

೬

ಮುತ್ತಮ್ಮ ಒಳ್ಳೆಯ ಲವಲವಿಕೆಯಿಂದ ನಿತ್ಯಗೆಲಸದಲ್ಲಿ ಮಗ್ನಳಾಗಿದ್ದಳು. ದೋಸೆ ತರುವುದಕ್ಕೆ ಭಾಗ್ಯಮ್ಮ ಹೊಟೇಲಿಗೆ ಹೋಗಿದ್ದಳು. ಪುಟ್ಟ ಇನ್ನೂ ಏಳುವ ಪ್ರಯತ್ನದಲ್ಲಿಯೇ ಇದ್ದಳು.

ಪುಟ್ಟ ಎದ್ದು ಆಕಳಿಸುತ್ತಾ ಮುತ್ತಮ್ಮನ ಎದುರಿಗೆ ನಿಂತಾಗ

"ಟೇಮ್ ಎಷ್ಟೇ ಮೂದೇವಿ" ಎಂದಳು.

"ಎಷ್ಟೋ – ನನಗೇನು ಗೊತ್ತು."

"ಅತ್ತು ಗಂಟೆಗೆ ಬಂತಲ್ಲೇ – ಇಂಗಾದರೆ ನೀನು ಬಾಳಿ ಮುಂಡ ಮೋಚಿಕೊಂಡೆ."

"ತಿಂಡಿ ಏನಿದೆ ?"

"ದೋಸೆ ತರಾಕೆ ಬಾಗ್ಯಮ್ಮ ಓಗವ್ಳೆ. ಮುಖ ತೊಳೀತೀಯೋ ಅಂಗೇ ಗದುಗ್ತೀಯೋ ?

ಪುಟ್ಟ ಅರೆಕ್ಷಣದಲ್ಲಿ ಮುಖ ತೊಳೆದ ಶಾಸ್ತ್ರ ಮುಗಿಸಿ ಬಂದಳು. ಭಾಗ್ಯಮ್ಮ ದೋಸೆ ತರಲು, ಮೂವರೂ ಕುಳಿತು ಕಂಠಪೂರ್ತಿ ಹೊಡೆದು,

ಮನೆಯಲ್ಲಿ ಮಾಡಿದ್ದ ಕಾಫಿ ಕುಡಿದರು. ಭಾಗ್ಯಮ್ಮನ ಕಾಲು ಹೆಚ್ಚು ಹೊತ್ತು ಮನೆಯಲ್ಲಿ ನಿಲ್ಲದೆಂದು ತಿಳಿದಿದ್ದ ಮುತ್ತಮ್ಮ

"ಇವತ್ತು ನೀನೆಲ್ಲಿಗೂ ಓಗಬೇಡಮ್ಮ. ನಾನು ಒಸಿ ಪೇಟೆ ಕಡೆ ಓಗಿ ಬತ್ತೀನಿ."

"ಕೆಲಸಾ ಐತಾ ?"

"ಹೊಸದು ಹೊಸದು ಎಂತಾ ರಾಮುರಾಜಪ್ಪ ಬಡ್ಕೋತಾನೆ."

"ಬಡ್ಕೋತಾನೆ ಎಂತಾ ಯಾಕಂತೀಯೇ ಅಕ್ಕ. ಮಾರಾಯ – ಅನ್ನ ಕೊಟ್ಟು ಕಾಪಾಡನ್ನೆ."

"ರಾಮುರಾಜಪ್ಪನ ಮ್ಯಾಕೆ ನಂಕಿಲ್ದ ಪಿರೀತಿ ನಿಂಕೆ ಬಂದು ಬುಡ್ತಾ."

"ಮಾತಿಗಂಪೆ ನನ್ಮವ್ವ. ಸದ್ಯ ನನ್ಮ್ಯಾಕೆ ಯವ್ವಾರಕ್ಕೆ ಬರಬೇಡ."

ಅವರ ಪ್ರೇಮಕಲಹ ನಡೆದಿದ್ದಂತೆ ರಾಮುರಾಜಪ್ಪನೇ ಬಂದ. ಅವನ ಮುಖ ನೋಡಿ ಮುತ್ತಮ್ಮ ಹಿಗ್ಗಿನಿಂದ

"ಬಾಪ್ಪಾ – ನಿಂಕೆ ನೂರು ವರ್ಸ ಆಯಸ್ಸು ನೋಡು."

"ಯಾಕಮ್ಮ."

"ನಿನ್ನ ಮಾತೇ ಆಡ್ತಿದ್ವು. ಭಾಗ್ಯಮ್ಮ ನಿನ್ನ ಪರ ವಕೀಲಿ ಮಾಡ್ತಿದ್ಲು. ನಾನು ಬಯ್ತಿದ್ದೆ."

"ನೀನೇಕಮ್ಮ ನನ್ನ ಬಯ್ಯಬೇಕು."

"ಉಪಕಾರ ಮಾಡ್ದೋರ್ನ ಬಯ್ದೆ ಅಪಕಾರ ಮಾಡ್ದಿರೋರ್ನ ಬಯ್ದರೆ ಆಗ್ತೈತಾ ರಾಮುರಾಜೂ."

ಮುತ್ತಮ್ಮನ ಮಾತಿಗೆ ಗಹಗಹಿಸಿ ನಗುತ್ತಾ ರಾಮುರಾಜಪ್ಪ ಒಳಕ್ಕೆ ಬಂದು ಕುಳಿತ. ಮುತ್ತಮ್ಮನೂ ಅವನನ್ನನುಸರಿಸಿ ಬಂದು ಗೋಡೆಯೊರಗಿ ಕೊಂಡು ಕುಳಿತಳು.

'ಕಾಫಿ ತಿಂಡಿ ಆಯ್ತಾ."

"ಇದೇ ಆಯ್ತಪ್ಪ ನಿಂಗೆ ಕಾಫಿ ತರ್ಸಿ ಕೊಡ್ಲಾ."

"ಬೇಡಮ್ಮ – ಎಲ್ಲಾ ಮುಗಿಸಿಕೊಂಡು ಬಂದಿದ್ದೀನಿ."

"ನಾನೂ ಪೇಟೆ ಕಡೆ ಒಲ್ಟಿದ್ದೆ."

" ಸರಿ – ಹೋಗಿ ಹೋಗಿ ಅವೇ ಹಳೇ ಜೋಬದ್ರಗಳ್ನೇ ಹಿಡ್ಕೊಂಡು ಬರ್ತಿ."

" ಇಲ್ಲಪ್ಪಾ – ಒಸ ಉಡುಗಿ ನೋಡಿದ್ದೀನಿ."

" ಎಲ್ಲಿದ್ದಾಳೆ."

" ಜುಮ್ಮಾಮಸೀದಿ ತಾವ ಇದ್ದಾಳೆ. ಊದಕಡ್ಡಿ ಉಜ್ಜೋಕೆ ಓಗ್ತಾಳೆ."

" ಚೆಂದಾಗಿದ್ದಾಳೆಯೋ ?"

" ನೀನು ನೋಡು ಆಮ್ಯಾಕೆ ಮಾತು – ಬಡವಿ, ಬಟ್ಟೆಬರೆ ಇಲ್ಲ. ಕಣ್ಣು ಮೂಗು ನ್ಯಾರವಾಗೈತೆ–ಕೆಂಪೂ ಅಲ್ಲ ಕಪ್ಪೂ ಅಲ್ಲ–ನಂಗೊತ್ತೈತಪ್ಪಾ–ನೀನು ಪಸಂದು ಮಾಡ್ತಿ."

" ವಯಸ್ಸು."

" ಹದಿನೆಂಟು ಇಪ್ಪತ್ತಿರಬಹುದು."

" ಮಕ್ಕಳು ಗಿಕ್ಕಳು . . ."

' ಎಲ್ಲಿ ಬಂತಪ್ಪ – ಮಕ್ಕಳೂ ಇಲ್ಲ, ಮರಿಯೂ ಇಲ್ಲ."

" ಇವಳು ಬರೋದು ಖಂಡಿತವೋ ?"

" ನಾನು ಒಂಟಿದ್ದೆ – ಜತೇಲಿ ಕರ್ಕೊಂಡು ಬರ್ತೀನಿ."

" ಇನ್ನೊಂದು ಕೆಲ್ಸವಾಗಬೇಕಲ್ಲ ಮುತ್ತಮ್ಮ.'

" ಏಳಪ್ಪಾ – ನಿನ್ನ ಮಾತು ಕಾಲಿ ಮಾಡಾಕಿಲ್ವಲ್ಲಾ."

" ಹಿಂದೆ ಇಬ್ಬರು ನನ್ನ ಸ್ನೇಹಿತರು ಬಂದಿದ್ರು– ಜ್ಞಾಪಕ ಇದೆಯೇ ?"

" ಇದೆ – ಅವರ ಹೆಸರು ಏನೂ ಎಂದೆ ?"

" ವೀರಣ್ಣ – ಸೋಮಸುಂದರಂ. ಅವರಿಂದ ಈಗ ನನಗೆ ದೊಡ್ಡ ಕೆಲಸವಾಗಬೇಕಾಗಿದೆ. ಇವತ್ತು ಅವರನ್ನು ಸ್ವಲ್ಪ ಖುಷಿಮಾಡಿಸೋಣ ಎಂತಿದ್ದೀನಿ – ನೀನು ಎಲ್ಲಾ ಅಚ್ಚುಗಟ್ಟು ಮಾಡಿದರೆ ನನ್ನ ರೊಟ್ಟಿ ಜಾರಿ ತುಪ್ಪದಲ್ಲಿ ಬೀಳುತ್ತೆ."

" ನಿನ್ನ ರೊಟ್ಟಿ ತುಪ್ಪದಾಗೆ ಬಿದ್ರೆ ನನ್ನ ರೊಟ್ಟಿಯೂ ತುಪ್ಪದಾಗೆ ಬಿದ್ದಂಗೆ ! – ಏನಾಗಬೇಕು ಏಳು. ತಿನ್ನಾಕ ಆಗ್ಬೇಕಾ."

" ಹೂ . . . ಕುಡಿಯೋಕೂ ಆಗ್ಬೇಕು."

" ಅಡಿಗೆ ನಾನು ಮಾಡಿಸ್ತೀನಿ – ಕುಡಿಯಾಕ ನೀನೇ ತಂದ್ಬುಡಪ್ಪ."

" ಹಾಗೇ ಆಗಲಿ. ನನಗಂತೂ ಹೊಸದು ಆಗತ್ತೆ–ಅದರ ಹೆಸರೇನು ?"

" ಪಾಪಮ್ಮ."

" ಅವರಿಬ್ಬರಿಗೆ ? "

" ಬಾಯಿಾನ ಬಾಲೂನ ಬರೇಳ್ತೀನಿ."

" ಅವರಲ್ಲಿ ಯಾರಾದರೂ ಕಳಚಿಕೊಂಡರೆ ಭರ್ತಿಮಾಡು ಮುತ್ತಮ್ಮ. ಇಲ್ಲದಿದ್ದರೆ ಎಲಾ ಆಭಾಸವಾಗಿ ಬಿಡುತ್ತೆ."

" ನಿನ್ಕೆಲಸ ಎಂದಿಗಾದ್ರೂ ನಾನು ಕೆಡಿಸ್ತೀನೇನಪ್ಪ ? "

" ಇಲ್ಲ ಸರಿ – ಸಂಜೆ ಆರಕ್ಕೆ ನಾವು ಬಂದು ಬಿಡೋಣವೋ ? "

" ಆರಕ್ಕೆ ಬಂದು . . . "

" ಬೆಳಿಗ್ಗೆ ಹೋಗೋದು."

" ರಾತ್ರಿಯಿದ್ರೆ ಪೋಲೀಸಿನೋರ ಕಾಟ ಐತಲ್ಲಪ್ಪಾ."

" ಸಬ್ ಇನ್ಸ್ಪೆಕ್ಟರ್ ಶ್ರೀಕಂಠಯ್ಯನೇ ನಿನ್ನ ಭಕ್ತನಾಗಿರುವಾಗ ಪೋಲೀಸಿನವರಿಗೆ ಏಕೆ ಹೆದರಬೇಕು ಮುತ್ತಮ್ಮ."

" ಅವನಿಲ್ಲಪ್ಪ – ಇದ್ದಿದ್ರೆ ಬಯಮೇ ಇರ್ತಿರಲಿಲ್ಲ."

" ಎಲ್ಲಿಗೆ ಹೋದ ? "

"ಆನೇಕಲ್ಲಿಗೆ ವರ್ಗಮಾಡಿದ್ರಂತೆ."

" ಪೋಲೀಸಿನವರ ವಿಷಯ ನನಗಿರಲಿ ಬಿಡು – ಈ ಡಿವಿಷನ್ ಇನ್ಸ್ಪೆಕ್ಟರ್ ನೋಡಿ ನಾನು ಬಂದೋಬಸ್ತು ಮಾಡುತ್ತೇನೆ."

" ನಾನು ಧೈರ್ಯವಾಗಿರಲೇನಪ್ಪಾ."

" ನಿಶ್ಚಿಂತೆಯಾಗಿರು."

" ನಾನೀಗ ಪೇಟೆಗೆ ಯಾಕ ಓಗಲಿ – ಉಂಡುಕೊಂಡು ಒಂದೇ ಸಾರಿ ಓಗಿ ಬತ್ತೀನಿ. ಜತೇಲಿ ಭಾಗ್ಯಮ್ಮನ್ನ ಕರ್ಕೊಂಡು ಒಗಿ ಅವಳ್ಕೈಲಿ ಸಾಮಾನು ಕೊಟ್ಟು ಕಳಿಸ್ತೀನಿ. ಅವಳು ತರಕಾರಿ ಎಚ್ತಿದ್ದಂಗೆ ನಾನು ಉಡುಗೀರ್ನ ಕಟ್ಕೊಂಡು ಬತ್ತೀನಿ."

" ಹಾಗೇ ಮಾಡು. ಪುಟ್ಟ ಎಲ್ಲಿ ಹೋದಳು ? "

" ಚಂಬೇಲಿ ಮುಂಡೆ – ಎಲ್ಲಿ ಅಲೆಯೋಕೆ ಓಗವ್ಳೋ ? "

" ಎನ್ನುತ್ತಿರುವಂತೆ ಪುಟ್ಟ ಉತ್ಸಾಹದಿಂದ ಓಡಿ ಬಂದು

" ಅಮ್ಮಾ – ಮಣಿಯಾರ್ಡರ್ ಬಂದೈತೆ."

" ಯಾರದೇ ಮಣಿಯಾರ್ಡರ್ – ನಂಗೆ ! "

" ಅಕ್ಕಯ್ಯ ಕಳಿಸವ್ಳೆ– ದಾವಣಗೆರೆಯಿಂದ."

" ಅಂಚೆಯಾಳು ಬಂದು ಮನಿಯಾರ್ಡರ್ ಹಣ ಮುತ್ತಮ್ಮನ ಕೈಗಿತ್ತು ಹೋಗಲು ಪುಟ್ಟ

" ಅದು ನಂದು – "

" ನಿಂದು – ಭೋಕಷ್ಟಪಟ್ಟು ಸಂಪಾದಿಸವ್ಳೆ ! "

" ಪುಟ್ಟ ರಾಮರಾಜಪ್ಪನ ಕಡೆ ತಿರುಗಿ

" ನೋಡು ಅಣ್ಣಯ್ಯಾ – ಅಕ್ಕಯ್ಯನಿಗೆ ನಾನು ಬರೆದ ಕಾಗದ ಸೀನೇ ಪೋಷ್ಟಿಗೆ ಹಾಕಲಿಲ್ಲವೇ ಅಣ್ಣಯ್ಯ. ದುಡ್ಡು ನನಗೆ ಅಂತಾ ಅಕ್ಕಯ್ಯ ಕಳಿಸಿದರೆ ಅಮ್ಮ ಏನು ಹೇಳ್ತಾಳೆ ನೋಡು."

" ತಮಾಷೆಗಂದಳು ಪುಟ್ಟಾ. ನಿನಗೇ ಖರ್ಚು ಮಾಡುತ್ತಾಳೆ. ಅವಳೇನು ನಿನ್ನ ಹಣ ನುಂಗಿಕೊಳ್ಳುತ್ತಾಳೆಯೇ ? "

" ಅಮ್ಮಾ – ನಂಗೆ ಒಳ್ಳೇ ಸೀರೆ ತೆಕ್ಕೊಡಬೇಕು."

" ಇರಲಿ ಹೋಗೇ ಬೇವಾರ್ಸಿ "

ಎಂದು ಮುತ್ತಮ್ಮ ಗದರಿಸಿಕೊಂಡಳು.

" ದುಡ್ಡು ಸರಸ್ವತಿ ಕಳಿಸಿದ್ದಾಳೆಯೇ ಮುತ್ತಮ್ಮ"

ಎಂದು ರಾಮರಾಜಪ್ಪ ಕೇಳಿದನು.

" ಪುಟ್ಟ ಒಂದು ಕಾಗಜ ಬರೆದ್ರೆ ಹಣ ಕಳಿಸಿದಳಲ್ಲಪ್ಪ – ಬಲು ಒಳ್ಳೆಯವಳಪ್ಪ ಆಯಮ್ಮ."

" ಅವಳಿಗಷ್ಟು ಕ್ರಿಯಾ ಇದೆಯಲ್ಲಾ ಸಂತೋಷ. ಸರಸ್ವತಮ್ಮ ಈ ಕಡೆ ಬರೋದೇ ಇಲ್ಲವ್ರೋ ? "

" ಇನ್ನೊಬ್ಬ ಅಂಚೆಯಾಳು ಬಂದು ಮುತ್ತಮ್ಮನ ಕೈಗೆ ಕಾಗದ ಕೊಟ್ಟು ಹೋದ. ಅದನ್ನವಳು ರಾಮರಾಜಪ್ಪನ ಕೈಗಿತ್ತು ' ಓದಪ್ಪಾ' ಎಂದಳು. ರಾಮರಾಜಪ್ಪ ಕಾಗದ ಒಡೆದು ಓದಿದ.

ದಾವಣಗೆರೆ

೨೧ ಬುಧವಾರ

ಶ್ರೀಮತಿ ಮುತ್ತಮ್ಮನವರ ಸ॥ ಕ್ಕೆ.

ನೀವು ಚಿ॥ ಪುಟ್ಟನ ಕೈಲಿ ಬರೆಸಿದ ಕಾಗದ ಬಂದು ತಲುಪಿತು. ೧೭ನೆಯ ತಾ॥ ಬರೆದ ಕಾಗದ ನನ್ನ ಕೈಗೆ ಇವತ್ತೆ ಬಂತು. ಪುಟ್ಟ ಬರೆದಿರುವುದನ್ನು ಓದಿ ಮನಸ್ಸಿಗೆ ತುಂಬ ವ್ಯಥೆಯಾಯಿತು. ಸದ್ಯ ಕೈಯಲ್ಲಿದ್ದ ಐವತ್ತುರೂಪಾಯಿಗಳನ್ನು ಕಳಿಸಿದ್ದೇನೆ.

ಮ॥ ರಾ॥ ರಾಮರಾಜಪ್ಪನವರು ನನ್ನನ್ನು ಮರೆತಿಲ್ಲವೆಂದು ಕೇಳಿ ಸಂತೋಷವಾಯಿತು. ಈಚೆಗೆ ಸಾಹುಕಾರ ನಂಜಪ್ಪನವರು ಅತ್ತಕಡೆ ಬಂದಿದ್ದರೇ ?

ಬೆಂಗಳೂರಿಗೆ ಬಂದು ನಿಮ್ಮನ್ನೆಲ್ಲಾ ನೋಡಿಕೊಂಡು ಬರಬೇಕೆಂದು ತುಂಬ ಮನಸ್ಸಾಗಿದೆ. ಆದರೆ ಇಲ್ಲಿಂದ ಹೊರಡುವುದಕ್ಕೇ ಆಗುತ್ತಿಲ್ಲ. ನಿತ್ಯ ನಾಟಕ. ನಾಟಕಗಳು ಚೆನ್ನಾಗಿ ನಡೆದಿವೆ. ನಿಮ್ಮ ದಯದಿಂದ ನನ್ನ ಸ್ಥಿತಿಯೂ ಸುಧಾರಿಸಿದೆ. ಯಜಮಾನರು ತುಂಬ ಒಳ್ಳೆಯವರು.

ದಾವಣಗೆರೆ ಕ್ಯಾಂಪು ಮುಗಿದು ನಾವು ಬೇರೆ ಊರಿಗೆ ಹೋಗುವ ಮಧ್ಯ ಸ್ವಲ್ಪ ದಿವಸ ಪುರಸತ್ತು ಸಿಕ್ಕುತ್ತದೆ. ಆಗ ಬೆಂಗಳೂರಿಗೆ ಬಂದು ನಿಮ್ಮೆಲ್ಲರನ್ನೂ ಕಾಣುತ್ತೇನೆ. ಮ॥ ರಾ॥ ರಾಮರಾಜಪ್ಪನವರಿಗೂ, ಸಾ॥ ನಂಜಪ್ಪನವರಿಗೂ ನನ್ನ ನಮಸ್ಕಾರ ತಿಳಿಸಿ.

ಇಂತು ನಿಮ್ಮ "ಸರಸ್ವತಮ್ಮ"

"ಪುಟ್ಟನ ಕಾಗಜ ನಾಲ್ಕು ದಿವ್ನ ಯಾಕೆ ತಡವಾಯ್ತು."

"ನನ್ನದೇ ತಪ್ಪು ಮುತ್ತಮ್ಮ. ಪೋಸ್ಟ್ ಮಾಡೋದೆ ಮರೆತು ಬಿಟ್ಟೆ. ಸರಸ್ವತಿಗೆ ಇನ್ನೂ ಬೆಂಗಳೂರಿನ ಗೀಳು ಬಿಟ್ಟಿಲ್ಲ."

"ನಿನ್ನ ಕಂಡರೆ ಅವಳಿಗೆ ಪ್ರಾಣ ರಾಮರಾಜಪ್ಪ."

"ಸರಿ – ನನ್ನೊಬ್ಬನನ್ನು ಕಂಡರೇ ಏನು ? ನಂಜಪ್ಪನನ್ನೂ ಜ್ಞಾಪಿಸಿಕೊಂಡಿದ್ದಾಳೆ."

" ಗುಣಸ್ತೆ – ಅದಕ್ಕೆ ಅವಳು ಯಾರನ್ನೂ ಮರೆಯಾಕಿಲ್ಲ."

" ಕಂಪೆನಿಯಲ್ಲಿ ಎಲ್ಲಾ ಅನುಕೂಲವಾಗಿರುವಾಗ ಬೆಂಗಳೂರು ಚಪಲ ಏಕೆ ? ?

ರಾಮರಾಜಪ್ಪನ ಅಜ್ಞಾನಕ್ಕೆ ಮುತ್ತಮ್ಮ ನಕ್ಕು

" ರಾಮರಾಜಪ್ಪ – ನಿನಗಿನ್ನೂ ಪರಪಂಚ ಗೊತ್ತಿಲ್ಲ ಕಣಪ್ಪಾ."

" ನಿನ್ನ ಲೋಕಾನುಭವದ ಮುಂದೆ ನನ್ನದೇನು ಮುತ್ತಮ್ಮ."

" ನೋಡು–ಗಂಡು ದಾರಿ ಬಿಟ್ಟು ಓದರೆ ಮತ್ತೆ ದಾರೀಗೆ ಬರಬೋದು– ಎಣ್ಣು ದಾರಿ ಬಿಟ್ಟು ಓದರೆ ಓದಂಗೇ !—ಆದರೆ ಗಂಡು ದಾರಿ ಬಿಡಾದು ಸುಲಬ – ಹೆಣ್ಣು ದಾರಿ ಬಿಟ್ಟು ಓಗೋದು ಕಷ್ಟ."

" ಹೊಟ್ಟೆಗಿಲ್ದೆ ಹೆಂಗಸರು ಈ ಕಸುಬು ಮಾಡ್ತಾರೆ – ಸರಸ್ವತಮ್ಮನಿಗೆ ಎಲ್ಲಾ ಅನುಕೂಲವಾಗಿದೆಯಲ್ಲಾ."

" ಸರಸೋತಮ್ಮನ್ನ ತೃಪ್ತಿಪಡ್ಸೋ ಗಂಡ್ಸು ಈ ಲೋಕದಲ್ಲಿ ಉಟ್ಟಿಲ್ಲ ರಾಮರಾಜಪ್ಪ. ತುಪ್ಪ ಆಕಿ ಬೆಂಕಿ ಆರಿಸೋಕೆ ಓಗೋರು ಇವರು."

" ಎಲ್ಲರೂ ಹೀಗೆ ಇರುತ್ತಾರೆಯೇ ಮುತ್ತಮ್ಮ."

" ಛೆ ! ಎಲ್ಲಾದರೂ ಉಂಟಾ ! ಅಚ್ಚಮ್ಮ ಇದ್ಲು ನೋಡು—ಅವಳ ಸಂಸಾರ ನ್ಯಾರವಾಯ್ತು – ಗಂಭೀರವಾಗಿ ಒಂಟೋದಳು – ಈಗ ಮರ್ರ್‍ಯಾದೆ ಯಾಗವ್ಳೆ."

" ಇದು ಯಾಕೆ ಹೀಗಾಗುತ್ತೆ ಮುತ್ತಮ್ಮ."

" ಅದೊಂದು ಥರಾ ರೋಗ ಕಣಪ್ಪಾ."

" ಚಿಕಿತ್ಸೆ."

" ಬಗವಂತನಿಗೇ ಗೊತ್ತು. ಸರಸೋತಮ್ಮಂಗೆ ಒಂದು ಕಾಗಜ ಬರ್‍ಕೊಡಪ್ಪಾ"

ಎಂದು ಮುತ್ತಮ್ಮ ಎದ್ದು ಹೋಗಿ ಪುಟ್ಟಿಯ ನೋಟ್‌ಬುಕ್ಕಿನಿಂದ ಒಂದು ಹಾಳೆ ಹರಿದು ತಂದು ರಾಮರಾಜಪ್ಪನ ಕೈಯಲ್ಲಿತ್ತಳು. ಅವಳು ಹೇಳಿದಂತೆ ರಾಮರಾಜಪ್ಪ ಒಂದು ಕಾಗದ ಬರೆದು ಅದರ ಅಡಿಯಲ್ಲಿ

" ನೀನು ಬರುವ ವಿಷಯ ಮುತ್ತಮ್ಮ ತಿಳಿಸಿದಳು. ಇಷ್ಟು ದಿವಸ ಗಳಾದರೂ ನೀನು ನನ್ನನ್ನು ಮರೆಯದಿರುವುದು ನನಗೆ ತುಂಬ ಸಂತೋಷ

ವನ್ನುಂಟುಮಾಡಿದೆ. ನಿನ್ನನ್ನು ನೋಡಲು ನಾನು ತುಂಬ ಕಾತರನಾಗಿದ್ದೇನೆ. ಕ್ಯಾಂಪು ಬದಲಾಯಿಸುವ ಸಮಯದಲ್ಲಿ ನಾಲ್ಕು ದಿವಸ ಅನುಕೂಲ ಮಾಡಿಕೊಂಡು ಖಂಡಿತ ಬಂದು ಹೋಗು,

ನಿನ್ನ 'ರಾಮರಾಜಪ್ಪ' "

ಎಂದು ಬರೆದು ಮುತ್ತಮ್ಮನಿಗೆ ಓದಿ ಹೇಳಿದ.

" ಸರಸೋತಮ್ಮನಿಗೆ ಏನಾಗಿದೆ ಎಂದು ಕೇಳಿದೆಯಲ್ಲಾ – ನೀನೇನು ಕಮ್ಮಿ " ಎಂದಳು.

ರಾಮರಾಜಪ್ಪ ಅವಳ ಪ್ರಶ್ನೆಗೆ ಉತ್ತರ ಹೇಳದೆ ನಕ್ಕು

" ನಿನ್ನ ಖರ್ಚಿಗೆಷ್ಟು ಬೇಕು."

"ಕೊಡಪ್ಪಾ – ನನ್ನೇನು ಕೇಳ್ತೀ ?"

" ಹೇಗೂ ನಿನ್ನ ಕೈಯಲ್ಲಿ ದುಡ್ಡಿದೆಯಲ್ಲಾ !"

" ಹಂಗೇ ಆಗಲಿ ಬುಡು. ನಾನೇ ಎಲ್ಲಾ ತತ್ತೀನಿ."

" ಬೇಡಮ್ಮ ಬೇಡ – ನಿನ್ನ ಋಣ ನನಗ್ಯಾಕೆ ಹೇಳು."

ಎಂದು ಮುತ್ತಮ್ಮನ ಕೈಯಲ್ಲಿ ಮೂವತ್ತು ರೂಪಾಯಿ ಹಾಕಿ

" ಆರಕ್ಕೆ ಸರಿಯಾಗಿ ಬಂದುಬಿಡುತ್ತೇನೆ."

" ಬಾಟ್ಲ ನೀನೇ ತಂದುಬುಡ್ತಿ ತಾನೆ."

" ಹೂ ! ನಾನೇ ತರುತ್ತೇನೆ. ಉಳಿದ ವಿಷಯ ಯಾವುದೂ ಖಾಲಿ ಮಾಡಬೇಡ"

ಎಂದು ಹೇಳಿ ಅವಳ ಮನೆಯಿಂದ ಹೊರಬಿದ್ದ.

೭

ಗುಂಡೂ ತನ್ನ ಬುದ್ಧಿವಂತಿಕೆಯನ್ನೆಲ್ಲಾ ವ್ಯಯ ಮಾಡಿ ಸರಸ್ವತಿ ಹೇಳಿದ್ದ ಮಾತನ್ನು ಬಹಳ ನಯವಾಗಿ ದೊರೆಸ್ವಾಮಿಗೆ ಒಪ್ಪಿಸಿದ. ಅವನು ಹೇಳಿದುದನ್ನು ಕೇಳಿ ದೊರೆಸ್ವಾಮಿ ಕಿಡಿಕಿಡಿಯಾದ.

"ಅವಳು ಹೇಳಿದ್ದು ಕೇಳಿಕೊಂಡು ನೀನು ಸುಮ್ಮನೆ ಬಂದೆಯಲ್ಲಾ ಗುಂಡೂ."

"ನಾನೇನು ಮಾಡಬೇಕಾಗಿತ್ತು ದೊರೆಸ್ವಾಮಿಗಳೇ."

"ಹೀಗೆ ಮನುಷ್ಯನ ರಕ್ತ ಹೀರಬಾರದು ಎಂದು ಹೇಳಬೇಕಾಗಿತ್ತು."

"ನಾನು ಹೇಳಿದ್ದರೆ ಏನಾದರೂ ಪ್ರಯೋಜನವಾಗುತ್ತಿತ್ತೇ ?"

"ನನ್ನ ಕೊಂಪೆ ಕೂಲಿಹೋಗುತ್ತದಲ್ಲಯ್ಯಾ."

"ನೋಡಿ ಸ್ವಾಮಿ – ಮಂಜುಳ ಬೇಕೆಂದು ಬಯಸುತ್ತಿರುವವರು ನೀವಲ್ಲದೆ, ನೀವು ಬೇಕೆಂದು ಅವಳು ಬಯಸುತ್ತಿಲ್ಲ. ನಿಮ್ಮ ಬಯಕೆ, ಅವಳ ಬಯಕೆ ಒಂದೇ ಆಗಿದ್ದರೆ ಮಾತೇ ಬೇರೆ ಇರುತ್ತಿತ್ತು."

"ಗುಡ್ಡಶೆಟ್ಟಿಯರಿಗಿಂತಲೂ ಇವರು ಕಡೆಯಾದರಲ್ಲ."

"ನೃತ್ತಿಗಿಳಿದ ಮೇಲೆ ಗುಡ್ಡಶೆಟ್ಟಿಯಾರು, ಘನ ನಾಯಕಸಾನಿಯಾರು ದೊರೆಸ್ವಾಮಿಗಳೇ. ಪ್ಲೇಗಿಗಿಂತ ಕಾಲರಾ ಮೇಲು ಎಂದು ಹೇಳಿದ ಹಾಗಾಯಿತು."

"ಈ ವಿಷಯ ಏನು ಮಾಡೋಣ ?"

"ಅದಕ್ಕೆ ನಾನೇನು ಹೇಳಲಿ. ನಿಮ್ಮ ಸಂತೋಷ ಹೇಗಿದ್ದರೆ ಹಾಗೆ ಮಾಡಬಹುದು."

"ತಿಂಗಳಿಗೆ ಐವತ್ತು ರೂಪಾಯಿ ಕೊಡುತ್ತೇನೆ. ಸದ್ಯಕ್ಕೆ ಬಳೆ ಮಾಡಿಸಿಕೊಳ್ಳಲಿ. ಸರ ಇನ್ನು ಯಾವಾಗಲಾದರೂ ಮಾಡಿಸಿಕೊಡುತ್ತೇನೆ."

"ನಾನೊಂದು ಮಾತು ಹೇಳಲೋ ?"

"ಹೇಳು."

"ಈ ಸಹವಾಸವೇ ಬೇಡ ಬಿಟ್ಟುಬಿಡಿ. ಇದೇ ದುಡ್ಡು ಖರ್ಚು ಮಾಡಿ ಸರಿಯಾಗಿರುವ ಕಡೆ ನೋಡಿ ಮದುವೆಮಾಡಿಕೊಳ್ಳಿ. ಎಷ್ಟಾದರೂ ಹೊಟೇಲ್ ಊಟ ಹೊಟೇಲ್ ಊಟವೇ – ಮನೆಯೂಟ ಮನೆಯೂಟವೇ"

"ಮಂಜುಳನನ್ನು ಹೇಗೆ ಮರೆಯಲೋ ಗುಂಡೂ."

"ಇಷ್ಟು ಚಪಲವಿರುವವರು ದುಡ್ಡಿನ ಮುಖ ಏಕೆ ನೋಡುತ್ತೀರಿ. ದೊರೆಸ್ವಾಮಿಗಳೇ. ದುಡ್ಡಿಗೇನು ನಿಮಗೆ ಕೊರತೆಯೇ ?"

"ಸದ್ಯಕ್ಕೆ ಕೊರತೆಯಿಲ್ಲ ಗುಂಡೂ. ನಾಟಕದ ಬಾಳು ಸ್ಥಿರವೇ

ಹೇಳು. ನಾಳೆ ಕಂಪೆನಿ ದಿವಾಳಿ ತೆಗೆದರೆ ನಮ್ಮ ಗತಿಯೇನು ? ಕೈನಡೆಯುವಾಗಲೇ ನಾಲ್ಕು ಕಾಸು ಮಾಡಿಕೊಳ್ಳಬೇಡವೇ ?"

"ಕಜ್ಜಾಯ ಸವೆಯಲೂ ಬಾರದು, ತಿಂದದ್ದೂ ಆಗಬೇಕೆಂದರೆ ಹೇಗೆ ಸಾಧ್ಯ ಸ್ವಾಮಿ.'

"ಯಜಮಾನರು ಕಾಸುಗೀಸು ಕೊಟ್ಟಾರೋ ?"

"ಏತಕ್ಕೇಂತ ಕೇಳುತ್ತೀರಿ ?"

"ಅಡ್ವಾನ್ಸ."

"ಸರಸ್ವತಮ್ಮ, ಅವಳ ಮಕ್ಕಳನ್ನು ಕಂಪೆನಿಗೆ ಕರೆತರುವುದಕ್ಕೆ ಅಡ್ವಾನ್ಸ್ ತೆತ್ತಿದ್ದಾರೆ ; ಹೊಸ ನಾಟಕಕ್ಕೆ ಸಾಮಾನು ಮಾಡಿಸುವುದಕ್ಕೆ ಬೇಕಾದಷ್ಟು ಖರ್ಚು ಮಾಡಿದ್ದಾರೆ ; ಈಗ ಕಂಪೆನಿ ಕ್ಯಾಂಪು ಬದಲಾಯಿಸಬೇಕಾಗಿದೆ, ಅದಕ್ಕೆ ಬೇರೆ ಖರ್ಚು – ಈ ಸಮಯದಲ್ಲಿ ಯಜಮಾನರನ್ನು ಹಿಂಸೆ ಮಾಡುವುದು ನ್ಯಾಯವೇ ?"

"ನೀನೇನಯ್ಯಾ, ಮಗುವನ್ನು ಚಿಗುಟಿಯೂ ಚಿಗುಟುತ್ತೀ, ತೊಟ್ಟಿಲೂ ತೂಗುತ್ತೀ."

"ಕೇಳಿ ಸ್ವಾಮಿ. ನಾನೇಕೆ ಬೇಡವೆನ್ನಲಿ."

"ಅದರ ರಾಯಭಾರವನ್ನೂ ನೀನೇ ವಹಿಸಬೇಕು."

"ಅನಿಷ್ಟಕ್ಕೆಲ್ಲಾ ಶನೀಶ್ವರನನ್ನೇ ಗುರಿ ಮಾಡುತ್ತೀರಲ್ಲಾ !"

"ನೀನು ಶನೀಶ್ವರ ಅಲ್ಲವೋ ಗುಂಡಾ–ಸಾಕ್ಷಾತ್ ದೇವರ್ಷಿ ನಾರದ."

"ಯಜಮಾನರು ಒಪ್ಪದೆ ಹೋದರೆ !"

"ಒಪ್ಪದೆ ಇರಲಿ. ಆವಾಗ ತೋರಿಸುತ್ತೇನೆ ನನ್ನ ವರಸೆ. ಯಜಮಾನರ ಹತ್ತಿರ ಈ ವಿಷಯ ಯಾವಾಗ ಪ್ರಸ್ತಾಪಮಾಡುತ್ತೀ ?"

"ಇವತ್ತೋ ನಾಳೆಯೋ ಮಾಡುತ್ತೇನೆ ಸ್ವಾಮಿ."

ಎಂದು ಗುಂಡ ಅರೆಮನಸ್ಸಿನಿಂದ ಒಪ್ಪಿಕೊಂಡ.

ಕಂಪೆನಿ ಮನೆಯಲ್ಲಿ ಯಜಮಾನರನ್ನು ಸಂಧಿಸಿ ಈ ವಿಷಯ ಪ್ರಸ್ತಾಪಿಸುವುದು ಉಚಿತವಲ್ಲವೆಂದು ಮಾರನೆಯ ಬೆಳಿಗ್ಗೆ ಗುಂಡ ಥಿಯೇಟರ್ ಕಛೇರಿಗೆ ಹೋದ. ಬಂದಿದ್ದವರೆಲ್ಲಾ ತೊಲಗಿ ಹೋಗಲು ಶ್ರೀಕಂಠಮೂರ್ತಿ ಗುಂಡನ ಕಡೆ ತಿರುಗಿ

"ನಿನ್ನದೇನಪ್ಪಾ ರಾಮಾಯಣ" ಎಂದ.

"ನನ್ನ ಸ್ವಂತದ್ದು ಏನೂ ಇಲ್ಲ ಸ್ವಾಮಿ."

"ಇನ್ನು ಯಾರದು ಏನಿದೆ ಹೇಳು – ಅಹವಾಲು."

"ದೊರೆಸ್ವಾಮಿಗಳಿಗೆ ತುರ್ತು ಹಣ ಬೇಕಂತೆ!"

"ಹಣ – ಯಾವ ಹಣ? ಅವನದೇನೂ ಬಾಕಿಯಿಲ್ಲವಲ್ಲ."

"ಅಡ್ವಾನ್ಸ್."

"ಎಷ್ಟು ಬೇಕಂತೆ."

"ಒಂದೇ ಸಾವಿರ."

"ಸಾಕಂತೇನು? ಅವರಪ್ಪ ಇಲ್ಲಿ ಗಂಟುಕಟ್ಟಿಟ್ಟು ಹೋಗಿದ್ದಾನೆ. ಇವರೆಲ್ಲಾ ಸೇರಿಕೊಂಡು ನನ್ನ ದಿವಾಳಿ ತೆಗೆಸಬೇಕೂಂತ ಮಾಡಿರುವ ಹಾಗೆ ಕಾಣುತ್ತದೆ. ಕಂಪೆನಿ ಮುಚ್ಚಿಬಿಟ್ಟು ನಾನು ಹೊಲ ಉಳುವುದಕ್ಕೆ ಹೋಗಿಬಿಡುತ್ತೇನೆ ಸುಮ್ಮನಿರು. ಥಿಯೇಟರಿನೋನು ಬೇರೆ ನೋಟೀಸ್ ಕೊಟ್ಟಿದ್ದಾನೆ."

"ಏಕೆ?"

"ಸ್ವಜನಾಭಿಮಾನ. ಸಾಹುಕಾರ ರುದ್ರಪ್ಪನ 'ಶ್ರೀಶೈಲ ಕಂಪೆನಿ' ಬರತ್ತಂತೆ."

"ನಮ್ಮ ಗತಿ."

"ಶಿವಮೊಗ್ಗೆಯೋ ಸಾಗರವೋ ಹುಡುಕಿಕೊಳ್ಳಬೇಕು."

"ಜಯಪಾಲ ಚರಿತ್ರೆ ಇಲ್ಲಿ ಆಡುವ ಹಾಗೇ ಇಲ್ಲ."

"ಇಲ್ಲ ಮುಂದಿನ ಕ್ಯಾಂಪಿನಲ್ಲಿ ಅದೇ ಮೊದಲನೆ ನಾಟಕ. ದೊರೆಸ್ವಾಮಿಗೂ ಈಗಲೇ ಹಣಕ್ಕೆ ಅವಸರವೇ?"

"ನಾನೇನು ಹೇಳಲಿ ಸ್ವಾಮಿ – ನಾಟಕದವರ ಹಣೇಬರಹವೇ ಇದಾಯಿತು."

"ಏನು ಮಾಡಲೋ ಗುಂಡಾ – ಅವನನ್ನು ಬಿಡಲೂ ಆರೆ, ಕಟ್ಟಿಕೊಳ್ಳಲೂ ಆರೆ."

"ಈಗವನನ್ನು ಬಿಟ್ಟರೆ ಶ್ರೀಶೈಲದವರು ನುಂಗಿಬಿಡುತ್ತಾರೆ – ಜಯಪಾಲ ಚರಿತ್ರೆ ಮೂಲೆಪಾಲಾಗುತ್ತದೆ."

“ಅದೇ ನನ್ನ ಸಂಕಟ. ಇವನ ಅವಾಂತರ ಪೂರೈಸುವುದಕ್ಕಾಗುವುದಿಲ್ಲ ಗುಂಡಾ – ಬೇರೆಯೊಂದು ಆಸಾಮಿ ಸಿದ್ಧಮಾಡಿಕೊಂಡಿರಬೇಕು.”

“ನಮ್ಮ ಕೆಲಸವೂ ಆಗಬೇಕು. ಶ್ರೀಶೈಲದ ರುದ್ರಪ್ಪನ ಸೊಂಟವೂ ಮುರಿಯಬೇಕು. ಅಂಥಾ ಉಪಾಯ ಇದೆ.”

“ಏನು ಹೇಳು ನೋಡೋಣ.”

“ಶ್ರೀಶೈಲದ ಕಂಪೆನಿ ಯಾರ ಬಲದ ಮೇಲೆ ನಡೆಯುತ್ತಿದೆ ಗೊತ್ತೋ ?”

“ಯಾರ ಬಲ ?”

“ಅಣ್ಣಯ್ಯನ ಬಲ.”

“ಯಾವ ಅಣ್ಣಯ್ಯನಯ್ಯಾ.”

“ನೀವು ಅವನನ್ನು ನೋಡಿದ್ದೀರಿ ಸ್ವಾಮಿ. ಅಗಳೀ ಕಂಪೆನಿಯಲ್ಲಿ ಬಾಲಕನ ಪಾರ್ಟುಮಾಡ್ತಾ ಇದ್ದ ನೋಡಿ.”

“ಇರಬಹುದು. ಬಹಳ ದಿವಸವಾಯಿತು. ಮರೆತುಹೋಗಿದೆ. ಅವನು ಅಷ್ಟು ಚೆನ್ನಾಗಿ ಪಾರ್ಟು ಮಾಡುತ್ತಾನೆಯೇ ?”

“ಕಂಪೆನಿ ಅವನದೇ ಆಧಾರ ಸ್ವಾಮಿ. ಸೊಗಸಾಗಿ ಹಾಡುತ್ತಾನೆ– ಆಸಾಮಿ ಒಳ್ಳೆಯ ಮನ್ಮಥ ಇದ್ದಹಾಗಿದ್ದಾನೆ. ಅವನ ಮಾತು ಕೇಳೋಕೇ ಜನ ಮುಕ್ಕರಿಸುತ್ತಾರೆ.”

“ಏನಾದರೂ ಮಾಡಿ ಅವನನ್ನು ಹಾರಿಸಬೇಕಲ್ಲೋ ಗುಂಡಾ – ತನ್ನ ಪಾರ್ಟು ಮಾಡೋಕೆ ಇನ್ನೊಬ್ಬ ಇದ್ದಾನೆಯೆಂದರೆ ದೊರೆಸ್ವಾಮಿ ಬಾಲ ಮುದುರಿಹೋಗುತ್ತದೆ.”

“ಅಣ್ಣಯ್ಯನ ಮಾತಾಡಿಸಿ ನೋಡಲೇನು ?”

“ಗೊತ್ತೇಮಾಡಿಬಿಡು – ಶ್ರೀಶೈಲದವರು ನಮಗೆ ಕೈ ಕೊಡುತ್ತಿದ್ದಾರೆ. ನಮ್ಮ ಕೈ ಚುರುಕು ಅವರಿಗೂ ಸ್ವಲ್ಪ ಮುಟ್ಟಲಿ. ಆದರೀ ವಿಷಯ ನಮ್ಮಿಬ್ಬರಲ್ಲೇ ಇರಲಿ ಗುಂಡಾ. ಯಾರಲ್ಲಾದರೂ ಬಾಯಿಗೀಯಿ ಬಿಟ್ಟೀಯಾ ?”

“ಉಂಟೇ ಸ್ವಾಮಿ. ಸುಳುಸೂಕ್ಷ್ಮ ತಿಳಿಯದಷ್ಟು ಮೂಡನೇ ನಾನು– ದೊರೆಸ್ವಾಮಿ ವಿಷಯ ಏನು ಮಾಡುತ್ತೀರಿ.”

“ಸದ್ಯಕ್ಕೆ ಅವನನ್ನು ಬಿಡುವುದಕ್ಕಾಗುವುದಿಲ್ಲಪ್ಪಾ – ಎಷ್ಟು ಬೇಕಂತೆ ಅವನ ಕೊಳ್ಳಿಗೆ.”

" ಸಾವಿರವಂತೆ ! "

" ಐನೂರು ತೊಗೊ ಎಂದು ಹೇಳು."

ಐದುನೂರುಪಾಯಿ ಅಡ್ವಾನ್ಸ್ ಕುದುರಿಸಿಕೊಂಡುಬಂದ ವಿಷಯ ಗುಂಡ ದೊರೆಸ್ವಾಮಿಗೆ ಹೇಳಿದಾಗ ಅವನು ತನ್ನ ಸಂತೋಷ ವ್ಯಕ್ತಮಾಡದೆ

" ಏನು ಜುಜಿಬಿ ಮನುಷ್ಯನಯ್ಯಾ ಈ ಯಜಮಾನ. ಚೌಕಾಶಿ ಮಾಡದೆ ನೇರವಾಗಿ ವ್ಯವಹಾರ ಮಾಡುವುದೇ ಇವನಿಗೆ ಸಾಧ್ಯವಿಲ್ಲ "

" ಇಷ್ಟು ತೊಂದರೆಯಲ್ಲೂ ಐದುನೂರು ರೂಪಾಯಿ ಕೊಡುತ್ತಾರಲ್ಲಾ ಅದಕ್ಕೆ ನೀವು ಕೃತಜ್ಞರಾಗಿರಬೇಕು ದೊರೆಸ್ವಾಮಿಗಳೇ ! "

" ಯಾರಪ್ಪನ ಇಚ್ಛೆಗೆ ಕೊಡ್ತಾನಂತೆ! ನಾನು ಸಾವಿರ ಕೇಳಿದರೆ ಐನೂರಕ್ಕೆ ಇಳಿಯಿತು. ಹಾಗೇ ಸರಸ್ವತಮ್ಮನ ಸರ, ಬಳೆಯನ್ನೂ ಐನೂರಕ್ಕೆ ಇಳಿಸಿಬಿಡು ಗುಂಡಾ."

" ಅದು ನೀವೇ ಮಾತಾಡಿಕೊಳ್ಳಿ ಸ್ವಾಮಿ. ನಾನು ಬಾಯಿ ಹಾಕಲಾರೆ."

ಉಳಿದ ಹಣ ಕೈಯಿಂದ ಹಾಕಿ ಸರ, ಬಳೆಗಳನ್ನು ಮಾಡಿಸಿ ಕೊಡುವುದಕ್ಕೆ ದೊರೆಸ್ವಾಮಿ ಒಪ್ಪಲೇ ಬೇಕಾಯಿತು.

ಗುಂಡನಿಂದ ಈ ಸುದ್ದಿ ಕೇಳಿದ ಸರಸ್ವತಮ್ಮ ಹಿಗ್ಗಿಹೋದಳು. ತನ್ನಷ್ಟೇ ಮಂಜುಳನೂ ಸಂತೋಷಪಡಬಹುದೆಂದು ಅವಳನ್ನು ಕೂಡಲೆ ಕರೆದು ತಿಳಿಸಿದಳು. ಮಂಜುಳಾ ತನ್ನ ನಿಜಭಾವನೆ ವ್ಯಕ್ತಪಡಿಸದೆ

" ನಿನ್ನಿಷ್ಟದಂತಾಗಲಿ ಎಂದು ಅವತ್ತೇ ಹೇಳಿದೆನಲ್ಲ."

ಎಂದಳು. ಮಗಳ ನಡತೆ ಸರಸ್ವತಮ್ಮನಿಗೆ ಕೋಪವನ್ನುಂಟುಮಾಡಿತು. ಕೋಪ ತೋರಿಸಿದರೆ ಕೆಲಸ ಕೆಟ್ಟು ಹೋಗಬಹುದೆಂದು ಮೃದುವಾಗಿ

" ನಿನ್ನ ಮೈತುಂಬ ಒಡವೆಯಿರಬೇಕೆಂದು ನನ್ನಿಷ್ಟ ಮಂಜುಳಾ."

" ನನಗೆ ಮೈತುಂಬ ಒಡವೆ ಬೇಕಿಲ್ಲ-ಮನಸ್ಸಿನ ತುಂಬ ಸಂತೋಷ ಬೇಕು."

" ಎರಡೂ ಸಾಧಿಸಿತಲ್ಲ ! "

" ಯಾರಿಗೆ ? ನನಗೊ ನಿನಗೋ ? "

ಎಂದು ವ್ಯಂಗವಾಗಿ ನುಡಿದು ಹೊರಟು ಹೋದಳು.

ಸರಸ್ವತಮ್ಮ ಮಗಳನ್ನು ಶಪಿಸುತ್ತಾ ಕುಕ್ಕರಿಸಿಬಿಟ್ಟಳು.

'ಎಲ್ಲರೂ ನನ್ನ ಉದ್ಧಾರಮಾಡುವ ಹಾಗೇ ಮಾತಾಡುತ್ತಾರೆ. ಇದೊಂದು ಗೂಬೆಮುಂಡೇದು'

ಎಂದು ಗೊಣಗಿಕೊಂಡಳು.

೮

ಮುತ್ತಮ್ಮನ ಜತೆ ಪೇಟೆಗೆ ಹೋದ ಭಾಗ್ಯಮ್ಮ ತರಕಾರಿ, ಮಾಂಸ, ಮೊಟ್ಟೆ ಹೊತ್ತುಕೊಂಡು ಮನೆಗೆ ಬಂದಳು. ಅಡಿಗೆಗೆ ಒಲೆಹಚ್ಚಿ ತರಕಾರಿ ಸಿದ್ಧಗೊಳಿಸತೊಡಗಿದಳು. ಪುಟ್ಟನೂ ಅವಳ ಸಹಾಯಕ್ಕೆ ನಿಂತಳು.

ಸುಮಾರು ನಾಲ್ಕುಘಂಟೆಯ ವೇಳೆಗೆ ಮುತ್ತಮ್ಮ ಗಾಡಿಯಲ್ಲಿ ಬಾಲೂ, ಬಾಯಿ, ಪಾಪನೊಂದಿಗೆ ಬಂದಿಳಿದಳು. ಭಾಗ್ಯಮ್ಮ ಅಡಿಗೆಯನ್ನಾರಂಭಿಸಿದುದನ್ನು ಕಂಡು ಅವಳ ಮನಸ್ಸಿಗೆ ಸಮಾಧಾನವಾಯಿತು. ಅಡಿಗೆಯ ಮನೆಯನ್ನೊಮ್ಮೆ ಪರಾಮರ್ಶಿಸಿ ಬಾಲೂ, ಬಾಯಿ, ಪಾಪ ಮೂರು ಜನಕ್ಕೂ ಕೆಲಸ ಹಚ್ಚಿ

"ನಂಗೊಸಿ ಕಾಪಿ ಮಾಡ್ಕೊಡಮ್ಮ" ಎಂದಳು.

"ಬೊ ಬಿಸಿಲು ಕಣಮ್ಮ ಗಾಡಿಮಾಡ್ಕೊಂಡು ಬರಬೇಕಾಗಿತ್ತು."

"ಗಾಡಿಮಾಡ್ಕೊಂಡೇ ಬಂದೆ. ಅಲ್ಲೇ ನಿಲ್ಲಿಸಿ ಇಳಿದು ನಡ್ಕೊಂತಾ ಬಂದೆ. ನನ್ನ ಕಾಲ ಆಗೋಯ್ತು ಬಾಗ್ಯಮ್ಮ–ಮೊದಲಿನಂಗೆ ನಡೆಯೋಕೆ ಆಗಾಕಿಲ್ಲ. ರಾಮರಾಜಪ್ಪ ಏಳ್ದಾಂತ ಓದೆ–ಇನ್ನು ಯಾರಾದರೂ ಆಗಿದ್ರೆ ಮನೆಬಿಟ್ಟು ಜಪ್ಪಯ್ಯಾಂದ್ರೂ ಕದಲ್ತಾ ಇರ್ಲಿಲ್ಲ."

ಮುತ್ತಮ್ಮನ ಪುರಾಣ ಕೇಳುವುದಕ್ಕಾರಂಭಿಸಿದರೆ ಅದಕ್ಕೆ ಕೊನೆ ಮೊದಲಿಲ್ಲವೆಂದು ತಿಳಿದಿದ್ದ ಭಾಗ್ಯಮ್ಮ ಈರುಳ್ಳಿ ಹೆಚ್ಚುತ್ತಿದ್ದ ಪಾಪಮ್ಮನನ್ನು

"ಮನೆಯೆಲ್ಲಿ ಮಗಾ" ಎಂದು ಕೇಳಿದಳು.

"ಜುಮ್ಮಮಸೀದಿ ತಾವ."

"ಮನೇಲಿ ಯಾರು ಯಾರು ಇದ್ದಾರೆ."

"ನಾನು, ಅಮ್ಮ, ನನ್ನ ತಮ್ಮ, ಅವನು."

" ಅವನೊಂದ್ರೆ ನಿನ್ನ ಗಂಡನಾ ! "

" ಹೂ ! "

" ನಿನಗೆ ಮದುವೆಯಾಗಿದೆ."

" ಆಗೈತಮ್ಮ."

" ಮಕ್ಕಳಾಗಿಲ್ವಾ."

" ಇಲ್ಲಮ್ಮ."

" ಊದಕಡ್ಡಿ ಉಜ್ಜುತ್ತೀಯಾ ? "

" ಹೂ ! "

" ಎಷ್ಟು ಚಿಕ್ತೈತೆ."

" ಕೆಲಸ ಮಾಡಿದ್ದಂಗೆ–ದಿವಸಾ ಹನ್ನೆಲ್ಡಾಣೆ, ರೂಪಾಯಿ ಚಿಕ್ತೈತೆ."

" ಗಂಡ ಚಾಕರಿ ಮಾಡ್ತಾನಾ."

" ಊ !–ಸೂರ್ಯಕಾಂತಿ ಮಿಲ್ಲಿಗೆ ಓಗ್ತಾನೆ."

" ನಿಮ್ಮವ್ವನೂ ಊದುಕಡ್ಡಿ ಉಜ್ಜುತ್ತಾಳಾ ! "

" ಉಜ್ಜದಿದ್ರೆ ಆಗ್ಬೇಕಲ್ಲವ್ವಾ."

" ತಮ್ಮ .... "

" ನಾವು ದುಡ್ಡು ತಂದದ್ನೆಲ್ಲಾ ಕರ್ಚುಮಾಡಿಕೊಂಡು ತಿಂದ್ಕೊಂಡವ್ನೆ."

" ನಿನ್ನ ಗಂಡನಿಗೆ ಇದು ಗೊತ್ತಿಲ್ವಾ."

" ಯಾವದು ? "

" ಹೀಗೆ ನೀನು ಬರೋದು."

" ನಾನು ಎಲ್ಲೂ ಓಗೋದಿಲ್ಲವ್ವಾ. ಬಾಲೂ ನಾನೂ ಒಂದೇತಾವ ಕೆಲಸಮಾಡ್ತಿದ್ವು. ಅವಳು ಮುತ್ತಮ್ಮವ್ರ ಗುರ್ತು ಮಾಡಿಕೊಟ್ಳು."

" ಇಲ್ಲಿ ಬಿಟ್ಟು ಇನ್ನೆಲ್ಲೂ ಓಗ್ಬೇಡ ಪಾಪಾ – ಮೈ ಕೆಟ್ಟುಹೋದರೆ ನಾಳೆ ನಿನಗೆ ಯಾರು ಆಗ್ತಾರೆ ಹೇಳು."

" ಔದಮ್ಮ ಔದು."

" ಮಾತು ಸಾಕು – ಬಿರಬಿರೀನೆ ಕೆಲಸ ಮಾಡ್ರಮ್ಮ. ಆಯಪ್ಪ ಬರೋ ಒತ್ತಾಯ್ತು."

ಎಂದು ಮುತ್ತಮ್ಮ ಎಚ್ಚರಿಸಿದಳು.

ಉಳಿದ ಅಡಿಗೆಯ ಜವಾಬ್ದಾರಿಯನ್ನು ಮುತ್ತಮ್ಮ ಭಾಗ್ಯಮ್ಮನಿಗೆ ವಹಿಸಿದ್ದರೂ ಮೊಟ್ಟೆ ದೋಸೆ ತಾನೇ ಮಾಡಬೇಕು. ಅದಕ್ಕೆ ಹದವಾಗಿ ಎಷ್ಟೆಷ್ಟು ಈರುಳ್ಳಿ, ಬೆಳ್ಳುಳ್ಳಿ, ಹಸಿರು ಮೆಣಸಿನಕಾಯಿ, ಕೊತ್ತುಂಬರಿಸೊಪ್ಪು ಹಾಕಬೇಕೆಂಬುದು ಮುತ್ತಮ್ಮನ ರಹಸ್ಯವಾಗಿತ್ತು. ಮೊಟ್ಟೆಗಳನ್ನೊಡೆದು ಪಾತ್ರೆಗೆ ಸುರುವಿಕೊಂಡು, ಅದನ್ನು ಸೌಟನಿಂದ ಉಜ್ಜಿ ಕಡೆಯುತ್ತಿದ್ದಂತೆ ರಾಮರಾಜಪ್ಪ ಕೈಯಲ್ಲೆರಡು ಚೀಲ ಹಿಡಿದು ಒಳಕ್ಕೆ ಬಂದ. ತನ್ನ ಕೈಯಲ್ಲಿದ್ದ ಸೌಟನ್ನು ಬಾಯಿ ಕೈಗೆ ಕೊಟ್ಟು ಮುತ್ತಮ್ಮ ಹೊರಗೆದ್ದು ಬಂದಳು.

"ಏನಪ್ಪಾ – ಇಷ್ಟುಬೇಗ ಬಂದ್ಬಿಟ್ಟೆ – ಗಂಟೆಯೆಷ್ಟು ?

"ಐದಿರಬಹುದು. ಇವುಗಳನ್ನು ಒಳಗಿಡು."

ಮುತ್ತಮ್ಮ ಅವನ ಚೀಲಗಳನ್ನು ರೂಮಿನಲ್ಲಿಟ್ಟು ಬರುವಷ್ಟರಲ್ಲಿ ರಾಮರಾಜಪ್ಪ ಅಡಿಗೆಯ ಮನೆಯಲ್ಲಿ ಇಣಿಕಿಹಾಕಿದ.

"ಎಲ್ಲರೂ ಬಂದಿದ್ದಾರೆ."

"ಬಂದವರಪ್ಪ."

"ಅದೇನೋ ಹೊಸದು !"

"ಹೂ – ಚೆಂದಾಕಿಲ್ವಾ ?"

"ಈಗಲೇ ಹೇಗೆ ಹೇಳಲಿ – ನಾಳೆ ಬೆಳಿಗ್ಗೆ ಕೇಳಿದರೆ ಹೇಳುತ್ತೇನೆ."

ಮುತ್ತಮ್ಮ ನಸುನಗುತ್ತಾ

"ಬಿಡಪ್ಪ – ನಿನ್ನ ಮಾತೇ ಮಾತು . . . ನಿನ್ನ ನ್ಯಾಸ್ತರು ಬರಲಿಲ್ವಾ."

"ನಾನು ಹೋಗಿ ಕರೆದುಕೊಂಡು ಬರ್ತೀನಿ. ಚೀಲ ಕೊಟ್ಟುಬಿಟ್ಟು ನೋಡಿಕೊಂಡು ಹೋಗೋಣಾಂತ ಬಂದೆ."

"ಗಲಾಟೆ ಆಗದ ಹಾಗೆ ನೋಡಿಕೊಳ್ಳಪ್ಪಾ."

"ನಿನಗೇಕಮ್ಮ ಆ ಭಯ ! ಚೀಲದಲ್ಲಿ ಏನಿದೆ ನೋಡಿದೆಯಾ ?"

"ಏನೈತೆ ?"

"ನಿಂಗೇಂತ ಸ್ಪೆಷಲ್ ರಮ್ ತಂದಿದ್ದೀನಿ – ನಮಗೆ ಬೇಕಾದ್ದೂ ಇದೆಯೆನ್ನು – ಬ್ರ್ಯಾಂದಿ, ಸೋಡಾ, ಹೋಟೇಲ್ ಖಾರದ ಸಾಮಾನು, ವೀಳೇದೆಲೆ, ಹೂವು – ಟವಲು, ಸೋಪು, ಪೌಡರು."

"ಎಲ್ಲಾ ವೈನವಾಯ್ತುಲ್ಲಾ."

“ ಅವರನ್ನು ಮುಖ ತೊಳೆದುಕೊಂಡು, ಪೌಡರ್ ಹಾಕಿಕೊಂಡು, ತಲೆ ಲಕ್ಷಣವಾಗಿ ಬಾಚಿಕೊಂಡು, ಹೂ ಮುಡಿದುಕೊಳ್ಳಿ ಎಂದು ಹೇಳು. ಕೊಳ ಕೊಳಕಾಗಿ ಇರುವುದು ಬೇಡ.”

“ ಅಂಗೇ ಮಾಡಸ್ತೀನಿ ಓಗು.”

“ ಪಾಪನ್ನ ಕರಿ.”

“ ಈಗ್ಯಾಕಪ್ಪಾ ? ”

“ ಸುಮ್ಮನೆ ಮಾತನಾಡಿಕೊಂಡು ಹೋಗ್ನೀನಿ ಮುತ್ತಮ್ಮ– ಇನ್ನೇನೂ ಇಲ್ಲ.”

“ ಬಲೆ ಖಯಾಲಿ ಕಣಪ್ಪಾ ನೀನು ”

ಎಂದು ನಕ್ಕು

“ ನೀನು ರೂಮ್‌ನಾಗಿರು, ಕಳಿಸ್ತೀನಿ.”

ಎಂದು ಮುತ್ತಮ್ಮ ಅಡಿಗೆಯ ಮನೆಗೆ ಹೋದಳು.

ರಾಮರಾಜಪ್ಪ ರೂಮುಸೇರಿ, ಒಂದು ಸಿಗರೇಟ್ ಹಚ್ಚಿ ಅರ್ಧ ಮುಗಿಸು ವುದರೊಳಗಾಗಿ ಪಾಪ, ಮುಖ ತೊಳೆದುಕೊಂಡು, ಸೆರಗಿನಿಂದ ಮುಖ ಒರೆಸಿ ಕೊಳ್ಳುತ್ತಾ ಒಳಕ್ಕೆ ಬಂದಳು. ರಾಮರಾಜಪ್ಪ ಬಾಗಿಲು ಮುಂದಕ್ಕೆ ಮಾಡಿ

“ ಹತ್ತಿರ ಬಾರೇ – ದೂರವೇ ನಿಂತಿದ್ದೀಯಲ್ಲ.”

ಪಾಪ ಅವನ ಸಮೀಪ ಬಂದು ನಿಂತಳು. ಅವಳ ಬುಜಗಳ ಮೇಲೆ ಕೈಯಿಟ್ಟು ರಾಮರಾಜಪ್ಪ ದಿಟ್ಟಿಸಿ ನೋಡಿ

“ ನಿನಗೆ ಯಾರೇ ಇಷ್ಟು ಕೆಟ್ಟ ಹೆಸರಿಟ್ಟವರು ? ”

“ ನನ್ನ ಎಸರು ಚಂದಾಕಿಲ್ವಾ ! ”

“ಬಡ್ಕೋಳ್ಳೋ ಹಾಗಿದೆ. ಪುಣ್ಯದ ಹಾಗಿರುವವಳನ್ನು ಯಾರಾದರೂ ಪಾಪ ಎಂತಾ ಕರೀತಾರೇನೇ ! ”

“ ಓಗ್ರೀ ! ”

“ ನೀನು ಬರುತ್ತೀಯೋ ಇಲ್ಲವೋಂತ ತುಂಬ ಅನುಮಾನವಾಗಿತ್ತು. ನೋಡಿಕೊಂಡು ಹೋಗೋಣಾಂತ ಬಂದೆ. ಮುತ್ತಮ್ಮ ನಿನ್ನ ವಿಷಯ ಹೇಳಿದಾರಭ್ಯ ನನ್ನ ಬುದ್ಧಿಯೇ ಕೆಟ್ಟುಹೋಗಿದೆ.”

“ ಎಲ್ಲಾರೂ ಇಂಗೇ ಅನ್ನೋದು.”

"ನಿನಗೂ ಸಾಕಷ್ಟು ಅನುಭವವಿದೆ."

"ಅಂಗೆಲ್ಲಾ ನಾನು ಓಗಾಕಿಲ್ರೀ. ಮುತ್ತಮ್ಮಾವ್ರು ತುಂಬ ಏಳೋ ಒತ್ತಿಗೆ ಬಂದೆ."

"ನಾನು ಹೇಳಿಕಳಿಸಿದಾಗ ಬರುತ್ತೀಯಾ ?"

"ಬತ್ತೀನಿ."

"ನಿನಗೆ ಹೇಳಿಕಳಿಸುವುದು ಹೇಗೆ ?"

"ಮುತ್ತಮ್ಮನಿಗೆ ನನ್ನ ಮನೆ ಗೊತ್ತೈತೆ – ನಾನು ಕೆಲಸ ಮಾಡೋ ಮಂಡೀನೂ ಗೊತ್ತೈತೆ."

"ಇಲ್ಲಿಂದ ಅಷ್ಟುದೂರ ಅವಳು ಬರಬೇಕಾದರೆ ಗೊಣಗಿಕೊಳ್ಳುತ್ತಾಳೆ."

"ನಾಳೆ ಬೆಳೀಕೆ ನನ್ನ ತಮ್ಮ ಬತ್ತಾನೆ – ಅವನ ಗುರುತುಮಾಡ್ಕೋಳಿ. ಅವನ್ಕೈಲಿ ಏಳಿಕಳಿಸಿದ್ರೆ ನಾನೇ ಬಂದುಬಿಡ್ತೀನಿ."

"ನಿನ್ನ ತಮ್ಮ ಏನು ಮಾಡ್ತಾನೆ."

"ಏನೂ ಇಲ್ರೀ. ಅಪಾಪೋಲಿ ತಿರುಗೊಂಡವ್ನೆ. ನೀವು ಮನೆಗಿನೆ ಕಟ್ಟಸ್ತೀರಂತೆ ಔದಾ."

"ನನ್ನ ವಿಷಯವೆಲ್ಲಾ ಮುತ್ತಮ್ಮ ಹೇಳಿದ್ದಾಳೆ."

"ತುಂಬ ಏಳವ್ರೆ."

"ಇನ್ನೇನು ಹೇಳಿದ್ದಾಳೆ."

"ನೀವು ತುಂಬ ಒಳ್ಳೇವ್ರು – ಕಷ್ಟಕ್ಕಾಗೋರು ಅಂತಾ ಏಳವ್ಳೆ. ನನ್ನ ತಮ್ಮಂಗೊಂದು ಚಾಕರಿ ಮಾಡ್ಸಿಕೊಡ್ರಿ."

"ನಾಳೆ ಅವನನ್ನು ನೋಡಿ ಹೇಳುತ್ತೇನೆ. ಅವನೇನು ಮಾಡಬಲ್ಲ."

"ಏನೂ ಬರಾಕಿಲ್ರೀ. ನೀವೇ ಏನಾದರೂ ಕಲಿಸಿಕೊಡ್ರಿ."

"ನಾನು ಕಲ್ತಿರೋದನ್ನೆಲ್ಲಾ ಕಲಿಸಿಕೊಡಲೇನು ?"

"ಓಗ್ರೀ . . . ಅದೆಲ್ಲಾ ಅವನ್ಗೆ ಈಗಲೇ ಬತ್ತೈತೆ."

"ಮನೆಯಲ್ಲಿ ನೀನೂ, ನಿಮ್ಮಮ್ಮ, ನಿನ್ನ ಗಂಡ ಮೂರು ಜನ ಸಂಪಾದನೆ ಮಾಡಿದರೂ ಈ ಹರಕಲು ಚಿನಡಿ ಸೀರೆ ಉಟ್ಟುಕೊಂಡಿದ್ದೀಯಲ್ಲಾ !"

"ನೀವು ಸಾವುಕಾರ್ರೀ . . . ನಿಮಗೇನು ಗೊತ್ತಾಗ್ತೈತೆ ಬಡವರ ವಿಸ್ಯ.

ನನ್ನ ಗಂಡ – ನಾನೂ ಸಂಪಾದಿಸಿದ್ದು ನನ್ನ ಗಂಡನ ಕುಡಿತಕ್ಕೆ ಆಗ್ತೈತೆ– ನಮ್ಮವ್ವ ಸಂಪಾದಿಸಿದ್ದು ಚಿಕ್ಕಣ್ಣ ಪಡಖಾನೇಗೆ ಕಟ್ಟಬತ್ತಾನೆ."

"ನೀನೂ ನಿಮ್ಮವ್ವ ಕುಡಿಯುವುದಿಲ್ಲವೇ ?"

"ನಾವೂ ಕುಡೀತೀವಿ. ಅವರಂಗೆ ಅಲ್ಲ. ಯಾವಾಗಲೋ ಒಂದೊಂದು ಸಲ. ಅಮ್ಮ ಮಿಲ್ಟ್ರಿ ಓಟ್ಲನಿಂದ ಬಿರಿಯಾನಿ ತತ್ತಾಳೆ – ಅವತ್ತು ಒಸಿ ಕುಡಿತೀವಿ."

"ನಿನ್ನ ಕಂಡ್ರೆ ನನಗೆ ತುಂಬ ಪ್ರೀತಿಯಾಗತ್ತೆ ಪಾಪ."

"ನಾನು ರಂಬೆಯಲ್ಲವಲ್ಲರೀ."

"ಅಲ್ಲ – ಆದರೆ ನೀನು ಯಾವದನ್ನೂ ಮರೆಮಾಚದೆ ಸತ್ಯ ಹೇಳುತ್ತೀ. ಪಾಪ – ಇನ್ನೊಂದು ವಿಷಯ ಕೇಳುತ್ತೇನೆ, ಬೇಜಾರು ಮಾಡಿಕೊಳ್ಳಬೇಡ."

"ಬೇಜಾರು ಯಾಕೆ ?"

"ಗಂಡನ್ನ ನೀನು ಪ್ರೀತಿಸುತ್ತೀಯಾ ?"

"ತುಂಬ ಪಿರೀತಿ ಮಾಡ್ತಿದ್ದೆ ಕಣ್ರೀ. ಮುಕ್ಕ ಕುಡಿದು ಬಂದು ನನ್ನ ಉಯ್ದು ಬೊಯ್ದು ಎಲ್ಲಾ ಆಳುಮಾಡಿಬಿಟ್ಟ. ಮನೀಕ್ಕೆ ಒಬ್ಬಳನ್ನ ಕರ್ಕೊಂಡುಬಂದು ಮಡಿಗ್ಕೊಂಡ. ಅದನ್ನಾಚೆಗೆ ಕಳಿಸ್ಬೇಕಾದ್ರೆ ನಂಗೆ ಸಾಕುಸಾಕಾಗಿ ಓಯ್ತು. ಪಿರೀತಿ, ಇಸ್ವಾಸ ಬಡವರಿಗಲ್ರೀ – ಅದೆಲ್ಲಾ ಸಾವಕಾರರಿಗೆ."

"ನಾನು ಬಡವ ಪಾಪ."

"ನಿಮುಗೂ ನಮುಗೂ ತುಂಬ ಎತ್ವಾಸ ಐತ್ರೀ. ಚಂಜೀಗೇನು, ಬೆಳಿಗ್ಗೇನು ಅಂತ ಯೋಚಿಸೋರು ನಾವು – ಆಸ್ತಿಮಾಡ್ನಿಲ್ಲ. ಕಾರು ಮಡಗ್ಲಿಲ್ಲ, ಮಾಡಿ ಕಟ್ಟಿಸ್ನಿಲ್ಲ ಅಂತ ಯೋಚ್ನೆಮಾಡೋರು ನೀವು."

ನಿರಕ್ಷರಕುಕ್ಷಿ ಪಾಪ ಆಡಿದ ಮಾರ್ಮಿಕ ಮಾತು ಕೇಳಿ ರಾಮರಾಜಪ್ಪ ಅವಾಕ್ಕಾದ. ಅವಳ ಮಾತಿನಲ್ಲಿದ್ದ ಸತ್ಯದ ಬೆಳಕು ಅವನ ಕಣ್ಣು ಕೋರೈಸಿತ್ತು.

ಬಾಗಿಲುಹೊರಗೆ ನಿಂತುಕೊಂಡು ಮುತ್ತಮ್ಮ ಪಾಪನನ್ನು ಕೂಗಿದಳು ಅವಳು ಹೋಗುವ ಮುನ್ನ ರಾಮರಾಜಪ್ಪ ಅಪ್ಪಿ ಮುದ್ದಿಟ್ಟ.

"ನೀನು ತುಂಬ ನೊಂದಿದ್ದೀ ಪಾಪ" ಎಂದ.

ಪಾಪಮ್ಮನ ಕಣ್ಣುಗಳಲ್ಲಿ ಕೃತಜ್ಞತೆ ಮಿಂಚಿತು.

ಪಾಪ ಹೊರಗೆ ಹೋದಮೇಲೆ ಮುತ್ತಮ್ಮ ಒಳಕ್ಕೆ ಬಂದಳು.

"ಏನಮ್ಮ, ಇಷ್ಟುಬೇಗ ಕೂಗಿಬಿಟ್ಟೆ."

ಎಂದು ರಾಮುರಾಜಪ್ಪ ಕೇಳಿದ,

"ಒತ್ತಾಯ್ತಾ ಬಂತು. ತಲೆಬಾಚಿಕೊಳ್ಳಿ ಎಂತಾ ಕೂಗಿದೆನಪ್ಪಾ."

"ಅಡಿಗೆ ಮುಗಿಯಿತೇನು ?"

"ನೀನು ನ್ಯಾಸ್ತರನ್ನು ಕರ್ಕೊಂಡು ಬರೋ ಒತ್ಗೆ ಎಲ್ಲಾ ಮುಗಿದಿರತ್ತೈತೆ. ಏನಪ್ಪಾ–ಉಡುಗಿ ಪರವಾಗಿಲ್ಲವೋ ?"

"ನಿಂಗೆ ಹೇಳೋದೆನೀದೆಯಮ್ಮ. ನನಗೇನು ಬೇಕೆನ್ನುವುದನ್ನು ನೀನು ಚೆನ್ನಾಗಿ ಅರ್ಥಮಾಡಿಕೊಂಡಿದ್ದೀ."

"ಬಡವಳು–ಒಟ್ಟೇಗೇ ಸಾಲದು. ಅದೇನಾದ್ರೂ ಸಹಾಯ ಮಾಡಪ್ಪಾ. ಅವರಮ್ಮನೂ ತುಂಬ ಏಳ್ಕೊಂಡವ್ಳೆ. ಅವರಮ್ಮನ ಒಪ್ಸಿ ಕರ್ಕೊಂಡು ಬರಬೇಕಾದ್ರೆ ನಂಗೆ ಸಾಕುಸಾಕಾಯ್ತು."

"ಇವತ್ತಿನ ಪಾರ್ಟಿ ಚೆನ್ನಾಗಿ ನನ್ನ ಸ್ನೇಹಿತರು ಖುಷಿಯಾದರೆ ನನ್ನ ಕೈಯೂ ನಡೆಯೊ ಹಾಗೆ ಆಗತ್ತೆ. ತಮ್ಮನಿಗೊಂದು ಕೆಲಸ ಮಾಡಿಸಿಕೊಡಿ ಎಂದು ಪಾಪನೂ ಹೇಳಿದಳು."

"ಮಾಡಿಸಿಕೊಡಪ್ಪಾ–ಯಾವತ್ತಿಗೂ ಬಡವರಾದಾರಿ ನೀನು"

"ಆಗಲಿ. ನಾನು ಹೋಗಿಬಿಟ್ಟುಬರುತ್ತೇನೆ."

"ಏಟೊತ್ತಿಗಿ ಬರ್ತೀ."

"ಆರು–ಆರೂವರೆ–ಆಗಬಹುದೋ ?"

"ಸೊಲ್ಪ ಕತ್ತಲೆಯಾದ್ಮೇಲೇ ಬನ್ನಿ"

ಎಂದು ಮುತ್ತಮ್ಮ ಎಚ್ಚರಿಕೆಕೊಟ್ಟಳು.

ರಾಮುರಾಜಪ್ಪ ಹೋದಮೇಲೆ ಮುತ್ತಮ್ಮ ಎಲ್ಲರ ಸಹಾಯ ತೆಗೆದು ಕೊಂಡು ಮನೆಯನ್ನು ಗುಡಿಸಿ, ಸಾರಿಸಿ, ರೂಮುಗಳಲ್ಲಿ ಬಿದ್ದಿದ್ದ ಬೀಡಿ ತುಂಡು ಗಳನ್ನೂ, ಬೀರ್ ಬಾಟಲಿಗಳನ್ನೂ, ಹೊರಗೆ ಬಿಸುಡಿ ಮನೆಯನ್ನು ಅಚ್ಚು ಗಟ್ಟು ಮಾಡಿದಳು. ಬಚ್ಚಲುಮನೆ ಒಲೆಗೆ ನೀರುಹಾಕಿ ಉರಿಮಾಡಿಸಿದಳು.

ರಾಮುರಾಜಪ್ಪ ತಂದಿದ್ದ ಚೀಲದಲ್ಲಿದ್ದ ಸೋಪು, ಪೌಡರ್, ಹೂವು, ಟವಲು ತೆಗೆದು ಪಾಪನ ಕೈಗಿತ್ತು

"ಎಲ್ರೂ ಮುಖತೊಳ್ಕೊಂಡು, ತಲೆ ಬಾಚ್ಕೊಂಡು, ಹೂ ಮುಡ್ಕೊಳ್ರಮ್ಮ" ಎಂದು ಆಜ್ಞೆ ವಿಧಿಸಿದಳು.

ಬಾಲೂ, ಬಾಯಿ, ಪಾಪ ಮುಖತೊಳೆದುಕೊಂಡು ಬಂದು ತಲೆಬಾಚಿಕೊಳ್ಳುವುದಕ್ಕೆ ಕುಳಿತರು. ಬಾಲೂ ಪುಟ್ಟಿಯನ್ನು ಕರೆದು ಅವಳ ತಲೆಬಾಚಿ ತಲೆತುಂಬ ಹೂ ಮುಡಿಸಿದಳು. ಒಬ್ಬರಿಗೊಬ್ಬರು ನೆರವಾಗಿ ಅಲಂಕಾರ ಮುಗಿಸಿದರು.

ಅಡಿಗೆ ಕೆಲಸ ಮುಗಿಯಲು, ಭಾಗ್ಯಮ್ಮ ಎಲ್ಲವನ್ನೂ ಒಲೆಯಮೇಲೆ ಮುಚ್ಚಿಟ್ಟು ಹೊರಗೆಬಂದು ಕುಳಿತಳು.

"ಯಾಕಮ್ಮ – ಸಾಕಾಗಿ ಓಯ್ತಾ !

ಎಂದು ಮುತ್ತಮ್ಮ ಕೇಳಿದುದಕ್ಕೆ ಭಾಗ್ಯಮ್ಮ

"ಏನಾರಾ ಮಾಡಬೋದು – ಒಲೆ ಮುಂದೆ ಬೇಯಾಕೆ ಆಗಾಕಿಲ್ಲ ಕಣವ್ವಾ."

"ಬಿರೀನ ಏಳಮ್ಮ – ರಾಮರಾಜಪ್ಪ ಬರೋ ಒತ್ತಾಯ್ತು."

ಎಂದು ಮುತ್ತಮ್ಮ ಅವಸರಪಡಿಸಿದಳು.

ಸಂಜೆಗತ್ತಲು ಅದೇ ತಲೆಹಾಕುತ್ತಿತ್ತು. ರಸ್ತೆಯಲ್ಲಿ ಹೆಚ್ಚು ಜನರೂ ಓಡಿಯಾಡುತ್ತಿರಲಿಲ್ಲ. ಮನೆ ಸೇರುವ ಅವಸರದಲ್ಲಿದ್ದ ಕಾಗೆಗಳ ಹಾರಾಟ ಚೀರಾಟದ ಶಬ್ದವೇ ಎತ್ತಲೂ ವ್ಯಾಪಿಸಿತ್ತು.

ರೂಮಿನಲ್ಲಿ ಸಾಲುಗಟ್ಟಿ ಕುಳಿತಿದ್ದ ಮದ್ಯದ ಶೀಷೆ; ಯಾವಾಗ ತನ್ನ ಕೈಸೇರುವುದೋ ಎನ್ನುವ ಆತುರ ಬಾಯಿಯನ್ನು ಆವರಿಸಿತ್ತು.

ಹೊಸ ಇನಿಯನ ಜತೆಯಲ್ಲಿ ಆಗಲಿದ್ದ ಅನುಭವವನ್ನು ಸ್ಮರಿಸಿಕೊಳ್ಳುತ್ತ, ಬಾಲೂ ಕುಳಿತಿದ್ದಳು.

'ಇಂದು ಯಾವ ಅನುಭವ ಕಾದಿದೆಯೋ' ಎಂಬ ಯೋಚನೆಯಲ್ಲಿ ಪಾಪ ನಿಮಗ್ನಳಾಗಿದ್ದಳು.

ಕುಳಿತು ಕುಳಿತು ಬೇಸರವಾಗಲು ಪಾಪ ಮೆಲ್ಲನೆ ಪುಟ್ಟನನ್ನು ಕರೆದು "ನಂಗೆ ಮಾಡಿ ತೋರಿಸಾಕಿಲ್ವಾ ಪುಟ್ಟ" ಎಂದಳು.

ಪುಟ್ಟ ಪಾಪನನ್ನು ಮಹಡಿಯ ಮೇಲೆಕ್ಕೆ ಕರೆದೊಯ್ದು ಅಲ್ಲಿದ್ದ ವಿಶಾಲವಾದ ಹಜಾರ ತೋರಿಸಿದಳು.

“ ಇಲ್ಲಿ ಯಾರಿದಾರೆ ಪುಟ್ಟ್ಯಾ.”

“ ಯಾರೂ ಇರಾಕಿಲ್ಲ ಅಕ್ಕ. ಸರಸ್ವತಕ್ಕ ಇಲ್ಲಿರ್‍ತಿದ್ದಳು.”

“ ಸರಸ್ವತಕ್ಕ ಯಾರು ? ”

“ ಈಗನಳು ದಾವಣಗೆರೆಯಲ್ಲವಳೆ ಪಾಪಕ್ಕ–ದೊಡ್ಡ ಆಕ್ಟರು. ನಾಟಕದ ಕಂಪೆನಿ ಮಾಡವ್ಳೆ.”

“ ಮನೇಗೆ ತುಂಬ ಜನ ಬರ್‍ತಿರ್‍ತಾರಾ ! ”

“ ಇಲ್ಲಾಕಣಕ್ಕ ಮೊದಲು ಬರ್‍ತಿದ್ರು–ಈಗ ಯಾರೂ ಬರಾಕಿಲ್ಲ–ಎಷ್ಟೋ ದಿವ್ಸ ತಿನ್ನಾಕೇ ಏನೂ ಇರಾಕಿಲ್ಲ.”

“ ರಾಮರಾಜಪ್ಪನವರು.”

“ ಅಣ್ಣಯ್ಯನೇ ನಾಳಿ ತಪ್ಪದೆ ಬರ್‍ತಾನೆ.”

“ ಅವರು ಒಳ್ಳೆಯವರೇ.”

“ ತುಂಬ ಒಳ್ಳೆಯವನು ಪಾಪಕ್ಕ. ಅಮ್ಮನಿಗೆ ಅಯ್ಯೋ ಅನ್ನೋನು ಅವನೇ.”

“ ಅವರು ತುಂಬ ಸಾವಕಾರರೇನು ? ”

“ ಅಂಥಾ ಸಾವಕಾರನಲ್ಲ. ಕೈಲಿ ಕಾಸಿದ್ರೆ ದೊರೆ ಹಂಗೆ ಕರ್ಚುಮಾಡಿ ಬಿಡ್ತಾನೆ. ಈಗವನೂ ಕಷ್ಟದಾಗೆ ಸಿಕ್ಕವನಂತೆ !—ನಿಂಗೆ ಮದ್ವೆ ಆಗೈತೇನಕ್ಕ.”

“ ಆಗೈತೆ ಪುಟ್ಟ್ಯಾ.”

“ ನಿನ್ನ ಗಂಡ ಚೆಂದಾಕವ್ನಾ.”

“ ಚೆನ್ನಾಗಿದ್ದಾನೆ.”

“ ಅವನನ್ನು ನೀನು ಪ್ರೀತಿಸೋಕಿಲ್ವಾ.”

“ ಇಲ್ಲ ಪುಟ್ಟ್ಯಾ.”

“ ಯಾಕಕ್ಕ ? ”

“ ಕುಡಿದು ಬಂದು ನನ್ನ ಹೊಡೀತಾನೆ ಪುಟ್ಟ.”

“ ಕುಡಿದರೆ ಒಡೀಬೇಕಾ – ಅಣ್ಣಯ್ಯನೂ ಕುಡೀತಾನೆ, ಗಟ್ಟಿಯಾಗಿ ಮಾತು ಕೂಡಾ ಅಡಾಕಿಲ್ಲಾ. ನೀನೂ ಕುಡೀತೀಯೇನಕ್ಕಾ.”

“ ಸ್ವಲ್ಪ ಕುಡೀತೀನಿ. ಒಂದೊಂದು ದಿವಸ ಹೆಚ್ಚಾಗಿ ಕುಡಿಯೋದೂ ಉಂಟು.”

"ಅದು ಯಾಕಕ್ಕ ?"

"ಪ್ರಪಂಚ ಬೇಜಾರಾದರೆ ಕುಡಿದು ಮಲಕ್ಕೊಂಡುಬಿಡ್ತೀನಿ ಪುಟ್ಟಾ."

"ಅಮ್ಮನೂ ಅಂಗೇ ಮಾಡ್ತಾಳಕ್ಕ. ಕುಡಿದ್ರೆ ಪ್ರಪಂಚ ಮರ್ರ್ತೋಗ್ತೈತಾ ?"

"ಆ ವಿಷಯ ನಿನ್ನ ಅಣ್ಣಯ್ಯನ ಕೇಳಿ ತಿಳ್ಕೋ."

"ಕುಡಿದ್ರೆ ಎಂಗಿರ್ತೈತೋ ನೋಡಬೇಕೂಂತ ನಂಗೂ ಆಸೆಯಾಗೈತಕ್ಕ."

"ಸದ್ಯ – ಅದನ್ನ ಅಬ್ಯಾಸ ಮಾಡ್ಕೊಬೇಡ ಪುಟ್ಟ. ಕೆಟ್ಟ ರೋಗ – ಅಂಟಿದರೆ ವಾಶಿಯಾಗೋದೇ ಇಲ್ಲ. ಮನೆ ಆಳಾಗೋಗ್ತೈತೆ."

ಪುಟ್ಟ ಸುತ್ತಲೂ ನೋಡಿ

"ಅಣ್ಣಯ್ಯ ಬತ್ತಾ ಅವ್ನೆ"

ಎಂದು ಧಡಧಡನೆ ಕೆಳಗಿಳಿದು ಬಂದಳು. ಪಾಪನೂ ಅವಳನ್ನನುಸರಿಸಿ ಕೆಳಕ್ಕೆ ಬಂದಳು.

ರಾಮರಾಜಪ್ಪ ತನ್ನ ಗೆಳೆಯರು ವೀರಣ್ಣ, ಸೋಮಸುಂದರಂ ಜತೆಯಲ್ಲಿ ಮನೆಯೊಳಗೆ ಪ್ರವೇಶಿಸಿ ಮನೆಯ ಅಚ್ಚುಗಟ್ಟು ನೋಡಿ

"ಎಲ್ಲಾ ಸಿಸ್ತಾಗಿಬಿಟ್ಟದೆ"

ಎಂದು ತೃಪ್ತಿಯನ್ನು ವ್ಯಕ್ತಪಡಿಸಿ ಗೆಳೆಯರಿಗೆ ಕುಳಿತುಕೊಳ್ಳಲು ಹೇಳಿದ.

"ಇವರು ಅವತ್ತು ಬಂದಿದ್ರಲ್ಲವೇನಪ್ಪಾ" ಎಂದಳು ಮುತ್ತಮ್ಮ.

"ಎಷ್ಟು ದಿವಸವಾಯಿತು. ಇನ್ನೂ ನಿನಗೆ ಜ್ಞಾಪಕವಿದೆಯಲ್ಲಮ್ಮ" ಎಂದು ವೀರಣ್ಣ ಹೇಳಿದ.

"ಗುರುತಿನೋರ ಮರೆಯೋದು ಸಾವಕಾರರ ಲಕ್ಸಣಾಪ್ಪ !"

"ಕೇಳಿದೆಯಾ ವೀರಣ್ಣ" ಎಂದು ಸೋಮಸುಂದರಂ ಚುಚ್ಚಿದ.

"ಇದೇನು ಕಂಡಿರಯ್ಯ – ನೀನು ಸರಿಯಾಗಿ ಮುತ್ತಮ್ಮನ ಕೈಲಿ ಮಾತನಾಡಿದರೆ ಅವಳ ಪಾಂಡಿತ್ಯ ಅರ್ಥವಾಗುತ್ತದೆ."

"ಬಿಡಪ್ಪಾ – ನಾನೆಂತಾ ಪಂಡಿತಳು !"

"ಹಾಗಲ್ಲ ಮುತ್ತಮ್ಮ. ಪುಸ್ತಕ ಓದಿದರೇ ಪಾಂಡಿತ್ಯ ಬರೋದಿಲ್ಲ.

ಅದಕ್ಕೆ ತುಂಬ ಲೋಕಾನುಭವ ಬೇಕು. ನೀನು ಲೋಕಾನುಭವದ ರಸಘಟ್ಟಿ."

ರಾಮುರಾಜಪ್ಪನ ಸ್ತುತಿ ಮುತ್ತಮ್ಮನಿಗೆ ಆಪ್ಯಾಯಮಾನವಾಯಿತು. ಸೂರ್ಯಕಾಂತಿ ಹೂವಿನ ಹಾಗೆ ಅವಳ ಮುಖವರಳಿತು.

"ಬಾಯಾರಿದೆಯಲ್ಲ ಮತ್ತಮ್ಮ" ಎಂದ ರಾಮುರಾಜಪ್ಪ.

"ಕಾಪಿ ಮಾಡಿಸಿಕೊಡ್ಲಾ."

"ನಿನ್ನ ಸತ್ತ ಕಾಫಿ ಯಾರಿಗ್ಬೇಕು ಹೇಳು."

"ಅಂಗಾದರೆ ಮಾಡಿವ್ಯಾಕ್ಕೇ ಓಗಿಬಿಡಿ – ಅಲ್ಲೀಗೆ ಎಲ್ಲಾ ಕಳಿಸಿ ಕೊಡ್ತೀನಿ."

"ಮೊದಲಷ್ಟು ಕಾಪಿ ಉಯ್ಕೋತೀವಿ. ಆಮೇಲೆ ಊಟವಾಗಲಿ."

"ಅಂಗೇ ಮಾಡಿ. ಯಾರೂ ಸದ್ದು ಮಾಡಬ್ಯಾಡ್ರಪ್ಪಾ!"

ರಾಮುರಾಜಪ್ಪ ಗೆಳೆಯರನ್ನು ಕರೆದುಕೊಂಡು ಮಹಡಿ ಮೇಲಕ್ಕೆ ಹೋದ. ಪುಟ್ಟ ಒಂದು ಲಾಂದ್ರ ತಂದಿಟ್ಟು, ನಾಲ್ಕು ಚಾಪೆ ತಂದು ಹಾಸಿದಳು. ಮುತ್ತಮ್ಮ, ಭಾಗ್ಯಮ್ಮ ಬಾಟಲಿಗಳನ್ನೂ, ಹೊಟೇಲ್ ತಿಂಡಿ ಪೊಟ್ಟಣಗಳನ್ನೂ, ಗ್ಲಾಸುಗಳನ್ನೂ ತಂದಿಟ್ಟರು.

ಮುತ್ತಮ್ಮ, ಭಾಗ್ಯಮ್ಮ ಇಬ್ಬರೂ ಮೇಲಕ್ಕೆ ಬರಲು ರಾಮುರಾಜಪ್ಪ "ಅವರೆಲ್ಲಿ? ಅವರನ್ನೂ ಕರೆದುಬಿಡು" ಎಂದ.

ಮುತ್ತಮ್ಮ ಅಲ್ಲಿಂದಲೇ ಕೂಗಿ

"ಪುಟ್ಟಾ, ಎಲ್ಲರ್ನೂ ಇಲ್ಲೀಗೇ ಕಳಿಸಮ್ಮಾ – ನೀನು ತಲೆಬಾಗಿಲು ಆಕ್ಕೊಂಡು ಅಲ್ಲೇ ಕುಂತ್ಕೊಂಡಿರು. ಯಾರಾದರೂ ಬಂದ್ರೆ ಅಮ್ಮ ಇಲ್ಲ ಎಂತಾ ಏಳಿಬಿಡು"

ಎಂದು ಹೇಳಿದಳು.

"ಯಾರು ಬರುತ್ತಾರೆ ಮುತ್ತಮ್ಮ" ಎಂದು ರಾಮುರಾಜಪ್ಪ ಕೇಳಿದ.

"ಯಾರೂ ಬರಾಕಿಲ್ಲ – ಅಕಸ್ಮಾತ್ತಾಗಿ ಮನೆಯವನೋ, ಯಾರಾದರೂ ಬಂದಾರು ಎಂತಾ ಏಳಿದೆ."

ಬಾಲೂ, ಬಾಯಿ, ಪಾಪ ಮಹಡಿಯೇರಿ ಬಂದು ದೂರ ಒಂದು ಮೂಲೆಯಲ್ಲಿ ಕುಳಿತರು. ಬ್ರ್ಯಾಂದಿ ಬಾಟಲಿನ ಬಿರಟೆ ತೆಗೆಯುತ್ತಿದ್ದ ರಾಮುರಾಜಪ್ಪ

"ಅಮ್ಮಗಳ ಹಾಗೆ ಮೂಲೇಲೇ ಕುಂತಿದ್ದೀರಲ್ಲಾ ಇಲ್ಲಿ ಬನ್ನಿ."

ಎಂದು ಕರೆದ. ಬಾಲೂ ನೊದಲೆದ್ದು ಬಂದಳು. ಅವಳಿಗೆ ವೀರಣ್ಣನನ್ನು ತೋರಿಸಿ

"ಅಲ್ಲಿ ನೋಡು – ನಿನ್ನ ಯಜಮಾನರು ಕುಳಿತಿದ್ದಾರೆ. ಅವರ ಹತ್ತಿರ ಕುಳಿತುಕೋ ಹೋಗು."

ಎಂದ. ಬಾಲೂ ಅವನ ಆಜ್ಞೆಯನ್ನು ವಿನಯದಿಂದ ಪಾಲಿಸಿದಳು. ಬಾಯಿ ಎದ್ದು ಬರಲು, ಅವಳನ್ನು ಸೋಮಸುಂದರಂ ಸಮೀಪಕ್ಕೆ ಕಳಿಸಿ

"ಪಾಪಮ್ಮನೋರೆ – ನೀವು ಹೀಗೆ ಬನ್ನಿ – ನನ್ನ ಹತ್ತಿರ"

ಎಂದ. ಪಾಪ ಎದ್ದು ಬಂದು ರಾಮರಾಜಪ್ಪನ ಸಮೀಪದಲ್ಲಿ ಕುಳಿತಳು.

ರಾಮರಾಜಪ್ಪ ಗ್ಲಾಸುಗಳನ್ನು ಸಿದ್ಧಗೊಳಿಸಿ, ಅದಕ್ಕೆ ಬ್ರಾಂದಿ ತುಂಬ ತೊಡಗಿದ. ಭಾಗ್ಯಮ್ಮ ಮೂರು ಸೋಡಾಶೀಷೆಗಳನ್ನು ತೆಗೆದುಕೊಂಡು ಒಡೆದು ಮಧ್ಯೆಯಿಟ್ಟಳು. ಮುತ್ತಮ್ಮ ತಿಂಡಿ ಪೊಟ್ಟಣ ಬಿಚ್ಚಿ, ಒಂದು ತಟ್ಟೆಗೆ ಸುರಿದು ಅದನ್ನೂ ಎಲ್ಲರ ಮಧ್ಯೆಯಿಟ್ಟಳು.

ಎಲ್ಲರೂ ಕೈಯಲ್ಲಿ ಗ್ಲಾಸುಗಳನ್ನು ಹಿಡಿದರು. ರಾಮರಾಜು, ವೀರಣ್ಣ, ಸೋಮು, ಸೋಡಾಶೀಷೆಗಳನ್ನು ತೆಗೆದುಕೊಂಡು ತಮ್ಮ ಗ್ಲಾಸಿಗೂ, ತಮ್ಮ ಪ್ರೇಯಸಿಯರ ಗ್ಲಾಸಿಗೂ ಸ್ವಲ್ಪ ಸ್ವಲ್ಪ ಹಾಕಿಕೊಂಡರು. ಭಾಗ್ಯಮ್ಮ ಸೋಡಾ ಶೀಷೆ ತೆಗೆದುಕೊಂಡು, ತನ್ನ ಗ್ಲಾಸಿಗೆ ಸ್ವಲ್ಪ ಸುರಿವಿಕೊಂಡಳು. ಮುತ್ತಮ್ಮ ಸೋಡಾ ನಿರಾಕರಿಸಿದಳು.

ಬಾಲೂ ತನ್ನ ಗ್ಲಾಸು ನೋಡುತ್ತಾ

"ಇಷ್ಟೊಂದು ನನಗೆ ಬ್ಯಾಡ್ರೀ" ಎಂದಳು.

"ಸಾಕು ಕುಡಿಯೇ ಪಕಾಲಿ. ಪೀಪಾಯಿ ಹೀರೋಳು ನೀನು ಈಗ ಬಡಿವಾರ ತೋರಿಸ್ತೀಯಾ." ಎಂದ.

ಮಧ್ಯೆ ಮಧ್ಯೆ ತಿಂಡಿ ರುಚಿ ನೋಡುತ್ತಾ ಎಲ್ಲರೂ ಗ್ಲಾಸು ಖಾಲಿ ಮಾಡಿದರು.

ಮುತ್ತಮ್ಮ ಕೈ ನೀಡಿ, ರಾಮರಾಜಪ್ಪನಿಂದ ಬಾಟಲು ತೆಗೆದುಕೊಂಡು ಅದನ್ನು ತನ್ನ ಗ್ಲಾಸಿಗೂ, ಭಾಗ್ಯಮ್ಮನ ಗ್ಲಾಸಿಗೂ ಖಾಲಿಮಾಡಿಕೊಂಡು, ಶೀಷೆಯನ್ನತ್ತ ಒಗೆದಳು.

ವೀರಣ್ಣ ಕಿಸೆಯಿಂದ ಸಿಗರೇಟ್ ಪ್ಯಾಕೆಟ್‌ಗಳನ್ನು ತೆಗೆದು ಎಲ್ಲರ ಮುಂದಿಟ್ಟು, ಕೆಲವು ಸಿಗಾರುಗಳನ್ನು ತೆಗೆದು ಎಲ್ಲರಿಗೂ ನೀಡಿದ. ರಾಮರಾಜಪ್ಪ, ಸೋಮಸುಂದರಂ ಒಂದೊಂದು ಸಿಗಾರ್ ತೆಗೆದುಕೊಂಡು ಹಚ್ಚಿದರು.

ಮುತ್ತಮ್ಮ ಗ್ಲಾಸಿನಲ್ಲಿದ್ದ ಮದ್ಯವನ್ನು ರುಚಿ ನೋಡುತ್ತಾ

"ಅವತ್ತು ಬಂದವರು ಏನಾಗಿಓಗಿ ಬಿಟ್ಟಿರಪ್ಪಾ – ನೀವಿಬ್ಬರೂ – ಇವತ್ತೇ ನಿಮ್ಮನ್ನ ಕಾಣ್ತಾ ಇರೋದು."

"ಇಲ್ಲಿ ಬರೋಕೆ ಪುರಸತ್ತೇ ಆಗ್ಲಿಲ್ಲಮ್ಮ"

ಎಂದು ಸೋಮೂ ಉತ್ತರಿಸಿದ.

"ಗುರ್ತು, ಪರಿಚಯ ಆದ ಮ್ಯಾಕೆ ಬಂದು ಓಗ್ತಾ ಇದ್ರೆ ತಾನೇ ಗ್ಯಪ್ತಿ ಉಳಿಯೋದು."

"ನೀನು ನಮ್ಮನ್ನು ಮರೆತಿಲ್ಲವಲ್ಲ."

"ಮರೆತಿಲ್ಲ ಸರಿ – ಬಂದೋಗ್ತಾ ಇರಿ."

ವೀರಣ್ಣ ಮೆಲ್ಲನೆ ರಾಮರಾಜಪ್ಪನ ಬಳಿ ಸರಿದು ಅವನ ಕಿವಿಯಲ್ಲೇನೋ ಪಿಸುಗುಟ್ಟಿದ. ರಾಮರಾಜಪ್ಪ 'ಆಗಲಿ' ಎಂದಂದು ಮುತ್ತಮ್ಮನಿಗೆ

"ವೀರಣ್ಣೋರು ಕೆಳಗೋಗ್ತಾರಂತೆ ನೋಡು ಮುತ್ತಮ್ಮ.– ನೀನೂ ಹೋಗೇ ಬಾಯಿಾ" ಎಂದು ಹೇಳಿದ.

"ಬಾಲೂಗೆ ಎಲ್ಲಾ ತಿಳಿದೈತೆ. ಅವಳೇ ಕರ್ಕೊಂಡೋಗ್ತಾಳೆ ಬುಡು"

ಎಂದು ಹೇಳಿದಳು. ಬಾಲೂ ವೀರಣ್ಣನನ್ನು ಕರೆದುಕೊಂಡು ಕೆಳಕ್ಕೆ ಹೋದಳು. ರಾಮರಾಜಪ್ಪ ಬಾಯಿಗೆ ಕಣ್ಸನ್ನೆ ಮಾಡಿದ. ಅವಳೆದ್ದು ಸೋಮುವನ್ನು ಕರೆದುಕೊಂಡು ಕೆಳಗಿಳಿದು ಹೋದಳು.

ಮುತ್ತಮ್ಮ ಕೈನೀಡಿ

"ಇದೆಲ್ಲಾ ಸರಿಓಗಾಕಿಲ್ಲ – ನನ್ನದು ನನಗೆ ಕೊಟ್ಬುಬಿಡಪ್ಪಾ"

ಎಂದಳು. ರಾಮರಾಜಪ್ಪ ಮುತ್ತಮ್ಮನ ಕೈಯಲ್ಲಿ ರಮ್ ಶೀಷೆಯನ್ನಿಟ್ಟ.

ಮುತ್ತಮ್ಮ ಶೀಷೆಯನ್ನು ಹಿಡಿದು ಎದ್ದುನಿಂತು "ನನಗೊಂದು ಛುರುಟು ಕೊಡು" ಎಂದಳು.

ಚಾಪೆಯ ಮೇಲೆ ಬಿದ್ದಿದ್ದ ಎರಡು ಸಿಗಾರ್ ತೆಗೆದುಗೊಂಡು ರಾಮರಾಜಪ್ಪ ಅವಳ ಕೈಯಲ್ಲಿಟ್ಟ.

ಮುತ್ತಮ್ಮ ಭಾಗ್ಯಮ್ಮನನ್ನು ವ್ಯಂಗವಾಗಿ ನೋಡಿ

" ಇಲ್ಲಿ ಕುತ್ಕೊಂಡು ಏನು ನೋಡ್ತೀ–ಎದ್ದೇಳು."

ಎಂದಳು. ಭಾಗ್ಯಮ್ಮ ನಗುತ್ತಾ ಎದ್ದು ನಿಂತಳು.

ಮುತ್ತಮ್ಮ ಹೋಗುತ್ತಾ

" ಹಾಸಿಗೆ ಕಳಿಸಿಕೊಡ್ತೀನಪ್ಪಾ " ಎಂದಳು.

ಪಾಪ ಮೆಟ್ಟಲು ಬಳಿ ಹೋಗಿ ನಿಂತಳು. ಅವಳ ಕೈಗೆ ಪುಟ್ಟ ಸುರಳಿಸುತ್ತಿದ ಒಂದು ಹಾಸಿಗೆ ತಂದುಕೊಟ್ಟಳು. ಪಾಪ ಹಾಸಿಗೆ ತಂದು ಗೋಡೆಯ ಪಕ್ಕದಲ್ಲಿ ಹಾಸಿ ಅದರ ಮೇಲೆ ಕುಳಿತಳು.

ರಾಮರಾಜಪ್ಪ ಕುಳಿತಲ್ಲಿಂದಲೇ

" ನನ್ನ ಎಬ್ಬಿಸಿ ಕರ್ಕೊಂಡು ಹೋಗು ಪಾಪಾ " ಎಂದ.

ಪಾಪಮ್ಮ ಎದ್ದು ಬಂದು ರಾಮರಾಜಪ್ಪನ ಕೈ ಹಿಡಿದು ಎಬ್ಬಿಸಿದಳು. ಹಾಸಿಗೆ ತಲುಪುವ ವೇಳೆಗೆ ರಾಮರಾಜಪ್ಪ ಅವಳನ್ನು ವಿವಸ್ತ್ರಳನ್ನಾಗಿ ಮಾಡಿದ್ದ. ಪಾಪ ಅವನ ಬಟ್ಟೆಗಳನ್ನೂ ಕಳಚಿದಳು. ರಾಮರಾಜಪ್ಪ ಅವಳ ಸ್ತನಗಳ ಮೇಲೆ ಕೈಯಾಡಿಸುತ್ತಾ

" ಎರಡು ಗೋಪುರಗಳಿದ್ದ ಹಾಗೆ ಇವೆ. ನಾನು ನಿನ್ನ ಎಂದಿಗೂ ಬಿಡುವುದಿಲ್ಲ ಪಾಪ " ಎಂದ.

" ನಾನೂ ನಿಮ್ಮನ್ನು ಬಿಡುವುದಿಲ್ಲ " ಎಂದವಳು ಉತ್ತರಿಸಿದಳು.

" ಸತ್ಯವೋ ? "

" ಸತ್ಯ ! "

" ಹೀಗೆ ಹೇಳಿದವರು ಬಹಳ."

" ನಂಗೂ ಕೆಲವರು ಆಸೆಯಿಟ್ಟು ಮೋಸಮಾಡಿದರು."

" ನಾನು ಮೋಸಗಾರನಲ್ಲ ! "

" ಅದಕ್ಕೇ ನಾನು ಸತ್ಯಮಾಡಿದ್ದು."

ಒಂದು ಗಂಟೆ ತರುವಾಯ ಇಬ್ಬರೂ ಎದ್ದು ವಸ್ತ್ರ ಧರಿಸಿದರು.

" ಕೆಳಕ್ಕೆ ಹೋಗಿ ನೋಡು ಪಾಪ – ಎಲೆ ಹಾಕವ್ರೇನೋ ? "

ಪಾಪ ಕೆಳಗಿಳಿದು ಹೋದಳು.

ಅಂದು ಹುಣ್ಣಿಮೆ ಇರಬೇಕು. ಚಂದ್ರ ತನ್ನ ಪೂರ್ಣಕಳೆಯಿಂದ ವಿರಾಜಿಸಿದ್ದ. ಬೆಳದಿಂಗಳು ಶತ್ರುಸೈನ್ಯದಂತೆ ರೂಮಿನೊಳಗೆ ನುಗ್ಗುತ್ತಿತ್ತು. ರಾಮರಾಜಪ್ಪ ಎದ್ದು ಬಂದು ಸಿಗರೇಟ್ ಹಚ್ಚಿಕೊಂಡು ಕಿಟಕಿಯಿಂದಾಚೆ ಕಾಣುತ್ತಿದ್ದ ಚಂದ್ರನನ್ನು ನೋಡುತ್ತ ನಿಂತ.

ಪಾಪ ಮೆಲ್ಲನೆ ಮಹಡಿಯೇರಿ ಬಂದ ರಾಮರಾಜಪ್ಪನ ತನ್ಮಯತೆ ಕಂಡು ಕ್ಷಣಕಾಲ ಸುಮ್ಮನೆ ನಿಂತಳು. ಅವಳ ಕಡೆಗೆ ರಾಮರಾಜಪ್ಪನ ಗಮನವೇ ಬೀಳಲಿಲ್ಲ. ಪಾಪ ಅವನ ತೋಳಿನ ಮೇಲೆ ಕೈಯಿಟ್ಟಳು. ರಾಮರಾಜಪ್ಪ ಅವಳ ಸೊಂಟವನ್ನಪ್ಪಿ ತನ್ನ ಸಮೀಪಕ್ಕೆ ಎಳೆದುಕೊಂಡ.

"ಎಲೆ ಹಾಕೈತೆ."

"ಹಾಕಲಿ. ಬೆಳದಿಂಗಳು ನೋಡು ಚೆನ್ನಾಗಿಲ್ಲವೇ ?"

"ಚೆಂದಾಕೈತೆ."

"ನೀನು ಕುಡೀತೀಯೋ ಇಲ್ಲವೋ ಎಂದು ನನಗೆ ಅನುಮಾನವಿತ್ತು ಪಾಪ !"

"ಏಕೆ ?"

"ನಿನ್ನ ನೋಡಿದರೆ ಸರ್ವೀಸಾದ ಪ್ರಾಣಿ ಹಾಗೆ ಕಾಣುವುದಿಲ್ಲ."

"ಹೆಂಗೆಲ್ಲಾ ನಾನು ಹೋಗಾಕಿಲ್ರೀ."

"ನಿನಗೆ ಕುಡಿಯೋದನ್ನ ಯಾರು ಕಲಿಸಿದ್ರು."

"ನನ್ನ ಗಂಡ."

"ಗಂಡನೇ ಕಲಿಸಿದನೇ ?"

"ಹೌದು. ಅವನು ಉಯ್ಕೊತಿದ್ದ. ಅವನ ಜತೆಯಲ್ಲಿ ನಾನೂ ನನ್ನ ತಮ್ಮ ಕುಡೀಲೇಬೇಕೂಂತ ಅಟಮಾಡ್ತಿದ್ದ. ನಾನು ಸೊಲ್ಪ ಆಕ್ಕೊಂಡು ಸುಮ್ಮಾಕ್ತಿದ್ದೆ – ನನ್ನ ತಮ್ಮ ಪೂರಾ ಅಭ್ಯಾಸ ಮಾಡ್ಕೊಂಡ."

"ಕುಡಿಯೋದು ಒಳ್ಳೆಯದಲ್ಲ ಎಂದು ನಾನು ಹೇಳಿದರೆ ನಗು ಬರುತ್ತದಲ್ಲವೇ ?"

"ಯಾಕೆ ?"

"ನಾನೇ ಭರ್ತಿ ಕುಡಿದಿದ್ದೀನಿ."

" ಕುಡೀಬಾರ್ದ್ದೂಂತ ಯಾಕಂತೀರಿ ? "

" ಬಡವರು ಸಂಪಾದಿಸೋದು ಅವರ ಹೊಟ್ಟೆಗೇ ಸಾಲುವುದಿಲ್ಲ. ಇದೂ ಅಭ್ಯಾಸವಾದರೆ ಅವರು ಪೂರೈಸುತ್ತಾರೆಯೇ ? "

" ಅಷ್ಟೇ ಅಲ್ಲ ದಣಿ – ಇನ್ನೂ ಒಂದು ಸಮಾಚಾರ ಏಳ್ತೀನಿ. ನನ್ನ ಗಂಡ, ತಮ್ಮನ ಕುಡಿತಕ್ಕೆ ಅಣ ಒದಗಿಸೋಕೆ ನಾನು ನೈ ದುಡಿಸ ಬೇಕಾಯ್ತು."

" ನಿನ್ನ ಗಂಡ ಅಷ್ಟು ಕೆಟ್ಟವನೇ ? "

" ಅಲ್ಲ – ಮನುಸ ತುಂಬ ಒಳ್ಳೆಯವನು ಮೊದಲಿಂದಲೂ ಅವನಿಗೆ ಕುಡಿಯೋ ಅಭ್ಯಾಸ ಇರ್ನಿಲ್ಲ. ಎರಡು ವರ್ಸದಾಗೆ ಮಿಲ್ ಬಾಗಿಲುಹಾಕಿ ಕೆಲಸದೋರ್ನ ಮನೇಕೆ ಕಳಿಸಿಬಿಟ್ರು. ಕೆಲಸ ಓದ ಯಸನದಲ್ಲಿ ನಮ್ಮನೇಯವನು ಕುಡಿಯೋದು ಜೋರುಮಾಡಿದ. ಮಿಲ್ಲು ಮತ್ತೆ ಷುರುವಾಯ್ತು–ಓದ ಕೆಲ್ಸ ಸಿಕ್ತು – ಆದರೆ ಈ ಚಾಳಿ ಅಂಗೇ ನಿಂತುಬುಡ್ತು. ಆಗ ಕುಡಿಯೋಕೆ ಕಾಸು ಕೊಡದಿದ್ರೆ ಅಮ್ಮನ್ನ ನನ್ನ ಇಡ್ಕೊಂಡು ಉಯ್ತಿದ್ದ. ನಾನು ಅದನ್ನು ತಡೀಲಾರ್ದೆ ಊದಕಡ್ಡೀ ಮಾಡ್ತೀನೀಂತ ಏಳಿ ಓಗಿ ದುಡ್ಡು ತರ್ತಿದೆ."

" ನೀನು ಹೇಳುವುದು ಕೇಳಿದರೆ ಮನಸ್ಸಿಗೆ ಏನುಏನೋ ಆಗುತ್ತದೆ. ಪಾಪ. ಈ ಹಾಳು ಕಸುಬೇ ಬಿಟ್ಟುಬಿಡೋಣ ಎನಿಸ್ತದೆ."

" ನೀವು ಅಂಗೆ ಮಾಡಿದ್ರೆ ನಮಗ್ಯಾರು ದಿಕ್ಕು."

" ಎಲ್ಲರಿಗೂ ಯಾರು ದಿಕ್ಕೋ ಅವರೇ."

" ಯಾರವರು ? "

" ಭಗವಂತ "

" ಈ ಕಸುಬಿಗೆ ನಾವು ಯಾಕ ಬತ್ತೀವಿ ಎನ್ನೋದು ಜನಕ್ಕೆ ಗೊತ್ತಾಗಾಕಿಲ್ಲ. ನಮ್ಮನ್ನ ಕಸಕಂಡ ಅಂಗೆ ಕಾಣ್ತಾರೆ. ನಿಮ್ಮಂಥಾವ್ರು ಯಾರಾದರೂ ಒಬ್ಬರು ನಮ್ಮನ್ನ ಗೌರವವಾಗಿ ಕಂಡು, ಪ್ರೀತಿ, ತೋರ್ಸಿದ್ರೆ ಕಳ್ಳು ಕಿತ್ತು ಬತ್ತೈತೆ, ಆಗ ಭಗವಂತ ಇರೋದು ಸುಳ್ಳಲ್ಲ ಎನಿಸ್ತೈತೆ."

ರಾಮರಾಜಪ್ಪನ ಅಂತರಂಗದಲ್ಲಿ ಅಲ್ಲೋಲಕಲ್ಲೋಲವಾಯಿತು. ಕತ್ತು ತಗ್ಗಿಸಿ ನಿಂತುಬಿಟ್ಟ.

ಕೆಳಗೆ ಮುತ್ತಮ್ಮ 'ಎಲೆ ಹಾಕಿದೆ ಬನ್ನಿ' ಎಂದು ಕೂಗಿದಳು. ಪಾಪ ರಾಮರಾಜಪ್ಪನ ಕೈಹಿಡಿದು ಕರೆದುಕೊಂಡು ಹೋದಳು.

ತೊಟ್ಟಿಯಲ್ಲಿ ಎಲ್ಲರಿಗೂ ಎಲೆ ಹಾಕಲಾಗಿತ್ತು. ಭಾಗ್ಯಮ್ಮ ಮುತ್ತಮ್ಮ ಬಡಿಸುವುದಕ್ಕೆ ನಿಂತಿದ್ದರು.

ಮುತ್ತಮ್ಮನೂ ತಮ್ಮ ಜತೆ ಊಟಕ್ಕೆ ಕೂಡಬೇಕೆಂದು ರಾಮರಾಜಪ್ಪ ಹಟ ಹಿಡಿದ. ಮುತ್ತಮ್ಮ ಒಂದು ಎಲೆ ಹಾಕಿಕೊಂಡು ಕುಳಿತಳು. ಭಾಗ್ಯಮ್ಮ ಪುಟ್ಟ ಬಡಿಸುವುದಕ್ಕೆ ನಿಂತರು. ನೀರಿನ ಬದಲು ರಾಮರಾಜಪ್ಪ ಮದ್ಯವನ್ನೇ ಸೇವಿಸುತ್ತಿದ್ದ. ಅವನ ಜತೆ ಸ್ಪರ್ಧೆಹೂಡಿ ವೀರಣ್ಣ, ಸೋಮಸುಂದರಂ ಮದ್ಯದ ಶೀಷೆಗಳನ್ನು ಖಾಲಿ ಮಾಡಲುದ್ಯುಕ್ತರಾಗಿದ್ದರು.

ಊಟ ಮುಗಿಸಿಕೊಂಡು ಎಲ್ಲರೂ ಮಹಡಿ ಸೇರಿದರು. ಅಲ್ಲಿಗೇ ಮುತ್ತಮ್ಮ ತಾಂಬೂಲ ಕಳಿಸಿಕೊಟ್ಟಳು.

ಮುತ್ತಮ್ಮನಿಗೆ ಕಾಯುತ್ತ ಎಲ್ಲರೂ ಕುಳಿತರು.

ಭಾಗ್ಯಮ್ಮನಿಗೆ ಬಡಿಸಿ ಮುತ್ತಮ್ಮ ಅವಳನ್ನು ಕರೆದುಕೊಂಡು ಮೇಲಕ್ಕೆ ಬಂದು, ಎಲ್ಲರೂ ತಾಂಬೂಲ ಮುಟ್ಟದೆ ಕುಳಿತಿರುವುದನ್ನು ಕಂಡು

" ಅಯ್ಯೊ–ಎಲೆ ಹಾಕ್ಕೊಳ್ಳೀಪ್ಪ. ಮಡಿಸಿಕೊಡರೇ " ಎಂದಳು.

" ನಿನ್ನ ಬಿಟ್ಟು ಎಲೆ ಹಾಕಿಕೊಳ್ಳುವುದೇ ಮುತ್ತಮ್ಮ "

ಎಂದು ರಾಮರಾಜಪ್ಪ ಉಪಚಾರ ಹೇಳಿದ. ಬಾಲೂ, ಬಾಯಿ, ಪಾಪ ಎಲ್ಲರಿಗೂ ಎಲೆ ಮಡಿಸಿಕೊಟ್ಟರು. ಮುತ್ತಮ್ಮ, ಭಾಗ್ಯಮ್ಮನೂ ಬಾಯಿತುಂಬ ಎಲೆ ತುರುಕಿಕೊಂಡರು.

" ಅಡಿಗೆ ಎಂಗಿತ್ತೋ ಏನೊ–ಆರಿ ತಂಗಳಾಗಿತ್ತೇನೋ ? "

ಎಂದಳು ಮುತ್ತಮ್ಮ.

" ಸೊಗಸಾಗಿತ್ತಮ್ಮ."

ಎಂದು ವೀರಣ್ಣ ತನ್ನ ಮೆಚ್ಚುಗೆ ತೋರಿಸಿದ.

" ಇದು ನಿನ್ನ ಪಾರ್ಟಿಯಾಯಿತು ರಾಮರಾಜೂ ನನ್ನ ಪಾರ್ಟಿ ಯಾವಾಗ ಮಾಡಿಸೋಣ ಹೇಳು."

" ನೀನು ಹೇಳಿದಾಗ ಆಗಲಿ ಸೋಮೂ–ಏನು ಮುತ್ತಮ್ಮ."

" ವಾರ, ಎಲ್ಡು ವಾರ ಬಿಟ್ಟು ಇಟ್ಕೊಳ್ಳೀಯಪ್ಪಾ."

" ನನ್ನದಾದ ಮೇಲೆ ವೀರಣ್ಣಂದು ಪಾರ್ಟಿ."

" ಆಗಬಹುದು-ನನ್ನ ಪಾರ್ಟಿ ನಾಳೆಯೇ ಇಟ್ಟುಕೊಳ್ಳಿ ನಾನು ಬೇಡವೆನ್ನುವುದಿಲ್ಲ."

ಎಂದು ವೀರಣ್ಣ ಉತ್ಸಾಹಭರಿತನಾಗಿ ನುಡಿದ.

" ಬಾಲೂ ಚೆನ್ನಾಗಿ ಮಂಕುಬೂದಿ ಎರಚಿದ್ದಾಳೆ."

" ಒಳ್ಳೆಯ ಹುಡುಗಿ ಕಣಯ್ಯಾ."

" ಸಂತೋಸಆಯ್ತು ಅಣ್ಣಪ್ಪಾ-ನಿಂಗೆ ಸೋಮುಸುಂದರಪ್ಪ."

ಎಂದು ಮುತ್ತಮ್ಮ ಕೇಳಿದಳು. ಸೋಮು ಮುಖ ನಾಚಿಕೆಯಿಂದ ಕೆಂಪೇರಿತು. ಅವನ ಹಣೆಯಮೇಲೆ ಬೆವರು ಸಾಲು ಕಾಣಿಸಿಕೊಂಡಿತು.

" ಹೆಂಗಸಿನ ಹಾಗೆ ನಾಚಿಕೊಳ್ಳುತ್ತೀಯಲ್ಲಯ್ಯಾ. ಹೇಳು. ಇಲ್ಲಿ ಹೊಸಬರು ಯಾರೂ ಇಲ್ಲವಲ್ಲ."

" ಸಂತೋಷವಾಗಿತ್ತಮ್ಮ."

ಎಂದು ಸೋಮು ಹೇಳಿದ. ಬಾಲೂ, ಬಾಯಿ, ಪಾಪನಿಗೆ ನಗೆ ತಡೆಯಲಾಗಲಿಲ್ಲ."

" ಇವರಿಬ್ಬರೂ ಬಾಲೂನ ಬಾಯೀನ ಕೂಡಿಕೆ ಮಾಡಿಕೊಳ್ಳೋಕೆ ತಯಾರಾಗಿದ್ದಾರೆ ಮುತ್ತಮ್ಮ. ಒಳ್ಳೆಯ ಮುಹೂರ್ತ ನೋಡಿ ವಾಲಗ ಊದಿಸಿಬಿಡು. ಏನ್ರೇ ನೀವೇನಂತೀರಿ."

ಎಂದು ಬಾಲೂ, ಬಾಯಿಯ ಕಡೆ ತಿರುಗಿ ರಾಮರಾಜಪ್ಪ ಕೇಳಿದ. ಬಾಲೂ ಉತ್ತರ ಕೊಡಲಿಲ್ಲ. ಬಾಯಿಗೆ ಮದ್ಯ ತಲೆಗೇರಿತ್ತು,

" ಕೂಡಿಕೆ ಆಗೋಯ್ತಲ್ಲಣ್ಣಾ " ಎಂದಳು.

" ಅದಲ್ಲವೇ-ಶಾಸ್ತ್ರೋಕ್ತ ಕೂಡಿಕೆ."

" ನಿಂಗೇನು ಬೇಕೋ ಮಾಡಿಸಿಬಿಡಣ್ಣ-ಬ್ಯಾಡ ಅಂತೇನಾ"

ಎಂದಳು. ಎಲ್ಲರೂ ಆವಳ ಮಾತಿಗೆ ಗಹಗಹಿಸಿ ನಕ್ಕರು.

" ನೀನೊಂದು ಹೆರಿಗೆ ಆಸ್ಪತ್ರೆಯೇ ತೆಗೆಯಬೇಕಾಯಿತು ಮುತ್ತಮ್ಮ."

" ಯಾಕಪ್ಪಾ ?"

" ಮನೆತುಂಬ ಮೊಮ್ಮಕ್ಕಳಾಗುತ್ತಾರೆ."

" ಎಲ್ಲೋ ಭ್ರಾಂತು. ಇವ್ಕೂ ಆ ಬಾಗ್ಯವಿಲ್ಲ-ನಂಗೂ ಆ ಬಾಗ್ಯವಿಲ್ಲ."

ಎಂದು ಮುತ್ತಮ್ಮ ಕಟುವಾಗಿ ನುಡಿದಳು. ಅವಳ ಮಾತಿಗೆ ಎಲ್ಲರೂ ನಕ್ಕರು. ಪಾಪ ಮುಖ ಕೆಳಗೆ ಮಾಡಿದಳು. ಈ ವಿಷಯ ಪ್ರಸ್ತಾಪಿಸಿದ್ದು ಅನುಚಿತವಾಯಿತೆಂದು ರಾಮರಾಜು ಗ್ರಹಿಸಿ

" ಮಲಿಕ್ಕೊಳ್ಳೋಣ-ನಿದ್ದೆ ಬರ್ತಾ ಇದೆ " ಎಂದ.

ನಿರ್ದೇಶವಾಗಿದ್ದ ಸ್ಥಳಗಳಿಗೆ ಎಲ್ಲರೂ ಎದ್ದು ಹೋದರು.

ಲಾಂದ್ರದ ಬೆಳಕು ಸಣ್ಣದು ಮಾಡಿ ಪಾಪ ಕಿಟಕಿಯ ಬಳಿ ನಿಂತಳು. ರಾಮರಾಜಪ್ಪ ಎದ್ದು ಅವಳ ಸಮೀಪಕ್ಕೆ ಬಂದು

" ಯಾಕೆ ಪಾಪ, ಯೋಚಿಸ್ತಾ ನಿಂತೆ."

" ನಮ್ಮಂಥಾವ್ರಿಗೆ ಮಕ್ಕಳಾಗಲ್ವೇ ಧಣಿ."

" ಆಗಲ್ಲ ಎಂದು ಯಾರು ಹೇಳಿದರು."

" ಮುತ್ತಮ್ಮ ಈಗತಾನೆ ಹೇಳಿದಳಲ್ಲ."

" ಸರಿ-ಅವಳ ಮಾತೊಂದು ಲೆಕ್ಕದ್ದೇ ಹೇಳು. ಕುಡಿದು ಏನೋ ಬೊಗಳಿದಳು."

ರಾಮರಾಜಪ್ಪನ ಸಮಾಧಾನೋಕ್ತಿ ಪಾಪನ ಮನಸ್ಸಿಗೆ ನೆಮ್ಮದಿಯನ್ನು ಉಂಟುಮಾಡಲಿಲ್ಲ. ತನ್ನ ಯೋಚನೆಯಲ್ಲೇ ಅವಳು ತಲ್ಲೀನಳಾಗಿದ್ದಳು. ರಾಮರಾಜಪ್ಪ ಅವಳನ್ನು ಮೃದುವಾಗಿ ನೇವರಿಸಿ

" ಮಕ್ಕಳಾಗಬೇಕೆಂದು ತುಂಬ ಆಸೆಯಿದೆಯೇ ಪಾಪ."

" ಇದೆ ಧಣಿ........ನಿಮ್ಮಲ್ಲಿ........"

" ಪಾಪ-ಪಾಪ........!"

ಎಂದವನೇ ರಾಮರಾಜಪ್ಪ ಅವಳನ್ನು ಗಾಢಾಲಿಂಗನದಲ್ಲಿ ವಶಪಡಿಸಿಕೊಂಡ.

ಮುತ್ತಮ್ಮನ ಜಾಗಟೆಯ ಧ್ವನಿಯೇ ಬೆಳಗಾಯಿತೆಂಬುದನ್ನು ಸೂಚಿಸಿತು. ರಾಮರಾಜಪ್ಪನಿಗೆಚ್ಚರವಾಗಿದ್ದರೂ ಅವನು ಕಣ್ಣು ಮುಚ್ಚಿಕೊಂಡು ಮಲಗಿಯೇ ಇದ್ದ. ಪಾಪ ಎದ್ದು ಅವನನ್ನೇ ಎವೆಯಿಕ್ಕದೆ ನೋಡುತ್ತ ಕುಳಿತ್ತಿದ್ದಳು. ರಾಮರಾಜಪ್ಪ ಕಣ್ಣುಬಿಟ್ಟು ಪಾಪನನ್ನು ನೋಡಿ ಮೃದುವಾಗಿ ಅವಳ ಕೆನ್ನೆಯಮೇಲೆ ಕೈಯಾಡಿಸಿ

" ಬೇಗ ಎದ್ದುಬಿಟ್ಟೆ " ಎಂದ.

" ಐದಕ್ಕೇ ನನಗೆ ಎಚ್ಚರವಾಗಿಬಿಡುತ್ತೆ. ಅವನು ಮನೆಬಿಟ್ಟು ಓಗೋ ಒತ್ಗೆ ಅಡಿಗೆಮಾಡಿ ಊಟ ಕಟ್ಟಿಕೊಡಬೇಕು."

" ಇವತ್ತು ಆ ಕೆಲಸ........"

" ಅಮ್ಮ ಮಾಡಿರ್ತಾಳೆ."

" ಅವನು ಕೇಳಿದರೆ ಏನು ಹೇಳುತ್ತೀ."

" ಊದಕಡ್ಡಿ ಫ್ಯಾಕ್ಟರಿಯಲ್ಲಿ ರಾತ್ರಿಕೆಲಸ ಬೀಳೋ ವಿಷಯ ಅವನಿಗೆ ಗೊತ್ತೈತೆ."

" ನಿನ್ನ ಮುಖದಲ್ಲಿ ವಿಚಿತ್ರಕಳೆ ಬಂದಿದೆ ಪಾಪ ! "

" ಹೌದು-ಬಂದಿರಬೇಕು ಧಣಿ."

" ಏಕೆ ಹಾಗೆನ್ನುವೆ."

" ನನ್ನ ಮನಸ್ಸು ಸಂತೋಸವಾಯ್ತು. ಇದುವರೆಗೆ ನಾನು ಮಾಡಿದ್ದು ಹಾದರ........"

" ನಿನ್ನೆ ರಾತ್ರಿಯದು........ "

" ಅದೇ ಬೇರೆ ಅನಿಸ್ತು."

" ಕಾರಣ........"

" ನಾನಿನ್ನು ಬಂಜೆಯಾಗಿರಲ್ಲ ಧಣಿ."

" ರಾಮರಾಜಪ್ಪ ಹಾಗೇ ಪಾಪನನ್ನು ಎಳೆದುಕೊಂಡು ಅವಳ ಮುಖದ ಮೇಲೆ ಮುದ್ದಿನ ಮಳೆಗರೆದ.

ಕೈಯಲ್ಲಿ ಎರಡು ಲೋಟ ಕಾಫಿ ಹಿಡಿದು ಪುಟ್ಟಿ ದಡಕನ್ನೆ ಬಂದು ಬಿಟ್ಟಳು. ಪಾಪ ಚಕಿತಳಾಗೆದ್ದು ಸೆರಗು ಸರಿಮಾಡಿಕೊಂಡಳು.

" ಕಾಫಿ ತಂದಿದ್ದೀನಿ ಅಣ್ಣಯ್ಯಾ"

ರಾಮರಾಜಪ್ಪ ಎದ್ದು ಕುಳಿತು

" ಕೊಡಮ್ಮ " ಎಂದ.

" ರಾತ್ರಿ ಚೆಂದಾಕಿ ನಿದ್ರೆ ಬಂತೇ ಅಣ್ಣಯ್ಯ"

" ಬಂತಮ್ಮ. ನನ್ನ ಸ್ನೇಹಿತರು ಎದ್ದರೇ ? "

" ಓ ! ಆಗಲೇ ಎದ್ದರು. ನಿನ್ನ ತಮ್ಮ ಚಿಕ್ಕಣ್ಣ ಬಂದನ್ನೆ ಅಕ್ಕಯ್ಯಾ."

" ಒಳ್ಳೆಯದು – ಕೂತಕೋಂತ ಹೇಳು."

" ಕೆಳಗೆ ಬತ್ತೀಯಾ ಅಣ್ಣಯ್ಯ."

" ಬತ್ತಾರೆ – ನೀನು ಹೋಗು ಪುಟ್ಟ"

ಎಂದು ಪಾಪ ಹೇಳಿದಳು. ಪುಟ್ಟ ಅವರು ಕುಡಿದ ಗ್ಲಾಸುಗಳನ್ನು ಕೈಗೆ ತೆಗೆದುಕೊಂಡು ಸಡಗರದಿಂದ ಹೋದಳು.

" ನನಗೊಂದು ಉಪಕಾರ ಮಾಡುವಿರಾ ಧಣಿ "

ಎಂದು ಪಾಪ ಕೇಳಿದಳು. ರಾಮರಾಜಪ್ಪ ಅವಳ ಗಲ್ಲಹಿಡಿದು

" ಉಪಕಾರವೇನು ಬಂತು. ಹೇಳು."

" ಇವತ್ತು ನಮ್ಮ ಮನೆಗೆ ಊಟಕ್ಕೆ ಬನ್ನಿ, ನಾನು ಅಡಿಗೆ ಮಾಡಿ ನಿಮಗೆ ಬಡಿಸಬೇಕೆಂದಿದ್ದೇನೆ."

" ನನಗೆ ತುಂಬ ಕೆಲಸವಿದೆಯಲ್ಲಾ ಪಾಪ."

" ನಿಮ್ಕೆಲಸಾ ಮುಗಿಸಿಕೊಂಡು ಬನ್ನಿ. ಅಮ್ಮನಿಗೆ ನಿಮ್ಮ ಗುರುತು ಮಾಡಿಕೊಡಬೇಕೂಂತ ಆಸೆ."

" ನನಗೆ ನಿಮ್ಮನೆ ಯಾರು ತೋರಿಸ್ತಾರೆ."

" ಚಿಕ್ಕಣ್ಣ ತೋರಿಸ್ತಾನೆ."

" ಮೈಸೂರು ರೋಡಿನಲ್ಲಿ ನಾನು ಮನೆ ಕಟ್ಟಿಸ್ತಾ ಇದ್ದೀನಿ. ಚಿಕ್ಕಣ್ಣನ್ನ ಅಲ್ಲಿಗೆ ಹನ್ನೆರಡು ಗಂಟೇಗೆ ಕಳಿಸಿಕೊಡು. ಅವನ ಜತೆ ಬರ್ತೀನಿ."

" ನೀವಿರೋ ತಾವ ಅವನಿಗೆ ಗೊತ್ತಾಗ್ತೈತಾ."

" ಬೆಂಗಳೂರು ಪ್ರೆಸ್ಸಿನ ಹತ್ತಿರ ಬಂದು ಯಾರನ್ನ ಕೇಳಿದರೂ ಹೇಳ್ತಾರೆ. ನಾನು ಸರಿಯಾದ ಅಡ್ರೆಸ್ ಗುರ್ತು ಹಾಕ್ಕೊಡ್ತೀನಿ."

" ಹಾಗೇ ಮಾಡಿ "

ರಾಮರಾಜಪ್ಪ ಕಿಸೆಯಿಂದ ಫೌಂಟನ್ ಪೆನ್, ಒಂದು ಕಾಗದದ ಚೂರು ತೆಗೆದು ತನ್ನ ಸರಿಯಾದ ವಿಳಾಸ ಬರೆದು ಪಾಪನ ಕೈಗೆ ಕೊಟ್ಟು

" ನೀನೀಗಲೇ ಹೊರಡುತ್ತೀಯಾ ? " ಎಂದು ಕೇಳಿದ.

" ಯಾಕೆ ? "

" ನಾನಿಲ್ಲೇ ಸ್ನಾನ ಮಾಡ್ತೀನಿ – ನಾನು ಹೊರಡೋವರೆಗೆ ನೀನು ಇರು."

" ಅಂಗೇ ಆಗಲಿ."

" ನನ್ನ ಕೋಟಿನ ಜೇಬಿನಲ್ಲಿ ಪರ್ಸಿದೆ – ತೆಗೆದುಕೊ."

ಪಾಪ ಪರ್ಸ್ ತೆಗೆದು ರಾಮರಾಜಪ್ಪನ ಕೈಯಲ್ಲಿಟ್ಟಳು. ರಾಮರಾಜ್ಪು ಅದರೊಳಗಿನಿಂದ ಒಂದು ಕಂತೆ ನೋಟು ತೆಗೆದು ಹತ್ತು ರೂಪಾಯಿಗಳ ಹತ್ತು ನೋಟು ಆರಿಸಿಕೊಂಡು ಪಾಪನ ಕೈಯಲ್ಲಿಟ್ಟ.

" ಇದೇಕೆ – ಇಷ್ಟೊಂದು."

" ಪಾಪನ ಪಾಪನಿಗೆ."

ಪಾಪನ ಹೃದಯದಿಂದ ಕೃತಜ್ಞತೆ ಉಕ್ಕಿಹರಿಯಿತು. ನೋಟುಗಳನ್ನು ಹಾಸಿಗೆಯ ಮೇಲಿಟ್ಟು ರಾಮರಾಜಪ್ಪನ ಎರಡು ಪಾದಗಳನ್ನು ಮುಟ್ಟಿ ನಮಸ್ಕರಿಸಿದಳು.

" ಮನೇಗೆ ಬರ್ತೀರಾ ಧಣಿ."

" ಖಂಡಿತ ಬರುತ್ತೇನೆ. ನೀನು ಮನೆಗೆ ಹೋಗುವಾಗ ಪೇಟೆಯ ಮೇಲೆ ಹಾದುಹೋಗು."

" ಏಕೆ ? "

" ನಿನಗೆಂಥ ಸೀರೆ ಬೇಕೋ ಅದನ್ನು ತೆಗೆದುಕೊಂಡು ಹೋಗು."

" ಆಗಲಿ."

" ನನ್ನ ಸ್ನಾನಕ್ಕೆ ನೀರು ನೋಡು – ಮುತ್ತಮ್ಮನ್ನ ಇಲ್ಲಿಗೆ ಕಳುಹಿಸು. ಇನ್ನೊಂದು ವಿಷಯ – ನಾನು ದುಡ್ಡು ಕೊಟ್ಟೆನೆಂದು ಮುತ್ತಮ್ಮನಿಗೆ ಹೇಳ ಬೇಡ. ಅದಕ್ಕೂ ಅವಳು ಪಾಲಿಗೆ ಬರುತ್ತಾಳೆ."

" ಹೇಳುವುದಿಲ್ಲ "

ಎಂದು ನೋಟುಗಳನ್ನು ಉಡಿಯಲ್ಲಿ ಸೇರಿಸಿಕೊಂಡು ಕೆಳಗಿಳಿದು ಹೋದಳು.

ಅವಳು ಹೋದ ಸ್ವಲ್ಪಹೊತ್ತಿನೊಳಗಾಗಿ ಮುತ್ತಮ್ಮ ಮಹಡಿಮೇಲಕ್ಕೆ ಬಂದು

" ಏನಪ್ಪಾ – ಕರೆದೆಯಂತೆ."

" ಸ್ವಲ್ಪ ಕೂತುಕೊ ಬಾ ಮುತ್ತಮ್ಮ"

ಮುತ್ತಮ್ಮ ಕುಳಿತುಕೊಂಡ ಮೇಲೆ

" ಏನು ಕೊಡಬೇಕು ಹೇಳಿಬಿಡು."

"ಇದೇನಪ್ಪಾ ಇಂಗೆ ಕೇಳ್ತಿ – ನಿನಗೆ ಯಾವಾಗ ನಾನು ಯಾಪಾರ ಹೇಳಿದ್ದೆ."

"ಹಿಡಿ"

ಎಂದು ಅವಳ ಕೈಗೆ ಒಂದು ಕಂತೆ ನೋಟು ಕೊಟ್ಟು

"ಎಷ್ಟಿದೆ ಏಣಿಸು" ಎಂದ.

ಮುತ್ತಮ್ಮ ಸಾವಕಾಶವಾಗಿ ಎಣಿಕೆಹಾಗಿ

"ನೂರಮೂವತ್ತು ಐತೆ."

"ಅವರು ಮೂರು ಜನಕ್ಕೆ ಇಪ್ಪತ್ತೈದು, ಇಪ್ಪತ್ತೈದು – ನಿನಗೆ ಇಪ್ಪತ್ತೈದು – ನೂರಾಯಿತಲ್ಲವೆ! ಭಾಗ್ಯಮ್ಮನಿಗೆ ಇಪ್ಪತ್ತು, ಪುಟ್ಟನಿಗೆ ಹತ್ತು– ಸರಿಹೋಯಿತೋ?"

"ನೀನು ಬಿಡಪ್ಪ ದೊರೆ ಮಗ – ನಿನ್ನ ಮಾತಿಗೆ ನಾನೇನು ಏಳಲಿ– ಸಾನಕ್ಕೆ ನೀರು ಕಾದೈತೆ, ಕೆಳೀಕ್ಕೆ ಬತ್ತೀಯೇನು?"

"ಇಗೊ ಬಂದೆ"

ಎಂದು ರಾಮರಾಜಪ್ಪನು ಕೋಟನ್ನು ಕೈಯಲ್ಲಿಯೇ ಹಿಡಿದುಕೊಂಡು ಕೆಳಗಿಳಿದು ಬಂದ.

ವೀರಣ್ಣ, ಸೋಮಸುಂದರಂ ಹೊರಡಲು ಸಿದ್ಧವಾಗಿದ್ದರು. ರಾಮ ರಾಜಪ್ಪ ಅವರಿದ್ದಲ್ಲಿಗೆ ಬಂದು

"ನಿದ್ದೆ ಆಯ್ತೇನ್ರಯ್ಯಾ" ಎಂದ.

"ನಿದ್ದೆ ಮಾಡೋದಿಕ್ಕೆ ಬಂದೆವೇನೋ ರಾಜೂ"

ಎಂದು ವೀರಣ್ಣ ಹಾಸ್ಯಮಾಡಿದ.

"ಭರ್ಜರಿ ಪಾರ್ಟಿ ಮಾಡಿಸಿಬಿಟ್ಟೆ ರಾಜು"

ಎಂದು ಸೋಮು ಸಂತೋಷ ವ್ಯಕ್ತಮಾಡಿದ.

"ನಾವು ಹೊರಡೋಣವೋ?"

"ಹೊರಡಿ – ನಾನು ಇಲ್ಲೇ ಸ್ನಾನಮಾಡಿಕೊಂಡು, ಮೈಸೂರು ರೋಡಿಗೆ ಹೋಗ್ತೀನಿ. ನೀವು ಎಷ್ಟು ಹೊತ್ತಿಗೆ ಬರುತ್ತೀರಿ."

"ಹತ್ತು ಗಂಟೆಗೆ ಬರುತ್ತೇವೆ."

ಎಂದರು. ರಾಮರಾಜಪ್ಪ ಮುತ್ತಮ್ಮನನ್ನು ಕೂಗಿ

"ನನ್ನ ಸ್ನೇಹಿತರು ಹೊರಡುತ್ತಾರಂತಮ್ಮ" ಎಂದ.

"ಒಳ್ಳೆಯದಪ್ಪ – ಬರ್‍ತಾ ಇರ್ರಪ್ಪ – ಮರೀಬೇಡಿ"

ಎಂದು ಮುತ್ತಮ್ಮ ಉಪಚಾರ ಹೇಳಿದಳು.

ವೀರಣ್ಣ, ಸೋಮಸುಂದರಂ ಹೋದ ಹತ್ತು ನಿಮಿಷಗಳ ತರುವಾಯ ಬಾಲೂ, ಬಾಯಿಯನ್ನು ಮುತ್ತಮ್ಮ ಸಾಗಹಾಕಿದಳು.

"ಸ್ವಲ್ಪ ಬಿಸಿ ಕಾಫಿ ತರಿಸು ಮುತ್ತಮ್ಮ"

"ತಿಂಡಿ ತರಿಸಬೇಡವಾ ?"

"ತರಿಸು – ನನಗೆ ಕಾಫಿ ಸಾಕು."

ಭಾಗ್ಯಮ್ಮನನ್ನು ಕರೆದು ಮುತ್ತಮ್ಮ

"ಮೊದಲು ರಾಮರಾಜಪ್ಪನಿಗೆ ಬಿಸಿ ಕಾಪಿ ತಂದ್ಕೊಟ್ಟು, ಎಲ್ಲರಿಗೂ ದೋಸೆ, ವಡೆ ತಕಂಡು ಬಾರವ್ವ"

ಎಂದು ಹೇಳಿ ಕೈಗೆ ದುಡ್ಡು ಕೊಡಹೋದಳು. ರಾಮರಾಜಪ್ಪ ಅವಳನ್ನು ತಡೆದು ತಾನೇ ಭಾಗ್ಯಮ್ಮನ ಕೈಗೆ ಐದು ರೂಪಾಯಿಯ ಒಂದು ನೋಟು ಕೊಟ್ಟು ಎದ್ದುಹೋಗಿ ಪಕ್ಕದಲ್ಲಿದ್ದ ರೂಮಿನಲ್ಲಿ ಕುಳಿತುಕೊಂಡ. ಪಾಪ ಬಂದು

"ಸ್ನಾನಕ್ಕೆ ನೀರು ಸಿದ್ದವಾಗ್ಯೆತೆ" ಎಂದಳು.

"ತಡೀ – ಕಾಫೀಗೆ ಕಳಿಸಿದ್ದೀನಿ, ಬರಲಿ. ಚಿಕ್ಕಣ್ಣನ್ನ ಇಲ್ಲೀ ಕರಿ."

ಚಿಕ್ಕಣ್ಣ ರೂಮಿನೊಳಗೆ ಬರಲು

"ಈಗಲೇ ಪಾಪನ್ನ ಕರ್‍ಕೊಂಡುಹೋಗಿ ಒಳ್ಳೆಯ ಸೀರೆ ಕೊಡಿಸು. ನನ್ನ ಅಡ್ರೆಸ್ ಹೇಳಿದ್ದೀನಿ. ಅಲ್ಲಿಗೆ ಹನ್ನೆರಡು ಗಂಟೆಗೆ ಸರಿಯಾಗಿ ಬಂದು ಬಿಡು."

"ಹಂಗೇ ಆಗ್ಲಣ್ಣಾ."

"ಮುತ್ತಮ್ಮ ಎಷ್ಟು ಕೊಟ್ಟಳು ಪಾಪ."

"ಹದಿನೈದು."

"ಅವರಿಬ್ಬರಿಗೆ"

"ಅವರಿಗೂ ಹದಿನೈದು ಹದಿನೈದು ಕೊಟ್ಟಳು."

"ಒಂದೆ ಎಲ್ಲಾದರೂ ಕೆಲಸ ಮಾಡುತ್ತಿದ್ದೆಯಾ ಚಿಕ್ಕಣ್ಣ."

“ ಇಲ್ಲಾ ಕಣಣ್ಣಾ – ನನಗೆ ಕೆಲಸ ಯಾರು ಕೊಡ್ತಾರೆ.”

“ ಕಟ್ಟುಮುಸ್ತಾಳು – ನೀನು ದುಡಿದು ಮನೆಗೆ ತಂದುಹಾಕೋದು ಬಿಟ್ಟು ಪಾಪನ್ನ ಕಿತ್ತುಕೊಂಡು ತಿನ್ನುತ್ತಾರೇನೋ ? ”

ಉತ್ತರ ಕೊಡದಿರುವುದೇ ಜಾಣತನವೆಂದು ತಿಳಿದಿದ್ದ ಚಿಕ್ಕಣ್ಣ ಸುಮ್ಮನಾದ.

“ ಕೆಲಸ ಕೊಡಿಸಿದರೆ ಕಚ್ಚಿಕೊಂಡಿರುತ್ತೀಯಾ ? ”

“ ಇರ್ತೀನಣ್ಣ.”

“ಮೈಸೂರು ರೋಡಿನಲ್ಲಿ ಬೆಂಗಳೂರು ಪ್ರೆಸ್ ಇದೆ, ನೋಡಿದ್ದೀಯಾ?”

“ ನೋಡಿದ್ದೀನಿ.”

“ ಅಲ್ಲಿ ಯಾರನ್ನಾದರೂ ಕೇಳಿದರೆ ನಾನು ಮನೆ ಕಟ್ಟಿಸುತ್ತಿರುವ ಜಾಗ ತೋರಿಸ್ತಾರೆ. ಹನ್ನೆರಡಕ್ಕೆ ಸರಿಯಾಗಿ ಬಂದು ಬಿಡು.”

“ ಬತ್ತೀನಣ್ಣ.”

“ ಈಗ ಪಾಪನ ಹತ್ತಿರ ಕಾಸು ಕಿತ್ತುಕೊಳ್ಳಬೇಡ. ನಾನು ಮನೆಗೆ ಬರುತ್ತೀನಲ್ಲಾ ಆಗ ಕೊಡ್ತೀನಿ.”

“ ನಂಗೆ ಶರ್ಟೇ ಇಲ್ಲಣ್ಣ.”

“ ನಾನೆಲ್ಲಾ ಕೊಡಿಸ್ತೀನಿ ಸುಮ್ಮನಿರು.”

ಭಾಗ್ಯಮ್ಮ ಕಾಫಿ ತಂದು ರಾಮರಾಜಪ್ಪನಿಗಿತ್ತಳು. ಕಾಫಿ ಕುಡಿದು ಅವನು ಸ್ನಾನಕ್ಕೆ ಹೋದ.

ರಾಮರಾಜಪ್ಪ ಸ್ನಾನ ಮುಗಿಸಿಕೊಂಡು ಬರುವಷ್ಟರಲ್ಲಿ ಭಾಗ್ಯಮ್ಮ ತಿಂಡಿ ತಂದಿಟ್ಟಿದ್ದಳು. ಎಲ್ಲರೂ ಕುಳಿತು ಉಪಾಹಾರ ಮುಗಿಸಿದರು.

ಪಾಪ, ಚಿಕ್ಕಣ್ಣನೊಂದಿಗೆ ಹೊರಡಲನುವಾದಳು. ಅವಳು ಹೊರಟ ಸ್ವಲ್ಪ ಹೊತ್ತಿನ ಮೇಲೆ ರಾಮರಾಜಪ್ಪ ಹೊರಡಲನುವಾದ.

“ ಪುನಃ ಯಾವಾಗಪ್ಪಾ ಬರೋದು ” ಎಂದು ಮುತ್ತಮ್ಮ ಕೇಳಿದಳು.

“ ನಾಳೆಯೋ ನಾಡಿದ್ದೋ ಬರುತ್ತೇನಮ್ಮ.”

ಎಂದು ಹೇಳಿ ಹೊರಟ.

ರಾಮರಾಜಪ್ಪ ಮೈಸೂರು ರೋಡಿನಲ್ಲಿ ತಾನು ಕಟ್ಟಿಸುತ್ತಿದ್ದ ಮನೆಗಳ ಬಳಿಗೆ ಬಂದ. ಮೇಸ್ತ್ರಿಯನ್ನು ಜತೆಯಲ್ಲಿ ಕರೆದುಕೊಂಡು ‘ಜರೀಬು’

ತೆಗೆದುಕೊಳ್ಳಲಾರಂಭಿಸಿದ. ಜರೀಬಿನ ಕೆಲಸ ಸಾಗಿದ್ದಂತೆ ವೀರಣ್ಣ, ಸೋಮಸುಂದರಂ ಬರಲು ಅದನ್ನು ಅಲ್ಲಿಯೇ ಬಿಟ್ಟು ಅವರನ್ನು ಕರೆದು ಕೊಂಡು ಬಂದು ಹಂಗಾಮಿಯಾಗಿ ಕಟ್ಟಿದ್ದ ಮಳಿಗೆಯಲ್ಲಿ ಕೂಡಿಸಿಕೊಂಡ.

ರಾಮರಾಜಪ್ಪ, ವೀರಣ್ಣ, ಸೋಮಸುಂದರಂ ಮಧ್ಯೆ ವ್ಯವಹಾರದ ಮಾತಾಯಿತು. ಕೊನೆಗೆ ವೀರಣ್ಣ

"ನಾಳೆ ಲಾಯರ್ ಅಗ್ರಿಮೆಂಟ್ ಬರೆಸಿಬಿಡು ರಾಮರಾಜೂ......... ಶನಿವಾರ ರಿಜಿಸ್ಟರ್ ಮಾಡಿಸಿಬಿಡೋಣ"

"ನಿನ್ನ ಲಾಯರು ಯಾರು ರಾಮರಾಜೂ" ಎಂದು ಸೋಮು ಕೇಳಿದ.

"ಶರ್ಮಾ ಅವರು."

"ಆಗಬಹುದು."

ಎಂದವರು ಹೇಳಿ ಹೊರಟರು. ರಾಮರಾಜಪ್ಪನ ಹೃದಯ ಸಂತೋಷ ದಿಂದ ಬಿರಿಯುವಂತಾಯಿತು. 'ನೂರಾರು ರೂಪಾಯಿ ಖರ್ಚಾದರೂ ಚಿಂತೆಯಿಲ್ಲ. ಕೆಲಸ ಸಾಧಿಸಿತಲ್ಲ' ಎಂದವನು ಹಿರಿಹಿರಿ ಹಿಗ್ಗಿದ.

ಪೋಲೀಸ್ ಟ್ರೈನಿಂಗ್ ಸ್ಕೂಲಿನ ದೊಡ್ಡ ಗಡಿಯಾರದಲ್ಲಿ ಹನ್ನೆರಡು ಗಂಟೆ ಹೊಡೆಯುತ್ತಿತ್ತು. ಚಿಕ್ಕಣ್ಣ ಬಂದು ಮುಖ ತೋರಿಸಿದ. ರಾಮರಾಜಪ್ಪ ಮೇಸ್ತ್ರಿಯನ್ನು ಕರೆದು ಅವನಿಗೆ ಸಲಹೆಯಿತ್ತು, ಮುಂದಿನ ಕೆಲಸ ಸೂಚಿಸಿ, ಚಿಕ್ಕಣ್ಣನಿಗೆ

"ಒಂದು ಗಾಡಿ ಕರಿ" ಎಂದು ಹೇಳಿದ.

ಬೀದಿಯಲ್ಲಿ ಹೋಗುತ್ತಿದ್ದ ಗಾಡಿಯೊಂದನ್ನು ಚಿಕ್ಕಣ್ಣ ನಿಲ್ಲಿಸಿದ. ಇಬ್ಬರೂ ಗಾಡಿ ಹತ್ತಿ ಕುಳಿತ ಮೇಲೆ ರಾಮರಾಜಪ್ಪ

"ಪೇಟೆ ಕಡೆ ಹೋಗಿದ್ದರೇನೋ ?"

"ಆಯಮ್ಮನ ಮನೆಯಿಂದ ಪೇಟೆ ಕಡೆಯಿಂದಲೇ ಮನೆಗೆ ಓದೆವಣ್ಣಾ."

"ಪಾಪ ಏನು ತೆಗೆದುಕೊಂಡಳು."

"ಒಳ್ಳೆ ಸೀರೆ ತೊಗೊಂಡಳು. ತರಕಾರಿ, ಹಣ್ಣು, ಹೂವು, ಕೋಳೀ ಮೊಟ್ಟೆ, ಟುವಾಲು, ಮಗ್ಗಲಾಸಿಗೆ ತೊಗೊಂಡಳಣ್ಣಾ."

"ನಿನಗೆ ಏನು ತೆಗೆದುಕೊಟ್ಟಳು."

"ಇದರಲ್ಲಿ ನಿಂಗೆ ಚಿಕ್ಕಾಸೂ ಕೊಡಾಕಿಲ್ಲ. ಧಣಿ ಬತ್ತಾರೆ ಏನು ಬೇಕೋ ಕೇಳಿ ಈಸ್ಕೋ ಎಂದಳು"

"ಒಳ್ಳೆಯದು"

ಎಂದು ಗಾಡಿಯವನನ್ನು ದೊಡ್ಡಪೇಟೆ ಕಡೆ ಹೊಡೆಯೆಂದ. ಗಾಡಿ ದೊಡ್ಡಪೇಟೆಯಲ್ಲಿ ಬರುತ್ತಿರಲು 'ದೇವಿ ಸಿಲ್ಕ್ ಹೌಸ್' ಮುಂದೆ ನಿಲ್ಲಿಸಲು ಹೇಳಿದ.

ಅಂಗಡಿಯವರು ರಾಮುರಾಜಪ್ಪನನ್ನು ಪರಮ ಗೌರವದಿಂದ ಸ್ವಾಗತಿಸಿದರು. ರಾಮುರಾಜಪ್ಪ ಬಟ್ಟೆಗಳನ್ನು ತೆಗೆಸಿ ಒಂದು ಸಾದಾ ಮೈಸೂರು ಸಿಲ್ಕ್ ಸೀರೆ, ಒಂದು ಬೆಂಗಾಲ್ ಸಿಲ್ಕ್ ಸೀರೆ, ಅವುಗಳಿಗೆ ಸಿಲ್ಕ್ ಪೀಸುಗಳನ್ನಾರಿಸಿ ಚಿಕ್ಕಣ್ಣನಿಗೆ ನಾಲ್ಕು ಷರ್ಟು, ಒಂದು ಜತೆ ಟಸರ್ ಷರಾಯಿ, ಒಂದು ಜತೆ ಟಸರ್ ಕೋಟುಗಳಿಗಾಗುವಷ್ಟು ಬಟ್ಟೆ ಹರಿಸಿದ.

"ನನಗೆ ಟುವಾಲು ಬೇಕಣ್ಣ"

ಒಂದು ಜತೆ ಟವಲನ್ನೂ ರಾಮುರಾಜಪ್ಪ ತೆಗೆದುಕೊಟ್ಟ. ಅಂಗಡಿಯವನು ಬಿಲ್ ಬರೆದು ರಾಮುರಾಜಪ್ಪನ ಮುಂದಿಟ್ಟ. ಬಿಲ್ಲಿನ ಅಂಕೆ ನೂರ ಎಪ್ಪತ್ತೊಂಬತ್ತೆನ್ನುವುದನ್ನು ಗಮನಿಸಿ ರಾಮುರಾಜಪ್ಪ ಅದಕ್ಕೆ ಸಹಿ ಹಾಕಿದ.

ಚಿಕ್ಕಣ್ಣನೂ ಬಿಲ್ಲಿನ ಅಂಕೆ ಗಮನಿಸಿದ.

ಅಂಗಡಿಯವನು ಎಲ್ಲ ಬಟ್ಟೆಗಳನ್ನೂ ಪ್ಯಾಕ್ ಮಾಡಿ ಚಿಕ್ಕಣ್ಣನ ಕೈಗಿತ್ತ.

ಚಿಕ್ಕಣ್ಣ, ರಾಮುರಾಜಪ್ಪ ಗಾಡಿಯಲ್ಲಿ ಬಂದು ಪಾಪನ ಮನೆ ಮುಂದೆ ಇಳಿದರು. ರಾಮುರಾಜು ಗಾಡಿಯವನಿಗೆ ಬಾಡಿಗೆ ಕೊಟ್ಟು ಕಳಿಸುವಷ್ಟರಲ್ಲಿ ಚಿಕ್ಕಣ್ಣ ಮನೆ ಬಾಗಿಲು ತೆಗೆಸಿ, ಬಟ್ಟೆ ಮೂಟೆಯನ್ನು ಹೊತ್ತುಕೊಂಡು ರಾಮುರಾಜಪ್ಪನನ್ನು ಒಳಕ್ಕೆ ಕರೆದುಕೊಂಡು ಹೋದ.

ಮನೆಯ ಆವರಣ ಪ್ರವೇಶಮಾಡಿದೊಡನೆಯೇ ಬಲಗಡೆಗಿದ್ದುದೇ ಅಡಿಗೆಯ ಮನೆ, ಬಚ್ಚಲ ಮನೆ. ಎಡಗಡೆಗೆ ಶೌಚಗೃಹ.

ಮನೆ ಪ್ರವೇಶಮಾಡಿದೊಡನೆಯೇ ಇದ್ದುದೇ ತೊಟ್ಟಿ, ಅದರ ಹಿಂದೆ ಒಂದೇ ರೂಮು.

ರಾಮುರಾಜಪ್ಪನನ್ನು ತೊಟ್ಟಿಯಲ್ಲಿ ಕೂಡಿಸಿ, ಒಂದು ಪಕ್ಕದಲ್ಲಿ ಬಟ್ಟೆಯ ಗಂಟನ್ನಿಟ್ಟು ಚಿಕ್ಕಣ್ಣ ತಾಯಿಯನ್ನು ಕರೆತರಲು ಹೋದ. ರಾಮುರಾಜಪ್ಪ

ತನ್ನ ಕಣ್ಣುಗಳನ್ನು ಸುತ್ತ ಹೊರಳಾಡಿಸಿದ. ಒಂದು ಗೋಡೆ ಮೇಲೆ ದೊಡ್ಡ ಪ್ರಮಾಣದ ಲಕ್ಷ್ಮಿ, ಶಿವಪಂಚಾಯತನ, ಸರಸ್ವತಿ, ಹನುಮಂತ, ಸೀತಾರಾಮರ ಚಿತ್ರಗಳಿದ್ದವು. ಇನ್ನೊಂದು ಗೋಡೆಯ ಮೇಲೆ ಸಿನೀಮಾಗಳಲ್ಲಿ ಹಂಚುವ ನಸೀಮ್, ಅಂಜಲಿದೇವಿ, ಜಯಮ್ಮ, ಲಲಿತಾ ಪದ್ಮಿನಿ, ಸೂರ್ಯಕುಮಾರಿ, ಭಾನುಮತಿ, ನರ್ಗೀಸ್ ಇವರ ಚಿತ್ರಗಳಿದ್ದವು. ಒಂದು ಮೂಲೆಯಲ್ಲಿ ಬೀಸುವ ಕಲ್ಲು, ಅದರ ಮೇಲೆ ಊದು ಕಡ್ಡಿಗೆ ಉಪಯೋಗಿಸುವ ಸಣ್ಣಗೆ ಸೀಳಿದ ಕಡ್ಡಿಗಳು. ಇನ್ನೊಂದು ಮೂಲೆಯಲ್ಲಿ ಕುಕ್ಕೆ, ಮೊರ, ಒನಕೆ.

ಚಿಕ್ಕಣ್ಣ ತಾಯಿಯೊಂದಿಗೆ ಬಂದ. ದೇವೀರಮ್ಮ ರಾಮರಾಜಪ್ಪನನ್ನು ನೋಡಿ

" ಬಡವರ ಮನೇಕೆ ಬಾಗ್ಯಲಕ್ಷ್ಮಿ ಬಂದಂಗೆ ಬಂದ್ರಣ್ಣಾ " ಎಂದಳು.

" ವಿಶ್ವಾಸ ಬೆಳೆದ ಮೀಲೆ ಬರೆದೆ ಏನಮ್ಮ. ಈ ಕಾಲದಲ್ಲಿ ಬಡವರು ಯಾರು, ಶ್ರೀಮಂತರು ಯಾರು ? "

" ಪಾಪ ನಿಮ್ಮ ವಿಸ್ಯ ಭೊ ಹೇಳವ್ಳೆ."

" ಅವಳಿಗೆಲ್ಲೋ ಹುಚ್ಚು."

" ನಾನು ಷರ್ಟು ಕೇಳಿದ್ರೆ, ಕೋಟು ಪರಾಯಿ ಎಲ್ಲಾ ತೆಕ್ಕೊಟ್ರಮ್ಮ ಅಣ್ಣಾವ್ರು"

ಎಂದು ಚಿಕ್ಕಣ್ಣ ತಿಳಿಸಿದ.

" ಪಾಪ ಇಂಗೆ ಯಾರಿಗೂ ಮನಸ್ನೊಪ್ಪಿಸಿರಲಿಲ್ಲಪ್ಪಾ."

" ಅದು ಅವಳ ದೊಡ್ಡ ಗುಣ."

" ಈ ಪಂಗೋಳೀಗೆ ಒಂದು ಕೆಲ್ಸಾ ಮಾಡ್ಕೊಟ್ಟು ಪುಣ್ಯ ಕಟ್ಟಿ ಕೊಳ್ರಣ್ಣಾ."

" ಆ ವಿಷಯ ನೀನು ಯೋಚನೆ ಮಾಡಬೇಡಮ್ಮ – ನಿನ್ನ ಹೆಸರು ಏನೂಂತಂದೆ ? "

" ದೇವೀರಮ್ಮ."

" ಆಮೇಲೆ ನಾನು ಎಲ್ಲಾ ಮಾತಾಡ್ತೀನಿ – ಅಡಿಗೆ ಆಗಿದೆಯೋ ? "

" ಆಗೈತೆ. ಎಲೆ ಆಕೊಂಡ್ರೆ ಆಕ್ತೀನಿ."

" ಪಾಪ ಎಲ್ಲಿ ? "

" ಒಳಗೇ ಓಗಿ ಅಣ್ಣಾ "

ಎಂದು ಚಿಕ್ಕಣ್ಣ ಹೇಳಿದ. ದೇವೀರಮ್ಮ ಚಿಕ್ಕಣ್ಣ ತೊಟ್ಟಿ ಬಿಟ್ಟು ಹೊರಗೆ ಬಂದರು.

ರಾಮರಾಜಪ್ಪ ಎದ್ದು ರೂಮಿನೊಳಗೆ ಹೋದ.

ಅವನ ಕಣ್ಣಿಗೆ ದಿಗ್ಭ್ರಮೆ ಹಿಡಿದಂತಾಯಿತು.

ಪಾಪ, ಹೊಸ ಸೀರೆಯುಟ್ಟು ನಿಂತಿದ್ದಳು. ಅವಳ ಪಾದದಡಿ ಹಾಸಿಗೆ ಹಾಸಲ್ಪಟ್ಟಿತ್ತು. ಹಾಸಿಗೆಗೆ ಹೊಸ ಮಗ್ಗಲಾಸಿಗೆ – ಅದರ ಪಕ್ಕದಲ್ಲಿ ಹೊಸ ಟವಲುಗಳು. ಹಾಸಿಗೆಯ ತಲೆಯ ಕಡೆ ಒಂದು ಸಣ್ಣ ಪೆಟ್ಟಿಗೆಯ ಮೇಲೆ ಟವಲು ಹಾಸಿ ಅದರ ಮೇಲೆ ತಾಂಬೂಲದ ತಟ್ಟೆ ಅಣಿ ಮಾಡಲ್ಪಟ್ಟಿತ್ತು. ರೂಮಿನಲ್ಲಿದ್ದ ನಾಲ್ಕಾರು ಪಟಗಳನ್ನು ಹೂವು ಅಲಂಕರಿಸಿತ್ತು. ಪಾಪನೂ ತಲೆಯ ತುಂಬ ಹೂವು ಮುಡಿದುಕೊಂಡಿದ್ದಳು.

ಎಲ್ಲವನ್ನೂ ಅರೆಕ್ಷಣದಲ್ಲಿ ಕಣ್ಣಿಗೆ ತುಂಬಿಕೊಂಡ ರಾಮರಾಜಪ್ಪ ಪಾಪನನ್ನು ಆಪಾದಮಸ್ತಕ ನೋಡಿ

" ಪಾಪಾ " ಎಂದ.

ಪಾಪ ಹಾರಿ ಬಂದು ಅವನ ತೋಳತೆಕ್ಕೆಯಲ್ಲಡಗಿದಳು. ಪ್ರಥಮ ದರ್ಶನದಾವೇಗ ತುಸು ಇಳಿಯಲು ಪಾಪ, ರಾಮರಾಜಪ್ಪನ ಕೋಟು ತೆಗೆಸಿ ಅದನ್ನು ಗೂಟಕ್ಕೆ ತಗುಲಿಸಿ ಅವನನ್ನು ಹಾಸಿಗೆಯ ಮೇಲೆ ಕರೆದೊಯ್ದು ಕುಳ್ಳಿರಿಸಿಕೊಂಡಳು.

" ಹರಕು ಬಟ್ಟೆಯ ಹಿಂದೆ ಎಂಥಾ ಸೌಂದರ್ಯ ಅಡಕವಾಗಿತ್ತು ಪಾಪ."

" ನಾನು ಯಾವ ರೂಪಸ್ತೆ ಧಣಿ."

" ನೀನು ರೂಪಸ್ಥೆ ಎಂದು ನಿನಗೆ ತಿಳಿಯದಿರುವುದೇ ಚೆನ್ನು."

" ನನಗೆ ಜೀವದಲ್ಲಿ ಜೀವವಿರಲಿಲ್ಲ ಧಣಿ."

" ಯಾಕೆ ? "

" ನೀವು ಬರ್‍ತೀರೋ ಇಲ್ವೋ ಅಂತಾ ಅನುಮಾನ."

" ಬರುತ್ತೇನೆಂದು ಮಾತುಗೊಟ್ಟಿರಲಿಲ್ಲವೇ ? "

" ಹೌದು – ಆದ್ರೂ ಗಂಡ್ಸರ ಮನಸ್ಸು."

“ಗಂಡಸರು ಎಷ್ಟು ನ್ಯಾಯವಾಗಿ ನಡೆದುಕೊಂಡರೂ ನೀವು ಅವರನ್ನು ಬಯ್ಯದೆ ಬಿಡುವುದಿಲ್ಲ.”

“ಸುಮ್ಮನೆ ಅಂದೆ ಧಣಿ–ಕೋಪ ಮಾಡ್ಕೋಬ್ಯಾಡಿ–ಚಿಕ್ಕಣ್ಣ ತುಂಬ ಕಾಡಿದನೇ ?”

“ಇಲ್ಲ ಪಾಪ ! ಪಟ್ಣನ ಬಟ್ಟೆ ಬೇಕೂಂದ ತೆಕೊಟ್ಟೆ.”

“ಕೋಟು, ಸರಾಯಿ, ಟವಾಲೂ ತೆಕೊಟ್ರಂತೆ ?”

“ನಿನಗೆ ಯಾರು ಹೇಳಿದರು.”

“ಹೊರಗಡೆ ಚಿಕ್ಕಣ್ಣ ಮಾತಾಡಿದ್ದು ಕೇಳಿಸ್ತು.”

ಎಂದವಳೇ ಎದ್ದು ಹೋಗಿ ಹೊರಗೆ ಇಟ್ಟಿದ್ದ ಬಟ್ಟೆಯ ಗಂಟನ್ನು ಒಳಗೆ ತಂದು ಬಿಚ್ಚಿದಳು.

“ಸೀರೆಗಳು........ಯಾರಿಗೆ ದಣಿ.”

“ಬಂಗಾಲ್ ಸಿಲ್ಕ್ ನಿನಗೆ – ಮೈಸೂರು ಸಿಲ್ಕ್ ನಿನ್ನ ತಾಯೀಗೆ.”

ಬಂಗಾಲ್ ಸಿಲ್ಕ್ ಸೀರೆಯನ್ನು ಕೈಗೆತ್ತಿಕೊಂಡು ಅದನ್ನು ಮುಟ್ಟಿ ನೋಡಿ, ಕೆನ್ನೆಗೊತ್ತಿಕೊಂಡು ಅದರ ಮಾರ್ದವತೆಯ ಸೌಖ್ಯವನ್ನನುಭವಿಸುತ್ತಿದ್ದಂತೆ ಪಾಪನ ಕಣ್ಣಲ್ಲಿ ಧಾರಾಕಾರವಾಗಿ ನೀರಿಳಿಯಿತು.

“ಅಳುವುದಕ್ಕೇನಾಯಿತು ಪಾಪ.”

“ನಿಮ್ಮಂಥವ್ರು ಲೋಕ್ದಲ್ಲಿ ಇರ್ತಾರ್ಯೆ ಧಣಿ.”

“ಎಂಥೆಂಥಾ ಮಹಾನುಭಾವರೋ ಇದ್ದಾರೆ–ನಾನು ಯಾವ ದಾಸಯ್ಯ ಹೇಳು.”

“ನೀವು ಎಷ್ಟು ಹೊತ್ತಿಗೆ ಹೋಗಬೇಕು.”

“ನನ್ನ ಈಗಲೇ ಕಳಿಸಿಬಿಡುವ ಹಾಗೆ ಕಾಣುತ್ತದೆ.”

“ಯಾಕೆಯೆನ್ನೋದು ನಾನು ಅವ್ಯಾಕೆ ಹೇಳ್ತೀನಿ – ನಾನು ಕೇಳಿದ್ದಕ್ಕೆ ಹೇಳಿ.”

“ಇವತ್ತೇನೂ ಕೆಲ್ಸಾ ಇಲ್ಲ. ಇನ್ನೊಂದು ಸಂತೋಷದ ಸುದ್ದಿ ಪಾಪ.”

“ಏನದು ?”

“ನನ್ನದು ಒಂದು ದೊಡ್ಡ ಕೆಲಸಾ ಸಾಧಿಸಿತು. ಸೋಮು, ವೀರಣ್ಣ,

ನಾನು ಇನ್ನು ಮೇಲೆ ಜತೆಗಾರರಾಗಿ ವ್ಯಾಪಾರ ಮಾಡುತ್ತೇವೆ. ಹೆಚ್ಚು ಬಂಡವಾಳ ಅವರು ಹಾಕುತ್ತಾರೆ. ಇದು ನಿನ್ನ ವಿಶ್ವಾಸದ ಫಲ ಪಾಪ."

"ಅಷ್ಟು ಪುಣ್ಯ ನನ್ನ ಹಣ್ಯಾಗೆ ಬರದೈತಾ ಧಣಿ........ನೀವು ಇವತ್ತು ಎಂಟುಗಂಟೆ ತನ್ಕಾ ಎಲ್ಲೀಗೂ ಓಗ್ಕೂಡದು."

"ನಿನ್ನ ಕಟ್ಟಪ್ಪಣೆಯೇನು ? ಅವನು ಎಷ್ಟು ಹೊತ್ತಿಗೆ ಬರ್ತಾನೆ."

"ಐದೂವರೆಗೆ ಮಿಲ್ ಬಿಡ್ತೈತೆ. ಅಲ್ಲಿಂದ ಅವನು ಪಡಖಾನೆ ಬಿದ್ದು ಮನೆ ಸೇರಬೇಕಾದ್ರೆ ಒಂಭತ್ತು ಆಗ್ತೈತೆ."

"ಅಕಸ್ಮಾತ್ತಾಗಿ ಮಧ್ಯೆ ಬಂದರೆ."

"ಬಂದರೆ ಬಂದ್ಕೊಳ್ಳಿ."

"ವ್ಯಾಜ್ಯಕ್ಕೆ ಕಾರಣವಾಗುತ್ತದೆ."

"ದಿನಾ ನಾನು ಕಾಸು ಕೊಡ್ತಿದ್ರೆ ಬಾಯಿಮುಚ್ಕೊಂಡು ಈಸ್ಕೊಳ್ತಿದ್ನಲ್ಲಾ, ಆ ಕಾಸು ಎಲ್ಲಿಂದ ಬಂತು ಎಂತಾ ಯಾವಾಗಾನ ಕೇಳಿದ್ನಾ !'

"ಕೇಳಲಿಲ್ಲವೇ ? "

"ಕಾಸು ಕೊಡದಿದ್ರೆ ಉಯ್ತಿದ್ನೇ ವಿನಾಯ್ಸಿ, ಇನ್ನು ಯಾವ್ದೂ ಕೇಳ್ತಿರ್ಲಿಲ್ಲ. ಈಸು ದಿನ ಅವನಿಗೋಸುಗ ಕಸುಬು ಮಾಡ್ದೆ – ಈಗ ನಂಗೋಸ್ಗ ಒಂದು ಮಾಡ್ಕೊಂಡ್ರೆ ಒಟ್ಟೆ ಉರೀನಾ.....ಒಟ್ಟೆ ಅಸಿಯಾಕಿಲ್ವಾ ಧಣಿ."

"ಹಸಿಯುತ್ತಿದೆ."

ಅಲ್ಲಿಂದಲೇ ಪಾಪ ತಾಯಿಯನ್ನು ಕೂಗಿ

"ಎಲೆ ಆಕೈತಾ"

ಎಂದು ಕೇಳಿದಳು.

"ಆಕೈತಮ್ಮ. ಅಪ್ಪಾವರ್ನ ಎಬ್ಬಿಸು"

ಎಂದು ದೇವೀರಮ್ಮ ಹೇಳಿದಳು,

ಪಾಪ ರಾಮರಾಜಪ್ಪನನ್ನು ಬಚ್ಚಲು ಮನೆಗೆ ಕರೆದೊಯ್ದು ಅವನ ಕಾಲಿಗೆ ನೀರು ಕೊಟ್ಟಳು. ಅವನು ಪಾದ ಪ್ರಕ್ಷಾಳನೆ ಮುಗಿಸುವಷ್ಟರಲ್ಲಿ ಟವಲು ತಂದು ತಾನೇ ಅವನ ಕಾಲು ಒರೆಸಿದಳು.

ತೊಟ್ಟಿಯಲ್ಲಿ ಮೂರು ಎಲೆ ಹಾಕಲ್ಪಟ್ಟಿತ್ತು. ಪಾಪ, ರಾಮರಾಜಪ್ಪ ಕುಳಿತುಕೊಂಡ ಮೇಲೆ ಚಿಕ್ಕಣ್ಣನೂ ಬಂದು ಕುಳಿತ. ದೇವೀರಮ್ಮ ಬಡಿಸುವುದಕ್ಕೆ ನಿಂತಳು. ಊಟ ಸಾಗುತ್ತಿದ್ದಂತೆ ಪಾಪ ತನ್ನ ಎಲೆಯ ತುತ್ತು ತೆಗೆದು ರಾಮರಾಜಪ್ಪನ ಬಾಯಿಗಿಡುವಳು. ರಾಮರಾಜಪ್ಪನೂ ತನ್ನ ಎಲೆಯ ತುತ್ತನ್ನು ಅವಳ ಬಾಯಿಗಿಡುತ್ತಿದ್ದ.

ಚಿಕ್ಕಣ್ಣ ಎಲೆಯನ್ನೇ ನೋಡುತ್ತ ಊಟ ಮಾಡುತ್ತಿದ್ದ.

ಅವನಿದ್ದುದನ್ನೇ ಪಾಪ, ರಾಮರಾಜಪ್ಪ ಮರೆತುಬಿಟ್ಟಿದ್ದರು.

ಊಟದ ಮಧ್ಯೆ ಪಾಪ

"ಒಸಿ ಅತ್ತಕಡೆ ಮಕ ಮಾಡು ಚಿಕ್ಕಣ್ಣ"

ಎಂದಳು. ಚಿಕ್ಕಣ್ಣ ಅವಳು ಹೇಳಿದಂತೆ ಗೋಡೆಯ ಕಡೆ ಮಕ ತಿರುಗಿಸಿದ. ಪಾಪ ತನ್ನ ಬಾಯಿಯಲ್ಲಿದ್ದುದನ್ನು ರಾಮರಾಜಪ್ಪನ ಬಾಯಿಗೆ ಕೊಟ್ಟು, ಮರಳಿ ಅದನ್ನೇ ತನ್ನ ಬಾಯಿಗೆ ಸ್ವೀಕರಿಸಿದಳು. ಹಾಗೆಯೇ ಪರಸ್ಪರ ಚುಂಬನದ ವಿನಿಮಯವೂ ಆಯಿತು.

ಊಟ ಮುಗಿದ ಮೇಲೆ ಇಬ್ಬರೂ ರೂಮ್ ಸೇರಿದರು.

ಸುಮಾರು ನಾಲ್ಕು ಗಂಟೆಯ ವೇಳೆಗೆ ಚಿಕ್ಕಣ್ಣ ಅಕ್ಕನನ್ನು ಹೊರಗೆ ಕರೆದು ಅವಳ ಕೈಗೆ ಎರಡು ಲೋಟ ಕಾಫಿ ಕೊಟ್ಟ.

"ಏಳುಗಂಟೆ ಸಮಯವಾಗಲು ರಾಮರಾಜಪ್ಪ ಎದ್ದು ಕೋಟು ಧರಿಸಿದ. ಪಾಪ ಅವನಿಗೆ ತೆಕ್ಕೆ ಬಿದ್ದು

"ತಿರುಗಿ ಬರೋದು ಯಾವಾಗ ?"

"ನಾಳೆ ಬರ್‍ತೇನೆ."

"ಎಷ್ಟು ಹೊತ್ತಿಗೆ ?"

"ಮಧ್ಯಾಹ್ನ ಎರಡು, ಮೂರು ಗಂಟೆಗೆ."

"ಅಲ್ಲೀತನ್ಕ ನಿಮ್ಮನ್ನ ನೋಡ್ದೆ ಎಂಗಿರಲಿ. ಬೆಳಿಗ್ಗೆ ಇಂಗೇ ಬಂದು ಮೊಕ ತೋರಿಸಿ ಹೋಗಿ."

"ಆಗಲಿ ಪಾಪ"

ಎಂದು ಹೇಳಿದ. ಹೊರಗೆ ಬಂದಾಗ ಎದುರಿಗೆ ನಿಂತಿದ್ದ ದೇವಿರಮ್ಮನಿಗೆ

"ನಾನೊಂದು ಮಾತು ಹೇಳ್ತೀನಿ – ಕೇಳ್ತೀಯೇನಮ್ಮ."

"ಹೇಳಪ್ಪಾ."

"ಇನ್ನುಮೇಲೆ ಪಾಪನನ್ನು ಎಲ್ಲಿಗೂ ಕಳಿಸಬೇಡ. ಮನೆಯ ಖರ್ಚು ನಾನು ನೋಡಿಕೊಳ್ಳುತ್ತೇನೆ."

"ನಿಮ್ಮ ಸಂತೋಸವಿದ್ದಂಗೆ ಆಗಲಪ್ಪಾ. ಯಾವಾಗ ಬೇಕಾದ್ರೂ ಬನ್ನಿ. ಇದು ನಿಮ್ಮ ಮನೆ"

"ಪಾಪನ ಆರೋಗ್ಯ ಚೆನ್ನಾಗಿ ನೋಡಿಕೋಮ್ಮ."

"ಆಗಲಿ – ಚಿಕ್ಕಣ್ಣನ ಕೆಲ್ಸಾ ಏನುಮಾಡ್ತೀರಿ."

"ನಾಳೆ ನಾನು ಬಂದಾಗ ಹೇಳುತ್ತೇನೆ. ಆ ವಿಷಯ ನೀನು ಯೋಚ್ನೆ ಇಟ್ಟುಕೊಳ್ಳಬೇಡಮ್ಮ. ಅವನಿಗೆ ಕೆಲಸ ಮಾಡಿಸಿಕೊಡುವುದು ನನ್ನ ಜವಾಬ್ದಾರಿ – ಆದರೆ, ಮಾಡಿಕೊಟ್ಟ ಕೆಲಸ ಅವನು ಉಳಿಸಿಕೊಳ್ಳುತ್ತಾನೋ?"

"ಉಳಿಸಿಕೊಳ್ದೆ ಏನ್ಮಾಡ್ತಾನಪ್ಪಾ!"

"ಚಿಕ್ಕಣ್ಣನಿಗೆ ಕೆಲ್ಸಾಮಾಡಿಯೇ ಅಭ್ಯಾಸವಿರುವ ಹಾಗೆ ಕಾಣಲಿಲ್ಲ. ನಾನು ಯಾರನ್ನೋ ಗೋಗರೆದು ಕೆಲಸಾ ಮಾಡಿಸಿಕೊಡುವುದು – ಅವನು ಎರಡು ದಿವಸಕ್ಕೇ ಅದನ್ನು ಬಿಟ್ಟುಬಿಡುವುದಾದರೆ ನನಗೆ ತುಂಬ ಅವಮಾನವಾಗುತ್ತದೆ."

"ಅವನು ಅಂಗೆ ಮಾಡ್ದಂಗೆ ನಾನು ನೋಡ್ಕೊಂತೀನಪ್ಪಾ. ದೊಡ್ಡ ಮನಸ್ಮಾಡಿ ನೀವು ಕೆಲಸಮಾಡಿಸಿ ಕೊಡಿ."

"ಆಗಲಮ್ಮ."

"ನಿನ್ಹೊಟ್ಟೆ ತಣ್ಣಗಿರಲಿ ನಮ್ಮಪ್ಪ"

ಎಂದು ದೇವೀರಮ್ಮ ಬಾಯ್ತುಂಬ ಹರಸಿದಳು

ಹೊರಬಾಗಿಲಿನವರೆಗೆ ಪಾಪ, ರಾಮರಾಜಪ್ಪನನ್ನು ಬೀಳ್ಕೊಡಲು ಬಂದಳು. ಅಲ್ಲಿ ಅವನ ಕೈಹಿಡಿದು ನಿಂತಳು. ರಾಮರಾಜಪ್ಪ 'ಬೆಳಿಗ್ಗೆ ಬರುತ್ತೇನೆ – ಯೋಚಿಸಬೇಡ' ಎಂದು ಹೇಳಿ ಕೈಬಿಡಿಸಿಕೊಳ್ಳಬೇಕಾಯಿತು.

ರಾಮರಾಜಪ್ಪನನ್ನು ಕಳಿಸಿಬರಲು ಚಿಕ್ಕಣ್ಣ ಅವನ ಜತೆ ಹೋದ.

೬

'ಶ್ರೀಶೈಲ ಕೃಪಾಪೋಷಿತ ಕರ್ನಾಟಕ ನಾಟಕ ಸಭೆ'ಯ ಅಣ್ಣಯ್ಯನನ್ನು 'ಬುಟ್ಟೀಗೆ' ಹಾಕುವ ಕೆಲಸ ಗುಂಡುವಿಗೆ 'ಗೌರಿ ಮನೋಹರಿ ಪ್ರಾಸಾದಿಕ ನಾಟಕ ಮಂಡಳಿ'ಯ ಯಜಮಾನರು ಶ್ರೀಕಂಠಮೂರ್ತಿಗಳು ಒಪ್ಪಿಸಿದರು. ಗುಂಡೂ ಯಾರಿಗೂ ಹೇಳದೆ ಮೆಲ್ಲನೆ ಕಂಪೆನಿಯಿಂದ ನುಸುಳಿಕೊಂಡು ತುಮಕೂರಿಗೆ ಬಂದ. ಒಂದು ಕಾಲದಲ್ಲಿ ಅಣ್ಣಯ್ಯ, ಗುಂಡೂ ಇಬ್ಬರೂ ಗೊಲ್ಲರಪೇಟೆ ಕಂಪೆನಿಯಲ್ಲಿ ಸಹನಟರಾಗಿದ್ದರು. ಅಣ್ಣಯ್ಯನನ್ನು ಹಿಡಿಯುವುದು ಗುಂಡುವಿಗೆ ಕಷ್ಟದ ಕೆಲಸವಲ್ಲದಿದ್ದರೂ ಕಂಪೆನಿಯ ಜನರಿಗೆ ಕಾಣದಂತೆ – ಪುಕಾರಾಗದಂತೆ ಕೆಲಸ ಸಾಧಿಸಿಕೊಳ್ಳಬೇಕೆಂದು ನಿರ್ಧರಿಸಿ ಅವನು ಅಣ್ಣಯ್ಯನ ದಾರಿ ಕಾಯತೊಡಗಿದ.

ಒಂದು ರಾತ್ರಿ ಮತ್ತು ಅರ್ಧ ದಿನ ನಿರರ್ಥಕವಾಗಿ ಕಳೆದುಹೋಯಿತು. ಸಂಜೆ ಕಂಪೆನಿ ಮನೆ ಎದುರಿಗಿದ್ದ ಬೀಡಿ ಸಿಗರೇಟ್ ಅಂಗಡಿಗೆ ಸಿಗರೇಟ್ ಕೊಳ್ಳಲು ಅಣ್ಣಯ್ಯ ಬರಲು, ಅವನನ್ನು ಮಾತನಾಡಿಸಿದ.

"ಯಾವಾಗ ಬಂದೆಯೊ ಗುಂಡೂ."

"ನಿನ್ನೆ ರಾತ್ರಿ ಬಂದೆನಪ್ಪಾ."

"ಎಲ್ಲಿ ಹಾಳಾಗಿ ಹೋಗಿದ್ದೆ. ಕಂಪೆನಿ ಮನೆಗೆ ಬರಬೇಕಾಗಿತ್ತು."

"ನಿನ್ನ ವ್ಯಾಪಾರ ಬೇಗ ಮುಗಿಸು ಅಣ್ಣಯ್ಯ – ನಿನ್ನ ಹತ್ತಿರ ಮಾತನಾಡಬೇಕಾಗಿದೆ."

ಅಣ್ಣಯ್ಯ ಸಿಗರೇಟ್ ತೆಗೆದುಕೊಂಡು ಬರಲು ಅವನನ್ನು ಟೌನ್‌ಹಾಲ್ ಹಿಂದಿದ್ದ ತೋಪಿಗೆ ಗುಂಡೂ ಕರೆದೊಯ್ದ.

"ಇದೇನು ಇಷ್ಟುದೂರ ಪಾದಬೆಳಸಿದ್ದೆ."

"ನಿನ್ನೇ ನೋಡಿಕೊಂಡು ಹೋಗೋಣಾಂತ ಬಂದೆ."

"ನನ್ನ ನೋಡೋಕೆ ಯಾಕೆ ಬರ್ತೀ – ಇನ್ನೇನೋ ಕೆಲ್ಸವಿರಬೇಕು."

"ಸ್ತ್ರೀ ಪಾರ್ಟು ಮಾಡೋರು ಯಾರೋ ಇಬ್ಬರು ಇದ್ದಾರೇಂತ ಹೇಳಿದರು, ಅವರನ್ನು ನೋಡಿಕೊಂಡು ಹೋಗೋಕೆ ಬಂದೆ."

"ನಿಮ್ಮ ಕಂಪೆನಿ ಸ್ತ್ರೀಮುಲೆಯಾಳ ಆಗಿದೆಯಂತೆ."

"ಸ್ತ್ರೀಪಾರ್ಟಿನೋರಿಗೆ ನಮ್ಮಲ್ಲೇನೂ ಕೊರತೆಯಿಲ್ಲ. ಮೊನ್ನೆತಾನೆ ಯಜಮಾನರು ಬೆಂಗಳೂರಿನಿಂದ ಮೂರು ಸ್ತ್ರೀಗ್ರಹ ಹಿಡಿದುಕೊಂಡು ಬಂದಿದ್ದಾರೆ."

"ಇನ್ನೂ ಹೆಣ್ಣು ಬೇಕೇ ?"

"ಮಾಯಾಮಚ್ಛೇಂದ್ರ ನಾಟಕ ತೆಗೋಬೇಕೂಂತಿದ್ದಾರೆ – ಅದರ ತುಂಬ ಸ್ತ್ರೀಪಾತ್ರಗಳಿವೆ."

"ಹಾಗೋ – ಸರಿಸರಿ"

"ಸೀಸನ್ ಹೆಂಗೆ ನಡೆದಿದೆಯಪ್ಪ. ನಮ್ಮ ಸಾಹುಕಾರರ ವಿಷಯ ಗೊತ್ತೇ ಇದೆಯಲ್ಲಾ. ಕಾಸು ಕೊಡೋಕೇ ಸಾಯ್ತಾನೆ."

"ಈ ತರಲೆ ಸಾವಾಸ ಬೇಡವೋಂದ್ರೆ ನೀನು ಕೇಳ್ತೀಯಾ."

"ಏನು ಮಾಡೋದು ಗುಂಡೂ. ಕಂಪೆನಿಯಿಂದ ಕಂಪೆನಿ ಹಾರೋಕೆ ದಿವಸ ಚೆನ್ನಾಗಿಲ್ಲಮ್ಮ. ಇಲ್ಲಿ ಎರಡು ಹೊತ್ತು ಕೂಳಾದ್ರೂ ಕಳೆದುಹೋಗುತ್ತದೆ. ಮಿಕ್ಕ ಕಂಪೆನಿಗಳಲ್ಲಿ ಅದಕ್ಕೂ ಭಂಡಾಟ."

"ನಮ್ಮ ಕಂಪೆನೀಲಿ ಹಾಗೇನಿಲ್ಲಯ್ಯ. ಸೊಗಸಾಗಿದೆ."

"ನಿಮ್ಮದು ದಾವಣಗೆರೆ ಕ್ಯಾಂಪು ಹೇಗಾಯ್ತು."

"ಭರ್ಜರಿಯಾಗಿ ಆಯ್ತು. ನಿಮ್ಮ ಸಾವಕಾರ ಪುಳ್ಳೆಯಿಟ್ಟು ನಮ್ಮನ್ನ ಎತ್ತಂಗಡಿ ಮಾಡಿಸಿದ್ದಾನೆ."

"ಮುಂದಕ್ಕೆ."

"ಶಿವಮೊಗ್ಗೆಯೋ ಸಾಗರವೋ ನಿಶ್ಚಯವಾಗಿಲ್ಲ. ಸಾವಕಾರ ಎಷ್ಟು ಸಂಬಳ ಕೊಡ್ತಾ ಇದ್ದಾನೋ ಅಣ್ಣಯ್ಯ."

"ಎಂಭತ್ತು ಕೊಡ್ತಿದ್ದ. ಈ ತಿಂಗಳಿಂದ ತೊಂಭತ್ತು ಮಾಡಿದ್ದಾನೆ."

"ಅಯ್ಯೋ ಪೆಚ್ಚುಮುಂಡೇದೇ – ನಮ್ಮ ಕಂಪೆನೀಲಿ ಸಖೀ ಪಾರ್ಟಿನೋರಿಗೆಲ್ಲಾ ಅಷ್ಟು ಸಂಬಳ ಸಿಕ್ತಾಯಿದೆಯಲ್ಲೋ."

"ನಿಜ ಹೇಳ್ತಾಯಿದ್ದೀಯೋ ಬೂರಿ ಬಿಡ್ತಾಯಿದ್ದೀಯೋ ?"

"ನೀನೇ ವಿಚಾರಿಸಿ ನೋಡು – ದೇವರ ಮೇಲೆ ಪ್ರಮಾಣ ಮಾಡಿ ಹೇಳಲೇನು."

"ದನ ತಿನ್ನುವವನಿಗೆ ಗೊಬ್ಬರದ ಆಣೆ. ಈ ಲೋಭಿ ಸಾವಕಾರ ನನುಗೆಷ್ಟು ಟೋಪಿ ಹಾಕಿದ್ದಾನಯ್ಯಾ."

"ಅವನನ್ನೇಕೆ ಬಯ್ಯುತ್ತಿ. ನಿನ್ನ ಅವಿವೇಕ ಬಯ್ದುಕೋ."

"ಗುಂಡೂ, ನಿಮ್ಮ ಕಂಪೆನಿಯಲ್ಲಿ ನನಗೊಂದು ದಾರಿಮಾಡೋ ?."

"ಸಾಹುಕಾರ ರುದ್ರಪ್ಪನ ಕಂಪೆನಿ ನೀನೆಲ್ಲಿ ಬಿಟ್ಟು ಬರ್ತೀಯಪ್ಪ."

"ಸಾಹುಕಾರನ ಮನೆ ಹಾಳಾಯ್ತು. ಬಾ ಅಂದರೆ ಈಗಲೇ ಬರೋಕೆ ಸಿದ್ಧವಾಗಿದ್ದೇನೆ. ನನ್ನ ಅಡ್ವಾನ್ಸೂ ತೀರಿದೆ – ಇನ್ನೆಲ್ಲೊ ಇನ್ನೂರು ಮುನ್ನೂರು ಇರಬಹುದು."

"ನಿಜವಾಗಿ ಬರ್ತೀಯೇನೋ ಅಣ್ಣಯ್ಯ."

"ಪ್ರಮಾಣವಾಗಿ ಬರ್ತೀನಯ್ಯ. ಸಂಬಳ ಎಷ್ಟು ಕೊಡಿಸ್ತೀ ?"

"ನೂರರಿಂದ ಷುರುಮಾಡು."

"ಹೋಗೋ ನೂರಂತೆ ನೂರು ! ನೂರಿಪ್ಪತ್ತು ಕೊಡಿಸು—ಐನೂರು ಅಡ್ವಾನ್ಸ್ ಕೊಡಿಸು ಬರುತ್ತೇನೆ."

"ನೀನು ಕೇಳಿದ ಸಂಬಳ ಕೊಡಿಸ್ತೀನಿ – ಅಡ್ವಾನ್ಸ್ ಕೇಳಬೇಡ."

"ಅಡ್ವಾನ್ಸ್ ತೊಗೊಳ್ಳದಿದ್ದರೆ ಕಂಪೆನಿಯಲ್ಲಿ ನಮ್ಮ ಜಬರದಸ್ತು ನಡೆಯಲ್ಲಮ್ಮ. ಅಡ್ವಾನ್ಸಿಲ್ದೆ ಬಂದ ಆಕ್ಟರೂಂದ್ರೆ ಯಜಮಾನರಿಗೆ ಅಸಡ್ಡೆ."

"ಅದಕ್ಕೂ ಸೈ – ಆದರೆ ಒಂದೇ ಕಂಡಿಷನ್."

"ಏನು ಹೇಳು."

"ನೀನು ದಾವಣಗೆರೆಯಲ್ಲಿ ಶ್ರೀಶೈಲ ಕಂಪೆನಿಯಲ್ಲಿ ಪಾರ್ಟು ಮಾಡ ಕೂಡದು."

"ಈಗಲೇ ನಿನ್ನ ಜತೆಗೇ ಬರ್ತೀನಿ ಅಂತೀನಿ – ಏನೋ ಪಂಚಾಯ್ತಿ ಮಾಡ್ತಾನೆ."

"ರಾತ್ರಿ ಗಾಡೀಗೆ ನಾನು ದಾವಣಗೆರೆಗೆ ಹೋಗ್ತೀನಿ– ನೀನು ಬೆಳಿಗ್ಗಿನ ಗಾಡಿಯಲ್ಲಿ ಬಂದುಬಿಡು. ಕರಾರು ಮಾಡಿಸಿಬಿಡ್ತೀನಿ."

"ಸಾಮಾನು ಕಟ್ಟಿಕೊಂಡೇ ಬರಲೋ ? ನೋಡು, ಆಮೇಲೆ ಇಲ್ಲೂ ಇಲ್ಲ – ಅಲ್ಲೂ ಇಲ್ಲ ಆಗಿ ತ್ರಿಶಂಕುಸ್ವರ್ಗವಾದೀತು."

" ಏನೂ ಆಗುವುದಿಲ್ಲ – ನೀನು ಬಂದುಬಿಡಯ್ಯ. ನಾಳೆ ನಾನು ಸ್ಟೇಷನ್ನಿಗೆ ಬಂದಿರುತ್ತೇನೆ."

" ಹಾಗೇ ಮಾಡು – ನಮ್ಮೋರ ಕಣ್ಣಿಗೆ ಬೀಳ್ದಹಾಗೆ ಈ ಜಾಗ ಬಿಟ್ಟು ನೀನು ಅದೃಶ್ಯನಾಗು."

" ಹೊರಟೆ – ಯಾವದಾದರೂ ಲಾರಿ ಹೋಗೋದಿದ್ರೆ ಅದರಲ್ಲೇ ಹೊರಟುಹೋಗುತ್ತೇನೆ."

" ಹಾಳಾಗಿಹೋಗು – ಇಲ್ಲಿ ಮಾತ್ರ ಯಾರ ಕಣ್ಣಿಗೂ ಬೀಳ ಬೇಡ."

ಗುಂಡುವನ್ನೊಂದು ದಾರಿಯಲ್ಲಿ ಕಳುಹಿಸಿ ಅಣ್ಣಯ್ಯ ಬೇರೆ ದಾರಿಯಲ್ಲಿ ಬಂದು ಕಂಪೆನಿಮನೆ ಸೇರಿಕೊಂಡ.

ಗುಂಡೂ ರೈಲಿಗೆ ಕಾಯಲಿಲ್ಲ. ಹರಿಹರಕ್ಕೆ ಹೋಗುತ್ತಿದ್ದ ಒಂದು ಫುಡ್ ಲಾರಿ ಹಿಡಿದು, ಡ್ರೈವರ ಕೈ ಬೆಚ್ಚಗೆ ಮಾಡಿ ಅದೇ ರಾತ್ರಿ ದಾವಣಗೆರೆ ಸೇರಿದ.

ಗುಂಡನ ಸಂಧಾನ ಸಫಲವಾದುದನ್ನು ಕೇಳಿ ಶ್ರೀಕಂಠಮೂರ್ತಿಗೆ ಪರಮಾನಂದವಾಯಿತು. ಅಡ್ವಾನ್ಸ್ ವಿಷಯ ಕೇಳಿದ ಮೇಲೆ ಉಪ್ಪು ಹಾಕಿದ ಪಾಯಸ ರುಚಿನೋಡಿದಂತಾಯಿತು.

" ಇದ್ಯಾಕೋ ಹೀಗೆ ಮಾಡಿದೆ ಗುಂಡಾ ? "

" ಅವನು ಕೇಳಬೇಕಲ್ಲ ಸ್ವಾಮಿ. ಎರಡು ಸಾವಿರದಿಂದ ಐನೂರಕ್ಕೆ ಇಳಿಸಿದ್ದೀನಿ."

" ನಾಳೆ ಬರ್‍ತಾನೆಯೇ ನಿಜವಾಗಿ."

" ಅಣ್ಣಯ್ಯ ನನ್ನ ಮಾತು ತೆಗೆದುಹಾಕಲ್ಲ ಸ್ವಾಮಿ."

" ನಾಲ್ಕು ದಿವಸ ಮುಂಚೆ ಈ ಯೋಚನೆ ಮಾಡಿದ್ರೆ ದೊರೆಸ್ವಾಮಿಗೆ ಮೇಲುಕೋಟೆ ನಾಮ ಹಾಕಬಹುದಾಗಿತ್ತು."

" ಯಾರ ಯಾರ ಋಣ ಎಷ್ಟೆಷ್ಟಿದೆಯೋ – ಅದು ಮುಟ್ಟಬೇಕಲ್ಲ ! "

" ದೊರೆಸ್ವಾಮಿ ಬಲವಾಗಿ ತಿಷ್ಟ ಊರಿದ್ದಾನಯ್ಯಾ."

" ಊರದೆ ಏನು ಮಾಡ್ತಾನೆ ಸ್ವಾಮಿ – ಕೈತುಂಬ ಸಂಬಳ, ಅಡ್ವಾನ್ಸು ಸಿಕ್ಕುವಾಗ ಬಿಡುತ್ತಾನೆಯೇ ? "

"ಅದಲ್ಲ ಗುಂಡೂ. ನಾಟಕದ ರಾಣಿಯನ್ನ ನಿಜವಾದ ರಾಣಿ ಮಾಡಿಕೊಂಡಿರುವ ಹಾಗೆ ಕಾಣುತ್ತದೆ."

"ಏನು ಸ್ವಾಮಿ ನೀವು ಹೇಳೋದು."

"ಏನೂ ಇಲ್ಲ – ನಿನ್ನೆ ರಾತ್ರಿ ಮಂಜುಳಾ ದೊರೆಸ್ವಾಮಿ ರೂಮಿನಿಂದ ಹೊರಬಿದ್ದದ್ದು ಕಂಡೆ."

"ನಿಜವೇ ! !"

"ನನ್ನ ಕಣ್ಣೇ ನನಗೆ ಸುಳ್ಳು ಹೇಳತ್ತೇನಯ್ಯಾ."

"ಸರಿ ಹಿಂದಿನ ಕಥೆಯ ಪುನರಾವೃತ್ತಿ, ಇದಕ್ಕೆಲ್ಲಾ ನೀವೇ ಕಾರಣ ಸ್ವಾಮಿ."

"ನಾನು !"

"ಹೌದು ನೀವೇ ! ಹಿರಿಯಕ್ಕನ ಚಾಳಿ ಮನೆಮಂದಿಯೆಲ್ಲಾ ಕಲಿತು ಕೊಳ್ಳುತ್ತಾರೆ."

"ನಾನು ಕಂಪೆನಿಯ ಯಜಮಾನ."

"ಅವರು ಕಂಪೆನಿಯ ದೊಡ್ಡ ನಟರು."

"ಇದಕ್ಕೇನು ಮಾಡೋದೋ ಗುಂಡೂ."

"ಯಾವದಕ್ಕೆ ?"

"ಬೆಪ್ಪತಕ್ಕಡಿ ಹಾಗೆ ನಟಿಸಬೇಡ ಕಣೋ – ಸರಿಯಾಗಿ ಬೊಗಳೋ."

"ದೊರೆಸ್ವಾಮಿ ಮಂಜುಳನ ಸ್ನೇಹಕ್ಕೇ ?"

"ಹೂ – ಇನ್ನು ಯಾತಕ್ಕೆ ?"

"ನಿಮಗೂ ಅವಳ ಮೇಲೆ ಮನಸ್ಸಿತ್ತೇನು ?"

"ಅದನ್ನು ಮೊದಲೇ ಲೆಕ್ಕಹಾಕಿಕೊಂಡಿದ್ದೆ."

"ಮಹಾರಾಯರಪ್ಪ ! ಕೃಷ್ಣ ಪರಮಾತ್ಮ ! !"

"ಕುಚೇಷ್ಟೆಯಿರಲಿ ಹೇಳೋ."

"ಯಜಮಾನರು ನಿಮ್ಮ ಇಚ್ಛೆಗೆ ಯಾರು ಅಡ್ಡಿ ಸ್ವಾಮಿ. ಸರಸ್ವತೀಗೆ ತಿಳಿದ್ರೆ ಅವಳು ಶಂಖ ಬಾರಿಸ್ತಾಳೆ."

"ಮಂಜುಳನ್ನ ಥಿಯೇಟರಿಗೇ ಕರ್ಕೊಂಡು ಬಂದುಬಿಡು."

"ಸ್ವಾಮಿ, ಮನೆಯಲ್ಲಿ ಏನು ಬೇಕಾದರೂ ಮಾಡಿಕೊಳ್ಳಿ. ಥಿಯೇಟರಿನಲ್ಲಿ ಈ ಕೆಲಸ ಬೇಡ."

"ನೀನೊಂದು ಗೊಡ್ಡು ಮೂದೇವಿ. ನಾಳೆ ಮೂರು ಗಂಟೆಗೆ ಥಿಯೇಟರಿಗೆ ಕರ್ಕೊಂಡು ಬಾ. ಡ್ರೆಸ್ಸಿಂಗ್ ರೂಮ್ ಬೀಗದಕೈ ಮೇಸ್ತ್ರಿ ಹತ್ತಿರ ಈಸ್ಕೊಂಡಿರು."

"ಮೇಸ್ತ್ರಿಯನ್ನೇನು ಮಾಡಲಿ."

"ಶಿವಮೊಗ್ಗಾ ಥಿಯೇಟರು ನೋಡಿಕೊಂಡು ಬಾ ಎಂದು ಕಳಿಸು."

ಗುಂಡೂ ನಿರ್ವಾಹವಿಲ್ಲದೆ ಒಪ್ಪಲೇಬೇಕಾಯಿತು.

ಮಾರನೆಯ ಬೆಳಿಗ್ಗೆ ಆರು ಗಂಟೆಗೆ ಸ್ಟೇಷನ್ನಿಗೆ ಗುಂಡೂ ಹೋಗಿ ಕಾದಿದ್ದು ಅಣ್ಣಯ್ಯನನ್ನು ಕರೆದುಕೊಂಡು ಬಂದ. ಕಂಪೆನಿಮನೆಯಲ್ಲಿ ಅವನ ಸ್ನಾನ, ಉಪಾಹಾರ ಮುಗಿಯಿತು. ದೊರೆಸ್ವಾಮಿ, ಹನುಮಂತರಾಯ, ಭುವನೇಶ್ವರಯ್ಯ 'ಇವನೇಕೆ ಬಂದು ಒಕ್ಕರಿಸಿದ್ದಾನೆ' ಎಂದು ಆಶ್ಚರ್ಯಗೊಂಡರು. ಗುಂಡುವಿನ ಸಹಾಯದಿಂದ ರಹಸ್ಯ ಭೇದಿಸುವ ಪ್ರಯತ್ನ ಸಫಲವಾಗಲಿಲ್ಲ.

ಶ್ರೀಕಂಠಮೂರ್ತಿ ಯಥಾವಿಧಿಯಂತೆ ಒಂಭತ್ತು ಗಂಟೆಯ ವೇಳೆಗೆ ಥಿಯೇಟರಿನಲ್ಲಿದ್ದ ತನ್ನ ಕಛೇರಿಗೆ ಬಂದು ಕುಳಿತು ಮೇಸ್ತ್ರೀ ಹನುಮಯ್ಯನನ್ನೂ, ಲೈಟ್ ಸುಬ್ಬನನ್ನೂ ಬರಮಾಡಿಕೊಂಡು

"ನೀವಿಬ್ಬರೂ ಶಿವಮೊಗ್ಗೆಗೆ ಹೋಗಿ ಥಿಯೇಟರಿಗೆ ಏನೇನಾಗಬೇಕು ನೋಡಿಕೊಂಡು ಬನ್ನಿ."

"ನೋಡೋದಿಕ್ಕೇನಿದೆ ಸ್ವಾಮಿ. ಅಲ್ಲೀಗೆ ಹೇಗೂ ಮೂರು ನಾಲ್ಕು ದಿವಸ ಮುಂಚೆ ಹೋಗುತ್ತೇವೆ – ಆಗೆಲ್ಲಾ ನೋಡಿಕೊಳ್ಳುತ್ತೇವೆ."

"ಹೊಸ ನಾಟಕದ್ದು ಪ್ಲಾಟುಗಳು ದೊಡ್ಡವು. ಅವುಗಳನ್ನು ಜೋಡಿಸೋಕೆ ಸ್ಟೇಜ್ ಸಾಕೇ ನೋಡಬೇಕು – ಸಾಲದಿದ್ದರೆ ಹಿಂದಿನ ಗೋಡೆ ಒಡೆದು ಸ್ಥಳ ಮಾಡಿಕೊಳ್ಳಬೇಕು. ಲೈಟಿನ ಸಾಮಾನು ಏನು ಬೇಕು ನೀನು ನೋಡಿಕೊಂಡು ಬಂದರೆ, ಸೀಸನ್ ಷುರುವಾಗುವುದರೊಳಗೆ ಬೆಂಗಳೂರಿನಿಂದ ಸಾಮಾನು ತರಿಸಿಕೊಳ್ಳಬಹುದು. ಶಿವಮೊಗ್ಗೆಯಲ್ಲಿ ನಾಟಕ ಆರಂಭಿಸಿ ಅವಸ್ಥೆಪಡುವುದು ಬೇಡ."

"ಹೋಗಿಬರುತ್ತೇವೆ ಸ್ವಾಮಿ."

"ಹತ್ತು ಹನ್ನೊಂದಕ್ಕೆ ಬಸ್ ಇರ್ಬೇಕು – ಅದರಲ್ಲಿಯೇ ಹೋಗಿಬಿಡಿ."

"ಆಗಬಹುದು."

"ಖರ್ಚಿಗೆ ಇಪ್ಪತ್ತು ರೂಪಾಯಿ ತೆಗೆದುಕೊಂಡು ಹೋಗಿ. ಮೇಸ್ತ್ರೀ ಡ್ರೆಸ್ಸಿಂಗ್ ರೂಮ್ ಬೀಗದಕ್ಕೈ ಎಲ್ಲಿದೆ ?"

"ನನ್ನ ತಾವಾನೆ ಐತೆ ಸ್ವಾಮಿ."

"ಇಲ್ಲಿಕೊಡು. ಡ್ರೆಸ್ಸಿಂದೂ ಒಂದು ಸಲ ಝಾಡ್ತಿ ತೊಗೊಂಡುಬಿಟ್ಟರೆ ಒಳ್ಳೆಯದು"

ಎಂದು ಹೇಳಿದ. ಮೇಸ್ತ್ರೀ ಬೀಗದಕ್ಕೈ ಗೊಂಚಲನ್ನು ಯಜಮಾನರ ಮೇಜಿನಮೇಲಿಟ್ಟ. ರೈಟರ್ ಸೂರಪ್ಪ ಮೇಸ್ತ್ರಿ ಕೈಗೆ ಇಪ್ಪತ್ತು ರೂಪಾಯಿ ಕೊಟ್ಟು ಜಮಾಖರ್ಚಿನ ಪುಸ್ತಕದಲ್ಲಿ ಗುರುತು ಹಾಕಿಕೊಂಡ.

ಅಣ್ಣಯ್ಯ ಬರುವ ವೇಳೆಗೆ ಶ್ರೀಕಂಠಮೂರ್ತಿ ರೈಟರ್ ಕೈಯಲ್ಲಿ ಕರಾರು ಪತ್ರ ಬರೆಸಿಟ್ಟಿದ್ದ. ಗುಂಡೂ ಅಣ್ಣಯ್ಯನನ್ನು ಕರೆದುಕೊಂಡು ಬಂದ.

"ಬಾ ಅಣ್ಣಯ್ಯ – ಬೆಳಿಗ್ಗಿನ ರೈಲಿಗೆ ಬಂದೆಯಾ ?"

"ಬೆಳಿಗ್ಗೆ ಬಂದೆ ಸ್ವಾಮಿ."

"ಸೂರಪ್ಪ – ನಾಲ್ಕು ಕಪ್ ಕಾಫಿ ತೆಗೆಸಿಕೊಂಡು ಬಾರಯ್ಯ."

ಸೂರಪ್ಪ ಕನ್ನಡಕ ಮೂಗಿನ ಕೆಳಗೆ ಸರಿಸಿ ಅಣ್ಣಯ್ಯನನ್ನು ದಿಟ್ಟಿಸಿ ನೋಡುತ್ತಾ ಕಾಫಿ ಹೇಳಲು ಹೋದ.

"ತುಮಕೂರಿನಲ್ಲಿ ಗುಂಡೂಗೆ ನೀನು ಸಿಕ್ಕಿದ್ದ ವಿಷಯ ಹೇಳಿದ."

"ಶ್ರೀಶೈಲ ಕಂಪೆನಿ ಬಿಟ್ಟೇ ಬಂದುಬಿಟ್ಟೆ ಸ್ವಾಮಿ."

"ನಿಮ್ಮ ಸಾವಕಾರ ಸುಮ್ಮನಿದ್ದನೇ ?"

"ಹುಯ್ಕೊಂಡ – ದಾವಣಗೆರೆ ಕ್ಯಾಂಪು ಮುಗಿಸಿಕೊಂಡು ಹೋಗು ಎಂದು ಗೋಳಾಡಿದ. ನಾನು ಯಾವದನ್ನೂ ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ."

"ನಮ್ಮ ಕಂಪೆನಿಯಲ್ಲಿ ಸರಿಯಾಗಿ ಕಚ್ಚಿಕೊಂಡು ಇರ್ತೀಯೇನಪ್ಪಾ."

"ಇರಬೇಕೂಂತಾಲೆ ಬಂದಿದ್ದೀನಿ ಸ್ವಾಮಿ."

"ನಮ್ಮಲ್ಲೀಗ ಆಕ್ಟರುಗಳಿಗೇನೂ ಕೊರತೆಯಿಲ್ಲ – ಆದರೆ ಗುಂಡೂ

ಮಾತು ತೆಗೆದುಹಾಕಲಾರದೆ ಒಪ್ಪಿಕೊಂಡೆ – ಐನೂರು ರೂಪಾಯಿ ಅಡ್ವಾನ್ಸ್ ಕೇಳ್ತಾಯಿದ್ದೀಯಂತೆ ! "

" ಸ್ವಲ್ಪ ಸಾಲ ಇದೆ. ತೀರಿಸಿಕೊಂಡುಬಿಟ್ಟರೆ ನನಗೂ ನೆಮ್ಮದಿ."

" ಮುನ್ನೂರು ತೊಗೋ."

"ಅನ್ನ ಕೊಡೋ ಧಣಿಗಳು, ನೀವೇ ಹೀಗೆ ಹೇಳಿದರೆ ನಮ್ಮ ಗತಿಯೇನು ಸ್ವಾಮಿ. ಐನೂರಕ್ಕೆ ಕಮ್ಮಿ ನೀವು ಕೊಟ್ಟರೆ ನನ್ನ ತಾಪತ್ರಯ ಹರಿಯೋದಿಲ್ಲ ಸ್ವಾಮಿ."

" ಸಂಬಳ ? "

" ನೂರಿಪ್ಪತ್ತು ಕೊಡಿಸ್ತೀನೀಂತ ಗುಂಡೂ ಹೇಳಿದ್ದಾನೆ."

" ಹೌದೇನಯ್ಯ."

" ಹೌದು ಸ್ವಾಮಿ. ಹೇಳಿಬಿಟ್ಟೆ. ನನ್ನ ಮಾತು ನೀವು ಉಳಿಸಬೇಕು." ಎಂದು ಗುಂಡೂ ಅಂಗಲಾಚಿದ.

" ನೀನು ಇದೇ ನನಗೆ ಮಾಡೋ ಉಪಕಾರ. ಆಗಲಿ—ಈ ಸಾರೆ ಒಪ್ಪಿಕೊಳ್ಳುತ್ತೇನೆ. ಇನ್ನು ಮೇಲೆ ನನ್ನ ಕೇಳಿ ಹಣಕಾಸಿನ ವಿಷಯ ಮಾತಾಡು."

ರೈಟರು ಸೂರಪ್ಪ ತಾನೇ ಕಾಫಿ ಲೋಟಗಳನ್ನು ಹಿಡಿದುಕೊಂಡು ಬಂದ.

" ಕಾಫಿ ತೊಗೋ ಅಣ್ಣಯ್ಯ "

ಎಂದು ಶ್ರೀಕಂಠಮೂರ್ತಿ ಉಪಚರಿಸಿದ. ಎಲ್ಲರೂ ಕಾಫಿ ಕುಡಿದಾದ ಮೇಲೆ

" ಕರಾರು ಪತ್ರ ಬರೆದಿದ್ದೀಯಾ ಸೂರಪ್ಪ."

ಸೂರಪ್ಪ ಪತ್ರವನ್ನು ಯಜಮಾನರ ಕೈಯಲ್ಲಿತ್ತು ಜತೆಯಲ್ಲಿ ಒಂದು ಕವರು ಕೊಟ್ಟ. ಶ್ರೀಕಂಠಮೂರ್ತಿ ಅದನ್ನೋದಿಕೊಂಡು ಅಣ್ಣಯ್ಯನ ಕೈಯಲ್ಲಿತ್ತ. ಅಣ್ಣಯ್ಯ ಕರಾರು ಪತ್ರವನ್ನು ಪರಾಮರ್ಶಿಸಿ ಸಹಿ ಮಾಡಿ ಶ್ರೀಕಂಠಮೂರ್ತಿಗೆ ಹಿಂದಿರುಗಿಸಿದ.

ಶ್ರೀಕಂಠಮೂರ್ತಿ ಕವರನ್ನು ಅಣ್ಣಯ್ಯನ ಕೈಗೆ ಕೊಟ್ಟು

" ಎಣಿಸಿಕೋ – ಸರಿಯಾಗಿದೆಯೇನು ನೋಡಿಕೋ " ಎಂದ.

ಅಣ್ಣಯ್ಯ ನೋಡಿಕೊಂಡು 'ಸರಿಯಾಗಿದೆ' ಎಂದು ಹೇಳಿದ. ಶ್ರೀಕಂಠ ಮೂರ್ತಿ ಸೂರಪ್ಪನ ಕಡೆ ತಿರುಗಿ

"ಕಾಫಿ ಲೋಟ ಕೊಟ್ಟುಬಿಡು ಸೂರಪ್ಪ. ನಾನು ಕರೆಯುವವರೆಗೆ ಬರಬೇಡ"

ಎಂದು ಹೇಳಿದ. ಸೂರಪ್ಪ ಕಹಿಮೋರೆ ಮಾಡಿಕೊಂಡು ಹೊರಗೆ ಹೋದಮೇಲೆ ಅಣ್ಣಯ್ಯನ ಕಡೆ ತಿರುಗಿ

"ನಾಟಕದ ಕಂಪೆನಿಗಳ ವಿಷಯವೆಲ್ಲಾ ನಿನಗೆ ಗೊತ್ತೇ ಇದೆಯಲ್ಲಾ ಅಣ್ಣಯ್ಯ. ಯಜಮಾನರ ಮೇಲೆ ಕತ್ತೀ ಮಸೆಯೋದೇ ನಟರ ಕೆಲಸ. ನೀನು ನನ್ನವನಾಗಿದ್ದುಕೊಂಡು ಕೆಲಸ ತೂಗಿಸಿಕೊಂಡು ಹೋಗಬೇಕು."

"ಅನ್ನ ಇಟ್ಟವರಿಗೆ ಎರಡು ಬಗೆದರೆ ದೇವರು ಮೆಚ್ಚುತ್ತಾನೆಯೇ ಯಜಮಾನರೇ."

"ಹಾಗಿರಬೇಕು. ಕ್ರಿಯಾ ಇದ್ದರೆ ಮನುಷ್ಯ ಎಲ್ಲಾದರೂ ಬದುಕಿಕೊಳ್ಳುತ್ತಾನೆ."

"ಒಂದು ಮುಖ್ಯ ವಿಷಯ ಹೇಳುವುದಕ್ಕೆ ನಿನ್ನ ನಿಲ್ಲಿಸಿಕೊಂಡೆ ಅಣ್ಣಯ್ಯ,"

"ಹೇಳಿ ಸ್ವಾಮಿ. ದೊಡ್ಡವರು ನೀವು ಬುದ್ಧಿ ಮಾತು ಹೇಳಿದರೆ ಕೇಳುವುದು ನನ್ನ ಕರ್ತವ್ಯ."

"ಕಂಪೆನಿ ನಟರನ್ನು ನಾನು ಅಣ್ಣತಮ್ಮಂದಿರಂತೆ ನೋಡಿಕೊಳ್ಳುತ್ತೇನೆಯೇ ವಿನಾ ಸಂಬಳದ ನೌಕರರು ಎಂದು ಕಾಣುವುದಿಲ್ಲ. ಹೌದೊ ಇಲ್ಲವೋ ಗುಂಡೂ."

"ಲೋಕಕ್ಕೇ ತಿಳಿದಿರೋ ವಿಷಯಕ್ಕೆ ನನ್ನ ಸಾಕ್ಷಿಯಾಕೆ ಸ್ವಾಮಿ" ಎಂದು ಗುಂಡೂ ಹೇಳಿದ.

"ನಟರು ತಮ್ಮ ಆರೋಗ್ಯ ಕಾಪಾಡಿಕೊಳ್ಳಬೇಕು. ಶೀಲ ಕಾಯ್ದುಕೊಳ್ಳಬೇಕು – ಇವೆರಡೇ ರೂಲ್ಸು ನನ್ನ ಕಂಪೆನಿಯಲ್ಲಿ."

"ಅದು ನ್ಯಾಯವಾಗಿಯೇ ಇದೆ."

"ನೀವು ಹೊರಗೆ ಏನು ಮಾಡಿಕೊಂಡರೂ ನಾನು ಕೇಳುವುದಕ್ಕೆ ಬರುವುದಿಲ್ಲ. ನಿಮ್ಮ ನಡತೆ ಜವಾಬ್ದಾರಿ ನಿಮ್ಮದು – ಆದರೆ ಕಂಪೆನಿಯ ಮರ್ಯಾದೆ ಲಕ್ಷ್ಯದಲ್ಲಿಟ್ಟುಕೊಂಡು ನೀವು ನಡೆದುಕೊಳ್ಳಬೇಕು."

"ನಾವು ಬೇರೆ ಕಂಪೆನಿ ಬೇರೆಯೇ ಸ್ವಾಮಿ."

"ನಮ್ಮ ಕಂಪೆನಿಯಲ್ಲಿ ಸ್ತ್ರೀ ಪಾರ್ಟು ಮಾಡುವವರು ಆರುಜನ ಇದ್ದಾರೆ. ಅವರ ಗೋಜಿಗೆ ಮಾತ್ರ ನೀವು ಹೋಗಬಾರದು. ಅಂಥಹದು ನನ್ನ ಕಣ್ಣಿಗೆ ಬಿದ್ದರೆ ನಾನು ನಿರ್ದಾಕ್ಷಿಣ್ಯವಾಗಿ ಕಂಪೆನಿಯಿಂದ ಇಬ್ಬರನ್ನೂ ಆಚೆಗೆ ಕಳಿಸಬೇಕಾಗುತ್ತದೆ. ಒಪ್ಪಿಗೆ ತಾನೆ?"

"ಸಂಪೂರ್ಣವಾಗಿ ಒಪ್ಪುತ್ತೇನೆ"

"ಇನ್ನು ಹೆಚ್ಚಿಗೆ ಏನೂ ಹೇಳಬೇಕಾಗಿಲ್ಲಪ್ಪ. ಸಂತೋಷವಾಗಿ ನಿನ್ನ ಕೆಲಸ ನೀನು ಮಾಡಿಕೊಂಡು ಹೋಗು ದಾವಣಗೆರೆ ಕ್ಯಾಂಪು ದೇವರು ತಕ್ಕಮಟ್ಟಿಗೆ ನಡೆಸಿದ – ಶಿವಮೊಗ್ಗೆಯದೂ ಹಾಗೇ ಆದರೆ ನಿನ್ನ ಸಂಬಳ ಬಡ್ತಿ ಮಾಡುತ್ತೇನೆ."

ಅಣ್ಣಯ್ಯನಿಗೆ ಅಮಿತಾನಂದವಾಯಿತು. ಶ್ರೀಕಂಠಮೂರ್ತಿಯನ್ನು ಮನಃಪೂರ್ವಕ ಅಭಿವಂದಿಸುತ್ತ ಎದ್ದು ಹೊರಟ. ಅವನನ್ನು ಕಳಿಸಿಬರಲು ಗುಂಡೂ ಎದ್ದಾಗ

"ನೀನು ಸ್ವಲ್ಪ ಬಾ ಗುಂಡೂ – ಸೂರಪ್ಪನ್ನ ದೂರ ಕಳಿಸಿ ಸ್ಟೇಜ್ ಬಾಗಿಲು ಹಾಕಿಕೊಂಡು ಬಾ" ಎಂದು ಅವನ ಕಿವಿಯಲ್ಲುಸಿರಿದ.

ಗುಂಡೂ ಹಿಂದಕ್ಕೆ ಬರಲು

"ಅಣ್ಣಯ್ಯ ಹೋದನೆ?"

"ಹೋದ."

"ಸೂರಪ್ಪ ಎಲ್ಲಿ"

"ಹೊರಗಡೆ ಬೀಡಿಸೇದ್ತಾ ನಿಂತಿದ್ದಾನೆ."

"ಬೀಗದಕೈ ತೊಗೊಂಡು ಡ್ರೆಸ್ಸಿಂಗ್ ರೂಮುತೆಗೆದು ಪೀತಾಂಬರದ ಪೆಟ್ಟಿಗೆ ಬಾಗಿಲು ತೆಗೆ.

ಗುಂಡೂ ಬೀಗದ ಕೈ ಗೊಂಚಲು ಕೈಗೆ ತೆಗೆದುಕೊಂಡು ಹೋಗಿ ಡ್ರೆಸ್ಸಿಂಗ್ ರೂಮು ಬಾಗಿಲು ತೆಗೆದ. ಶ್ರೀಕಂಠಮೂರ್ತಿಯೂ ಅವನನ್ನು ಅನುಸರಿಸಿ ಹೋದ. ಪೆಟ್ಟಿಗೆಯ ಬಾಗಿಲು ಗುಂಡೂ ತೆಗೆಯಲು ಶ್ರೀಕಂಠಮೂರ್ತಿ ಎರಡು ಭವ್ಯ ಪಿತಾಂಬರಗಳನ್ನಾರಿಸಿ ಬಟ್ಟೆಯಗಳುವಿನ ಮೇಲೆ ಹಾಕಿ

"ಹೇಗಿದೆಯೋ ಈ ಹಸಿರು ಪಿತಾಂಬರ."

"ಸೊಗಸಾಗಿದೆ ಸ್ವಾಮಿ."

"ಪದ್ಮಿನೀಗೆ ಹೇಗಿರತ್ತೆ ಹೇಳು."

"ಪದ್ಮಿನೀಗೊ ಮಂಜುಳನಿಗೊ ನೀವು ಕೇಳುತ್ತಿರುವುದು."

"ಮಂಜುಳನಿಗೇಂತಾಲೆ ಇಟ್ಕೊ."

"ಅವಳೂ ತೆಳ್ಳಗೆ ಬೆಳ್ಳಗಿದ್ದಾಳೆ. ಹಸಿರು ಬೂಟ್‌ದಾರಿ ಚೆನ್ನಾಗಿ ಒಪ್ಪತ್ತೆ."

"ಮಧ್ಯಾನ್ಹ ಮೂರು ಗಂಟೆಗೆ ಅವಳನ್ನು ಮೇಕಪ್ (make-up) ಮಾಡಿಕೋಂತ ಹೇಳು."

"ಬಣ್ಣ ಹಚ್ಚಿಕೊಳ್ಳಬೇಕೇ?"

"ನಿನ್ನ ತಲೆ ತುಂಬ ಬರೀ ಮೂಳೆಕಣೋ ಗುಂಡಾ."

"ಸರಿಸರಿ – ಅರ್ಥವಾಯಿತು ಸ್ವಾಮಿ – ಕ್ಷಮಿಸಿ."

"ಅವಳ ಮೇಕಪ್ ನಾನು ಅಪ್ರೂವ್ (approve) ಮಾಡೋಕೆ ಡ್ರೆಸಿಂಗ್ ರೂಮಿಗೆ ಬರುತ್ತೇನೆ. ನೀನು ಬಾಗಿಲು ಎಳೆದುಕೊಂಡು ಹೊರಗಡೆ ಚಿಲಕ ಹಾಕಿಕೊಂಡು ಹೋಗು."

"ಈಗತಾನೆ ಅಣ್ಣಯ್ಯನಿಗೆ ನೀತಿ ಉಪದೇಶ ಮಾಡುತ್ತಿದ್ದಿರಿ."

"ಆಕ್ಟರುಗಳನ್ನೂ, ಯಜಮಾನರನ್ನೂ ಒಂದೇ ತಕ್ಕಡೀಗೆ ಹಾಕಿ ತೂಗುತ್ತೀಯಲ್ಲಾ."

"ತಪ್ಪು ತಪ್ಪು ಹಾಗೆ ಮಾಡಬಾರದು. ಪೆಟ್ಟಿಗೆ ಬೀಗ ಹಾಕಲೋ?"

"ಬೀಗ ಹಾಕು–ಪೀತಾಂಬರ ಹೊರಗೆ ಇರಲಿ . . . ಕೇಸರಿ ಪೀತಾಂಬರ ವನ್ನೂ ಗಳುವಿನ ಮೇಲೆ ಹಾಕಿರು."

ಯಜಮಾನ ಹೇಳಿದಂತೆ ಮಾಡಿ ಗುಂಡೂ ಪೆಟ್ಟಿಗೆಗೆ ಡ್ರೆಸ್ಸಿಂಗ್ ರೂಮ್‌ಗೆ ಬೀಗ ಹಾಕಿಕೊಂಡು ಹೊರಗೆ ಬಂದ.

"ಬೀಗದಕೈ ನನ್ನ ಹತ್ತಿರ ಕೊಡು. ನೀನು ಮಂಜುಳನನ್ನು ಎರಡು ಗಂಟೆಗೇ ಹೊರಡಿಸಿಕೊಂಡು ಬಂದು ಬಿಡು. ಬೀಗದಕೈ ಬಂದು ನೀನು ತೆಗೆದುಕೊಂಡು ಹೋಗುವುದೇ ಗುರುತು – ನೀನು ಹೋದ ಕಾಲು ಗಂಟೆ ಯೊಳಗಾಗಿ ನಾನು ಬರುತ್ತೇನೆ."

"ಸರಸ್ವತಮ್ಮನಿಗೆ ತಿಳಿದರೆ ನಿಮ್ಮ – ನನ್ನ ಇಬ್ಬರ ಗ್ರಹಚಾರವನ್ನೂ ಬಿಡಿಸಿಬಿಡುತ್ತಾಳೆ."

"ನೀನು ಬಾಯಿಬಿಡದಿದ್ದರೆ ಯಾವದೂ ತಿಳಿಯುವುದಿಲ್ಲ."

ಎಂದು ಶ್ರೀಕಂಠಮೂರ್ತಿ ಕಂಪೆನಿ ಮನೆಯ ಕಡೆಗೆ ಹೊರಟ.

ಕಂಪೆನಿಯಲ್ಲಿ ಒಬ್ಬರಿಗೊಬ್ಬರು ಊಟಕ್ಕೆ ಕಾಯುವ ಪದ್ಧತಿಯಿರಲಿಲ್ಲ. ಅಡಿಗೆಯಾದ ಮೇಲೆ ಯಾರು ಬಂದರೆ ಅವರಿಗೆ ನಾರಾಯಣ ಬಡಿಸುತ್ತಿದ್ದ. ಎಲ್ಲರ ಊಟವೂ ಮುಗಿದಿತ್ತು. ಯಜಮಾನ, ಗುಂಡಾ ಊಟ ಮುಗಿಸಿದರು.

ಯಜಮಾನ ಊಟ ಮುಗಿಸಿಕೊಂಡು ರೂಮಿಗೆ ಬಂದ ಮೇಲೆ ಸರಸ್ವತಮ್ಮ ಅವನಿಗೆ ಎಲಡಿಕೆ ಕೊಟ್ಟು

"ಪೂರ್ಣಯ್ಯನ ಛತ್ರಕ್ಕಿಂತ ಕಡೇಂದರೆ ನಿಮ್ಮ ಕಂಪೆನಿ."

"ಏಕೆ ಸರಸ್ವತಿ ?"

"ದಿನವೂ ಈ ಸತ್ತಕೂಳು ತಿಂದರೆ ನಾವು ಉಳಿಯುತ್ತೇವೆಯೇ ?"

"ಅಡಿಗೆ ಚೆನ್ನಾಗಿರುವುದಿಲ್ಲವೇ ?"

"ಅಡಿಗೆಯವನಿಗೆ ಸರಿಯಾಗಿ ಸಾಮಾನು ಕೊಟ್ಟರೆ ತಾನೆ ಅವನು ಬೇಯಿಸಿ ಹಾಕುವುದು. ದಿನವೂ ಅನ್ನ ಸಾರು, ಹುಣಿಸೇಹಣ್ಣಿನ ಚಟ್ನಿ ತಿಂದು ತಿಂದು ಸಾಕಾಗಿಹೋಗಿದೆ."

"ಇನ್ನೇನು ಬೇಕಾಗಿತ್ತು."

"ಒಂದು ತರಕಾರಿ ಬೇಡವೇ."

"ನಾಳೆಯಿಂದ ತರಕಾರಿ ಮಾಡೂಂತ ಹೇಳ್ತೀನಿ ಸರಿಯೋ ?"

"ತರಕಾರಿ ಒಂದೇ ಅಲ್ಲ – ವಾರಕ್ಕೊಂದು ಸೀ ಅಡಿಗೆ ಮಾಡಿಸಿ. ದಿನಾ ನಿದ್ದೆಗೆಡುತ್ತೇವೆ – ಹೊಟ್ಟೆ ತುಂಬ ಊಟವಾದರೂ ಬೇಡವೇ ?"

"ಈ ಕಾಲದಲ್ಲಿ ಎಂಭತ್ತು ಜನಕ್ಕೆ ಅನ್ನ ಕಾಣಿಸಬೇಕಾದ್ರೆ ಸಾಮಾನ್ಯವಾಗಲಿಲ್ಲ ಸರಸಾ. ಇಷ್ಟು ಜನಕ್ಕೆ ಅಕ್ಕಿ ಬೇಳೆ ಹೊಂದಿಸಬೇಕಾದರೆ ನನ್ನ ಹೆಣ ಹಿಟ್ಟಾಗಿಹೋಗುತ್ತದೆ."

"ದುಡಿಯಬೇಕಾದರೆ ನಮ್ಮ ಹೆಣ ಹಿಟ್ಟಾಗುವುದಿಲ್ಲವೇನೋ ?"

"ಯಾರಪ್ಪನ ಇಚ್ಛೆಗೆ ದುಡೀತಿರಿ – ಸಂಬಳ ತೆಗೆದುಕೊಳ್ಳುವುದಿಲ್ಲವೆ ?"

"ಸರಿ – ನೀವು ಕೊಡೋ ಸಂಬಳವೆಲ್ಲಾ ದುರ್ಗದ ಹೊಟೇಲ್ ದೋಸೇಗೇ ಆಗಿಹೋಗುತ್ತದೆ."

"ನಿಮ್ಮ ಹೊಟ್ಟೆಯಲ್ಲಿ ಹೆಮ್ಮಾರಿ ಸೇರಿಕೊಂಡಿದ್ದರೆ ನಾನೇನು ಮಾಡುವುದಕ್ಕಾಗುತ್ತದೆ."

ಎಂದವನೇ ಕಾಲು ಚಾಚಿಕೊಂಡು ಮಲಗಿದ್ದ. ಯಜಮಾನನ ವಿವರಣೆ ಸರಸ್ವತಮ್ಮನಿಗೆ ತೃಪ್ತಿಯನ್ನುಂಟುಮಾಡಲಿಲ್ಲ. ಅವಳು ಬಂದು ತಲೆಯ ಹತ್ತಿರ ಕುಳಿತುಕೊಂಡು

"ನಾನು ಅಡಿಗೆ ವ್ಯವಸ್ಥೆ ಮಾಡಿಕೊಳ್ಳುತ್ತೇನೆಂದರೆ ಅದಕ್ಕೂ ಅಡ್ಡಿ ಮಾಡುತ್ತೀರಿ ?"

"ನೀನು ಶುರುಮಾಡಿದರೆ ಎಲ್ಲಾರೂ ಶುರುಮಾಡ್ತಾರೆ."

"ಮಿಕ್ಕವರ ವಿಷಯ ನನಗೆ ಬೇಕಾಗಿಲ್ಲ–ನನ್ನ ವಿಷಯ ಮಾತನಾಡಿ."

"ಕಂಪೆನಿಯಲ್ಲಿ ಎಲ್ಲರಿಗಾದುದೇ ನಿನಗೂ ಆಗುತ್ತದೆ – ನಿನಗೇನು ಕೋಡಿದೆಯೇನು. ಮಾಡೋ ಅಡಿಗೆ ತಿಂದುಕೊಂಡು ಮಿಕ್ಕವರು ಸುಮ್ಮನಿಲ್ಲವೇ ?"

"ಅವು ಕೂಳು ಕಾಣದೆ ಬಂದ ಕಂಗಾಳಿಗಳು."

"ನೀನು ರಾಜರಾಜೇಶ್ವರಿ. ಈಗಿನ ವ್ಯವಸ್ಥೆ ತೃಪ್ತಿಕರವಾಗಿಲ್ಲವೆಂದು ತಿಳಿಯುವವರು ಕಂಪೆನಿ ಬಿಟ್ಟು ಹೋಗಬಹುದು—ನನ್ನದೇನೂ ಅಭ್ಯಂತರವಿಲ್ಲ."

ಎಂದು ಬಿರುಸಾಗಿ ನುಡಿದ. ಸರಸ್ವತಮ್ಮ ಅತ್ತುಕೊಂಡು ಹೊರಗೆದ್ದು ಹೋದಳು.

ಶ್ರೀಕಂಠಮೂರ್ತಿ ಬಹಳ ಹೊತ್ತು ಮಲಗಲಿಲ್ಲ. ಎದ್ದು ಕುಳಿತು ಕಾಫೀಗೆ ಹೇಳಿಕಳಿಸಿದ.

ಯಜಮಾನ ಎದ್ದಿದ್ದಾನೆಂದು ತಿಳಿದ ಮೇಲೆ ಗುಂಡೂ ಬಂದು

"ಬೀಗದಕ್ಕೈ ಎಲ್ಲಿದೆ" ಎಂದು ಕೇಳಿದ.

"ಕೋಟಿನ ಜೇಬಿನಲ್ಲಿದೆ ತೆಗೆದುಕೋ."

ಗುಂಡೂ ಬೀಗದ ಕೈ ಗೊಂಚಲು ತೆಗೆದುಕೊಂಡ.

"ಅವಳನ್ನು ಹೊರಡಿಸಿದ್ದೀಯಾ ?"

" ಹೊರಗಡೆ ನನ್ನ ಕಾಯುತ್ತ ನಿಂತಿದ್ದಾಳೆ."

" ಭೇಷ್ – ಸೂಕ್ಷ್ಮವಾಗಿ ಪ್ರಸ್ತಾಪ ಮಾಡಿರು."

" ನೋಡುತ್ತೇನೆ – ಸಂದರ್ಭ ಹೇಗೆ ಬರುತ್ತದೋ ? ನೀವು ಎಷ್ಟು ಹೊತ್ತಿಗೆ ಬರುತ್ತೀರಿ."

" ಇಗೋ ಹೊರಟೆ. ಕಾಫಿ ಕುಡಿದು ಬಟ್ಟೆ ಹಾಕಿಕೊಂಡು ಬರುತ್ತೇನೆ. ಗುಂಡೂ, ಹಾಗೇ ಜೇಬಿನಿಂದ ನೂರು ರೂಪಾಯಿ ತೊಗೋ."

" ಏಕೆ ? "

" ನಿನ್ನ ಪಾರ್ಟು ಚೆನ್ನಾಗಿ ಮಾಡಬೇಕೂಂತ ಯಜಮಾನರು ಕೊಟ್ಟಿದ್ದಾರೆಂದು ಹೇಳಿ ಅವಳಿಗೆ ಕೊಡು."

ಗುಂಡೂ ಯಜಮಾನನ ಕಿಸೆಯಿಂದ ನೂರು ರೂಪಾಯಿಗಳನ್ನು ತೆಗೆದುಕೊಂಡು ಹೊರಟ.

ಮಂಜುಳಾ, ಗುಂಡೂ ಥಿಯೇಟರ್ ಬಳಿಗೆ ಬಂದರು. ಥಿಯೇಟರ್ ಕಾವಲಿಗಿದ್ದ ಆಳನ್ನು ಗೇಟಿನ ಹೊರಗೆ ಕೂಡಿಸಿ ಗುಂಡೂ, ಮಂಜುಳನನ್ನು ಕರೆದುಕೊಂಡು ಒಳಕ್ಕೆ ಬಂದ.

" ಡ್ರೆಸ್ ರಿಹರ್ಸಲ್ ಅಂದಿರಿ – ಉಳಿದವರು ಯಾರೂ ಬಂದೇ ಇಲ್ಲ" ಎಂದಳು ಮಂಜುಳಾ.

ಗುಂಡೂ ಡ್ರೆಸ್ಸಿಂಗ್ ರೂಮಿನ ಬಾಗಿಲು ತೆಗೆದುಕೊಟ್ಟು, ಗಳುವಿನ ಮೇಲಿದ್ದ ಪೀತಾಂಬರವನ್ನು ಕೈಗೆ ತೆಗೆದುಕೊಂಡು

" ಇದು ಯಾರಿಗೆ ಹೇಳು ? "

" ಯಾರಿಗೆ ? "

" ನಿನಗೆ."

" ನನಗೆ !

" ನಿನಗೆ ಎಂದರೆ ಪದ್ಮಿನಿಗೆ."

" ನನ್ನ ಸ್ವಂತಕ್ಕೆ ಎಂದು ತಿಳಿದುಕೊಂಡೆ."

" ಅದೂ ಆಗಬಹುದು. ಯಜಮಾನರ ವಿಶ್ವಾಸ ಸಂಪಾದಿಸಿಕೊಂಡರೆ ಒಂದು ಪೀತಾಂಬರ ಕೊಡುವುದಿಲ್ಲ ಎನ್ನುತ್ತಾರೆಯೇ ? ನೀನು ಪಾರ್ಟು

ಚೆನ್ನಾಗಿ ಮಾಡಲಿ ಎಂದು ನೂರು ರೂಪಾಯಿ ಬಹುಮಾನ ಕಳಿಸಿದ್ದಾರೆ ನೋಡು"

ಎಂದು ಹಣವನ್ನು ಅವಳ ಕೈಯಲ್ಲಿತ್ತ.

ಮಂಜುಳಾ ಹಣ ತೆಗೆದುಕೊಂಡು

"ಅವರೇ ಕೊಡಬಹುದಾಗಿತ್ತಲ್ಲ."

"ನಿನಗೆ ಕೊಟ್ಟರೆ ಉಳಿದವರಿಗೆ ಹೊಟ್ಟೆಗೆ ಬೆಂಕಿ ಬೀಳುತ್ತದೆ. ಅವರವರ ಯೋಗ್ಯತಾನುಸಾರ ಮರ್ಯಾದೆ ಮಾಡುವುದರಲ್ಲಿ ಯಜಮಾನರು ಗಟ್ಟಿಗರು."

"ಅವರು ತುಂಬ ಒಳ್ಳೆಯವರ್‍ರೀ ಗುಂಡೂರಾಯರೇ."

"ಚಿನ್ನದಂಥ ಮನುಷ್ಯರು – ವಿಶ್ವಾಸವಿಟ್ಟವರಿಗೆ ಪ್ರಾಣಬೇಕಾದರೂ ಕೊಡುತ್ತಾರೆ. ಹೊತ್ತಾಗುತ್ತದೆ – ನೀನು ಸೀರೆ ಉಟ್ಕೊ – ಉಳಿದವರು ಬಂದರೆ ನಾನು ನೋಡುತ್ತೇನೆ."

ಎಂದು ಬಾಗಿಲು ಮುಂದಕ್ಕೆ ಮಾಡಿಕೊಂಡು ಗುಂಡೂ ಹೊರಗೆ ಬಂದ.

ಯಜಮಾನನ ಸವಾರಿ ಅದೇ ದಯಮಾಡಿಸಿತ್ತು. ಗುಂಡುವನ್ನು ಸೈಡ್ ವಿಂಗ್ಸ್ (Side Wings) ಕಡೆಗೆ ಕರೆದು

"ಮಾತಾಡಿದೆಯಾ ?"

"ಸೂಕ್ಷ್ಮವಾಗಿ ತಿಳಿಸಿದ್ದೇನೆ. ಯಜಮಾನರ ವಿಶ್ವಾಸ ಗಳಿಸಿಕೋ ಎಂದು ಹೇಳಿದೆ."

"ಏನು ಹೇಳಿದಳು."

"ಏನೂ ಇಲ್ಲ. ಸೀರೆ ನೋಡಿ ಅವಳ ಮನಸ್ಸು ಅರಳಿಹೋಗಿದೆ."

"ಹಸಿರು ಪೀತಾಂಬರ ಇವತ್ತು ನಮ್ಮ ಕೈಬಿಡತ್ತೆ."

"ಪೀತಾಂಬರವೊಂದೇ ಕೈಬಿಟ್ಟರೆ ನಿಮ್ಮ ಪುಣ್ಯ."

"ತಂಟೆ ತಕರಾರು ಮಾಡಿಯಾಳೋ ?"

"ಹಾಗೆ ಕಾಣಲಿಲ್ಲ. ಆಸೆಬುರುಕ ಹುಡುಗಿ – ಪಳಗಿಸಿಕೊಳ್ಳೋದು ನಿಮ್ಮ ಕೈಯಲ್ಲಿದೆ."

"ಡ್ರೆಸ್ಸಿಂಗ್ ರೂಮ್ ಬಾಗಿಲು ತೆಗೆಸಿ ನೀನು ಹೋಗು – ಹೊರಗೇ

ಕಾದಿರು. ಯಾರನ್ನೂ ಒಳಕ್ಕೆ ಬಿಡಬೇಡ. ವಾಚ್‌ಮ್ಯಾನನ್ನ ದೂರ ಕಳಿಸು."

ಗುಂಡು ಡ್ರೆಸ್ಸಿಂಗ್ ರೂಮ್ ಬಳಿ ಬಂದು ಮೆಲ್ಲನೆ ಕದ ತಟ್ಟಿದ. ಒಳಗಿನಿಂದ ಮಂಜುಳಾ

"ಬನ್ನಿ" ಎಂದಳು.

ಗುಂಡೂ ಮೊದಲು ಪ್ರವೇಶಿಸಿದ. ಅವನ ಹಿಂದೆ ಶ್ರೀಕಂಠಮೂರ್ತಿ ಪ್ರವೇಶಿಸಿದ.

"ಮಂಜೂಗೆ ಹೇಗಿದೆಯೋ ಈ ಸೀರೆ ಗುಂಡಾ."

"ಕೇಳುವುದೇನು ಸ್ವಾಮಿ. ನೀವು ನಾಟ್ಯಾಚಾರ್ಯರು. ಸೀರೆ ತನಗೆ ಕೊಡುತ್ತಿದ್ದೀರೆಂದು ತಿಳಿದುಕೊಂಡಳು ಸ್ವಾಮಿ. ಇಲ್ಲ–ಪದ್ಮಿನಿ ಪಾತ್ರಕ್ಕೆ ಎಂದು ನಾನು ಹೇಳಲು ಆಶಾಭಂಗವಾಯಿತೂಂತ ಕಾಣತ್ತೆ."

"ಹೌದೇನು ಮಂಜೂ."

"ಹೌದು. ನನಗೊಂದು ಪೀತಾಂಬರ ನೀವು ಕೊಡಬಾರದೇನು ?"

"ಯಾಕೆ ಕೊಡಬಾರದು"

ಎಂದು ಶ್ರೀಕಂಠಮೂರ್ತಿ ನುಡಿದ. ಗುಂಡೂ ಸಮಯನೋಡಿ ಮೆಲ್ಲನೆ ಬಾಗಿಲು ಎಳೆದುಕೊಂಡು ಹೋದ. ಮಂಜುಳ ಕತ್ತೆತ್ತಿ ನೋಡಿದಾಗ ಗುಂಡೂ ಇರಲಿಲ್ಲ.

"ಗುಂಡೂರಾಯರು ಹೋದರೇನು ?"

"ಎಲ್ಲೋ ಹೋಗಿದ್ದಾನೆ – ಬರ್ತಾನೆ."

"ಹೊರಗೆ ಹೋಗೋಣ – ರಿಹರ್ಸಲ್ಲಿಗೆ ಎಲ್ಲರೂ ಬಂದಿರಬಹುದು."

"ಯಾರೂ ಬರುವುದಿಲ್ಲ – ಹೆದರಬೇಡ."

ಎಂದು ಶ್ರೀಕಂಠಮೂರ್ತಿ ಮಂಜುಳನನ್ನು ಮುಟ್ಟಲು ಮುಂದಕ್ಕೆ ಬಂದ. ಮಂಜುಳಾ ಹಿಂದಕ್ಕೆ ಸರಿದು

"ಇದೇನ್ರೀ – ಹೀಗೇಂತ ನನಗೆ ಗೊತ್ತಾಗಲಿಲ್ಲ."

"ಹೇಗೇಂತ !"

"ರಿಹರ್ಸಲ್ ಇದೆ ಎಂದು ನಾನು ಬಂದೆ."

"ಇದೇ ರಿಹರ್ಸಲ್ಲೇ .... ಹತ್ತಿರ ಬಾ ಮಂಜೂ."

"ನನ್ನ ತಾಯಿ ಸ್ನೇಹಿತರಲ್ಲವೇನ್ರೀ ನೀವು."

"ಅಲ್ಲ-ನಿನಗೋಸ್ಕರವೇ ನಾನು ನಿನ್ನ ತಾಯಿಗೂ ಕಂಪನಿಯಲ್ಲಿ ಸ್ಥಳ ಕೊಟ್ಟದ್ದು."

"ನಾನು ಅಂಥವಳಲ್ರೀ."

"ಎಂಥವಳು ?"

"ಗೊತ್ತಿದ್ದು ಏಕೆ ಕೇಳುವಿರಿ."

"ಗೊತ್ತಿದೆ. ದೊರೆಸ್ವಾಮಿ ನಿಮ್ಮಣ್ಣನೇನು."

ಮಂಜುಳಾ ಅವಾಕ್ಕಾದಳು.

"ಅದು ಬೇರೆ ವಿಷಯ."

"ಏನು ವಿಷಯ."

"ಯಾರನ್ನೋ ಮೆಚ್ಚಿಸುವುದಕ್ಕೆ ನಾನು ಅವರ ಸ್ನೇಹ ಬೆಳೆಸಬೇಕಾಯ್ತು."

"ಯಾರನ್ನು ಮೆಚ್ಚಿಸುವುದಕ್ಕೆ."

"ಅದನ್ನು ನೀವೇಕೆ ತಿಳಿದುಕೊಳ್ಳಬೇಕು."

"ಬೇಕು-ಹೇಳು."

"ನನ್ನ ತಾಯಿಯನ್ನು."

"ನಿನ್ನ ತಾಯಿಗೆ ದೊರೆಸ್ವಾಮಿಯಲ್ಲೇಕೆ ಅಷ್ಟು ಆಸಕ್ತಿ."

"ದೊರೆಸ್ವಾಮಿ ಕಂಪೆನಿ ಬಿಟ್ಟು ಹೋಗುವುದಾಗಿ ಹೇಳಿದರು. ಅವರು ಹೋದರೆ 'ಜಯಪಾಲ ಚರಿತ್ರೆ'ಯಲ್ಲಿ ನನ್ನ ಪಾರ್ಟು ಹೋಗುವುದಲ್ಲಾ ಎಂದು ನಾನು ಒಪ್ಪಬೇಕಾಯಿತು."

"ಕಂಪೆನಿ ಯಜಮಾನ ನಾನು. ದೊರೆಸ್ವಾಮಿ ಹೋದರೆ ಇನ್ನೊಬ್ಬನ ಕೈಲಿ ಆ ಪಾರ್ಟು ಮಾಡಿಸುತ್ತಿದ್ದೆ."

"ನಮ್ಮ ಮೇಲೆ ದೊರೆಸ್ವಾಮಿ ಚಾಡಿ ಹೇಳಿ ನಿಮ್ಮ ಮನಸ್ಸು ಕೆಡಿಸಬಹುದು ಎಂದು ಹೆದರಿದೆವು."

"ದೊರೆಸ್ವಾಮಿ ಕಂಡರೆ ನಿನಗೆ ವಿಶ್ವಾಸವಿದೆಯೋ ?"

"ಸ್ವಲ್ಪವೂ ಇಲ್ಲ."

"ಅವನನ್ನು ಮರೆತುಬಿಡು. ಅವನು ಕಂಪೆನಿಯಲ್ಲಿರಲಿ ಬಿಡಲಿ

ನಾನು ನಿನ್ನ ಕೈಯಲ್ಲಿ ಪದ್ಮಿನಿ ಪಾರ್ಟು ಮಾಡಿಸುತ್ತೇನೆ. ಬೇಕಾದಷ್ಟು ಪ್ರಚಾರಮಾಡಿ ನಿನ್ನೇ ದೊಡ್ಡ ನಟಿ ಮಾಡುತ್ತೇನೆ. ದೊರೆಸ್ವಾಮೀಗೆ ತಿಥಿ ಮಾಡಬೇಕೂಂತಾಲೆ ಅಣ್ಣಯ್ಯನ್ನ ಕರೆದುಕೊಂಡು ಬಂದಿರುವುದು. ನಿನಗೆ ಈ ಜುಜಿಬಿ ಸ್ನೇಹ ಬೇಡ – ನನ್ನವಳಾಗಿರು – ನಿನಗೆ ಯಾವುದಕ್ಕೂ ಕಡಿಮೆ ಯಾಗುವುದಿಲ್ಲ."

"ಅಮ್ಮ . . ."

"ಅವಳ ಪಾಡಿಗೆ ಅವಳಿರುತ್ತಾಳೆ."

ಎಂದನ್ನುತ್ತಾ ಮಂಜುಳನ ಸಮೀಪಕ್ಕೆ ಹೋಗಿ ಅವಳ ಕೈ ಹಿಡಿದು ಕೊಂಡ. ಅವಳು ಬೇಡವೆನ್ನಲಿಲ್ಲ. ಅವಳ ಬುಜವನ್ನಪ್ಪಿ ಕೆನ್ನೆಯ ಮೇಲೆ ಮುದ್ದಿಟ್ಟ. ಅದಕ್ಕೂ ಅವಳು ಅಸಮಾಧಾನ ವ್ಯಕ್ತಮಾಡಲಿಲ್ಲ. ಅವಳನ್ನು ಎದುರಿಗೆ ಕರೆದುಕೊಂಡು ಅಪ್ಪಿ ತುಟಿಗೆ ತುಟಿಗೆ ಸೇರಿಸಿದ. ಮಂಜುಳಾ ಮೆಲ್ಲನೆ

"ಇದು ಪಾಪವಲ್ಲವೇನ್ರೀ." ಎಂದಳು.

ಶ್ರೀಕಂಠಮೂರ್ತಿ ಉತ್ತರ ಹೇಳಲಿಲ್ಲ.

ಒಂದು ಗಂಟೆ ತರುವಾಯ ಮಂಜುಳಾ ಮೃದುವಾಗಿ

"ಈ ಪೀತಾಂಬರ ನನಗೆ ತಾನೇ." ಎಂದಳು.

"ನಿನಗೇ ಮಂಜು. ಇನ್ನು ಮೇಲೆ ಥಿಯೇಟರಿಗೇ ಬಂದು ಬಿಡು. ಕಂಪೆನಿ ಮನೆಯಲ್ಲಿ ಅನುಕೂಲವಾಗುವುದಿಲ್ಲ."

"ಹಾಗೆ ಆಗಲಿ" ಎಂದಳು.

ಶ್ರೀಕಂಠಮೂರ್ತಿ–ಡ್ರೆಸ್ಸಿಂಗ್ ರೂಮ್ ಬಿಟ್ಟು ಹೊರಗೆ ಬರುವ ವೇಳೆಗೆ ಸಂಜೆಯಾಗಿತ್ತು. ಬಂದವನೇ ಗುಂಡುವನ್ನು ಕರೆದು

"ಅಣ್ಣಯ್ಯನಿಗೆ 'ಜಯಪಾಲ'ನ ಪಾರ್ಟು ಬರೆದುಕೊಟ್ಟು ಪಾಠ ಮಾಡಿಸು. ವಿಷಯ ಗೋಪ್ಯವಾಗಿರಲಿ."

"ದೊರೆಸ್ವಾಮಿ...."

"ಅವನನ್ನು ಹೂಳುವುದಕ್ಕೆ ಗುಣಿ ತೋಡಿದ್ದೀನಿ."

"ಅಡ್ವಾನ್ಸು ಐದುನೂರು ರೂಪಾಯಿ ಅವನ ಮೇಲಿದೆಯೆಲ್ಲಾ ಸ್ವಾಮಿ."

"ವಸೂಲಾಗತ್ತೇನು ನೋಡು."

"ಸ್ಮಶಾನಕ್ಕೆ ಹೋದ ಹೆಣ, ನಾಟಕದವರಿಗೆ ಕೊಟ್ಟ ಹಣ ಹಿಂದಿರುಗಿ ಬರುತ್ತದೆಯೇ."

"ಹೋದರೆ ಹೋಯಿತು."

"ಶಿವಮೊಗ್ಗಾ ಕ್ಯಾಂಪಿನಲ್ಲಿ ದೊರೆಸ್ವಾಮಿ ಪಾರ್ಟಿಲ್ಲಾ ಅಣ್ಣಯ್ಯನೇ ಮಾಡಬೇಕೇನು?"

"ಮಾಡದೆ ಏನು? ಎಲ್ಲಾ ಹಳೇ ನಾಟಕಗಳು. ಅವನಿಗೆ ಬಂದೇ ಇರುತ್ತವೆ. 'ಜಯಪಾಲ' ಹೊಸದು. ಅದನ್ನು ನೀನು ನೋಡಿಕೋ. ಮಂಜುಳನನ್ನು ಮನೆ ಮುಟ್ಟಿಸಿಬಿಡು."

"ಧಣಿಯ ಚಿತ್ತ"

ಎಂದು ಗುಂಡೂ ಒಪ್ಪಿಕೊಂಡ.

ಶ್ರೀಕಂಠಮೂರ್ತಿ ಹೋದಕೂಡಲೆ ಮಂಜುಳ ಎದ್ದು ಕುಳಿತು ಸಾವ ಕಾಶವಾಗಿ ಸುತ್ತಮುತ್ತ ನೋಡಿದಳು. ಮೇಸ್ತ್ರಿಯ ಹಾಸಿಗೆ – ಪಾರ್ಟಿನವರ ಬಟ್ಟೆಗಳು ಇವೇ ಅಂದಿನ ಕ್ರೀಡಾಸಾಧನಗಳಾಗಿದ್ದವು.

ಮಂಜುಳಾ ಮೇಲಕ್ಕೆದ್ದು ಹಾಸಿಗೆ ಸುತ್ತಿ ಒಂದು ಮೂಲೆಯಲ್ಲಿಟ್ಟು, ಕುಪ್ಪಸದ ಗುಂಡಿಗಳನ್ನು ಹಾಕಿಕೊಂಡು ಉಟ್ಟಿದ್ದ ಪೀತಾಂಬರ ಬಿಚ್ಚಿ, ತಾನು ಧರಿಸಿ ಬಂದಿದ್ದ ವಾಯಿಲ್ ಸೀರೆ ಉಡುವುದಕ್ಕಾರಂಭಿಸಿದಳು.

ಅವಳ ನೆನಪು ಹಿಂದಿನ ಅನುಭವಕ್ಕೆ ಹೋಯಿತು. 'ಪೀತಾಂಬರ ರಾಯ – ನನ್ನ ಗೆಳೆಯ; ಅವನನ್ನು ಅಮ್ಮಾ ಕದ್ದು ತನ್ನವನನ್ನಾಗಿ ಮಾಡಿ ಕೊಂಡಳು – ಈಗ – ಶ್ರೀಕಂಠಮೂರ್ತಿ ಅಮ್ಮನ ಗೆಳೆಯ ನಾನು ಕದ್ದಂತಾ ಯಿತು! ಮುಯ್ಯಿಗೆ ಮುಯ್ಯಿ ತೀರಿತೆಂದು ವಿಕಟ ನಗೆ ನಕ್ಕಳು.

ಡ್ರೆಸ್ಸಿಂಗ್ ರೂಮಿನ ತುಂಬ ನಾಟಕದ ಸಾಮಾನುಗಳು. ಕಿರೀಟ ಗಳು, ಕತ್ತಿಗಳು, ಕೃತಕ ರತ್ನ ಮಾಲೆಗಳು, ಹೂಮಾಲೆಗಳು ಇತ್ಯಾದಿ. 'ಇದು ನಾಟ್ಯದೇವಿಯ ದೇವಸ್ಥಾನ' ಎಂದುಕೊಂಡಳು. ಕೆಲವು ದಿನಗಳ ಹಿಂದೆ ಊರಿನವರು ಶ್ರೀಕಂಠಮೂರ್ತಿಯನ್ನೂ ಕಂಪೆನಿಯ ಪ್ರಧಾನ ನಟ ನಟಿಯರನ್ನೂ ಸತ್ಕರಿಸಿ ಮೆಡಲುಗಳನ್ನು ಕೊಟ್ಟಾಗ ಶ್ರೀಕಂಠಮೂರ್ತಿ

ಕಂಪೆನಿ ಕವಿ ದೀಕ್ಷಿತರು ಬರೆದುಕೊಟ್ಟಿದ್ದುದನ್ನು ಉರು ಹೊಡೆದು ಭಾಷಣ ಮಾಡಿದ್ದ.

"ಇದು ನಾಟ್ಯ ಸರಸ್ವತಿಯ ಪೂಜಾಮಂದಿರ. ನಾವು ಆ ದೇವಿಯ ಆರಾಧಕರು. ಪೂಜಾರಿಗಳು – ಭಕ್ತರು. ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನೂ ನಾಟ್ಯಮಂದಿರದಲ್ಲಿ ಸಾಧಿಸಬಹುದೆನ್ನುವುದನ್ನು ಪೂಜ್ಯ ಭರತಾಚಾರ್ಯರು ಸಿದ್ಧಮಾಡಿಕೊಟ್ಟಿದ್ದಾರೆ. ನಾಟಕ – ನಾಟ್ಯ ಕುಶೀಲರ ವಿದ್ಯೆಯಲ್ಲ. ಪರಮ ತಪಸ್ವಿಗಳಾದವರೇ ಉತ್ತಮ ಕಲಾವಿದರಾಗಲು ಸಾಧ್ಯ. ನಾಟ್ಯ ಬ್ರಹ್ಮೋಪಾಸನೆ ಮಾಡದೆ ಹಣದಾಸೆಗೆ ನಾಟಕವಾಡುವವರು ಕಲೆಗೆ ಅನ್ಯಾಯ ಮಾಡುತ್ತಾರೆ. ನಟನಾದವನು ಉತ್ತಮ ಶೀಲವುಳ್ಳವನಾಗಿ, ಉತ್ತಮ ವಿಚಾರಿಯಾದರೇ ಅವನ ಕಲೆಯಲ್ಲಿ ದಿವ್ಯತೆ ಕಂಡು ಬರುವುದು. ಇತ್ಯಾದಿ . . . ಇತ್ಯಾದಿ."

ಶ್ರೀಕಂಠಮೂರ್ತಿಯ ಭಾಷಣವನ್ನು ಜ್ಞಾಪಿಸಿಕೊಂಡು ಮಂಜುಳ ನಕ್ಕಳು.

ಯಾರೋ ಬಾಗಿಲು ಬಡಿದರು.

"ಯಾರು ? ಗುಂಡೂರಾಯರೇ !"

"ಹೌದಮ್ಮ. ಬರುತ್ತೀಯಾ ?"

"ಯಜಮಾನರೆಲ್ಲಿ."

"ವಾಕಿಂಗ್ ಹೋದರು."

"ಬಟ್ಟೆ ಹಾಕಿಕೊಳ್ಳುತ್ತಿದ್ದೇನೆ. ಬಂದೆ."

ಮಂಜುಳನಿಗೆ ಕಾಯುತ್ತ ಗುಂಡೂ ಹೊರಬಾಗಿಲಿನಲ್ಲೇ ನಿಂತ.

ಮಂಜುಳ ಒಂದು ಹಳೆಯ ಬಟ್ಟೆಯನ್ನೆಳೆದುಕೊಂಡು ಅದರಲ್ಲಿ ಹಸಿರು ಪೀತಾಂಬರ ಮಡಿಸಿಟ್ಟಳು ಅವಳ ಲಕ್ಷ್ಯ ಗಳುವಿನ ಮೇಲಿದ್ದ ಕೇಸರಿ ಪೀತಾಂಬರದ ಕಡೆಗೆ ಹೋಯಿತು. ಅದನ್ನೂ ಗಂಟಿಗೆ ಸೇರಿಸಿ ಹೊರಗೆ ಬಂದಳು.

ಮಂಜುಳನ ಕೈಯಲ್ಲಿದ್ದ ಗಂಟನ್ನು ನೋಡಿ, ಒಳಗೆ ಹೋಗಿ ಗಳುವಿನ ಮೇಲಿದ್ದ ಎರಡು ಪೀತಾಂಬರಗಳೂ ಮಾಯವಾಗಿದ್ದುದನ್ನು ಕಂಡು ಗುಂಡೂ

"ಪೀತಾಂಬರಗಳು ಕಂಪೆನಿಯದಮ್ಮ."

"ಯಜಮಾನರು ನನಗೆ ಕೊಟ್ಟಿದ್ದಾರೆ."

“ಆ ವಿಷಯ ನನಗೆ ಹೇಳಲಿಲ್ಲ.”

“ನೀವು ಕೇಳಿ ತಿಳಿದುಕೊಳ್ಳಿ. ನಾನೆಲ್ಲೂ ಓಡಿ ಹೋಗುವುದಿಲ್ಲ. ಪೀತಾಂಬರಗಳು ನನ್ನಲ್ಲಿಯೇ ಇರುತ್ತವೆ. ಅವರು ಬೇಕು ಎಂದರೆ ಕೊಡುತ್ತೇನೆ.”

ಗುಂಡೂ ಮರುಮಾತನಾಡಲು ಸಾಧ್ಯವಿರಲಿಲ್ಲ. ಬಾಯಿಮುಚ್ಚಿಕೊಂಡು ಡ್ರೆಸ್ಸಿಂಗ್ ರೂಮಿನ ಬೀಗ ಹಾಕಿಕೊಂಡು ಹೊರಗೆ ಬಂದ.

ಇಬ್ಬರೂ ಕಂಪೆನಿಮನೆಯ ದಾರಿ ಹಿಡಿದರು. ಗುಂಡೂ ಮೆಲ್ಲನೆ.

“ಎರಡು ಪೀತಾಂಬರ ಒಂದೇ ದಿವಸ ಕೊಡಬೇಕಾದರೆ ಯಜಮಾನರಿಗೆ ಬ್ರಹ್ಮಾನಂದವಾಗಿರಬೇಕು.”

“ಆ ವಿಷಯ ನನ್ನ ಕೇಳಿದರೆ ಏನು ಪ್ರಯೋಜನ–ಅವರನ್ನೇ ಕೇಳಿನೋಡಿ”.

“ದೊರೆಸ್ವಾಮಿಗಳ ಗತಿ.... ?”

“ಇವತ್ತಿನಿಂದ ಅವರಿಗೆ ಟಿಕೆಟ್ಟೇ.”

“ನಿನಗೂ ಈಗ ಶುಕ್ರದೆಸೆ ಕಣಮ್ಮ.”

ಮಂಜುಳ ಗುಂಡೂರಾಯನ ಮುಖನೋಡಿ ವಿಕಟವಾಗಿ ನಕ್ಕಳು. ಆ ನಗೆಯ ಮರ್ಮ ಗುಂಡೂರಾಯನಿಗೆ ಅರ್ಥವಾಗಲಿಲ್ಲ.

## ೧೦

ದಾವಣಗೆರೆಯಲ್ಲಿ ಕಂಪೆನಿ ಸೀಸನ್ ಮುಗಿದಿತ್ತು. ಮುಂದಿನ ಕ್ಯಾಂಪು ಶಿವಮೊಗ್ಗೆಯಲ್ಲಿ ಎಂದು ನಿಶ್ಚಯವಾಗಿ ವ್ಯವಸ್ಥೆ ನಡೆದಿತ್ತು. ಊರಿಗೆ ಹೋಗಿ ಬರಬೇಕೆಂದು ನಟರು ಹಟ ಹಿಡಿದರು. ಎಂಟು ದಿವಸದ ಊಟದ ಖರ್ಚು ಮಿಕ್ಕರೆ ಮಿಗಲಿ ಎಂದು ಶ್ರೀಕಂಠಮೂರ್ತಿ ಎಲ್ಲರಿಗೂ ರಜಾಕೊಟ್ಟು ತಿಂಗಳ ಕೊನೆಗೆ ಎಲ್ಲರೂ ಶಿವಮೊಗ್ಗೆಗೆ ಬರಬೇಕೆಂದು ಹೇಳಿದ. ಅಣ್ಣಯ್ಯ, ರಾಜಶೇಖರ, ದೀಕ್ಷಿತ, ಗುಂಡೂ, ಸೂರಪ್ಪ ದಾವಣಗೆರೆಯಲ್ಲಿಯೇ ಉಳಿದುಕೊಂಡರು. ಉಳಿದವರು ಊರುಗಳಿಗೆ ಪ್ರಯಾಣ ಬೆಳಸಿದರು.

ಬೆಂಗಳೂರಿಗೆ ಹೋಗಿ ಬರೋಣ ಬನ್ನಿ ಎಂದು ಸರಸ್ವತಿ ಮಕ್ಕಳಿಬ್ಬರನ್ನೂ ಕರೆದಳು. ಮಂಜುಳಾ ಅವಳ ಮಾತಿಗೆ ಉತ್ತರ ಕೊಡಲಿಲ್ಲ. ಸುಧಾ ದಿಟ್ಟತನದಿಂದ ಕೇಳಿಯೇ ಬಿಟ್ಟಳು.

"ಬೆಂಗಳೂರಿನಲ್ಲಿ ಏನಮ್ಮ ಕೆಲಸ. ಏಕೆ ಹೋಗಬೇಕು."

"ಕಂಪೆನಿ ಸುಡುಗಾಡು ಕೂಳು ತಿಂದು ಸಾಕಾಗಿದೆ. ಒಳ್ಳೆಯ ಸೆರೆ ಆಗಿ ಹೋಗಿದೆ. ಬೆಂಗಳೂರಿಗೆ ಹೋಗಿ ನಾಲ್ಕು ದಿನ ಹಾಯಾಗಿದ್ದು ಚೆನ್ನಾಗಿ ಊಟ ತಿಂಡಿ ಮಾಡಿಕೊಂಡು ಓಡಾಡಿಕೊಂಡು ಬರೋಣ ಬನ್ನಿ."

"ಬೆಂಗಳೂರಿಗೆ ಹೋದರೆ ಎಲ್ಲಮ್ಮ ಇರೋದು."

"ಮುತ್ತಮ್ಮನ ಮನೆ ಇದೆಯಲ್ಲಾ !"

"ಅಲ್ಲಿಗೆ ಹೋಗಿರೋದೇ ?"

"ಯಾಕೆ – ಇರಬಾರದೇನು ?"

"ಆ ಜೀವನ ಕಂಡರೆ ನನ್ನ ಮೈಮೇಲೆ ಮುಳ್ಳೇಳುತ್ತದೆ."

"ಪುಟ್ಟನ ಕಾಗದಕ್ಕೆ ಉತ್ತರ ಬರೆದು, ದುಡ್ಡು ಕಳಿಸು ಎಂದು ನೀನೇ ಹೇಳಿದೆಯಲ್ಲೇ."

"ಒಬ್ಬರ ಕಷ್ಟಕ್ಕಾಗಬೇಕಾದುದು ನಮ್ಮ ಧರ್ಮ ಎಂದು ಹೇಳಿದೆ."

"ನೀನು ಬಂದರೆ ಬಾ, ಬಿಟ್ಟರೆ ಬಿಡು – ನಾನಂತೂ ಹೋಗಿ ಬರುತ್ತೇನೆ."

"ನೀನೂ ಹೋಗಬೇಡಮ್ಮ."

"ಏನೇ–ನಿನಗೇನು ತಲೆಗಿಲೆ ಕೆಟ್ಟಿದೆಯೋ ?"

"ಕೆಟ್ಟಿಲ್ಲವೆಂದೇ ಹೇಳುತ್ತಿದ್ದೇನೆ–ಹೋಗಬೇಡ. ಈ ಬಾಳು ಸಾಕು ಮಾಡು. ನಾವೂ ಮನುಷ್ಯರು–ದನಗಳಲ್ಲ. ಪ್ರಪಂಚದಲ್ಲಿ ಮರ್ಯಾದೆಯಾಗಿ ಬಾಳುವೆ ಮಾಡಲು ಸಾಧ್ಯ. ಕೆಲಸ ಮಾಡುವುದಕ್ಕೆ ನಿನಗಿಷ್ಟವಿಲ್ಲದಿದ್ದರೆ ನೀನು ಸುಮ್ಮನೆ ಕುಳಿತುಕೋ. ನಾನು ನಾಲ್ಕು ಮನೆ ಮುಸಿರೆ ತಿಕ್ಕಿ ಅನ್ನ ಸಂಪಾದಿಸಿ ತರುತ್ತೇನೆ.–ಅಕ್ಕಯ್ಯನ ಬಾಳು ನೋಡಿದರೆ ನನ್ನ ಕರುಳುಕಿತ್ತು ಬರುತ್ತದೆ. ನಮ್ಮ ವಂಶ ಎಂಥಾದ್ದು !–ನಮ್ಮ ರಕ್ತ ಎಂಥಾದ್ದು !–ನಾವು ಮಾಡುತ್ತಿರುವ ಕೆಲಸ ಎಂಥಾದ್ದು. ಅಷ್ಟು ಓದಿಯೂ ಅಕ್ಕಯ್ಯ ಈ ಗತಿಗಿಳಿಯಬೇಕೇ !"

ಮಗಳ ಮಾತನ್ನು ಕಪಟ ಸಹನೆಯಿಂದ ಕೇಳುತ್ತಿದ್ದ ಸರಸ್ವತಮ್ಮನ ರಕ್ತ ಕುದಿಯುತ್ತಿತ್ತು.

"ಚೋಟುದ್ದದ ಪಂಗೋಳಿ. ನನಗೆ ಬುದ್ಧಿ ಹೇಳುವಷ್ಟು ಬೆಗಿತು ಕೊಂಡೆಯಾ"

ಎಂದು ಸುಧೆಯ ಎರಡು ಕಪಾಳಕ್ಕೂ ಬಿಗಿದಳು. ಸುಧೆಯ ಕೆನ್ನೆಗಳಲ್ಲಿ ಬಾವು ಬಂತಲ್ಲದೆ ಕಣ್ಣಲ್ಲಿ ನೀರು ಬರಲಿಲ್ಲ.

"ನನ್ನ ಹೊಡೆದರೆ ನಿನ್ನ ಪಾಪ ಅಳಿಸಿ ಹೋಗೋದಿಲ್ಲ. ನೀನು ಹೆಣ್ಣಲ್ಲ–ಹೆಣ್ಣು ರೂಪ ಹೊತ್ತಿರುವ ಪಿಶಾಚಿ. ಎಷ್ಟು ಪಾಪ ಮಾಡಿ ನಾನು ನಿನ್ನ ಹೊಟ್ಟೆಯಲ್ಲಿ ಹುಟ್ಟಿದೆ ಹೇಳು."

ಎಂದಂದು ಆ ಸ್ಥಳ ಬಿಟ್ಟು ಹೊರಟುಬಿಟ್ಟಳು.

ಸರಸ್ವತಿಗೆ ಪಾದರಕ್ಷಾ ಪ್ರಯೋಗ ಮಾಡಿದಂತಾಯಿತು. ಅಳುತ್ತ ಮುಖ ಮುಚ್ಚಿಕೊಂಡು ಮಲಗಿದಳು.

ಅದೇ ಮಧ್ಯಾಹ್ನ ಥಿಯೇಟರಿನಲ್ಲಿ ಮಂಜುಳಾ ಶ್ರೀಕಂಠಮೂರ್ತಿಯನ್ನು ಕಂಡಾಗ

"ಅಮ್ಮ ಬೆಂಗಳೂರಿಗೆ ಹೋಗಿ ಬರಬೇಕೂಂತಿದ್ದಾಳೆ."

"ಏಕೆ ?"

"ಬೇಸರವಾಗಿದೆಯಂತೆ !"

"ಹೋಗಿ ಬರಲಿ."

"ನನ್ನೂ ಬಾ ಎಂದು ಕರೆಯುತ್ತಿದ್ದಾಳೆ. ಹೋಗಿಬರಲೇ ?"

"ಅವಳು ಹೋಗಲಿ ಸುಮ್ಮನಿರು–ನೀನು ಹೋಗಬೇಡ."

"ನಾನೇಕೆ ಹೋಗಬಾರದು."

"ಎಳೆಯ ಮಗುವಿನ ಹಾಗೆ ಕೇಳುವೆಯಲ್ಲಾ ! ಅಷ್ಟು ಗೊತ್ತಾಗಲ್ಲವೇ ? ಕಂಪೆನಿ ಮನೆಯಲ್ಲಿ ಯಾರೂ ಇರುವುದಿಲ್ಲ - ನಿಮ್ಮಮ್ಮನೂ ಹೋಗುತ್ತಾಳೆ. ನಾಲ್ಕು ದಿವಸ ನಾವು ಸುಖವಾಗಿರಬಹುದು."

"ಸುಮ್ಮಸುಮ್ಮನೆ ಇರೂಂದರೆ ನಾನೇಕೆ ಇರಲಿ."

"ನಿನಗೇನು ಬೇಕಾಗಿತ್ತು ?"

"ನಿಮ್ಮ ಗುರುತಾಗಿ ಮಾವಿನಕಾಯಿಸರ ಮಾಡಿಸಿಕೊಡಿ."

"ಶಿವಮೊಗ್ಗಾ ಕ್ಯಾಂಪಿನಲ್ಲಿ ಖಂಡಿತ ಮಾಡಿಸಿಕೊಡುತ್ತೇನೆ."

"ಹಾಗಾದರೆ ನಾನೂ ಬೆಂಗಳೂರಿಗೆ ಹೋಗಿ ಬರುತ್ತೇನೆ."

"ನನ್ನ ಮಾತಿನಲ್ಲಿ ನಿನಗೆ ನಂಬಿಕೆಯಿಲ್ಲವೇ ?"

"ನನ್ನ ಮೇಲೆ ನಿಮಗೆ ಪ್ರೀತಿಯಿಲ್ಲ!"

"ಹಾಗೆ ಹೇಳಬೇಡ. ಪ್ರೀತಿಯಿಲ್ಲದಿದ್ದರೆ ನಿನ್ನ ಇಷ್ಟು ಅಂಗಲಾಚಿ ಬೇಡಿಕೊಳ್ಳುತ್ತಿದ್ದೆನೇ."

"ಹಾಗಾದರೆ ಸರ ಮಾಡಿಸಿಕೊಡಿ."

ಶ್ರೀಕಂಠಮೂರ್ತಿ ಕ್ಷಣಕಾಲ ಯೋಚನೆಮಾಡಿ

"ಆಗಲಿ ಮಾಡಿಸಿಕೊಡುತ್ತೇನೆ – ಇರು"

ಎಂದು ಹೇಳಿದ. ಅದೇ ರಾತ್ರಿ ತಾಯಿಗೆ ತಾನು ಬೆಂಗಳೂರಿಗೆ ಬರುವುದಿಲ್ಲವೆನ್ನುವ ವಿಷಯ ಮಂಜುಳ ತಿಳಿಸಿದಳು.

ಮಾರನೆಯ ಬೆಳಿಗ್ಗೆ ಗಾಡಿಯಲ್ಲಿ ಸರಸ್ವತಿ ಒಬ್ಬಳೇ ಬೆಂಗಳೂರಿಗೆ ಪ್ರಯಾಣಮಾಡಿದಳು. ರಾತ್ರಿ ರೈಲು ಇಳಿದ ಕೂಡಲೆ ಒಂದು ಗಾಡಿ ಮಾಡಿಕೊಂಡು ನೇರವಾಗಿ ಮುತ್ತಮ್ಮನ ಮನೆಗೆ ಹೋದಳು.

ಮನೆಯ ತೊಟ್ಟಿಯಲ್ಲಿ 'ಸಾವಿತ್ರಿ ಚರಿತ್ರೆ' ಓದುತ್ತ ಕುಳಿತಿದ್ದ ಪುಟ್ಟ ಸರಸ್ವತಿಯನ್ನು ಕಂಡಕೂಡಲೆ ಉತ್ಸಾಹದಿಂದ

"ಅಕ್ಕಯ್ಯ ಬಂದಳು – ಅಮ್ಮ, ಅಕ್ಕಯ್ಯ ಬಂದಳು."

ಎಂದು ಕೂಗಿಕೊಂಡಳು. ಒಳಗಿದ್ದ ಮುತ್ತಮ್ಮ, ಭಾಗ್ಯಮ್ಮ ಇಬ್ಬರೂ ಹೊರಬಾಗಿಲಿಗೆ ಬಂದರು. ಸರಸ್ವತಿಯನ್ನು ಕಂಡಕೂಡಲೆ ಮುತ್ತಮ್ಮ ಸಂತೋಷ ವ್ಯಕ್ತಗೊಳಿಸಿ

"ಬಾಮ್ಮ ಬಾ, ಬೋದಿವ್ನಸಕ್ಕೆ ಗ್ಯಾಪ್ಕ ಇಟ್ಕೊಂಡು ಬಂದ್ಯೆಲ್ಲಾ"

ಎಂದಳು. ಗಾಡಿಯವನು ಸರಸ್ವತಿಯ ಟ್ರಂಕು, ಹಾಸಿಗೆ, ರೈಲು ಚೆಂಬು ಹಿಡಿದುಕೊಂಡು ಒಳಕ್ಕೆ ಬರಲು

"ಸಾಮಾನು ಮ್ಯೇಕ್ಕೆ ಇಡಿಸಿಬಿಡು ಪುಟ್ಟಾ" ಎಂದಳು.

ಪುಟ್ಟ ಗಾಡಿಯವನಿಗೆ ದೀಪ ತೋರಿಸುತ್ತಾ ಅವನ ಕೈಯಲ್ಲಿ ಸಾಮಾನು ತೆಗೆಸಿಕೊಂಡು ಹೋಗಿ ಮಹಡಿಯ ಮೇಲಿಟ್ಟು ಬಂದಳು.

ಬಾಡಿಗೆ ತೆಗೆದುಕೊಂಡು ಗಾಡಿಯವನು ಹೋದ ಮೇಲೆ ಮುತ್ತಮ್ಮ

"ಬತ್ತೀನೀಂತ ಒಂದು ಕಾಗಜ ಹಾಕಾಕೆ ಆಗ್ಲಿಲ್ವೇನ್ಮ. ಟೇಶನ್ ತಾವ ಬತ್ತಿದ್ದೆ."

"ಇದ್ದಕ್ಕಿದ್ದಂತೆ ಹೊರಟುಬಿಟ್ಟೆ ಮುತ್ತಮ್ಮ – ಕಾಗದ ಬರೆಯುವುದಕ್ಕಾಗಲಿಲ್ಲ. ಚೆನ್ನಾಗಿದ್ದೀಯೇನೇ ಪುಟ್ಟಾ – ನೀನು ಚೆನ್ನಾಗಿದ್ದೀಯಾ ಭಾಗ್ಯಮ್ಮ."

"ಏನೋ ಇದ್ದೀನಮ್ಮ" ಎಂದಳು ಭಾಗ್ಯಮ್ಮ.

"ಅಕ್ಕ ಬತ್ತಾಳೇಂದ್ರೆ ಇಲ್ಲಾ ಅಂದೆಯಲ್ಲಾ – ನೋಡಿದೆಯೇನಮ್ಮ"

"ನಿನ್ನ ಕಾಗದ ಬಂದಾಗಲೇ ಬರ್ಬೇಕೂಂತಿದ್ದೆ ಪುಟ್ಟಾ - ಆಗಲಿಲ್ಲ. ನಾಟಕಗಳು ನಡೆದಿದ್ದವು - ಊರು ಬಿಡುವುದಕ್ಕಾಗಲಿಲ್ಲ.

"ಕಂಪಣಿ ಚೆನ್ನಾಗಿ ನಡದೈತೇನಮ್ಮ."

"ಚೆನ್ನಾಗಿ ನಡೆದಿದೆ. ದಾವಣಗೆರೆ ಕ್ಯಾಂಪು ಮುಗೀತು."

"ಮುಂದಕ್ಕೆ"

"ಶಿವಮೊಗ್ಗೆ."

"ಅಮ್ಮಾ, ಅಕ್ಕಯ್ಯನಿಗೆ ಊಟಕ್ಕೆ ಮಡಗಾಕಿಲ್ವಾ."

"ಏನೂ ಬೇಡ ಪುಟ್ಟಾ – ನನಗೆ ಹಸಿವಿಲ್ಲ."

"ಅಂಗಂದ್ರೆ ಆಗ್ತೈತಾ. ಭಾಗ್ಯಮ್ಮ ಬಿಸೀನೆ ಅನ್ನ ಮಾಡ್ತಾಳೆ. ಮನೇಲಿ ಮಜ್ಜಿಗೆ ಐತೆ - ಊಟ ಮಾಡಮ್ಮ. ಒತ್ತಾರೇನೂ ಊಟ ಇಲ್ಲಾಂತ ಕಾಣ್ತೈತೆ."

"ಅರಸೀಕೆರೆ ಸ್ಟೇಷನ್ನಿನಲ್ಲಿ ಊಟ ಮಾಡಿದೆ."

ಒಲೆ ಹಚ್ಚಿ ಅನ್ನಕ್ಕಿಡಲು ಭಾಗ್ಯಮ್ಮ ಹೋದಮೇಲೆ

"ಮಕ್ಕಳು ಚೆಂದಾಕವ್ರೇನಮ್ಮ?" ಎಂದಳು ಮುತ್ತಮ್ಮ.

"ಚೆನ್ನಾಗಿದ್ದಾರೆ."

"ನಾಲ್ಕು ದಿವಸ ಇರೋ ಅಂಗೆ ಬಂದಿದ್ದೀಯೋ - ಒಲ್ಟು ಬಿಡಬೇಕೋ ?"

"ನಾಲ್ಕೇಕೆ - ಎಂಟು ದಿವಸ ಪುರಸತ್ತಿದೆ."

"ಸಂತೋಸ. ಮಾರಾಯಳಾಗಿ ಇರು. ನಿನ್ನ ಮನೇಲಿ ನೀನಿರೋಕೆ ಯಾರದೇನು ಅಡ್ಡಿ. ಒಳ್ಳೇ ಸಮಯಕ್ಕೆ ಹಣ ಕಳಿಸಿದೆ ಸರಸೋತಮ್ಮ.

ಅಣ ಬಂದಾಗ ರಾಮರಾಜಪ್ಪನೂ ಇಲ್ಲೇ ಇದ್ದ - ಅವನೂ ಭೋ ಸಂತೋಸ ಪಟ್ಟ."

"ರಾಮರಾಜಪ್ಪ ಈಚೆಗೆ ಬಂದಿದ್ದರೇ ?"

"ಇಲ್ಲೇ ಇದ್ದನಮ್ಮಾಂದ್ರೆ – ನೀನು ಬರೋದಿಕ್ಕೆ ರೋಪ್ಸು ಒತ್ತು ಮುಂಚೆ ಓದ. ಕಾಗಜ ಬರೆದಿದ್ರೆ ಅವನನ್ನ ಇಲ್ಲೇ ಇಟ್ಕೊಂತಿದ್ದೆ."

"ನಾಳೆ ಹೇಳಿ ಕಳುಹಿಸು."

"ಅಂಗೇ ಆಗಲಿ."

"ಕಂಪೆನಿ ಊಟ ಮಾಡಿ ಮಾಡಿ ನನಗೆ ಸಾಕಾಗಿ ಹೋಗಿದೆ ಮುತ್ತಮ್ಮ."

"ಊಟ ಚೆಂದಾಕಿರಾಗಿಲ್ವಾ."

"ಅನ್ನ ಸಾರು. ಒಂದೊಂದು ದಿವಸ ಕೆಟ್ಟ ಮುಖದ ಚಟ್ಣಿ."

"ನೀನೇನು ತಿನ್ತಿ, ಏಳಮ್ಮ - ನಾನು ಮಾಡ್ಸಿ ಆಕ್ತೀನಿ."

"ಪಲಾವ್ ತಿಂದು ಎಷ್ಟೋ ದಿವಸವಾಯಿತು."

"ಅದಕ್ಕೇನಂತೆ. ಒತಾರೆ ನಾಷ್ಟಕ್ಕೇ ತರಿಸಿಕೊಡ್ತೀನಿ."

"ಬೆಳಿಗ್ಗೆ ಬೇಡ – ನಾನು ರಾಘವಾಚಾರರನ್ನು ನೋಡಿಕೊಂಡು ಬರುತ್ತೇನೆ. ಮಧ್ಯಾನ್ನ ಊಟಕ್ಕೆ ಆಗಲಿ. ನನಗೆ ಬಹಳ ಬೇಜಾರಾಗಿ ಬಿಟ್ಟದೆ ಮುತ್ತಮ್ಮ. ನಾಲ್ಕು ದಿವಸ ಸುಖವಾಗಿ ಇದ್ದು ಹೋಗಬೇಕೂಂತ ಬಂದಿದ್ದೀನಿ."

"ಅಂಗೇ ಮಾಡು. ಬೇಡ ಅಂದೋರು ಯಾರು ? ನಿಂಗೆ ಏನಾಗ ಬೇಕು ಏಳು - ನಾನು ಮಾಡ್ತೀನಿ."

"ನಂಜಪ್ಪನವರು ಈಚೆಗೆ ಈ ಕಡೆ ಬರಲಿಲ್ಲವೋ ?"

"ಆಯಪ್ಪನ ಮೊಕವೇ ಇಲ್ಲಕಣಮ್ಮ. ಬಾಗ್ಯಮ್ಮ . . ."

ಭಾಗ್ಯಮ್ಮ ಅಡಿಗೆ ಮನೆಯಿಂದ ಬರಲು ಮುತ್ತಮ್ಮ

"ನಂಜಪ್ಪನ ಕಂಡಿದ್ಯಾ."

"ಅಂಗಡೀಲಿ ಕುಂತಿರ್ತಾರೆ. ಮೊಕ ನೋಡಿದರೂ ಮಾತಾಡ್ತಾಕಿಲ್ಲ ಮ್ಮಾಂದ್ರೆ."

"ಹೇಗಾದರೂ ಮಾಡಿ ನಾಳೆ ಇಲ್ಲಿಗೆ ಕರೆದುಕೊಂಡು ಬರುತ್ತೀಯಾ ಭಾಗ್ಯಮ್ಮ."

"ಹೇಳಿದರೂ ಆಯಪ್ಪ ಬರಾಕಿಲ್ಲಮ್ಮ."

"ನಾನು ಒಂದು ಕಾಗದ ಬರೆದುಕೊಡುತ್ತೇನೆ. ತೆಗೆದುಕೊಂಡು ಹೋಗಿ ಕೊಡು. ಅದನ್ನು ನೋಡಿದ ಮೇಲೆ ಬರಬಹುದು."

"ಬರೋದು ನಂಗೆ ದೈರ್ಯ ಇಲ್ಲ - ಕಾಗದ ಕೊಡು, ಕೊಟ್ಟಂತೂ ಬತ್ತೀನಿ."

"ರಾಮುರಾಜಪ್ಪನ ಬರೇಳು ಎಂದೆ."

"ಅವರು ರಾತ್ರೀಗೆ ಬರಲಿ."

"ಶ್ರೀಕಂಠಪ್ಪ ಚೆಂದಾಕಿ ನೋಡ್ಕೋತಿರಲಿಲ್ವಾ ?"

"ಅವರ ತಾಪತ್ರಯ ಅವರಿಗೆ. ನಾಟಕದ ಕಂಪೆನಿಯೆಂದರೆ ನಾನು ಏನೋಂತಿದ್ದೆ. ಬರೇ ಗೋಳಮ್ಮ. ಈ ಕಂಪೆನಿಯಲ್ಲಂತೂ ವಿಪರೀತ ಕಟ್ಟು ನಿಟ್ಟು. ಹಳಬರು ಮೂವರು ಹುಡುಗಿಯರಿದ್ದಾರೆ - ಅವರು ಬೇರೆ ನನ್ನ ಮೇಲೆ ವಿಷಕಾರುತ್ತಾರೆ."

"ಅವರಿಗೇನು ಬಂತು ಬರಬಾರದ್ದು !"

"ಯಜಮಾನರಿಗೂ ನನಗೂ ವಿಶ್ವಾಸವಿದೆ. ನಾನು ಯಜಮಾನರ ರೂಮಿನಲ್ಲೇ ಇರುತ್ತೇನೆ. ಅದಕ್ಕೆ ಹೊಟ್ಟೆಉರಿ."

"ಅವರವರು ಕೇಳ್ಕೊಂಡು ಬಂದದ್ದು ಅವರವರಿಗೆ. ಒಟ್ಟೆಉರಿ ಪಟ್ಟರೆ ಆಗ್ತೈತಾ."

"ಹೆಣ್ಣು ಜಾತಿಗೆ ಸಹನೆ ಎಲ್ಲಿಂದ ಬಂತು ಮುತ್ತಮ್ಮ."

"ಎಣ್ಣಿಗ್ಯಾಕಮ್ಮ - ಗಂಡು ಜಾತೀಗೂ ಸಾನೆ ಇಲ್ಲ . . . ನಮ್ಮ ಪುಟ್ಟನ್ನ ಕರ್ಕೊಂಡು ಓಗಿ ನಿನ್ನ ಕಂಪನಿಯಾಗೆ ಇಟ್ಕೊಳ್ಳೋಕೆ ಆಗಾಕಿಲ್ವಾ!"

"ನಾನೇ ಕಂಪೆನಿ ಬಿಟ್ಟು ಬೇಡಬೇಕೆಂದಿದ್ದೇನೆ ಮುತ್ತಮ್ಮ."

"ಬಿಟ್ಟು . . ."

"ಇಲ್ಲೀಗೆ ಬಂದರೂ ಬಂದೆ. ಇನ್ನೂ ನಿಶ್ಚಯಮಾಡಿಲ್ಲ."

"ಅಂಗ್ಯಾಕಮ್ಮ ಮಾಡ್ತಿ. ಏನೋ ದೇವರು ಕಣ್ಣುಬಿಟ್ಟು

ನೊಡವ್ನೆ - ಒಟ್ಟೆ ಬಟ್ಟೆ ಕಳೆದು ಓಗ್ತೈತೆ. ಇಲ್ಲಿ ಒಟ್ಟೇಗಿಲ್ದೆ ಮಕ್ಕಳ್ನೇ ಮಾರಿಕೊಂತವ್ರಮ್ಮಾ."

"ಹೊಟ್ಟೆ ಬಟ್ಟೆ ಕಳೆದರೆ ಆಯ್ತೇ ಮುತ್ತಮ್ಮ."

"ಶ್ರೀಕಂಠಪ್ಪ ಅವ್ನಲ್ಲಾ !"

"ಎರಡು ದಿವಸ ಮೂರು ದಿವಸಕ್ಕೊಮ್ಮೆ ಊಟಮಾಡಿದರೆ ಹೊಟ್ಟೆ ತುಂಬುತ್ತದೆಯೇ ಮುತ್ತಮ್ಮ."

"ಇಲ್ಲ ನನ್ನ ತಾಯಿ - ನೀನು ಪರಮಾಯಿಷಿ ಎಂಗಸು ಅನ್ನೋದನ್ನ ಮರ್ತಿದ್ದೆ"

ಎಂದು ಮುತ್ತಮ್ಮ ತನ್ನ ಮೆಚ್ಚಿಗೆ ವ್ಯಕ್ತಮಾಡಿದಳು.

ಭಾಗ್ಯಮ್ಮ ಬಂದು ಸರಸ್ವತಿಯನ್ನು ಊಟಕ್ಕೆಬ್ಬಿಸಿದಳು.

"ನಿಮ್ಮದೆಲ್ಲಾ ಊಟ ಆಯ್ತೇ?"

"ನೀ ಬರೋಕೆ ಒಸ್ಸಿ ಒತ್ಗೆ ಮುಂಚೆ ಉಂಡು ಕೈ ತೊಳಕೊಂಡಿದ್ವು"

ಸರಸ್ವತಿ ಅನ್ನ ಮಜ್ಜಿಗೆಯನ್ನೇ ಊಟಮಾಡಿದಳು.

"ಮನಿಕ್ಕೊ ಓಗಮ್ಮ - ರೈಲ್ನಲ್ಲಿ ಬಂದು ನಿಂಗೂ ಸಾಕಾಗೈತೆ"

ಎಂದು ಮುತ್ತಮ್ಮ ಅವಳನ್ನು ಮಹಡಿಯ ಮೇಲಕ್ಕೆ ಕಳಿಸಿದಳು.

ಬೆಳಿಗ್ಗೆ ಮುತ್ತಮ್ಮ ಏಳುವ ವೇಳೆಗೆ ಸರಸ್ವತಿಯೂ ಕೆಳಗಿಳಿದು ಬಂದಳು. ಮುತ್ತಮ್ಮ ಕಾಫಿ ಮಾಡುತ್ತ ಕುಳಿತಿದ್ದಳು ; ಭಾಗ್ಯಮ್ಮ ಬಚ್ಚಲ ಮನೆ ಒಲೆ ಉರಿಮಾಡುತ್ತಿದ್ದಳು.

"ಚೆಂದಾಕಿ ನಿದ್ದೆ ಬಂತೇನಮ್ಮ."

"ಇಲ್ಲಮ್ಮ - ಕಣ್ಣೇ ಮುಚ್ಚಲಿಲ್ಲ."

"ಕಾಪಿ ಕುಡಿದು ಸಾನಾ ಮಾಡ್ಕೊಂಡು ಓಗ್ತೀಯೇನು ?"

"ಹೂ ! ರಾಮರಾಜಪ್ಪ ಬಂದರೆ ಇರು ಎಂದು ಹೇಳು. ನಾನು ಹನ್ನೊಂದು ಗಂಟೆಗೇ ಬಂದು ಬಿಡುತ್ತೇನೆ."

"ನಂಜಪ್ಪಂಗೆ ಕಾಗಜ ಕೊಡ್ತೀನೀಂದೆ."

"ಬರೆದು ಕೊಡುತ್ತೇನೆ."

ಮುತ್ತಮ್ಮ ಕಾಫಿ ತಂದುಕೊಟ್ಟಳು.

ಸರಸ್ವತಿ ಕಾಫಿ ಕುಡಿದು ಸ್ನಾನಮಾಡಿ ಬಂದು ಅಲಂಕಾರ ಮಾಡಿ

ಕೊಂಡು ಪುಟ್ಟನ ಪುಸ್ತಕದಿಂದ ಒಂದು ಹಾಳೆ ಹರಿದುಕೊಂಡು ಕಾಗದ ಬರೆದು ಮುತ್ತಮ್ಮನ ಕೈಯಲ್ಲಿಕೊಟ್ಟಳು.

"ನೀ ಬರೋ ಒತ್ಗೆ ಜವಾಬು ತರಿಸಿರ್‍ತೀನಿ.

"ಹಾಗೇ ಮಾಡು"

ಎಂದು ಅವಳ ಕೈಗೆ ಐವತ್ತು ರೂಪಾಯಿ ಹಾಕಿದಳು.

"ದುಡ್ಡು ಯಾಕಮ್ಮ ಈಗ ?"

"ಖರ್ಚಿಗಿರಲಿ ಇಟ್ಟುಕೊಂಡಿರು, ಪಲಾವ್ ತರಿಸ್ತೀನೀಂದೆ."

"ಇನ್ನೇನಾದರೂ ಬೇಕಾಗಿತ್ತಾ."

"ಬರೀ ಪಲಾವ್ ತಿನ್ನುವುದಕ್ಕಾಗುತ್ತದೆಯೇ ? ನಾನು ಹೋಗಿ ಬರಲೇನು ?"

"ಓಗಿ ಬೇಗ ಬಾಮ್ಮ ರಾಮರಾರಾಜಪ್ಪಂಗೂ ಏಳಿಕಳಿಸ್ತೀನಿ. ಆಯಪ್ಪನ್ನ ಕಾಯಿಸ್ಬೇಡ."

"ಎಲ್ಲೂ ಹೋಗುವುದಿಲ್ಲ. ರಾಘವಾಚಾರ‍್ರನ್ನ ನೋಡ್ಕೊಂಡು ಬಂದು ಬಿಡುತ್ತೇನೆ." ಎಂದು ಹೇಳಿ ಹೊರಟಳು.

ಸರಸ್ವತಿ ಬಂದಾಗ ರಾಘವಾಚಾರ್ಯರು ಇಬ್ಬರು ಹೆಣ್ಣು ಮಕ್ಕಳಿಗೆ ಪಾಠ ಹೇಳಿಕೊಡುತ್ತಿದ್ದರು. ಸರಸ್ವತಿಯ ಮುಖ ಕಂಡೊಡನೆಯೇ ಆಚಾರ್ಯರ ಪಟ್ಟೆ ಪಟ್ಟೆ ನಾಮುಗಳಿಂದಲೂ ಸಂತೋಷವುಕ್ಕಿತು

"ಯಾವಾಗ ಬಂದಿರಮ್ಮ - ಕುಳಿತುಕೊಳ್ಳಿ - ನೀವು ಹೋಗಿರಮ್ಮ. ನಾಳೆ ಬಂದು ಬಿಡಿ"

ಎಂದು ಶಿಷ್ಯೆಯರನ್ನು ಸಾಗುಹಾಕಿ

"ಯಾವಾಗ ಬಂದಿರಿ - ಏನು ಸಮಾಚಾರ - ಬಡವರನ್ನು ಇಷ್ಟು ಉದಾಶೀನಮಾಡುವುದೇ - ಮಂಜುಳಾ, - ಸುಧಾ ಚೆನ್ನಾಗಿದ್ದಾರೆಯೇ ?"

"ಇಷ್ಟು ಪ್ರಶ್ನೆಗಳಿಗೆ ಉತ್ತರ ಒಟ್ಟಿಗೆ ಹೇಗೆ ಹೇಳಲಿ ಮೇಷ್ಟ್ರೇ"

ಎಂದಂದು ತನ್ನ ವಿಷಯ, ಮಕ್ಕಳ ವಿಷಯ ಸೂಕ್ಷ್ಮವಾಗಿ ನಿರೂಪಿಸಿದಳು.

"ಬೆಂಗಳೂರಿನಲ್ಲಿ ಇದ್ದವರಿಗೆ ಎಲ್ಲಿ ಹೊದರೂ ಸರಿಹೋಗಲ್ಲಮ್ಮಾ."

"ಹೌದು ಆಚಾರ‍್ರೇ . . . ನನಗೆ ದಾವಣಗೆರೆ ಸಾಕಾಗಿ ಹೋಗಿದೆ."

" ಇಳಿಕೊಂಡಿರುವುದು ?"

" ಮುತ್ತಮ್ಮನ ಮನೆಯಲ್ಲಿ."

" ಏಕೆ ? ಇಲ್ಲೀ ಬರಬಹುದಾಗಿತ್ತಲ್ಲ."

" ಅವಳೂ ಬಹಳ ಬರೆಯುತ್ತಿದ್ದಳು. ಅಲ್ಲೀ ಹೋದೆ. ಶ್ರೀರಂಗ ರಾಯರು ಚೆನ್ನಾಗಿದ್ದಾರೆಯೇ ? - ಈಗ ಎಲ್ಲಿದ್ದಾರೆ ?"

" ಅವರೇನಮ್ಮ ಈಗ ಮೈಸೂರು ಡೆಪ್ಟಿ ಕಮಿಷನರು. ಸಮಾಚಾರ ಕೇಳಿದರೇನು ?"

" ಏನು ? ನನಗೊಂದೂ ಗೊತ್ತಿಲ್ಲ - ಕಾಡಿನಿಂದ ಬಂದ ಹಾಗಾಗಿದೆ."

" ಸುಬ್ಬಕ್ಕ ಕೊನೆಗೂ ರಾಯರಿಗೆ ಮದುವೆ ಮಾಡಿಸಿಯೇ ಬಿಟ್ಟಳು."

" ಹೆಣ್ಣು ಯಾರೋ ?"

" ಯಾವದೋ ಬಾದರಾಯಣ ಸಂಬಂಧವಂತೆ ! ಹದಿಮೂರು ಹದಿ ನಾಲ್ಕು ವರ್ಷದ ಹುಡುಗಿಯನ್ನು ತಂದು ಗಂಟು ಹಾಕಿದ್ದಾಳಮ್ಮಾ."

" ರಾಯರು ಉದ್ಧಾರವಾದರು ಬಿಡಿ. ನನ್ನ ಒಂದು ಸಲವಾದರೂ ಜ್ಞಾಪಿಸಿಕೊಳ್ಳುತ್ತಾರೆಯೋ ?"

" ನಿಮ್ಮ ಮೇಲಿನ ಗೀಳು ಹಾಗೇ ಇದೆಯಮ್ಮ."

" ಸದ್ಯ ಇಲ್ಲಿಗೆ ಅವರು ಬರುವ ಸಂಭವವಿದೆಯೋ ?"

" ಬರ್‍ತೀರೇನು ಮೈಸೂರಿಗೆ ಹೋಗಿಬಿಟ್ಟು ಬರೋಣ."

" ಈಗ ಬೇಡಿ. ಇನ್ನೊಂದು ಸಲ ನಾನು ಬರುತ್ತೇನೆ - ಆಗ ಹೋಗೋಣ. ಕುಮಾರನ ' ನೃತ್ಯಶಾಲೆ ' ಹೇಗೆ ನಡೆದಿದೆ."

" ನಿಮಗೊಂದೂ ಗೊತ್ತೇ ಇಲ್ಲ."

" ಎಲ್ಲಿ ಬಂತು ಆಚಾರ್‍ರೇ. ಸೆರೆಮನೆಯಿಂದ ನಾನು ಈಗ ತಾನೆ ಬರುತ್ತಿದ್ದೇನೆ."

" ಶಾಲೆ ಕಥೆ ಎಂದೋ ಮುಗಿದು ಹೋಯಿತು. ಕುಂತಳಾ ಬಸುರಿಯಾದಳು - ನಂಜಪ್ಪ ಶಾಲೆ ಮುಚ್ಚಿಸಿಬಿಟ್ಟ."

" ಕುಮಾರನ ಗತಿ !"

" ನಂಜಪ್ಪ ಅಷ್ಟೋ ಇಷ್ಟೋ ಕೊಡುತ್ತಿದ್ದ. ಎರಡು ತಿಂಗಳ ಹಿಂದೆ ಮೈಸೂರು, ಬೃಂದಾವನ, ಬೆಂಗಳೂರಿನಲ್ಲಿ ಔಟ್-ಡೋರ್ ಷೂಟಿಂಗ್

(Out-door Shooting) ಮಾಡುವುದಕ್ಕೆ ಬೊಂಬಾಯಿಂದ ಒಂದು ಸಿನೀಮಾ ಕಂಪೆನಿ ಬಂದಿತ್ತು. ಅದರಲ್ಲಿದ್ದ ಯಾವದೋ ಸ್ಟಾರಿಗೆ ನೃತ್ಯ ಹೇಳಿಕೊಡುವುದಕ್ಕೆ ಕುಮಾರನ್ನ ಬೊಂಬಾಯಿಗೆ ಕರೆದುಕೊಂಡು ಹೋಗಿದ್ದಾರೆ."

"ಕುಂತಳ ಈಗ ಆ ಮನೆಯಲ್ಲಿಲ್ಲವೆ ?"

"ಅದೇ ಮನೆಯಲ್ಲಿಯೇ ಇದ್ದಾಳೆ."

"ನಂಜಪ್ಪನ ಪತ್ತಿರ ಕಾಸು ತುಂಬಾ ಕುಣಿಸುತ್ತಿರಬಹುದು."

"ಅವನಿಗೇನು ಕಮ್ಮಿ - ಬಟ್ಟೆ ಬ್ಲಾಕ್‌ಮಾರ್ಕೆಟ್ ಮಾಡಿ ಬೇಕಾದಷ್ಟು ಸಂಪಾದಿಸಿದ್ದಾನೆ. ನಿನುಗೂ ನಂಜಪ್ಪನ್ನ ಕಂಡರೆ ವಿಶ್ವಾಸ . . ."

"ಅದೆಲ್ಲಿ ಹೋಗತ್ತೆ ಮೇಷ್ಟ್ರೇ. ನಂಜಪ್ಪನವರನ್ನು ನೋಡಬೇಕಲ್ಲ."

"ಕರೆದರೆ ಅವನು ಬರುತ್ತಾನೋ ಇಲ್ಲವೋ ಹೇಗೆ ಹೇಳಲಿ."

"ಪ್ರಯತ್ನಮಾಡಿ ನೋಡಿ."

"ಹೋಗಲಿ ಬಿಡಿ – ಕಳೆದು ಹೋದ್ದು ಹೋಯಿತು."

"ಬೆಂಗಳೂರಿಗೆ ಬಂದು ಬಿಡಬೇಕೆಂದಿದ್ದೇನೆ ಮೇಷ್ಟ್ರೇ."

"ಬನ್ನಿ – ಬೇಡವೆಂದವರು ಯಾರು ?"

"ಮಾರ್ಗ ?"

"ನಂಜಪ್ಪ ಒಪ್ಪುವುದು ನನಗೇನೋ ಅನುಮಾನ."

"ಹೋಗಲಿ ಬಿಡಿ. ಅವನಿಲ್ಲದಿದ್ದರೆ ಅವರಪ್ಪ – ತಲೆ ಮಾಸಿದನನು ಯಾರೂ ಸಿಕ್ಕುವುದಿಲ್ಲವೇ ?"

"ನಿಮಗೆ ಜೀವಣ್ಣರಾಯ ಗುರುತಿಲ್ಲವೇ ?"

"ಯಾವ ಜೀವಣ್ಣರಾಯ ?"

"ಅವನನ್ನು ನೋಡಿದ್ದೀರಮ್ಮ – ಮರೆತು ಬಿಟ್ಟದ್ದೀರಿ. ಇಲ್ಲಿಗೆ ಬರುತ್ತಾ ಇರುತ್ತಾನೆ. ಗಾಂಧೀ ಬಜಾರಿನಲ್ಲಿ ದೊಡ್ಡ ಕಾಫಿಪುಡಿ ಅಂಗಡಿ ಇಟ್ಟುಕೊಂಡಿದ್ದಾನೆ ನೋಡಿ."

"ಅವರೇ - ನೋಡಿದ್ದೇನೆ."

"ಗುರುತಿದೆಯೇ ?"

"ಇಲ್ಲ - ಏಕೆ ?"

"ನಿಮ್ಮ ವಿಷಯ ಐದಾರು ಸಲ ಕೇಳಿದ."

"ಕುಳ ಹೇಗೆ ?"

"ತುಂಬ ಅನುಕೂಲವಾಗಿದ್ದಾನಮ್ಮಾ."

"ಏನು ಹೇಳಿದರು ?"

"ಅವನ ಹೆಂಡತಿ ನಿತ್ಯರೋಗಿ. ಖಾಯಮ್ಮಾಗಿರುವವರು ಯಾರಾದರೂ ಇದ್ದಾರೆಯೇ ಒಳ್ಳೆಯವರು ಎಂದು ಕೇಳಿದ. ಅವನೇ ನಿಮ್ಮನ್ನು ಜ್ಞಾಪಿಸಿಕೊಂಡು ಕೇಳಿದ."

"ನೋಡಿ - ಅನುಕೂಲವಾಗುವ ಹಾಗಿದ್ದರೆ."

"ಯುದ್ಧ ಬಂತಲ್ಲವಮ್ಮಾ !"

"ಯುದ್ಧ ಬಂದರೆ ರೂಪಾಯಿಗೆ ಒಂದು ಸೇರು ಅಕ್ಕಿ ಆಯ್ತುಷ್ಟೆ !"

"ನಿಮಗೂ ನಮಗೂ ಕಷ್ಟ. ಬಡವರು ಮತ್ತಷ್ಟು ಬಡವರಾದರು, ಶ್ರೀಮಂತರು ಮತ್ತಷ್ಟು ಶ್ರೀಮಂತರಾದರು - ಲಕ್ಷಾಧೀಶರಾದರು."

"ಜೀವಣ್ಣರಾಯರು ಲಕ್ಷಾಧೀಶರೇನು ?"

"ನಾಲ್ಕಾರು ಲಕ್ಷಾಧೀಶರನ್ನು ಕೊಂಡುಕೊಳ್ಳಬಲ್ಲನಮ್ಮ. ಅರವತ್ತು ಸಾವಿರ ರೂಪಾಯಿ ಕೊಟ್ಟು ಮನೆ ಕೊಂಡುಕೊಂಡಿದ್ದಾನೆ. ಹದಿನೆಂಟು ಸಾವಿರ ರೂಪಾಯಿ ಕೊಟ್ಟು ಕಾರು ಕೊಂಡುಕೊಂಡ. ಆಂಜನೇಯ ದೇವಸ್ಥಾನದ ಜೀರ್ಣೋದ್ಧಾರಕ್ಕೆ ಮೊನ್ನೆ ಹತ್ತುಸಾವಿರ ರೂಪಾಯಿ ಕೊಟ್ಟ. ಪ್ರತಿ ವರ್ಷ ರಾಘವೇಂದ್ರಸ್ವಾಮಿಗಳ ಆರಾಧನೆಗೆ ಸಾವಿರಾರು ರೂಪಾಯಿ ಖರ್ಚುಮಾಡುತ್ತಾನೆ. ವರ್ಷಕ್ಕೊಂದು ಸಲ ತಿರುಪತಿಯಾತ್ರೆಮಾಡಿ ಅಲ್ಲಿ ಉತ್ಸವ ತಪ್ಪದೆ ಮಾಡಿಸುತ್ತಾನೆ. ಅವನ ಮನೆಯಲ್ಲಿ ಲಕ್ಷ್ಮೀ ತಾಂಡವವಾಡುತ್ತಾಳಮ್ಮಾ."

"ದುಡ್ಡಿರಬಹುದು - ದುಡ್ಡಿಗೆ ತಕ್ಕ ಔದಾರ್ಯವಿದೆಯೇ ಹೇಳಿ."

"ಅದು ಹೇಳುವುದು ಬಹಳ ಕಷ್ಟ. ಮನುಷ್ಯ ಲೆಕ್ಕಾಚಾರಸ್ಥ. ಹಾಗೆಲ್ಲಾ ನಿಷ್ಕಾರಣವಾಗಿ ಖರ್ಚು ಮಾಡುವವನಲ್ಲ. ಆದರೆ ಖರ್ಚು ಮಾಡಬೇಕಾದ ಪ್ರಮೇಯವೊದಗಿದರೆ ಮುಖ ನೋಡದೆ ಖರ್ಚು ಮಾಡುತ್ತಾನೆ."

"ಇರಲಿ - ಪರಿಚಯ ಮಾಡಿಸಿಕೊಡಿ."

"ನಾಳೆ ಮಧ್ಯಾಹ್ನ ಇಲ್ಲೀಗೆ ಬರುತ್ತೀರೇನು ?"

"ಬಾ ಅಂದರೆ ಬರುತ್ತೇನೆ."

"ಬನ್ನಿ. ಊಟ ಮುಗಿಸಿಕೊಂಡು ಅಂಗಡಿಗೆ ಹೋಗುವಾಗ ಬಂದು ಹೋಗು ಎಂದು ಅವನಿಗೂ ತಿಳಿಸಿರುತ್ತೇನೆ. ನೀವು ಇಲ್ಲಿಗೆ ಬಂದರೆ ನನಗೂ ಎಷ್ಟೋ ಅನುಕೂಲ."

"ನಿಮಗೇನು ಅನುಕೂಲ."

"ಸಂಗೀತ ಪಾಠದಲ್ಲಿ ಜೀವನ ಸಾಗುವುದಿಲ್ಲಮ್ಮ. ಈಗ ಎರಡು ರೂಪಾಯಿ ಮೂರು ರೂಪಾಯಿಗೆ ಪಾಠ ಹೇಳುವ ವಿದ್ವಾಂಸರು ಹೆಚ್ಚಿಕೊಂಡಿದ್ದಾರೆ."

"ಖರ್ಚಿಗೇನಾದರೂ ಬೇಕಾಗಿತ್ತೇನು ?"

"ಬೇಕಾಗಿತ್ತು. ಈ ತಿಂಗಳು ರೇಷನ್ ಸಾಮಾನು ಕೂಡ ನಾನು ತಂದಿಲ್ಲ."

ಪರ್ಸ ತೆಗೆದು ಸರಸ್ವತಮ್ಮ ಆಚಾರ್ಯರ ಕೈಗೆ ಇಪ್ಪತ್ತು ರೂಪಾಯಿ ಹಾಕಿ

"ಹೆಚ್ಚು ದುಡ್ಡು ನಾನು ತರಲಿಲ್ಲ. ನಾಳೆ ಕೊಡುತ್ತೇನೆ."

"ಹಾಗೇ ಮಾಡಿ."

"ನಾಳೆ ಅವರು ಇರಬೇಕೂಂದರೆ . . . ?"

"ಇಲ್ಲೇ ಇರಲಿ – ನಾನು ಬಾಗಿಲಬೀಗ ಹಾಕಿಕೊಂಡು ಹೋಗುತ್ತೇನೆ. ಎಷ್ಟು ಹೊತ್ತಿಗೆ ಬರುತ್ತೀರಿ ?

"ಎರಡು ಗಂಟೆಗೆ ಬರಲೋ ?"

"ಬನ್ನಿ – ನಾನೂ ಈಗಲೇ ಹೊರಡುತ್ತೇನೆ. ಜೀವಣ್ಣರಾಯನಿಗೆ ತಿಳಿಸಿ, ಮನೆಗೆ ಹೋಗಿ ಊಟಮಾಡಿಕೊಂಡು ಬಂದು ಬಿಡುತ್ತೇನೆ. ನೀವು ಬರುವ ವೇಳೆಗೆ ಅವನೂ ಬರುತ್ತಾನೆ – ನೀವು ಊಟಕ್ಕೇನು ಮಾಡುವಿರಿ ?"

"ಅಲ್ಲಿಗೆ ಹೋಗುತ್ತೇನೆ."

ಎಂದು ಹೇಳಿ ಆಚಾರ್ಯರ ಸಂಗೀತ ಶಾಲೆ ಬಿಟ್ಟು ಹೊರಟು ಗಾಡಿ ಮಾಡಿಕೊಂಡು ಸರಸ್ವತಮ್ಮ ಮುತ್ತಮ್ಮನ ಮನೆ ಸೇರಿದಳು.

ಬಾಗಿಲಿನಲ್ಲಿಯೇ ಸರಸ್ವತಿಯನ್ನೆದುರುಗೊಂಡ ಮುತ್ತಮ್ಮ ಪಿಸು ಮಾತಿನಲ್ಲಿ

"ರಾಮರಾಜಪ್ಪ ಬಂದಿದ್ದಾನಮ್ಮ."

"ಎಲ್ಲಿದ್ದಾರೆ."

"ಮಹಡಿಯ ಮೇಲೆ ಕೂರಿಸಿದ್ದೇನೆ."

"ಭಾಗ್ಯಮ್ಮ ನಂಜಪ್ಪನಿಗೆ ಕಾಗದ ಕೊಟ್ಟಳೇ !"

"ಕೊಟ್ಟಳು. ನಾಳೆ ಬೆಳಿಗ್ಗೆ ಬರ್ತಾನಂತೆ ಆಯಪ್ಪ."

"ಅದು ತರಿಸಿದೆಯಾ ಮುತ್ತಮ್ಮ."

"ತರಿಸಿದ್ನಿ."

"ಮೇಲಕ್ಕೆ ಕಳಿಸಿಕೊಡು. ಹಾಗೇ ತಿನ್ನುವುದಕ್ಕೂ ಏನಾದರೂ ಕಳಿಸಿಕೊಡು."

"ಪಲಾವ್ ಬಂದೈತೆ."

"ಅದನ್ನೇ ಕಳಿಸಿಕೊಡು"

ಎಂದು ಹೇಳಿ ಮಹಡಿ ಹತ್ತಿ ಹೋದಳು.

ಸರಸ್ವತಿಯ ಹಾಸಿಗೆಯನ್ನೇ ಹಾಸಿಕೊಂಡು ರಾಮರಾಜಪ್ಪ ಮಲಗಿದ್ದ. ಚೆನ್ನಾಗಿ ನಿದ್ರೆಯೂ ಬಂದಿತ್ತು. ಅವನ ತಲೆಯ ಬಳಿ ಒಂದು ಚೆಂಬು ನೀರು, ಒಂದು ಲೋಟಾ ಇತ್ತು. ಸರಸ್ವತಿ ಹಾಸಿಗೆಯ ಮೇಲೆ ಕುಳಿತು ಅವನನ್ನು ಮೃದುವಾಗಿ ಎಬ್ಬಿಸಿದಳು. ಕಣ್ಣು ಬಿಟ್ಟು ನೋಡಿ ರಾಮರಾಜಪ್ಪ ಮುಗುಳ್ನಗೆ ನಕ್ಕ - ಸರಸ್ವತಿ ಉತ್ತರಕೊಡುವಂತೆ ಅವನನಪ್ಪಿದಳು.

"ಎಷ್ಟು ಹೊತ್ತಾಯಿತು ನೀವು ಬಂದು."

"ಒಂದು ಗಂಟೆ ಮೇಲೆ ಆಗಿರಬೇಕು. ಬಿಸಿಲಿನಲ್ಲಿ ಬಂದೆ, ತಲೆ ನೋಯುತ್ತಿತ್ತು. ಹಾಗೇ ಮಲಗಿಬಿಟ್ಟೆ."

"ಈಗ ತಲೆನೋವು ಹೇಗಿದೆ."

"ನಿನ್ನ ನೋಡಿದ ಮೇಲೆ ತಲೆಯನೋವು ಇರುತ್ತದೆಯೇ ? ಚೆನ್ನಾಗಿದ್ದೀಯಾ ?"

"ನೋಡಿ ಹೀಗಿದ್ದೀನಿ."

"ಸ್ವಲ್ಪ ಮೈತುಂಬಿಕೊಂಡಿರುವ ಹಾಗೆ ಕಾಣುತ್ತದೆ. ಇನ್ನೇನಾದರೂ ವಿಶೇಷವೋ . . . "

" ಹೋಗಿಯಂದ್ರೆ – ನೀವೊಬ್ಬರು ! ಬಡವಾಗಿದ್ದೀನಿ ಎಂತಾ ಎಲ್ಲಾರೂ ಹೇಳ್ತಾ ಇದ್ದಾರೆ, ತುಂಬಿಕೊಂಡಿದ್ದೀನಿ ಎಂತಾ ನೀವು ಹೇಳುತ್ತಿರುವಿರಿ."

ಭಾಗ್ಯಮ್ಮ ತಿಂಡಿ ತಟ್ಟೆ ತಂದಳು. ಅವಳ ಹಿಂದೆ ಮುತ್ತಮ್ಮ ಶೀಷೆ, ಗ್ಲಾಸುಗಳು ತಂದಿಟ್ಟಳು. ಇಬ್ಬರೂ ಹೊರಟು ನಿಲ್ಲಲು

" ಇಲ್ಲೇ ಬನ್ನಿ – ಒಟ್ಟಿಗೆ ತೆಗೆದುಕೊಳ್ಳೋಣ."

" ಬೇಡಪ್ಪ. ಅಪರೂಪಕ್ಕೆ ಬಂದವ್ರೆ. ನೀವು ನೀವು ಮಾತಾಡಿ ಕೊಳ್ಳಿ"

ಎಂದು ಭಾಗ್ಯಮ್ಮನೊಂದಿಗೆ ಮುತ್ತಮ್ಮ ಕೆಳಗಿಳಿದು ಹೋದಳು.

ಶೀಷೆ ಬಿರಟೆ ತೆಗೆದೇ ಇತ್ತು. ಸರಸ್ವತಿಯೇ ಎರಡು ಗ್ಲಾಸುಗಳಿಗೂ ಬಗ್ಗಿಸಿ, ಸೋಡಾ ಸೇರಿಸಿ ಒಂದು ಗ್ಲಾಸನ್ನು ರಾಮರಾಜಪ್ಪನ ಕೈಗಿತ್ತಳು. ಅವನು ತನ್ನ ಗ್ಲಾಸಿನಲ್ಲಿದ್ದುದನ್ನು ಸರಸ್ವತಿಗೆ ಕುಡಿಸಿದ ! ಅವಳು ತನ್ನ ಗ್ಲಾಸನ್ನು ರಾಮರಾಜಪ್ಪನ ಬಾಯಿಗೆ ಹಿಡಿದಳು.

" ನೀನೇ ತರಿಸಿದ ಹಾಗೆ ಕಾಣತ್ತೆ " ಎಂದ.

" ಹೌದು. ನಿಮಗೆ ಔತಣ ಮಾಡಿಸೋಣ ಎಂದು ತರಿಸಿದೆ-"

" ನೀನು ಅತಿಥಿ - ನಾನು ನಿನಗೆ ಔತಣ ಮಾಡಿಸಬೇಕು."

" ನಾಳೆಯಾಗಲಿ."

ಸರಸ್ವತಿ ಪುನಃ ಗ್ಲಾಸುಗಳನ್ನು ತುಂಬಿದಳು. ಪಾನೀಯದ ಜತೆಗೆ ಉಪಾಹಾರವೂ ಸಾಗಿತು. ಗ್ಲಾಸು ಖಾಲಿಯಾದಮೇಲೆ ಮತ್ತೆ ಅವುಗಳನ್ನು ಭರ್ತಿಮಾಡಿದಳು. ರಾಮರಾಜಪ್ಪ ಗಾಬರಿಯಾಗಿ

" ಇದೇನು ಸರಸಾ."

" ನಾಲ್ಕು ತಿಂಗಳಿಂದ ಒಂದು ತೊಟ್ಟು ಮುಟ್ಟಿಲ್ಲಾಂದ್ರೆ "

ಎಂದು ತೊದಲುತ್ತ ನುಡಿದಳು.

ಮನೆಯ ಚಾವಣಿ ಚಕ್ರದಂತೆ ಸುತ್ತುವುದಕ್ಕಾರಂಭಿಸಿತು - ಸರಸ್ವತಿಗೆ. ರಾಮರಾಜಪ್ಪ ಅದನ್ನು ಸೂಕ್ಷ್ಮವಾಗಿ ಗಮನಿಸಿದ.

ಸರಸ್ವತಿ ರಾಮರಾಜಪ್ಪನ ಷರಟಿಗೆ ಕೈಹಚ್ಚಿ ಅದನ್ನು ತೆಗೆಸಿದಳು. ರಾಮರಾಜಪ್ಪ ಸುಮ್ಮನೆ ಕುಳಿತಿದ್ದ. ಅವನ ಕೈ ತೆಗೆದುಕೊಂಡು ಎದೆಯ ಮೇಲೆ ಹಾಕಿಕೊಂಡಳು.

—ಸುಮಾರು ಐದು ಗಂಟೆಯ ವೇಳೆಗೆ ಇಬ್ಬರಿಗೂ ಮತ್ತು ಇಳಿದಿತ್ತು. ಸ್ವಲ್ಪ ನಿದ್ರೆಯೂ ಆಗಿತ್ತು. ಸರಸ್ವತಿ ರಾಮರಾಜಪ್ಪನ ತಲೆ ಕೆದರುತ್ತಾ

"ಇನ್ನು ನಿಮ್ಮನ್ನು ಬಿಡಲ್ಲಾಂದ್ರೆ."

"ಹಾಗಂದರೇನು ಸರಸಾ."

"ಬೆಂಗಳೂರಿಗೇ ಬಂದು ಬಿಡುತ್ತೇನೆ."

"ಕಂಪೆನಿ ಗತಿ."

"ಅದನ್ನು ಕಟ್ಟಿಕೊಂಡು ನನಗೇನು. ಆ ಸೆರೆ ನಾನು ಅನುಭವಿಸಲಾರೆ."

"ಇಲ್ಲಿ ಬಂದೇನು ಮಾಡುತ್ತೀ ?"

"ನನಗೇನು ಯೋಚನೆ! ನೀವಿಲ್ಲವೇ ? !!"

"ಸರಸಾ, ಮತ್ತಿನಲ್ಲಿದ್ದೀಯೋ ಸರಿಯಾಗಿದ್ದೀಯೋ ?"

"ಏಕೆ – ಸರಿಯಾಗಿದ್ದೇನೆ."

"ಮುತ್ತಮ್ಮ ನಿನಗೇನೂ ಹೇಳಿಲ್ಲವೇ ?"

"ಯಾವ ವಿಷಯ."

"ನನ್ನ ವಿಷಯ."

"ಹೇಳಿಲ್ಲ."

"ನಾನು ಹೇಳುವುದನ್ನು ಗಮನವಿಟ್ಟು ಕೇಳು."

"ಅಸಂತೋಷವುಂಟುಮಾಡುವ ವಿಷಯವಾದರೆ ಹೇಳಲೇಬೇಡಿ."

"ನೀನು ಕೇಳಲೇ ಬೇಕು – ನನ್ನ ಮೇಲೆ ಯಾವ ಆಸೆಯನ್ನೂ ಇಟ್ಟುಕೊಳ್ಳಬೇಡ."

"ಏಕೆ – ನಾನು ಮುದುಕಿಯಾದೆನೇನು ?"

"ಅದಕ್ಕಲ್ಲ – ನಾನು ಬೇರೆ ಸಂಸಾರ ಮಾಡಿಕೊಂಡಿದ್ದೇನೆ."

"ಯಾರನ್ನಾದರೂ ಇಟ್ಟುಕೊಂಡಿದ್ದೀರಾ ?"

"ಹೂ !"

"ಇದ್ದರೆ ಇರಲಿ – ನಾನು ಬೇಡವೆಂದೆನೆ ?"

"ಅವಳು ನನ್ನನ್ನೇ ನಂಬಿದ್ದಾಳೆ."

"ನಾನೂ ನಿಮ್ಮನ್ನೇ ನಂಬಿದ್ದೇನೆ – ಅವಳಿಗಿಂತ ಮುಂಚೆ ನಿಮಗೆ ನನ್ನ ಸ್ನೇಹವಾಯಿತಲ್ಲವೇ ?"

"ಅವಳಿಗೂ ನಿನಗೂ ತುಂಬ ವ್ಯತ್ಯಾಸವಿದೆ."

"ಆ ರಂಭೆಯಾರು ?"

"ಹೀಗೇ ಒಂದು ನಿರ್ಭಾಗ್ಯ ಹೆಣ್ಣು."

"ಮುತ್ತಮ್ಮನ ಮನೇಗೆ ಬರುತ್ತಿದ್ದವಳು ಯಾರೋ ಇರಬೇಕು."

"ಇಲ್ಲಿಗೆ ಅವಳು ಬರುತ್ತಿರಲಿಲ್ಲ."

"ನಿಮಗೆ ಇನ್ನು ಎಂಥಾವರು ಸಿಕ್ಕುತ್ತಾರೆ ಹೇಳಿ."

"ನಿನ್ನ ಜ್ಞಾನ ನೆಟ್ಟಗಿಲ್ಲ."

ಎಂದವನೇ ಎದ್ದು ವಸ್ತ್ರಗಳನ್ನು ಧರಿಸಿದ. ಸರಸ್ವತಿ ಕುಳಿತ ಸ್ಥಳ ಬಿಟ್ಟು ಅಳ್ಳಾಡಲಿಲ್ಲ. ರಾಮರಾಜಪ್ಪ ಹೊರಡಲನುವಾಗಲು

"ನಾಳೆ ನಿಮ್ಮ ಪಾರ್ಟಿ"

ರಾಮರಾಜಪ್ಪ ಕಿಸೆಯಿಂದ ಕೆಲವು ನೋಟುಗಳನ್ನು ತೆಗೆದು ಹಾಸಿಗೆಯ ಮೇಲೆ ಒಗೆದು

"ಪಾರ್ಟಿ ನೀನೇ ಮಾಡಿಕೋ"

ಎಂದು ಹೇಳಿ ಹೊರಟುಬಿಟ್ಟ.

ತನ್ನನ್ನು ರಾಮರಾಜಪ್ಪ ಮಾತನಾಡಿಸದೆ ಹೊರಟು ಹೋದುದನ್ನು ಕಂಡು ಗಾಬರಿಯಾಗಿ ಮುತ್ತಮ್ಮ ಮಹಡಿ ಏರಿ ಬಂದು

"ಏನಾಯ್ತ್ರಮ್ಮ."

"ಏನೂ ಇಲ್ಲ – ಅವರಿಗೆ ಯಾವಳೋ ರಂಭೆ ಸಿಕ್ಕಿದ್ದಾಳಂತಲ್ಲಾ – ಅವಳ ವಿಷಯ ಕೇಳಿದ್ದಕ್ಕೆ ರೇಗಿಕ್ಕೊಂಡು ಹೋದರು. ಅವಳು ಯಾರು ಮುತ್ತಮ್ಮ."

ಮುತ್ತಮ್ಮ ತನಗೆ ಗೊತ್ತಿದ್ದಷ್ಟು ಪಾಪನ ಸಮಾಚಾರ ಹೇಳಿ

"ರಾಮರಾಜಪ್ಪ ಪಾಪನಿಗಿಷ್ಟು ಪ್ರಾಣ ಬಿಡ್ತಾನೇಂತ ನಂಗೂ ಗೊತ್ತಿರ್ಲಿಲ್ಲಮ್ಮ"

ಎಂದಳು. ಸರಸ್ವತಿ ವ್ಯಂಗ್ಯವಾಗಿ ನಕ್ಕು

"ಬಾಟಲ್ ಆಗಿ ಹೋಯ್ತೋ ಮುತ್ತಮ್ಮ."

"ಇನ್ನೊಂದು ಬಾಟಲಿ ಮಡಗಿದ್ದೀನಮ್ಮ."

"ತೆಗೆದುಕೊಂಡು ಬಾ."

"ಸಾಕು ಬುಡಮ್ಮ – ಒಂದೇ ದಿನ್ಸ ಇಷ್ಟು ಉಯ್ಕೋಬಾರದು."

"ನೀನು ತೆಗೆದುಕೊಂಡು ಬರುತ್ತೀಯೋ ಇಲ್ಲವೋ"

ಎಂದು ಮುತ್ತಮ್ಮನನ್ನು ದುರುಗುಟ್ಟಿಕೊಂಡು ನೋಡಿದಳು. ಮುತ್ತಮ್ಮ ಮಾರುತ್ತರ ಕೊಡದೆ ಅವಳು ಕೇಳಿದುದನ್ನು ತಂದು ಒದಗಿಸಿದಳು.

— ಮೂರನೆಯ ಬೆಳಿಗ್ಗೆ ಎಂಟು ಗಂಟೆಯಾದರೂ ಸರಸ್ವತಿ ಗಾಢ ನಿದ್ರೆಯಲ್ಲಿ ಲೀನವಾಗಿದ್ದಳು. ಮುತ್ತಮ್ಮ ಬಂದು ಅವಳನ್ನೆಬ್ಬಿಸಿ

"ನಂಜಪ್ಪ ಬಂದವ್ನನಮ್ಮಾ." ಎಂದಳು.

ಸರಸ್ವತಿ ಚಕಿತಳಾಗೆದ್ದು

"ಎಲ್ಲಿದ್ದಾರೆ?"

"ಕೆಳಗಡೆ ರೂಮ್‌ನಾಗ ಕೂಡಿಸಿ ಬಂದಿವ್ನಿ."

"ಅವರನ್ನು ಅಲ್ಲೇ ಕೂಡಿಸಿರು. ನಾನು ಮುಖ ತೊಳೆದುಕೊಂಡು ಬರುತ್ತೇನೆ. ಈ ಬಾಟಲಿಗಳನ್ನು ಮೊದಲು ತೆಗೆದು ಮುಚ್ಚಿಡು ಮುತ್ತಮ್ಮ"

ಎಂದು ಕೆಳಗಿಳಿದು ಹೋದಳು. ಮುತ್ತಮ್ಮ ಬಾಟಲಿಗಳನ್ನು ತೆಗೆದು ಸರಸ್ವತಿಯ ಹಾಸಿಗೆಯಲ್ಲೇ ಸುತ್ತಿ ಅದನ್ನು ಗೋಡೆಗೊರಗಿಸಿ, ಹಾಸಿಗೆಯ ಮುಂದೆ ಚಾಪೆ ಹಾಸಿದಳು. ನೆಲದ ಮೇಲೆ ಬಿದ್ದಿದ್ದ ತಿಂಡಿಚೂರುಗಳನ್ನು ಬಟ್ಟೆಯಲ್ಲಿ ಗುಡಿಸಿ ಹೊರಗೆ ಬಿಸುಡಿ ಕೆಳಗಿಳಿದು ಬಂದು ನಂಜಪ್ಪನನ್ನು ಮೇಲಕ್ಕೆ ಕಳಿಸಿಕೊಟ್ಟಳು.

ಸರಸ್ವತಿ ಮುಖ ತೊಳೆದುಕೊಂಡು ಬಂದು, ಪುಟ್ಟಿಯಿಂದ ಬಾಚಣಿಗೆ ತೆಗೆದುಕೊಂಡು ತಲೆಬಾಚಿಕೊಂಡು, ಮುಖಕ್ಕೆ ಪೌಡರ್ ಲೇಪಿಸಿಕೊಂಡು.

"ಬಾಟಲ್‌ಗಳನ್ನೇನು ಮಾಡಿದೆ ಮುತ್ತಮ್ಮ" ಎಂದು ಕೇಳಿದಳು.

"ನಿನ್ನಾಸಿಗೆ ಒಳ್ಗೆ ಸುತ್ತಿಟ್ಟಿದ್ದೀನಮ್ಮ. ಉಷಾರಾಗಿ ನೋಡಿಕೋ"

ಎಂದಳು. ಸರಸ್ವತಿ ಮಹಡಿಯನ್ನು ಹತ್ತಿ ಬಂದಳು. ನಂಜಪ್ಪ ಅವಳ ಹಾಸಿಗೆಯ ಮೇಲೆ ಕಳಿತಿದ್ದ.

"ದೊಡ್ಡ ಮನಸ್ಸು ಮಾಡಿ ಬಂದಿರಲ್ಲ."

"ಬಂದೇ ಬರಬೇಕೂಂತ ಬರೆದಿದ್ದೆಯಲ್ಲ – ಬಂದೆ."

" ನಾನು ಬರೆಯುತ್ತಿರುವುದು ಇದೇ ಮೊದಲಲ್ಲ."

" ನಾನು ಬರಬೇಕಾದ ಕಾರಣವಿರಲಿಲ್ಲ."

ಸರಸ್ವತಿ ನಂಜಪ್ಪನ ಪಾದದ ಬಳಿ ಕುಳಿತುಕೊಂಡು

" ಇನ್ನೂ ಕೋಪ ಹೋಗಿಲ್ಲವೇ ರಾಜೂ."

" ಯಾರ ಮೇಲೆ ಕೋಪ."

" ಇನ್ನು ಯಾರ ಮೇಲೆ – ಬಡಪಾಯಿ ನನ್ನ ಮೇಲೆ."

" ನೀನು ಬಡಪಾಯಿಯೇ – ದೊಡ್ಡ ನಾಟಕದ ಕಂಪೆನಿಯ ರಾಣಿ."

" ಗಾಯದ ಮೇಲೇಕೆ ಬರೆಕೊಡುವಿರಿ."

" ಗಾಯವಾಗಿರುವುದು ನಿನಗಲ್ಲ – ನನಗೆ."

" ಹೋಗಲಿ - ಆ ಹಾಳು ಮಾತು ಬಿಟ್ಟುಬಿಡಿ."

ಎಂದೆದ್ದು ಅವನ ಪಕ್ಕದಲ್ಲಿ ಹಾಸಿಗೆಯ ಮೇಲೆ ಕುಳಿತಳು. ಹಾಸಿಗೆ ಇಬ್ಬರ ಭಾರಕ್ಕೆ ನೆಲಕ್ಕೆ ಕುಸಿಯಿತು.

ಸರಸ್ವತಿ ಲಲ್ಲೆಗರೆಯುತ್ತ ನಂಜಪ್ಪನ ಕೋಟು ತೆಗೆಸಲೆತ್ನಿಸಿದಳು. ಅವನು ಅದನ್ನು ಭದ್ರವಾಗಿ ಹಿಡಿದುಕೊಂಡ. ಸರಸ್ವತಿ ಅವನನ್ನಪ್ಪಿಕೊಂಡು

" ನಿಮ್ಮನ್ನು ನಾನು ಬಿಟ್ಟಿರಲಾರೆ ರಾಜೂ."

" ನಿನ್ನ ಯಾವ ಲಲ್ಲೆ ಮಾತೂ ನನ್ನ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡುವುದಿಲ್ಲ."

" ಕುಂತಳಾ ಬಸುರಿಯಂತೆ !"

" ಅವಳ ವಿಷಯ ನಿನಗೇಕೆ ?"

" ಅವಳ ಮೈ ಕಳೆಯುವವರೆಗಾದರೂ . . ."

" ಛೆ ! ಏನು ಮಾತು ಆಡುತ್ತಿರುವೆ "

ಎಂದೆದ್ದ. ಅವನು ಹೊರಟು ಬಿಡುವನೇನೋ ಎಂದು ಹೆದರಿ ಸರಸ್ವತಿಯೂ ಮೇಲಕ್ಕೆದ್ದಳು. ಹಾಸಿಗೆ ಸುರುಳಿ ಬಿಚ್ಚಿಕೊಂಡು ಬ್ರ್ಯಾಂದಿ ಶೀಷೆಗಳೂ, ಸೋಡಾ ಶೀಷೆ ನೆಲದ ಮೇಲೆ ಉರುಳಿದವು.

ನಂಜಪ್ಪ ಅವುಗಳನ್ನು ದಿಟ್ಟಿಸಿ ನೋಡಿ

" ಏನು ಬಾಳೇ ನಿನ್ನದು !"

" ಇವು ನನ್ನದಲ್ಲ ರಾಜೂ. ಹೇಗೆ ಬಂತೋ ನಾನು ಕಾಣೆ."

"ನಿನ್ನ ಸುಳ್ಳಿಗೆ ಕೊನೆಯೇ ಇಲ್ಲವೇ?"

"ನಿಮ್ಮನ್ನು ನಾನು ಪ್ರೀತಿಸುವುದು ಸುಳ್ಳಲ್ಲ."

"ಆ ಶಬ್ದವನ್ನೇಕೆ ತಿಪ್ಪೆಯಲ್ಲಿ ಹಾಕುತ್ತೀ."

"ನಿಮಗೆ ನನ್ನ ಮೇಲೆ ಸ್ವಲ್ಪವೂ ಪ್ರೀತಿಯಿಲ್ಲವೇ ?"

"ಇಲ್ಲ – ಖಂಡಿತವಾಗಿ ಇಲ್ಲ."

"ಹಾಗಾದರೆ ಇಲ್ಲಿಗೇಕೆ ಬಂದಿರಿ ?"

"ಪುನಃ ನನಗೆ ಹೇಳಿಕಳಿಸಬೇಡವೆಂದು ತಿಳಿಸಿ ಹೋಗಲು ಬಂದೆ."

"ಅದನ್ನು ಭಾಗ್ಯಮ್ಮನ ಕೈಯಲ್ಲಿ ಹೇಳಿ ಕಳಿಸಬಹುದಾಗಿತ್ತು."

"ಶನಿ ಹಾಗೆ ಕಾಡಬೇಡವೆಂದು ನಿನಗೇ ಹೇಳಿಹೋಗಲು ಬಂದೆ."

"ಹೇಳಿದ್ದಾಯಿತಲ್ಲ !"

"ಹೋಗುತ್ತೇನೆ – ಹೋಗುವುದಕ್ಕೆ ಎದ್ದುನಿಂತಿದ್ದೇನೆ. ಕುಂತಳೆ ಬಸುರಿ ಎನ್ನುವುದು ನಿನಗೆ ಗೊತ್ತಾಗಿದೆಯಲ್ಲ. ನನ್ನನ್ನು ನೀನು ಕಾಡಿದರೆ ಅವಳಿಗೆ ವ್ಯಥೆಯಾಗುತ್ತದೆ. ಅವಳು ನಿನಗೇನೂ ಅನ್ಯಾಯ ಮಾಡಿಲ್ಲವಲ್ಲ. ಅವಳ ಮನಸ್ಸಿಗೆ ವ್ಯಥೆ ಕೊಡಬೇಡ. ಇಷ್ಟು ಉಪಕಾರ ಮಾಡು ಪುನಃ ನನ್ನನ್ನು ನೋಡುವ ಪ್ರಯತ್ನಮಾಡಬೇಡ"

ಎಂದು ಹೇಳಿದವನೇ ಅಲ್ಲಿ ನಿಲ್ಲದೆ ಹೊರಟು ಬಿಟ್ಟ. ಸರಸ್ವತಿ ಅವನನ್ನು ಮೆಟ್ಟಿಲುವರೆಗೆ ಹಿಂಬಾಲಿಸಿದಳು. ನಂಜಪ್ಪ ಕೈಗೆ ಸಿಕ್ಕಲಿಲ್ಲ.

ಸರಸ್ವತಿ ಹಿಂದಿರುಗಿ ಬಂದು ಕುಳಿತಳು. ಏನೋ ಒಂದು ಬಗೆಯ ಶೂನ್ಯತೆ ಹೃದಯದಲ್ಲಿ ತುಂಬಿಕೊಂಡಿತ್ತು. ರಾಮರಾಜಪ್ಪನ ಮಾತುಗಳು, ನಂಜಪ್ಪನ ಭರ್ತ್ಸನೆ ಅವಳ ಅಭಿಮಾನವನ್ನು ಕೆಣಕಿದ್ದವು. ನಂಜಪ್ಪ ಆಡಿ ಹೋಗಿದ್ದ ಮಾತುಗಳು ಮೇಲಿಂದ ಮೇಲೆ ಅವಳ ಕಿವಿಗಳ ಮೇಲೆ ಝೇಂಕರಿ ಸುತ್ತಿದ್ದವು. ನೆನಪು ಒಂದಕ್ಕೊಂದು ಕುಣಿಕೆ ಹಾಕಿಕೊಳ್ಳುತ್ತ ಬಂದು ಸುಧೆಯ ಮಾತುಗಳನ್ನು ತಂದು ಮುಂದೆ ನಿಲ್ಲಿಸಿದವು – ನೀನು ಹೆಣ್ಣಲ್ಲ, ಹೆಣ್ಣುರೂಪ ಹೊತ್ತಿರುವ ಪಿಶಾಚಿ – ಎಷ್ಟು ಪಾಪಮಾಡಿ ನಾನು ನಿನ್ನ ಹೊಟ್ಟೆಯಲ್ಲಿ ಹುಟ್ಟಿದೆ ಹೇಳು. ಸುಧಾ ವಾದ ವಿವಾದದ ಸಂದರ್ಭದಲ್ಲಿ ಈ ಮಾತುಗಳನ್ನಾಡಿದ್ದಳು. ಆಗ ಅದರ ತೀಕ್ಷ್ಣತೆ ಸರಸ್ವತಿಗೆ ಮನವರಿಕೆಯಾಗಿರಲಿಲ್ಲ. 'ನಾನು ಹೆಣ್ಣು ಪಿಶಾಚಿ – ಸುಧಾ ಸರಿಯಾಗಿಯೇ ಹೇಳಿದ್ದಾಳೆ'

ಎಂದುಕೊಂಡಳು. 'ನಂಜಪ್ಪ ಹೇಳಿದಂತೆ ನಾನು ಶನಿ' ಎಂದು ತನ್ನನ್ನೇ ತಾನು ಹಳಿದುಕೊಂಡಳು.

ನಂಜಪ್ಪ ರೇಗಿಕೊಂಡು ಹೋದುದನ್ನು ಮುತ್ತಮ್ಮ, ಭಾಗ್ಯಮ್ಮ ಇಬ್ಬರೂ ಕಂಡಿದ್ದರು. ಅವನನ್ನು ಆಗಲೇ ಮಾತನಾಡಿಸಿ ಕಾರಣ ತಿಳಿದುಕೊಳ್ಳುವ ಧೈರ್ಯ ಭಾಗ್ಯಮ್ಮನಿಗಾಗಲಿಲ್ಲ.

ಪುಟ್ಟ ಮಹಡಿಯ ಮೇಲಕ್ಕೆ ಬರಲೆದ್ದಳು. ಮುತ್ತಮ್ಮ ಅವಳ ಕೈ ಹಿಡಿದು ಜಗ್ಗಿ ಹೋಗಬೇಡವೆಂದಳು.

ಭಾಗ್ಯಮ್ಮ ಕತ್ತೆತ್ತಿ ಮಹಡಿಯ ಮೆಟ್ಟಲು ಕಡೆ ನೋಡಿ, ಸರಸ್ವತಿ ಕೆಳಗಿಳಿದು ಬಾರದಿದ್ದುದನ್ನು ಕಂಡು

"ನಂಜಪ್ಪನೂ ಯವ್ವಾರ ಆಡ್ಕೊಂಡು ಹೋದ ಹಾಗೆ ಕಾಣುತ್ತದೆ."

"ನಿನ್ನೆಯೂ ಅಂಗೇ ಆಯ್ತು – ಇವತ್ತೂ ಅಂಗೇ ಆಯ್ತು."

"ಇಲ್ಲಿಗ್ಯಾಕೆ ಬಂದಳು ಈಯಮ್ಮ."

"ಇದೇನು ಇಂಗೆ ಕೇಳ್ತಿ ಬಾಗ್ಯಮ್ಮ."

"ಬಂದೋರ ಕೈಲೆಲ್ಲಾ ಈಯಮ್ಮ ಯವ್ವಾರ ಆಡ್ತಿದ್ರೆ ನಮ್ಮ ಗತಿ ಏನಮ್ಮಾ?"

"ನಾಕು ದಿನವಿದ್ದು ಓಗ್ತಾಳೆ ಸುಮ್ಕಿರು."

"ಓದೆಯಾ ಪಿಶಾಚಿ ಅಂದ್ರೆ. ಇಲ್ಲ ಗವಾಕ್ಷೀ ಒಳಗಿಂದ ಬಂದೆ ಅಂದ್ಹಂಗೆ ಮತ್ತೆ ಬತ್ತಾಳಂತಮ್ಮ."

"ಬಂದ್ರೂ ನಮ್ಮನೇಗೇನೂ ಬರಾಕಿಲ್ಲ."

"ಬಂದ್ರೆ ನಮ್ಮ ಗತಿ ಮುಗ್ದೇ ಓಗ್ತೈತೆ ಮುತ್ತಮ್ಮ" ಎಂದಳು.

ಸರಸ್ವತಿ ಮುಖ ಮುಚ್ಚಿಕೊಂಡು ಮಲಗಿದಳು. ಅನೈಚ್ಛಿಕವಾಗಿ ಅವಳ ಕಣ್ಣುಗಳಿಂದ ಧಾರೆ ಇಳಿಯುತ್ತಿತ್ತು. ಕೋಟ್ಯಾಂತರ ಜನ ತುಂಬಿರುವ ಈ ಜಗತ್ತು ತನ್ನ ಭಾಗಕ್ಕೆ ನಿರ್ಜನ ಪ್ರದೇಶವಾಗಬಹುದೆಂಬುದನ್ನು ಸರಸ್ವತಿ ಅಂದು ಕಂಡುಕೊಂಡಳು.

ಸರಸ್ವತಿಯ ಮನಸ್ಸಿನಲ್ಲಿ ದೊಡ್ಡ ಭಯ ಮೂಡಿತು.

ಪ್ರತಿಸಲ ಗಂಡು ತನ್ನ ವಶವರ್ತಿಯಾಗಿ ತನ್ನ ದಾಸಾನುದಾಸನಂತೆ ನಡೆದುಕೊಂಡಾಗಲೂ ಸರಸ್ವತಿಯ ಮನಸ್ಸಿಗೆ ಅಪಾರ ತೃಪ್ತಿ, ಅವರ್ಣ

ನೀಯ ಆನಂದವಾಗುತ್ತಿತ್ತು. ಗಂಡಿನ ಸೋಲು – ದಾಸ್ಯ ಅವಳಿಗೆ ದೈಹಿಕ ತೃಪ್ತಿಯನ್ನಲ್ಲದೆ ಮಾನಸಿಕ ತೃಪ್ತಿಯನ್ನೂ ಕೊಡುತ್ತಿತ್ತು. 'ನನ್ನಲ್ಲೇನಿದೆ ಯೆಂದು ಇವರು ಹೀಗೆ ಮರುಳಾಗುತ್ತಾರೆ' ಎಂದು ತನ್ನನ್ನು ತಾನೇ ಕೇಳಿ ಕೊಂಡಿದ್ದಳು. ಮಂಜಯ್ಯ, ನಂಜಪ್ಪನಲ್ಲಿ ತನ್ನ ಅನುರಾಗಕ್ಕೆ ಹುಟ್ಟಿದ ಸ್ಪರ್ಧೆಯಾವದೋ ಅಜೇಯ್ಯ, ದುರ್ದಮ್ಯ ಶಕ್ತಿಯ ಪರಿಚಯಮಾಡಿ ಕೊಟ್ಟಿತ್ತು. ಅದೇನೆಂಬುದು ಸರಸ್ವತಿಗೆ ಮನವರಿಕೆಯಾಗದಿದ್ದರೂ, ಆ ಶಕ್ತಿ ತನ್ನಲ್ಲಿ ಆವಿರ್ಭೂತವಾಗಿದೆಯೆನ್ನುವುದನ್ನು ಖಚಿತಮಾಡಿಕೊಂಡಿದ್ದಳು. ತನ್ನ ಕೈಬಿಟ್ಟು ಹೋದ ಪೀತಾಂಬರರಾಯ, ಶ್ರೀರಂಗರಾಯ ಹಿಂದಿರುಗಿ ಬಂದಿರಲಿಲ್ಲ. ಅವರ ಬುಡಬೇರುಗಳನ್ನೇ ಕಿತ್ತೆಸೆಯುವಂತೆ ಬೆಳೆದು ನಿಂತಿದ್ದ ಆಶಾವೃಕ್ಷ ಕೊನರದ ಕೊರಡಾಯಿತೇ ?

ಶ್ರೀಕಂಠಮೂರ್ತಿ ತನಗೆ ವಶನಾಗಿದ್ದ. ಆದರೆ ಅವನೆಂದಿಗೂ ಎಚ್ಚರ ತಪ್ಪಿರಲಿಲ್ಲ. ನಂಜಪ್ಪನಂತೆ ತನ್ನ ಸರ್ವಸ್ವವನ್ನೂ ಸರಸ್ವತಿಯ ಚರಣತಳ ದಲ್ಲಿಟ್ಟು, ಅವಳು ತಿಂದು ಮಿಕ್ಕ ಉಚ್ಛಿಷ್ಟವನ್ನು ಮಹಾ ಪ್ರಸಾದವೆಂದು ಸ್ವೀಕರಿಸಿರಲಿಲ್ಲ. ಅವನು ನಂಜಪ್ಪನಂತೆ ತನ್ನನ್ನು ಆರಾಧಿಸಿದ್ದರೆ ಇಂದು ಕಂಪೆನಿಯಲ್ಲಿ ತಾನು ಅನಭಿಷಕ್ತ ಸಾಮ್ರಾಜ್ಞಿಯಾಗಿರ ಬೇಕಾಗಿತ್ತು. ಅವನ ವಿಶ್ವಾಸ ವ್ಯವಹಾರದ ಗಡಿ ದಾಟಿರಲಿಲ್ಲ.

ಕೈಬಿಟ್ಟು ಹೋಗಿದ್ದ ರಾಮರಾಜಪ್ಪ, ನಂಜಪ್ಪ ಹಿಂದಿರುಗಿ ಬಂದಿದ್ದರು. ರಾಮರಾಜಪ್ಪನಂತೂ ಎಂಟು ಮನೆಯ ಚೀಲಿ. ಅವನು ಹೋದುದಕ್ಕೆ ವ್ಯಸನಪಡಬೇಕಾಗಿರಲಿಲ್ಲ. ಒಂದು ವೇಳೆ ಅವನು ಗಂಟು ಹಾಕಿಕೊಂಡಿ ದ್ದರೂ ಅದೇನೂ ಬ್ರಹ್ಮಗಂಟಾಗುತ್ತಿರಲಿಲ್ಲ. ಮನಸ್ಸು ಬೇರೆ ಎಡೆ ಎಳೆದೊ ಡನೆಯೇ ಅತ್ತ ಜಾರುವುದು ಅವನ ಸ್ವಭಾವ - ಅಂಥವನು ಕೂಡ ನಿರಾಕರಿಸಿ ದ್ದನಲ್ಲ !

ನಂಜಪ್ಪನಿಗೂ ತನಗೂ ಇದ್ದ ಸ್ನೇಹ - ಬೆಳೆದು ಬಂದಿದ್ದ ಬಾಂಧವ್ಯ ದಲ್ಲಿ ತಮ್ಮ ಸಂಬಂಧ ಮುರಿದು ಬೀಳುವುದು ಸಾಧ್ಯವೇ ಇರಲಿಲ್ಲ. – ಆದರೂ ಮುರಿದು ಬಿತ್ತು – ಸರಸ್ವತಿ ಹತಾಶಳಾಗಲಿಲ್ಲ. ಒಂದಲ್ಲ ಒಂದು ದಿನ ನಂಜಪ್ಪ ನನ್ನು ಮತ್ತೆ ತನ್ನ ತೋಳಬಂದಿ ಮಾಡಿಕೊಳ್ಳುವೆನೆಂಬ ಧೈರ್ಯ ಅವಳಿ ಗಿತ್ತು. ಇಂದಿನ ಘಟನೆ ಅವಳನ್ನು ಹಣ್ಣುಮಾಡಿತ್ತು. ಹೇಳಿಕಳಿಸಿದು

ದಕ್ಕೆ ನಂಜಪ್ಪ ಬಂದ - ಒಣಗುತ್ತಿದ್ದ ಸ್ನೇಹವೃಕ್ಷಕ್ಕೆ ನೀರೆರೆಯುವುದಲ್ಲ; ನಿರಾಕರಿಸಿ ಹೋಗುವುದಕ್ಕೆ. ನಿರಾಕರಿಸಿ ಹೋಗಿದ್ದರೂ ಚಿಂತೆಯಿರಲಿಲ್ಲ. ಹೋಗುವ ಮುನ್ನ 'ಹೋಗುತ್ತೇನೆ' ಹೋಗುವುದಕ್ಕೇ ಎದ್ದು ನಿಂತಿದ್ದೇನೆ ಕುಂತಳ ಬಸುರಿ ಎನ್ನುವುದು ನಿನಗೆ ಗೊತ್ತಾಗಿದೆಯಲ್ಲ. ನನ್ನನ್ನು ನೀನು ಕಾಡಿದರೆ ಅವಳಿಗೆ ವ್ಯಥೆಯಾಗುತ್ತದೆ. ಅವಳು ನಿನಗೇನೂ ಅನ್ಯಾಯಮಾಡಿ ಲ್ಲವಲ್ಲ. ಅವಳ 'ಮನಸ್ಸಿಗೆ ವ್ಯಥೆ ಕೊಡಬೇಡ. ಇಷ್ಟು ಉಪಕಾರಮಾಡು. ಪುನಃ ನನ್ನನ್ನು ನೋಡುವ ಪ್ರಯತ್ನ ಮಾಡಬೇಡ' ಎಂದು ಕಟುವಾಗಿ ನುಡಿದು ಹೋಗಿದ್ದ. ಕುಂತಳನಿಗಿಂತ ನಾನು ಕಡೆಯಾದೆನೇ ?

ಸರಸ್ವತಿಯ ಮನಸ್ಸು ಕಾದ ಎಣ್ಣೆ ಕೊಪ್ಪರಿಗೆಯಂತೆ ಕುತಕುತವೆನ್ನ ತೊಡಗಿತು.

ಪೂರ್ವ ಘಟನೆಗಳನ್ನೆಲ್ಲಾ ಸ್ಮರಿಸಿಕೊಳ್ಳುತ್ತ ಅವಳ ಮನಸ್ಸಿನಲ್ಲಿ ಪ್ರಬಲ ಸಂದೇಹ ಮೂಡಿತು - ಸಂದೇಹ ಭಯಕ್ಕೆ ಕಾರಣವಾಗಿ ಅವಳ ವೈ ಮನಸ್ಸು ಗಳನ್ನು ನಡುಗಿಸಿತು.

'ನನ್ನ ಶಕ್ತಿ ನಾಶವಾಯಿತೇ - ನಾನು ಯಾರನ್ನೂ ಆಕರ್ಷಿಸಲಾ ರೆನೇ ? ಇನ್ನು ಮೇಲೆ ಯಾರೂ ನನ್ನನ್ನು ಬಯಸುವುದಿಲ್ಲವೇ ?'

ಎಂದು ಚಿಂತಿಸುತ್ತಾ ಮಲಗಿದಳು.

ಕಣ್ಣೀರು ಕಾಲುವೆಯಾಗಿ ಹರಿಯಿತು.

ಸುಮಾರು ಒಂದು ಗಂಟೆಯ ವೇಳೆಗೆ ಮುತ್ತಮ್ಮ ಬಂದೆಬ್ಬಿಸಿ

"ಏಳ್ರಮ್ಮ - ಊಟಮಾಡಿ" ಎಂದಳು.

"ಗಂಟೆಯೆಷ್ಟು ?" ಎಂದು ಕೇಳಿದಳು,

"ಒಂದು ಗಂಟೆ ಸಮಯ."

ಸರಸ್ವತಿ ಝುಗ್ಗನೆದ್ದು ಬಚ್ಚಲುಮನೆಗೆ ಹೋಗಿ ಚೆನ್ನಾಗಿ ಕಣ್ಣುಗಳನ್ನು ತೊಳೆದುಕೊಂಡು, ಸೋಪು ಹಚ್ಚಿ ಮುಖ ತೊಳೆದುಕೊಂಡು, ಅಡಿಗೆಯ ಮನೆಗೆ ಬಂದು ಕುಳಿತಳು.

ಭಾಗ್ಯಮ್ಮ ಸರಸ್ವತಿಗೂ ಮುತ್ತಮ್ಮನಿಗೂ ಬಡಿಸಿದಳು.

ಊಟ ಮುಗಿದ ಕೂಡಲೆ ಸರಸ್ವತಿ ಮಹಡಿಯ ಮೇಲಕ್ಕೆ ಬಂದು ಎಚ್ಚರಿಕೆಯಿಂದ ಅಲಂಕಾರ ಮಾಡಿಕೊಂಡಳು. ಮುಖಕ್ಕೆ ಪೌಡರು,

ತುಟಿಗೆ ತುಟಿಗೆಂಪು ಹಚ್ಚಿಕೊಂಡು, ಅರ್ಧ ಎದೆ ಕಾಣುವಂತಿದ್ದ ಕುಪ್ಪಸ ಧರಿಸಿದಳು. ಟ್ರಂಕಿನಲ್ಲಿದ್ದ ಸೀರೆಗಳನ್ನೆಲ್ಲಾ ಪರಾಮರ್ಶಿಸಿ ಬೂದು ಬಣ್ಣದ ಒಡಲು ತುಂಬ ಜರಿತಾರಿ ಕೆಲಸಮಾಡಿದ ಸೆರಗಿದ್ದ ಸೀರೆಯನ್ನು ಮೈಗೆ ಹತ್ತಿಕೊಳ್ಳುವಂತೆ ಧರಿಸಿದಳು. ಸಣ್ಣ ಡಬ್ಬದಲ್ಲಿ ಮಡಿಸಿಟ್ಟದ್ದ ರೇಷ್ಮೆ ಕರ ವಸ್ತ್ರಗಳನ್ನು ತೆಗೆದು, ಅವುಗಳಲ್ಲಿ ಎರಡನ್ನಾಯ್ದುಕೊಂಡು ಅವುಗಳಿಗೆ ಸೆಂಟ್ ಸವರಿದಳು. ಹಾಗೇ ಹುಬ್ಬು ಮುಂದಲೆ, ಎದೆಯ ಮೇಲೆ ಕಿವಿಯ ಹಿಂದೆ ತೆಳುವಾಗಿ ಸೆಂಟ್ ಲೇಪಿಸಿಕೊಂಡಳು. ಹಣೆಯ ಮೇಲೆ ಕಲಸಿದ ಕುಂಕುಮ ವಿಟ್ಟು, ಕೈ ಗಡಿಯಾರ ತೆಗೆದು ಕಟ್ಟಿಕೊಂಡು ಕೈಯಲ್ಲಿ ಪ್ಲಾಸ್ಟಿಕ್ ಪರ್ಸ್ ಹಿಡಿದು ಹೊರಡಲನುವಾದಳು.

ಸರಸ್ವತಿಯನ್ನು ಆಪಾದ ಮಸ್ತಕ ನೋಡಿದ ಮುತ್ತಮ್ಮ

"ಇದೇನಮ್ಮ ಬಿಸಲ್ನಲ್ಲಿ . . ."

ಎಂದು ಕೇಳಿದಳು. ಸರಸ್ವತಿ ಗಂಭೀರವಾಗಿ

"ಸ್ವಲ್ಪ ಕೆಲಸವಿದೆ. ಸಂಜೆಗೆ ಬರುತ್ತೇನೆ"

ಎಂದು ಹೇಳಿ ಹೊರಟು ಬಿಟ್ಟಳು.

ದಾರಿಯಲ್ಲಿ ಸಿಕ್ಕಿದ ಗಾಡಿಯನ್ನೇರಿ ಬಸವನಗುಡಿ ಅಂಗಡಿಯ ಬೀದಿಗೆ ಬಂದು ಅಲ್ಲಿ ಗಾಡಿಯಿಂದಿಳಿದು, ಬಾಡಿಗೆ ಕೊಟ್ಟು ಕಳುಹಿಸಿ ಅಲ್ಲಿಯೇ ಇದ್ದ ಅಂಗಡಿಗೆ ಬಂದು ಒಂದು ಕುಚ್ಚು ಮಲ್ಲಿಗೆ ಹೂ ತೆಗೆದು ಮಡಿದುಕೊಂಡಳು. ಅಂಗಡಿಯಲ್ಲಿ ತಟ್ಟೆಯಲ್ಲಿಟ್ಟದ್ದ ಬೀಡಗಳು ಕಣ್ಣಿಗೆ ಬೀಳಲು, ಒಂದು ಬೀಡಾ ತೆಗೆದು ಬಾಯಿಗೆ ಹಾಕಿಕೊಂಡಳು.

ಅಂಗಡಿ ಗಡಿಯಾರದಲ್ಲಿ ಎರಡು ಗಂಟೆಯಾಗಿತ್ತು. ತನ್ನ ಗಡಿಯಾರಕ್ಕೆ ಕೀಲಿಕೊಟ್ಟು, ಗಂಟೆ ಸರಿಮಾಡಿಕೊಂಡಳು.

ರಾಘವಾಚಾರ್ಯರು ಸರಸ್ವತಿಗೇ ಕಾಯುತ್ತಿದ್ದರು.

"ನೀವು ಬಂದು ಎಷ್ಟು ಹೊತ್ತಾಯ್ತು ಮೇಷ್ಟ್ರೇ" ಎಂದು ಕೇಳಿದಳು.

"ನಾನು ಆಗಲೇ ಬಂದೆನಮ್ಮ. ತುಂಬ ಅಲಂಕಾರ ಮಾಡಿಕೊಂಡಿರುವಿರಿ."

"ಮಾಡಿಕೊಳ್ಳಬೇಕಲ್ಲ. ಅವರು ಬರಲಿಲ್ಲವೇ ?"

"ಬ್ಯಾಂಕಿಗೆ ಹೋಗಬೇಕಾಗಿದೆ. ಬ್ಯಾಂಕ್ ಕೆಲಸ ಮುಗಿಸಿಕೊಂಡು

ಮನೆಗೆ ಹೋಗಿ ಊಟಮಾಡಿ ಬರುತ್ತೇನೆ ಎಂದು ಹೇಳಿದರು. ಇನ್ನೇನು ಬರಬಹುದು."

ಸರಸ್ವತಿ ಶಾಲೆಯ ಸುತ್ತ ಕಣ್ಣು ಹೊರಳಿಸಿದುದನ್ನು ಕಂಡು ಆಚಾರ್ಯರು "ಏನು ಬೇಕಾಗಿತ್ತು" ಎಂದು ಕೇಳಿದರು.

"ಹಾಸಿಗೆ."

"ಒಳಗಿನ ರೂಮಿನಲ್ಲಿದೆ."

"ಜತೆಯಲ್ಲಿ ತಂದಿರಾ ?"

"ಇಲ್ಲ ಒಂದು ಹಾಸಿಗೆ ಇಲ್ಲಿ ಇಟ್ಟೇ ಇರುತ್ತೇನೆ."

ಸರಸ್ವತಿ ನಕ್ಕು

"ನಿಮಗೆ ಸ್ವಲ್ಪವೂ ಬಿಡುವಿಲ್ಲ" ಎಂದಳು.

"ಸಿಕ್ಕಿದವರನ್ನು ನಾನು ಸೇರಿಸಲ್ಲಮ್ಮ. ಜೀವಣ್ಣರಾಯ, ಅವನ ಹಾಗೆ ಇನ್ನೂ ಒಬ್ಬಿಬ್ಬರಿದ್ದಾರೆ. ಅವರು ಬಂದರೇ ನನ್ನ ಸ್ಥಳ ಕೊಡುವುದು. ಈ ಸ್ಥಳವೋ ಬಟ್ಟಾಬಯಲು. ಇಷ್ಟು ಹೊತ್ತಿನಲ್ಲಿ ಪರವಾಯಿಲ್ಲ. ಉಳಿದ ವೇಳೆಯಲ್ಲಿ ಜನದ ಜಾತ್ರೆ."

"ಕುಡಿಯುವುದಕ್ಕೆ ಸ್ವಲ್ಪ ನೀರು ಬೇಕಲ್ಲ ಮೇಷ್ಟ್ರೇ."

"ತಂದುಕೊಡುತ್ತೀನಮ್ಮ"

ಎಂದೆದ್ದು ಆಚಾರ್ಯರು ರೂಮಿನ ಒಳಗೆ ಹೋಗಿ ಬಂದು ಹೂಜಿ ತೆಗೆದು ಕೊಂಡು ಬಂದು

"ಕಾಫಿ ತಂದು ಕೊಡಲೇ ?" ಎಂದು ಕೇಳಿದರು.

"ಕಾಫಿ ಬೇಡ - ನೀರು ಕೊಟ್ಟರೆ ಸಾಕು."

ಆಚಾರ್ಯರು ಕೆಳಗಿಳಿದು ಹೋಗಿ ಹೂಜಿಯಲ್ಲಿ ನೀರುತುಂಬಿಕೊಂಡು ಬಂದು, ಸರಸ್ವತಿಗೆ ನೀರು ಕೊಟ್ಟು, ಹೂಜಿಯನ್ನು ರೂಮಿನಲ್ಲಿಟ್ಟು ಅಲ್ಲಿದ್ದ ಥರ್ಮಾಸ್ ಫ್ಲಾಸ್ಕ್ ತಂದರು.

"ಕಾಫಿ ತರುತ್ತೀರಾ ?"

"ಬಿಸಿಲು. ಅವನು ಬಂದರೆ ಇರಲಿ."

"ಹಾಗೇ ಏನಾದರೂ ತಿಂಡಿಯೂ ತನ್ನಿ"

ಎಂದು ಪರ್ಸ್ ತೆಗೆದು ಆಚಾರ್ಯರ ಕೈಗೆ ಐದು ರೂಪಾಯಿ ಕೊಟ್ಟಳು.

"ಸಿಹಿ ತರಲೋ ಖಾರ ತರಲೋ."

"ಎರಡೂ ತನ್ನಿ. ಮರೆಯದೆ ಬೀಡ ತನ್ನಿ. ಬೇಗ ಬಂದು ಬಿಡುತ್ತೀರಷ್ಟೆ."

"ತಡಮಾಡುವುದಿಲ್ಲ. ಹೋಟೆಲು ಇಲ್ಲೇ ಇದೆ."

ಎಂದು ಬಾಗಿಲು ಮುಂದಕ್ಕೆ ಹಾಕಿಕೊಂಡು ಹೋದರು.

ಆಚಾರ್ಯರು ಬರುವಷ್ಟರಲ್ಲಿ ಸರಸ್ವತಿ ಒಳಗಿದ್ದ ರೂಮನ್ನು ಪರಾಮರ್ಶಿಸಿದಳು. ರೂಮ್ ದೊಡ್ಡದಲ್ಲದಿದ್ದರೂ ಅನುಕೂಲವಾಗಿತ್ತು. ನೆಲದ ಮೇಲೆ ಉಣ್ಣೆಯ ಕಂಬಳಿ, ಗೋಡೆಯ ಮಗ್ಗುಲಿಗೆ ಒಂದು ಹಾಸಿಗೆ. ಒಂದು ಮೂಲೆಯಲ್ಲಿ ಒಂದು ತಂಬೂರಿ ಒರಗಿಸಲ್ಪಟ್ಟಿತ್ತು, ಇನ್ನೊಂದು ಮೂಲೆಯಲ್ಲಿ ಕೈ ಮೇಜು. ಅದರ ಮೇಲೆ ಹೂಜಿ, ಗ್ಲಾಸುಗಳು. ಸರಸ್ವತಿ ಕೈ ಮೇಜಿನ ಡ್ರಾಯರ್ ಎಳೆದಳು. ಮೊದಲು ಅವಳ ಕಣ್ಣಿಗೆ ಬಿದ್ದುದು ಒಂದು ಗೋಲ್ಡ್‌ಫ್ಲೇಕ್ ಸಿಗರೇಟ್ ಮತ್ತು ಕಡ್ಡಿಪೊಟ್ಟಣ. ಡ್ರಾಯರ್ ಪೂರ್ತಿ ಎಳೆದಳು. ಪಾಠಕ್ಕೆ ಬರುತ್ತಿದ್ದ ಮಕ್ಕಳ ನೊಟೇಷನ್ ಪುಸ್ತಕಗಳು. ಅವುಗಳ ಕೆಳಗೆ ಭದ್ರವಾಗಿ ದಾರ ಬಿಗಿದ ಒಂದು ಫೈಲು. ಸರಸ್ವತಿ ದಾರ ಬಿಚ್ಚಿ ನೋಡಿದಳು - ಫೈಲಿನಲ್ಲಿದ್ದ ಚಿತ್ರಗಳು ಅವಳನ್ನು ದಂಗುಬಡಿಸಿದವು. ಹತ್ತಾರು ಅರ್ಧನಗ್ನ, ಪೂರ್ಣನಗ್ನ ಚಿತ್ರಗಳು - ಕೆಲವು ಸಂಭೋಗ ಮುದ್ರೆಗಳು. ಅವುಗಳಲ್ಲಿ ಹೆಚ್ಚಿನವು ಇಂಗ್ಲೀಷ್, ಫ್ರೆಂಚ್, ಅಮೆರಿಕನ್ ಹುಡುಗಿಯರ ಚಿತ್ರಗಳಾಗಿದ್ದವು. ಕೆಲವು ಭಾರತೀಯ ಹುಡುಗಿಯರ ಚಿತ್ರಗಳೂ ಇದ್ದವು. ಫೈಲ್ ಒಳಗೆ ಚಚ್ಚೌಕದ ದೊಡ್ಡ ಕವರೊಂದಿತ್ತು. ಅದನ್ನು ತೆಗೆದು ನೋಡಿದಳು – ದೇಶೀ ಸ್ತ್ರೀ ಪುರುಷರ ಭೋಗ ಚಿತ್ರಗಳು ನಾನಾ ಭಂಗಿಗಳಲ್ಲಿ ! ಚಿತ್ರಗಳು ಸರಸ್ವತಿಯ ಮನಸ್ಸಿನಲ್ಲಿ ಹೆದರಿಕೆಯನ್ನುಂಟು ಮಾಡಿದರೂ, ಅವಳು ಅವುಗಳಿಂದ ಕಣ್ಣು ತೆಗೆಯಲಿಲ್ಲ. ಕವರಿನಲ್ಲಿದ್ದ ಚಿತ್ರಗಳಂತೂ ಸ್ಥಳೀಯ ವ್ಯಕ್ತಿಗಳದೆಂದು ಸ್ವತಃಸ್ಸಿದ್ಧವಾಗಿತ್ತು.

ಆಚಾರ್ಯರು ಬಂದುಬಿಟ್ಟಾರೆಂದು ಹೆದರಿ ಸರಸ್ವತಿ ಅವುಗಳನ್ನು ಯಥಾಸ್ಥಾನದಲ್ಲಿಟ್ಟು ಎದ್ದಳು. ಅವಳ ಎದುರಿಗೆ ಗೋಡೆಯಲ್ಲೊಂದು ಬೀಗ ಹಾಕಿದ ಬೀರು. 'ಇದರಲ್ಲಿ ಏನೇನು ಇದೆಯೋ' ಎಂದು ಸರಸ್ವತಿ ವಿಚಾರ ಮಾಡುತ್ತಾ ತಾನು ಕುಳಿತಿದ್ದಲ್ಲಿಗೇ ಬಂದು ಕುಳಿತಳು.

ಆಚಾರ್ಯರು ಚೀಲದಲ್ಲಿ ತಿಂಡಿ ಸಾಮಾನುಗಳನ್ನು ಹಾಕಿಕೊಂಡು ಬಂದು

"ಇನ್ನೂ ಬರಲಿಲ್ಲವೇ ?" ಎಂದು ಕೇಳಿದರು.

"ಇಲ್ಲ ಮೇಷ್ಟ್ರೇ"

ಆಚಾರ್ಯರು ರೂಮಿನಲ್ಲಿ ಚೀಲ ಇಟ್ಟು ಬಂದು

"ಈ ವೇಳೆಗೇ ಬರಬೇಕಾಗಿತ್ತೇ ?"

"ಅವರ ಅಂಗಡಿ ತನಕ ಹೋಗಿ ಬಂದಿದ್ದರೆ. . ."

"ಅವನು ಈಗ ಅಂಗಡಿಯಲ್ಲಿರುವುದಿಲ್ಲಮ್ಮ."

"ಬರುತ್ತಾರೊ ಬರುವುದೇ ಇಲ್ಲವೊ."

"ಛೆ! ಛೆ! ಅವನೆಂದಿಗೂ ಮಾತಿಗೆ ತಪ್ಪುವುದಿಲ್ಲ. ಬ್ಯಾಂಕಿನಲ್ಲಿ ಎಲ್ಲೋ ಹೊತ್ತಾಗಿರಬೇಕು."

ಇಬ್ಬರಿಗೂ ಲೋಕಾಭಿರಾಮವಾಗಿ ಸಂಭಾಷಣೆ ಸಾಗಿದ್ದಂತೆ ಜೀವಣ್ಣರಾಯ ಬಂದ.

ಜೀವಣ್ಣರಾಯನಿಗೆ ವಯಸ್ಸು ನಲವತ್ತೆರಡು, ನಲವತ್ತು ಮೂರು ಇರಬಹುದು. ಆಸಾಮಿ ಎಲ್ಲ ವಿಷಯದಲ್ಲಿಯೂ ಸ್ವಲ್ಪ ಧಡೂತಿಯಾಗಿಯೇ ಇದ್ದ. ಎತ್ತರಕ್ಕೆ ತಕ್ಕ ಗಾತ್ರವೂ ಇತ್ತು. ಮುಖದ ಮೇಲಿದ್ದ ಸಣ್ಣ ಮೀಸೆ ಅವನ ವ್ಯಕ್ತಿತ್ವಕ್ಕೆ ಕುಂದಣವಿಟ್ಟಂತಿತ್ತು. ಅವನು ರೇಷ್ಮೆ ಅಂಚಿನ ಪಂಚೆ, ಸಿಲ್ಕ್ ಷರ್ಟು, ಕುತ್ತಿಗೆ ಮುಚ್ಚುವ ಸರ್ಜ್‌ಕೋಟ್ ಧರಿಸಿದ್ದ. ಕಾಲಿಗೆ ಧರಿಸಿದ್ದುದು ಪೇಟೆಂಟ್ ಚರ್ಮದ ಪಂಪ್ ಷೂಸ್. ತಲೆಯ ಮೇಲೆ ಎರಡೂವರೆ ಅಂಗುಲ ಜರತಾರಿ ಇದ್ದ ಭರ್ಜರಿ ರುಮಾಲು. ಕೈಯಲ್ಲಿ ಚಿನ್ನದ ಸರಪಣಿ ಹಾಕಿದ ಗಡಿಯಾರ, ಎರಡು ವಜ್ರದ ಉಂಗುರಗಳು.

"ಗಂಟೆಯೆಷ್ಟು ಜೀವಣ್ಣ."

"ಮೂರಾಯಿತಪ್ಪ."

"ಎರಡು ಗಂಟೆಗೆ ಬರುವವನಲ್ಲವೇ ?"

"ಏನು ಮಾಡಲಿ ಹೇಳು. ಬ್ಯಾಂಕಿಗೆ ಹೋದೆ. ಹೊತ್ತಾಯ್ತು. ಈಕೆ ಬಂದು ಎಷ್ಟು ಹೊತ್ತಾಯ್ತು."

"ಎರಡು ಗಂಟೆಗೆ ಬಂದರು."

ಎಂದು ಆಚಾರ್ಯರು ಹೊರಗಡೆ ಬಾಗಿಲು ಹಾಕಿ ಚಿಲಕ ಭದ್ರಮಾಡಿ ಬಂದರು.

ಜೀವಣ್ಣ ಸರಸ್ವತಿಯ ಎದುರು ಕುಳಿತು, ತಲೆಯ ಮೇಲಿದ್ದ ರುಮಾಲು ತೆಗೆದು ಕೆಳಗಿಟ್ಟು ಅನ್‌ಜೋರಾ ಕ್ರೀಮ್ ಹಾಕಿ ಬಾಚಿಕೊಂಡಿದ್ದ ತನ್ನ ದಟ್ಟವಾದ ತಲೆಗೂದಲಿನ ಮೇಲೆ ಒಮ್ಮೆ ಕೈಯ್ಯಾಡಿಸಿದ.

‘ ನನ್ನಂತೆ ಇವನೂ ಅಲಂಕಾರ ಮಾಡಿಕೊಂಡು ಬಂದಿದ್ದಾನೆ.’ ಎಂದುಕೊಂಡಳು ಸರಸ್ವತಿ.

“ ಇವರೇಪ್ಪ ನಾನು ಹೇಳಿದವರು.” ಎಂದರು ಆಚಾರ್ಯರು.

“ ನಿನ್ನದು ಇದೇ ಊರೆ. ನಾನು ಒಂದೆರಡು ಸಲ ನೋಡಿದ್ದೆ.”

“ ಎಲ್ಲಿ ? .”

“ ಹೀಗೆ ಪೇಟೆಯಲ್ಲಿ — ಆಚಾರಿ ಸ್ಕೂಲಿನಲ್ಲೂ ನೋಡಿದ್ದೇಂತ ಕಾಣುತ್ತದೆ. ಆಚಾರೀನ ಕೇಳಿದೆ — ನಾಟಕದ ಕಂಪೆನಿಯಲ್ಲಿದ್ದೀಂತ ಹೇಳಿದ. ನಾಟಕದ ಕಂಪೆನಿ ಸೇರಿ ಎಷ್ಟು ದಿವಸವಾಯ್ತು. ? ”

“ ನಾಲ್ಕು ತಿಂಗಳಾಯ್ತು.”

“ ನನ್ನ ವಿಷಯವೆಲ್ಲಾ ಆಚಾರಿ ಹೇಳಿರಬೇಕು.”

“ಸೂಕ್ಷ್ಮವಾಗಿ ಹೇಳಿದ್ದಾರೆ.”

“ ಬೆಂಗಳೂರಿಗೇ ಬಂದು ಬಿಡುತ್ತೀ ಎಂದು ಆಚಾರಿ ಹೇಳಿದ.”

“ ಯೋಚನೆ ಮಾಡುತ್ತಾ ಇದ್ದೇನೆ. ಅನುಕೂಲವಾದರೆ ಬಂದು ಬಿಡುತ್ತೇನೆ.”

“ ನಾಟಕದ ಕಂಪೆನಿಯಲ್ಲಿ ಅನುಕೂಲವಾಗಿಲ್ಲವೇ ? ”

“ ಅನುಕೂಲವಾಗಿದೆ. ಆದರೆ ನಾಟಕದ ಜೀವನ ನನಗೆ ಸರಿಹೋಗಿಲ್ಲ. ದಿನವೂ ನಿದ್ರೆಗೆಡಬೇಕು.”

“ ಬೆಂಗಳೂರಿನಲ್ಲಿ ಎಷ್ಟು ದಿವಸ ಇರುತ್ತೀ.”

“ ಇನ್ನು ನಾಲ್ಕೈದು ದಿನ ಇರುತ್ತೇನೆ.’

“ ಎಲ್ಲಿ ಇಳಿದು ಕೊಂಡಿದ್ದಿ ?..”

“ಸಂಬಂಧಿಗಳೊಬ್ಬರ ಮನೆಯಲ್ಲಿದ್ದೇನೆ.”

“ ಕಾಫಿ ತಂದಿಟ್ಟಿದ್ದೀನಿ – ಕೊಡಲೇನಯ್ಯ.”

ಎಂದು ಆಚಾರ್ಯರು ಕೇಳಿದರು.

"ಈಗಲೇ ಬೇಡ – ಸ್ವಲ್ಪ ಹೊತ್ತು ಹೋಗಲಿ. ಏನಾದರೂ ತಿಂಡಿ ತರಬೇಕಾಗಿತ್ತು."

"ಅವರೇ ತರಿಸಿಟ್ಟಿದ್ದಾರಪ್ಪಾ"

"ಹಾಗೇನು ?"

ಎಂದು ಜೀವಣ್ಣರಾಯ ನಕ್ಕ. ಆಚಾರ್ಯರು ಸಣ್ಣ ಧ್ವನಿಯಲ್ಲಿ.

"ಅಂಗಡೀಗೆ ನೀನು ಎಷ್ಟು ಹೊತ್ತಿಗೆ ಹೋಗಬೇಕು."

"ಇವತ್ತು ಬೇಗನೆ ಹೋಗಬೇಕಾಗಿದೆಯಪ್ಪ."

"ಹರಟೇಲೆ ಕಾಲ ಕಳೆಯುತ್ತೀಯೇನು"

ಎಂದೆಂದು ಸರಸ್ವತಿಗೆ ಕಣ್ಸನ್ನೆಮಾಡಿದರು. ಅವಳು ಎದ್ದು ರೂಮಿನ ಒಳಗೆ ಹೋದಳು. ಜೀವಣ್ಣರಾಯ ಅವಳನ್ನು ಹಿಂಬಾಲಿಸಿ ಹೋಗಿ ರೂಮ್ ಬಾಗಿಲು ಹಾಕಿಕೊಳ್ಳುತ್ತಾ ಆಚಾರ್ಯರಿಗೆ

"ನೀನು."

"ನಾನು ಬೇಗ ಹಾಕಿಕೊಂಡು ಹೋಗುತ್ತೇನೆ."

"ಬೇಡ – ಇಲ್ಲೇ ಇರು. ರೂಮ್ ಬಾಗಿಲು ಹಾಕಿಕೊಳ್ಳುತ್ತೇನೆ"

ಎಂದು ಹೇಳಿದ.

ಜೀವಣ್ಣರಾಯ, ಸರಸ್ವತಿ ರೂಮ್ ಬಿಟ್ಟು ಬರುವ ಹೊತ್ತಿಗೆ ಐದೂ ವರೆಯಾಯಿತು. ಅವರು ಹೊರಗೆ ಬಂದು ಕುಳಿತಕೂಡಲೆ ಆಚಾರ್ಯರು ತಿಂಡಿ, ಕಾಫಿ ತಂದು ಮುಂದಿಟ್ಟರೂ. ಮೂವರು ಉಪಾಹಾರ ಮಾಡಿದರು.

"ಮುಂದಿನ ವಿಷಯ" ಎಂದರು ಆಚಾರ್ಯರು.

"ನಾಳೆ ಟ್ರಿಪ್ ಹಾಕಿದ್ದೇವೆ."

"ಎಲ್ಲೀಗೆ ?"

"ತಿಪ್ಪಗೊಂಡನ ಹಳ್ಳಿಗೆ. ಅಲ್ಲಿ ಸೊಗಸಾದ ಟಿ. ಬಿ. ಇದೆ."

"ಯಾವಾಗ ಹೊರಡುವುದು"

"ನಾಳೆ ಎರಡು ಗಂಟೆಗೆ."

"ಬರುವುದು ?"

"ನಾಡಿದ್ದು ಬೆಳಿಗ್ಗೆ."

"ಒಳ್ಳೆಯದು ಹೋಗಿ ಬನ್ನಿ."

"ನೀನು ತಪ್ಪಿಸಿಕೊಳ್ಳುವ ಯೋಚನೆ ಮಾಡ್ತಾ ಇರುವ ಹಾಗಿದೆ."

"ನಾನೂ ಬರಬೇಕೆ ?"

"ಹೂ ! ನೀನು ಬರದೇ !"

"ನಾನೇಕಯ್ಯ ? ಶಿವಪೂಜೆಯಲ್ಲಿ ಕರಡಿಬಿಟ್ಟ ಹಾಗೆ."

"ನೀನು ಬರುವುದು ಮಾತ್ರವೇ ಅಲ್ಲ – ಮನೇಲಿ ಲಕ್ಷಣವಾಗಿ ಪುಳಿಯೋಗರೆ, ಸಕ್ಕರೆಪೊಂಗಲು, ಮೊಸರನ್ನ, ತೈರೊಡೆ ಮಾಡಿಸಿಕೊಂಡು ಬುತ್ತಿ ತೆಗೆದುಕೊಂಡು ಬಾ."

"ಭಾರಿ ಪಾರ್ಟಿಯೇ ಆಯ್ತು. ಇನ್ನು ಯಾರು ಬರುತ್ತಾರೆ."

"ಯಾರೂ ಇಲ್ಲ – ಇಷ್ಟೇ ಜನ. ನಿನಗೆ ಬೇಕಾದರೆ ಯಾರನ್ನಾದರೂ ಜತೆಗೆ ಕರೆದುಕೊಂಡು ಬಾ."

"ನನಗೇಕಯ್ಯ ಅದೆಲ್ಲಾ – ಕಾಲವಾಯಿತು ವಯಸ್ಸಾಯಿತು. ನನಗೆ ಬೇಕಾದ್ದು ಕೊಡಿಸುತ್ತೀಯೋ ಇಲ್ಲವೋ ?"

"ನೀನು ಕುಡಿಯುವಷ್ಟು ಕೊಡಿಸುತ್ತೇನೆ ಬಾ."

"ಹೋಗುವುದು ಹೇಗೆ ?"

"ನನ್ನ ಕಾರಿನಲ್ಲಿ."

"ಡ್ರೈವರ್ ಮನೆಯಲ್ಲಿ ಬಾಯಿಬಿಟ್ಟರೆ."

"ಅದನ್ನು ತಾಕೀತು ಮಾಡುತ್ತೇನೆ - ಯೋಚನೆ ಮಾಡಬೇಡ. ನಾನು ನಾಳೆ ಇಲ್ಲಿಗೇ ಬಂದು ಬಿಡುತ್ತೇನೆ - ನೀನೂ ಇಲ್ಲಿಗೆ ಬಂದು ಬಿಡು ಸರಸ್ವತಿ. ನೀನು ಆಚಾರಿ . . ."

"ನಾನು ಇರಲೇಬೇಕಲ್ಲ. ಟಿಫನ್ ಕ್ಯಾರಿಯರ್‌ಗೆ ಬುತ್ತಿ ಹಾಕಿ ಇಲ್ಲೀಗೇ ತಂದು ಬಿಡುತ್ತೇನೆ."

"ಹಾಗೇ ಒಂದಿಷ್ಟು ಹಣ್ಣು ಹಂಪಲು, ವೀಳೆಯದೆಲೆ ಅಡಿಕೆ ತೊಗೋ. ಚೆನ್ನಾಗಿ ಮಾಡಿಸೋ ರಾಘವ, ಖರ್ಚಿನ ಮುಖ ನೋಡಬೇಡ."

"ಇನ್ನೂ ಏನೇನು ಬೇಕು ಒಂದೇಸಲ ಹೇಳಿಬಿಡಪ್ಪಾ. ನೀನು ತಿಪ್ಪಗೊಂಡನ ಹಳ್ಳಿಯಲ್ಲಿ ಸಂಸಾರವೇ ಹೂಡುವ ಹಾಗೆ ಕಾಣುತ್ತದೆ. ಎಲ್ಲಾ ಆಯ್ತು – ಮುಖ್ಯವಾದದ್ದೇ ಹೇಳಲಿಲ್ಲವಲ್ಲ !"

"ಅದು ಅಲ್ಲೇ ಸಿಕ್ಕತ್ತೇ – ನಾನೂ ಕಾರಿನಲ್ಲಿ ಕೈಗಾವಲಿಗೆ ಒಂದೆರಡು ಹಾಕಿರುತ್ತೇನೆ."

ಎಂದು ಜೀವಣ್ಣರಾಯ ಆಚಾರ್ಯರ ಕೈಗೆ ಸ್ವಲ್ಪ ಹಣ ಹಾಕಿ ಅಲ್ಲಿಂದ ಎದ್ದ.

ಸರಸ್ವತಿ, ಆಚಾರ್ಯರು ಇಬ್ಬರೂ ಎದ್ದು ಅವನನ್ನು ಕಳುಹಿಸಿಕೊಟ್ಟು ಬಂದು ಕುಳಿತರು. ಆಚಾರ್ಯರು ತೃಪ್ತಿಯ ನಗೆ ಬೀರುತ್ತ

"ಎಲ್ಲಾ ಸಮರ್ಪಕವಾಗಿ ಆಯಿತು ತಾನೇ"

"ಆಯಿತು."

"ಏನಾದರೂ ಕೊಟ್ಟನೋ ?"

"ಏನು ಕೊಡಲಿಲ್ಲ. ನಾಳೆ – ನಾಡಿದ್ದು ಕೊಡಬಹುದೂಂತ ಕಾಣತ್ತೆ."

"ನೀವು ನನಗೊಂದು ಕೆಲಸ ಮಾಡಿಕೊಡಬೇಕಮ್ಮ."

"ಹೇಳಿ ಮೇಷ್ಟ್ರೇ."

"ಜೀವಣ್ಣನಿಗೆ ಹೇಳಿ ನನಗೆ ಸ್ವಲ್ಪ ಹಣ ಕೊಡಿಸಬೇಕು."

"ನಿಮ್ಮ ಹಳೆಯ ಸ್ನೇಹಿತರಿಗೆ ನಾನು ಹೇಳಿ ಕೊಡಿಸುವುದೇ."

"ಆ ಸ್ನೇಹ ಬೇರೆ, ಈ ಸ್ನೇಹ ಬೇರೆಯಮ್ಮ. ನಾಳೆ ನೀವು ಹೇಳಿದರೆ ಕೇಳುತ್ತಾನೆ."

"ಅಗತ್ಯವಾಗಿ ಅಗಲಿ. ಹೇಳುತ್ತೇನೆ."

"ನನ್ನ ಬೆಂಗಳೂರಿಗೇ ಕರೆಸಿಕೊಳ್ಳುವ ವಿಷಯ ನೀವೂ ಅವರಲ್ಲಿ ಪ್ರಸ್ತಾಪಮಾಡಿ."

"ನಾನು ಮಾಡಿಯೇ ಮಾಡುತ್ತೇನೆ. ತಿಪ್ಪಗೊಂಡನ ಹಳ್ಳಿ ಟ್ರಿಪ್ ಅವನೇ ಹೇಳಿದನೋ ನೀವು ಸೂಚಿಸಿದರೋ ?"

"ನಾನು ಸೂಚಿಸಲಿಲ್ಲಪ್ಪ – ಅವರೇ ಹೇಳಿದರು."

"ಒಳ್ಳೆಯದೇ ಆಯಿತು. ನಿಧಾನವಾಗಿ ಮಾತಾಡುವುದಕ್ಕೆ ಅನುಕೂಲವಾಯಿತು."

"ನಾನು ಒಂದು ತಪ್ಪುಕೆಲಸ ಮಾಡಿದ್ದೇನೆ ಮೇಷ್ಟ್ರೆ. ಹೇಳಿದರೆ ನೀವು ಕೋಪಮಾಡಿಕೊಳ್ಳುವಿರೇನೋ ?"

" ಇಲ್ಲಮ್ಮ – ಹೇಳಿ."

ಎಂದು ಆಚಾರ್ಯರು ನಗುತ್ತ ನುಡಿದರು. ಆ ವಿಷಯ ಪ್ರಸ್ತಾಪಿಸುವ ಕಾರಣವಿಲ್ಲದಿದ್ದರೂ ಆಚಾರ್ಯರ ರಹಸ್ಯ ಭೇದಿಸುವುದಕ್ಕೆ ಸರಸ್ವತಿ ಉದ್ದೇಶ ಪೂರ್ವಕವಾಗಿ ಪ್ರಸ್ತಾಪಿಸಿದ್ದಳು.

" ಅಕಸ್ಮಾತ್ತಾಗಿ ನಾನು ಕೈ ಮೇಜಿನ ಡ್ರಾಯರ್ ಎಳೆದೆ. ಯಾವದೋ ಫೋಟೋ ಇದ್ದ ಹಾಗಿತ್ತು. ಏನೂಂತ ತೆಗೆದು ನೋಡಿಬಿಟ್ಟೆ."

" ನೋಡಿಬಿಟ್ಟೆರಾ !"

" ನೋಡಿದ್ದು ತಪ್ಪು ಆಯಿತೇ ?"

" ನೀವು ನೋಡಿದರೆ ಏನಮ್ಮ ತಪ್ಪು. ನಿಮ್ಮಲ್ಲಿ ನಾನು ಯಾವ ವಿಷಯವನ್ನೂ ಮುಚ್ಚಿಡುವುದಿಲ್ಲವಲ್ಲ."

" ಅದೇನು ಮೇಷ್ಟ್ರೇ."

" ನೋಡಿದಿರಲ್ಲಾ – ಚಿತ್ರಗಳು."

" ಅದನ್ನೇನು ಮಾಡುತ್ತೀರಿ."

" ಕೇಳಿದವರಿಗೆ ಕೊಡುತ್ತೇನೆ."

" ಮಾರುತ್ತೀರಾ !"

" ಮಾರದೆ – ಬಿಟ್ಟಿ ಕೊಡುತ್ತೇನೆಂದುಕೊಂಡಿರಾ ?"

" ಎಲ್ಲಿಂದ ತರಿಸುತ್ತೀರಿ ಇವುಗಳನ್ನು ಮೇಷ್ಟ್ರೆ."

" ಕನ್ನಡದ ಪತ್ರಿಕೆಗಳ ತುಂಬ ಈ ಚಿತ್ರಗಳ ಜಾಹೀರಾತು ಬರುತ್ತ ದಲ್ಲಮ್ಮಾ – ನೀವು ನೋಡಿಲ್ಲವೇ ?"

" ಅವೆಲ್ಲಾ ಹೊರದೇಶಗಳದ್ದಾದವು. ಈ ಊರಿನದೇ ಕೆಲವು ಫೋಟೋಗಳಿವೆ."

" ನನ್ನ ರಹಸ್ಯವೆಲ್ಲಾ ಕೆದಕಿ ಕೇಳುತ್ತಿರುವಿರಿ."

" ನನ್ನಲ್ಲಿ ನಂಬಿಕೆಯಿಲ್ಲವೇ ?"

" ಇಲ್ಲದಿದ್ದರೆ ಇಷ್ಟೆಲ್ಲಾ ಹೇಳುತ್ತಿದ್ದೆನೇ ?"

" ಈ ಊರಿನಲ್ಲಿಯೂ ಇಂಥ ಫೋಟೋಗಳನ್ನು ತರಿಸಿ ಮಾರು ತ್ತಾರೆಯೇ ?"

" ಇಲ್ಲಿ ಒಬ್ಬ ಫೋಟೋಗ್ರಾಫರ್ ಇದ್ದಾನೆ. ಅವನ ಕಸುಬೇ ಇದು.

ಸ್ಟುಡಿಯೋಕ್ಕೆ ಗಂಡೂ, ಹೆಣ್ಣು ಕರೆದುಕೊಂಡು ಹೋಗಿ ಅವರ ನಗ್ನ ಚಿತ್ರಗಳನ್ನು ತೆಗೆಯುತ್ತಾನೆ."

"ಇದಕ್ಕೆ ಯಾರು ಒಪ್ಪುತ್ತಾರೆ ಮೇಷ್ಟ್ರೇ ?"

"ಬಡತನ ಒಪ್ಪಿಸತ್ತಮ್ಮ. ಒಬ್ಬೊಬ್ಬರಿಗೆ ಹತ್ತೂ ಇಪ್ಪತ್ತು ಫೋಟೋಗ್ರಾಫರ್ ಕೊಡುತ್ತಾನೆ."

"ಇಂಥ ಫೋಟೊಗಳು ನಿಮ್ಮಲ್ಲಿಷ್ಟಿವೆ ?"

"ಬೇಕಾದಷ್ಟಿವೆ – ನೋಡುತ್ತೀರೇನು ?"

"ತೋರಿಸಿ – ನೋಡೋಣ."

ಆಚಾರ್ಯರು ಸರಸ್ವತಿಯನ್ನು ರೂಮಿಗೆ ಕರೆದೊಯ್ದು ಗೋಡೆಯಲ್ಲಿದ್ದ ಬೀರುವಿನ ಬೀಗ ತೆಗೆದು ಕೆಲವು ಕಟ್ಟುಗಳನ್ನು ತೆಗೆದು ನೆಲದ ಮೇಲೆ ಹಾಕಿದರು. ಸರಸ್ವತಿ ಕಟ್ಟುಗಳನ್ನು ಬಿಚ್ಚಿ ಚಿತ್ರಗಳನ್ನು ನೋಡುತ್ತಾ

"ಪ್ರಪಂಚದಲ್ಲಿ ಎಷ್ಟು ತರಹ ಇದೆ ಮೇಷ್ಟ್ರೇ."

"ಭಗವಂತನ ಲೀಲೆಯಮ್ಮ – ಲೀಲೆ."

"ಜೀವಣ್ಣರಾಯರು ಡ್ರಾಯರ್ ಎಳೆದಿದ್ದರೆ ಅನಾಹುತವಾಗುತ್ತಿತ್ತು."

ಆಚಾರ್ಯರು ಗೊಳ್ಳನೆ ನಕ್ಕು

"ಅವನೇ ಇದರ ದೊಡ್ಡ ಗಿರಾಕಿಕಣ್ರಮ್ಮಾ. ನೂರಾರು ಚಿತ್ರಗಳನ್ನು ಕೊಂಡಿದ್ದಾನೆ."

"ಒಂದೊಂದು ಚಿತ್ರಕ್ಕೆಷ್ಟು ಕೊಡುತ್ತಾರೆ ಮೇಷ್ಟ್ರೇ ?"

"ಐದೂ, ಹತ್ತು, ಹದಿನೈದು – ಸಮಯಾನುಸಾರ."

"ನಿಮಗೆ ಅಸಲು."

"ಎಂಟಾಣೆ, ಒಂದು ರೂಪಾಯಿ."

"ಪರವಾಯಿಲ್ಲ - ಚೆನ್ನಾಗಿಯೇ ಗಿಟ್ಟಿಸುತ್ತೀರಿ."

"ಏನಾದರೂ ಬಿಸಿನೆಸ್ (Business) ಮಾಡಬೇಕಲ್ಲಮ್ಮ – ಹೊಟ್ಟೆ ಕೇಳಬೇಕಲ್ಲ."

ಚಿತ್ರಗಳು ನೋಡಿದ್ದು ಮುಗಿಯಲು ಸರಸ್ವತಿ ಕಟ್ಟುಗಳನ್ನು ಮೊದಲಿನಂತೆ ಬಿಗಿದು ಆಚಾರ್ಯರ ಕೈಗಿತ್ತಳು. ಅವುಗಳನ್ನವರು ಸ್ವಸ್ಥಾನದಲ್ಲಿಟ್ಟು ಬೀಗ ಹಾಕಿದರು.

"ನಾನು ಹೊರಡುತ್ತೇನೆ ಮೇಷ್ಟ್ರೇ."

"ಹೊತ್ತಾಯಿತು. ಜತೇಗೆ ಬರಲೇನು."

"ನನಗೇನು ಭಯ."

"ನಾಳೆ ಬೇಗ ಬಂದು ಬಿಡಿ."

"ಒಂದು ಗಂಟೆಗೇ ಬರುತ್ತೇನೆ."

ಎಂದು ಹೇಳಿ ಆಚಾರ್ಯರ ಶಾಲೆ ಬಿಟ್ಟಳು.

೧೧

ದಾವಣಗೆರೆ ಕ್ಯಾಂಪು ಮುಗಿಸಿಕೊಂಡು ಕಂಪೆನಿ ಶಿವಮೊಗ್ಗೆಗೆ ಹೋಗಿತ್ತು. ಅದೇ ಕಟ್ಟ ಮುಗಿಸಿದ್ದ ಹೊಸ ಮನೆಯೊಂದು ಕಂಪೆನಿಯವರ ವಾಸಕ್ಕೆ ಸಿಕ್ಕಿತ್ತು. ಮನೆ ಹೊಸವಾದರಿಯಲ್ಲಿ ಸಿಮೆಂಟ್ ಕಾನ್‌ಕ್ರೀಟಿನಲ್ಲಿ ಕಟ್ಟಲ್ಪಟ್ಟಿತ್ತು. ಬಾಡಿಗೆ ಸ್ವಲ್ಪ ಹೆಚ್ಚಾದರೂ ಒಳ್ಳೆಯ ಮನೆಯೆಂಬ ಮೋಹದಲ್ಲಿ ಕಂಪೆನಿಯವರು ಅದನ್ನೇ ತೆಗೆದುಕೊಂಡಿದ್ದರು. ಥಿಯೇಟರು ಮೂರೇ ಫರ್ಲಾಂಗ್ ದೂರದಲ್ಲಿದ್ದುದೂ ಒಂದು ವಿಶೇಷ ಸೌಕರ್ಯವಾಗಿತ್ತು.

ಶಿವಮೊಗ್ಗೆ ಸೇರಿದಕೂಡಲೆ ಶ್ರೀಕಂಠಮೂರ್ತಿ ಹೊಸ ವ್ಯವಸ್ಥೆ ಮಾಡಿದ. ಮನೆಯ ಕೆಳಭಾಗದಲ್ಲಿ ಒಂದು ವಿಶಾಲವಾದ ತೊಟ್ಟಿ, ಮೂರು ದೊಡ್ಡ ರೂಮುಗಳಿದ್ದವು. ಅವುಗಳಲ್ಲಿ ನಟರು ಇರತಕ್ಕದೆಂದು ನಿಶ್ಚಯ ವಾಯಿತು ; ಮಹಡಿಯ ಮೇಲೆ ಅಷ್ಟೇ ಕಟ್ಟೋಣವಿತ್ತು. ಅಲ್ಲಿ ಮೊದಲನೆಯ ದೊಡ್ಡ ರೂಮಿನಲ್ಲಿ ಯಜಮಾನರು ಸರಸ್ವತಮ್ಮ, ಅದರ ಎದುರಿನ ರೂಮಿನಲ್ಲಿ ಯಜಮಾನರ ಕಛೇರಿ, ಅದರ ಆಚೆ ಈಚೆ ರೂಮುಗಳಲ್ಲಿ ಒಂದು ಮಂಜುಳನಿಗೆ ವಾಸಲಾಯಿತು ; ಇನ್ನೊಂದು ರೂಮಿನಲ್ಲಿ ಸುಧಾ, ಸುಂದರಿ, ಸುಬ್ಬುಲಕ್ಷ್ಮಿ, ನಾಗರತ್ನ ಇರತಕ್ಕದೆಂದು ಗೊತ್ತಾಯಿತು. ಯಜಮಾನರು ಆಫೀಸ್ ಮಾಡಿಕೊಂಡ ರೂಮಿಗೂ, ಮಂಜುಳನ ರೂಮಿಗೂ ಹೊರಗಡೆ ಬಾಗಿಲಿದ್ದುದಲ್ಲದೆ ಒಳಗಡೆಯೂ ಬಾಗಿಲಿತ್ತು. ಮಹಡಿಗೆ ಹತ್ತಿ ಹೋಗುವುದಕ್ಕೆ ಹೊರಗಡೆ ವರಾಂಡಾದಲ್ಲಿ ಮೆಟ್ಟಲಿದ್ದುದಲ್ಲದೆ ಮನೆಯ

ಹಿಂದೆಯೂ ಮೆಟ್ಟಲಿತ್ತು. ನಾಸಗೃಹದ ಹಿಂದೆ ಅಡಿಗೆಯ ಮನೆ, ಸ್ನಾನದ ಮನೆ, ಸಾದೆ, ಬೆರಣಿ ಹಾಕುವುದಕ್ಕೆ ಒಂದು ಪ್ರತ್ಯೇಕ ರೂಮೂ ಇದ್ದಿತು. ಮನೆಯ ಹಿಂದೆ ದೊಡ್ಡ ತೋಟವಿತ್ತು. ಆ ತೋಟದ ಒಂದು ಭಾಗವೇ ಮನೆಯಾಗಿ ಮಾರ್ಪಾಡಾಗಿದ್ದುದು.

ಶ್ರೀಕಂಠಮೂರ್ತಿ ಕಂಪನಿ ಜನಗಳ ಊಟದ ವ್ಯವಸ್ಥೆ ಸುಧಾರಿಸಲು ನಿಶ್ಚಯಿಸಿದ. ದಿನವೂ ಊಟಕ್ಕೆ ಒಂದು ತರಕಾರಿ ಮಾಡಲು ಅಡಿಗೆಯ ನಾರಾಯಣನಿಗೆ ಆಜ್ಞೆ ವಿಧಿಸಲಾಯಿತು.

ನಾಟಕದ ಆರಂಭದ ದಿನ ನಿಶ್ಚಯವಾದ ಕೂಡಲೆ ಕಂಪೆನಿಯ ಕಛೇರಿ ಯಿಂದ ಎಲ್ಲ ನಟನಟಿಯರಿಗೂ ಕೂಡಲೆ ಹೊರಟು ಬರಲು ಕಾಗದಗಳು ಹೋದವು.

ಮಂಜುಳನನ್ನು ಥಿಯೇಟರಿಗೆ ಕರೆಸಿಕೊಳ್ಳುವ ತೊಂದರೆ ಶ್ರೀಕಂಠ ಮೂರ್ತಿಗೆ ತಪ್ಪಿತು.

ಯಜಮಾನರಿಗೂ, ಮಂಜುಳನಿಗೂ ಬೆಳೆದಿದ್ದ ನೂತನ ಸಂಬಂಧವನ್ನು ಮೊದಲು ಪತ್ತೆ ಹಚ್ಚಿದವಳು ಸುಂದರಿ. ಸುದ್ದಿ ಹರಡಲು ಹೆಚ್ಚು ವೇಳೆ ಹಿಡಿಯಲಿಲ್ಲ. ಅಂದೇ ಮಧ್ಯಾಹ್ನ ಊಟಕ್ಕೆ ಕುಳಿತಾಗ ನಾಗರತ್ನ

"ನಮ್ಮ ಕಂಪೆನಿ ನಾಟ್ಯದೇವಿಯ ಮಂದಿರ - ಸುಬ್ಬುಲಕ್ಷ್ಮಿ" ಎಂದಳು.

"ಪೂಜಾಮಂದಿರ ನಾಗೂ."

"ದೇವಸ್ಥಾನಗಳಲ್ಲಿ ನಡೆಯುವುದೆಲ್ಲಾ ನಮ್ಮ ಕಂಪೆನಿಯಲ್ಲಿಯೂ ನಡೆ ಯುತ್ತದೆ" ಎಂದು ಸೇರಿಸಿದಳು ಸುಂದರಿ.

"ಹೋಗೇ – ದೇವಸ್ಥಾನಗಳಲ್ಲಿ ಎಲ್ಲಿಯಾದರೂ ತಾಯಿ, ಮಗಳನ್ನು ಒಬ್ಬರೇ ನೋಡಿಕೊಳ್ಳುತ್ತಾರೇನೇ" ಎಂದಳು ಸುಬ್ಬುಲಕ್ಷ್ಮಿ.

ಊಟಕ್ಕೆ ಕುಳಿತಿದ್ದ ಸುಧೆಯ ಕಣ್ಣುಗಳಲ್ಲಿ ನೀರು ತುಂಬಿ ಬಂದು ಅವಳೆದ್ದು ಹೋದಳು. ಮಂಜುಳ ತನ್ನ ಊಟ ಸಾವಕಾಶವಾಗಿ ಮುಗಿಸಿ ಕೊಂಡೇ ಎದ್ದಳು.

ಮಂಜುಳನ ಗಟ್ಟಿಗತನ ನೋಡಿ ಸುಂದರಿ, ನಾಗರತ್ನ, ಸುಬ್ಬುಲಕ್ಷ್ಮಿ ನಾಚಿದರು.

ಸಂಜೆ ಕಂಪೆನಿ ಮನೆಗೆ ರಾಜಶೇಖರ ಬರುವುದನ್ನೇ ಸುಧಾ ಕಾಯುತ್ತಿದ್ದಳು. ಅವನ ಮುಖ ಕಂಡೊಡನೆಯೇ

" ಇಲ್ಲಿ ಕೆಲಸವಿದೆಯೇ ನಿಮಗೆ " ಎಂದು ಕೇಳಿದಳು.

" ಕೆಲಸವೇನೂ ಇಲ್ಲ. ಯಜಮಾನರು ಕೆಲಸ ವಿಧಿಸಿಯಾರು ಎಂದು ಬಂದೆ."

" ರೂಮು ಎಲ್ಲಿ ಮಾಡಿದಿರಿ ?"

" ಇದರ ಹಿಂದಿನ ಬೀದಿಯಲ್ಲಿಯೇ ಒಳ್ಳೆಯ ರೂಮು ಸಿಕ್ಕಿದೆ."

" ನಡೆಯಿರಿ – ಅಲ್ಲಿಯೇ ಹೋಗಿ ಕುಳಿತುಕೊಳ್ಳೋಣ. ನಿಮ್ಮಲ್ಲಿ ನಾನು ಮಾತನಾಡಬೇಕಾದ ವಿಷಯವಿದೆ."

" ನನ್ನ ರೂಮಿಗೆ ಹೋಗುವುದು ಬೇಡ ಸುಧಾ ಇಲ್ಲಸಲ್ಲದ ಆಕ್ಷೇಪಣೆಗೆ ನಾವೇ ಎಡೆಕೊಟ್ಟಂತಾಗುತ್ತದೆ."

" ನಾನು ನಿಮ್ಮಲ್ಲಿ ಮಾತನಾಡಲೇಬೇಕಾಗಿದೆ."

" ಹೊಳೆಯ ದಂಡಗೆ ಹೋಗೋಣ – ಅಲ್ಲಿ ನಿರಾತಂಕವಾಗಿ ಮಾತನಾಡಬಹುದು."

ಸುಧಾ, ರಾಜಶೇಖರ ಹೊರಟು ಹೊಳೆಯ ದಂಡೆಗೆ ಬಂದು, ಮರಳಿನ ಮೇಲೆ ಕುಳಿತರು. ದಾರಿಯುದ್ದಕ್ಕೂ ಸುಧಾ ತುಟಿಪಿಟಕ್ಕೆಂದಿರಲಿಲ್ಲ. ಮರಳಿನ ಮೇಲೆ ಕುಳಿತು ಅವಳು ಮರಳನ್ನು ಅಳೆದು ಸುರಿದು ಮಾಡುತ್ತಿದ್ದಳೇ ವಿನಾ ಬಾಯಿಬಿಡಲಿಲ್ಲ.

" ಬಹಳ ಮಾತಾಡಬೇಕು ಎಂದು ಹೇಳಿದೆ."

" ಹೌದು."

ಎಂದವಳೇ ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು. ಅವಳ ದುಃಖದ ಕಾರಣ ವೇನೆಂಬುದು ರಾಜಶೇಖರನಿಗೆ ಗೊತ್ತಾಗಲಿಲ್ಲ.

" ಅಳಬೇಡ ಸುಧಾ. ಆದುದೇನು ಹೇಳು."

ಸುಧಾ ಅಳುನುಂಗಿ ಮನಸ್ಸನ್ನು ಹದಕ್ಕೆ ತಂದು ಕೊಳ್ಳಬೇಕಾದರೆ ಹತ್ತು ನಿಮಿಷ ಹಿಡಿಯಿತು.

"ನಾನು ಹೇಳುವುದನ್ನು ನೀವು ಸಾವಧಾನವಾಗಿ ಕೇಳಬೇಕು."

" ಬೇಡವೆಂದವರು ಯಾರು? ಏನು ಹೇಳಬೇಕೆಂದಿರುವೆ."

" ನನ್ನ ಕಥೆ – ನನ್ನ ಮನೆಯ ಕಥೆ."

" ಅದನ್ನು ನಾನು ಕೇಳುವುದು ಉಚಿತವೇ ಯೋಚಿಸು."

" ಯೋಚಿಸಿದ್ದೇನೆ. ನಿಮ್ಮಲ್ಲಿ ಹೇಳಿಕೊಳ್ಳದಿದ್ದರೆ ನನ್ನ ಹೃದಯ ಒಡೆದು ಹೋಗುತ್ತದೆ."

" ಮನಸ್ಸಿಗೆ ಅಷ್ಟು ವ್ಯಥೆ ಮಾಡಿಕೊಳ್ಳಬಾರದು."

" ಕತ್ತಲೆ – ಎಲ್ಲಿ ನೋಡಿದರೂ ಕತ್ತಲೆ. ನಿರಾಶೆಯಿಂದ ನಾನು ಬುದ್ಧಿ ಶೂನ್ಯಳಾಗಿದ್ದೇನೆ."

" ಭಗವಂತ ಇದ್ದಾನೆಂದು ನಂಬುವೆಯಾ ಸುಧಾ."

" ನಂಬುತ್ತಿದ್ದೆ. ನನ್ನ ನಂಬಿಕೆಯ ಬುಡ ಅಲುಗಾಡಿ ಹೋಗಿದೆ."

" ಸಂದೇಹ, ಭ್ರಾಂತಿ, ನಿರಾಶೆ ಮನಸ್ಸನ್ನು ಮುಸುಕುತ್ತವೆ. ಅವುಗಳಿಗೆ ತುತ್ತಾಗದೆ ಮನಸ್ಸಿನ ಶುಭ್ರತೆಯನ್ನು ರಕ್ಷಿಸಿಕೊಂಡು ಹೋಗುವುದೇ ಭಗವದ್ಭಕ್ತಿಯ ಲಕ್ಷಣ."

" ನನ್ನ ಕಥೆ ಕೇಳಿದ ಮೇಲೆ ಈ ಮಾತು ನೀವು ಹೇಳಿದರೆ ನಾನು ಒಪ್ಪಿಕೊಳ್ಳುತ್ತೇನೆ. ಮಳೆಯಲ್ಲಿ ಓಡಿಯಾಡಿದರೂ ತೋಯಿಸಿಕೊಳ್ಳಬಾರದು ಎಂದು ಹೇಳುವುದರಲ್ಲಿ ಏನರ್ಥ ? ."

" ರೇನ್ ಪ್ರೂಫ್ ಕೋಟ್ (Rainproof Coat) ಹಾಕಿಕೊಂಡು ಛತ್ರಿ ಹಿಡಿದು ಕೊಂಡರೆ ತೋಯಿಸಿಕೊಳ್ಳದಂತೆ ಮಳೆಯಲ್ಲಿ ಓಡಿ ಯಾಡುವುದು ಸಾಧ್ಯ."

" ನಮಗೆ ರೇನ್ ಪ್ರೂಫ್ ಕೋಟು, ಛತ್ರಿ ತಂದು ಕೊಡುವವರು ಯಾರು ? ."

" ಯಾರೂ ತಂದು ಕೊಡಬೇಕಾದದ್ದಿಲ್ಲ. ಅದು ಮನೆಯಲ್ಲಿಯೇ ಇರುತ್ತದೆ. ಅದನ್ನಿಟ್ಟಿರುವ ಜಾಗವನ್ನು ನಾವು ಮರೆತುಬಿಟ್ಟಿದ್ದೇವೆ."

" ನೀವು ನಿಜ ಹೇಳುತ್ತಿರುವಿರಾ ? ,"

" ಏಕೆ ಹಾಗೆ ಕೇಳುವೆ ?."

" ನನ್ನನ್ನು ಸಮಾಧಾನ ಮಾಡುವುದಕ್ಕೆ ಸುಳ್ಳು ಹೇಳುತ್ತಿಲ್ಲವಷ್ಟೆ ? "

" ಸುಳ್ಳಿನ ಸಮಾಧಾನ ಸಮಾಧಾನವಲ್ಲವೆನ್ನುವುದನ್ನು ನಾನು ಬಲ್ಲೆ,"

" ನನ್ನ ತಂದೆ ನನ್ನ ತುಂಬ ಪ್ರೀತಿಸುತ್ತಿದ್ದರು . . . "

ಎಂದು ತನ್ನ ತಂದೆಯ ವೃತ್ತಾಂತವನ್ನು ನಿರೂಪಿಸಿ.

" ಕೊನೆಕೊನೆಗೆ ಅವರ ಸ್ವಭಾವವೇ ಬದಲಾಯಿಸುತ್ತಾ ಬಂತು. ನನ್ನನ್ನು ದುರುಗುಟ್ಟಿಕೊಂಡು ನೋಡಲಾರಂಭಿಸಿದರು. ಒಂದು ದಿನ ತಂದೆ ಕುಡಿದು ಬಂದಿದ್ದರು. ಅವರಿಗೂ ನನ್ನ ತಾಯಿಗೂ ಮಾತಿಗೆ ಮಾತು ಬೆಳೆದು ವ್ಯಾಜ್ಯಕ್ಕಾರಂಭವಾಯಿತು. ಸುಧಾ ಎಚ್ಚರವಾಗಿದ್ದಾಳೆ. ಎಚ್ಚರದಿಂದ ಮಾತನಾಡಿ ಎಂದು ತಾಯಿ ಹೇಳಿದಳು. ನನ್ನ ತಂದೆ ತಿರಸ್ಕಾರದಿಂದ ನಕ್ಕೂ–ಸುಧಾ ನಿಜವಾಗಿ ನನ್ನ ಮಗಳೇನು ? ಎಂದು ಕೇಳಿದರು."

" ನಿನ್ನ ತಂದೆ ಬಾಯಿ ಅಷ್ಟು ಹಗುರವಾಗಲು ಏನು ಕಾರಣ ? '

" ನನ್ನ ತಾಯಿಯೇ ಕಾರಣ. ನನ್ನ ತಂದೆ ಬದುಕಿದ್ದಾಗಲೇ ಮನೆಗೆ ಯಾರು ಯಾರನ್ನೋ ಬರಮಾಡಿ ಕೊಳ್ಳುತ್ತಿದ್ದಳು. ಅವರು ಹೋದ ಮೇಲಂತೂ ಸರಿಯೇ ಸರಿ."

ಎಂದು ಮಂಜಯ್ಯ, ನಂಜಪ್ಪ, ರಾಮರಾಜಪ್ಪ, ಪೀತಾಂಬರರಾಯ, ಶ್ರೀರಂಗರಾಯ, ಇವರ ಸಂಬಂಧ ಸರಸ್ವತಮ್ಮ ಬೆಳೆಸಿದುದನ್ನು ಕೂಲಂಕಷವಾಗಿ ವರ್ಣಿಸಿ

" ಈಗ ನಡೆಯುತ್ತಿರುವುದಂತೂ ನಿಮಗೆ ಗೊತ್ತೇ ಇದೆ."

" ಯಜಮಾನರ ವಿಷಯ ತಾನೇ."

" ಯಜಮಾನರ ವಿಷಯ ಬಹಳ ಮುಂದಕ್ಕೆ ಹೋಗಿದೆ."

" ಏನದು ?"

" ಮಂಜುಳಕ್ಕ ಈಗ ಯಜಮಾನರ ಪ್ರೇಯಸಿ."

ರಾಜಶೇಖರ ಮಾತನಾಡಲಿಲ್ಲ. ಅವನ ಹೃದಯದಲ್ಲಾದ ಉತ್ಕಟ ವೇದನೆ ಮುಖದ ಮೇಲೆ ಕಾಣಿಸಿಕೊಂಡಿತು. ಅರೆಕ್ಷಣದಲ್ಲಿ ಅವನ ಮುಖ ನೋವಿನಿಂದ ವಿಕಾರಗೊಂಡಿತು.

" ನಿರಾಶೆಯ ಕಗ್ಗತ್ತಲು ನಿನ್ನನ್ನು ವ್ಯಾಪಿಸಿರುವುದು ಆಶ್ಚರ್ಯವಲ್ಲ ಸುಧಾ."

" ಹಾಳು ಕಣ್ಣುಗಳನ್ನು ದೇವರು ನಮಗೇಕೆ ಕೊಟ್ಟ !"

" ಲೋಕದಲ್ಲಿರುವ ಕೆಟ್ಟದ್ದು, ಒಳ್ಳೆಯದು ಎರಡನ್ನೂ ನೋಡುವುದಕ್ಕೆ."

" ಒಳ್ಳೆಯದೆಂಬುದು ನನ್ನ ಕಣ್ಣಿಗೆ ಬಿದ್ದೇ ಇಲ್ಲ."

" ಹಾಗೇಕನ್ನುವೆ. ನಾಟಕಕ್ಕೆ ಬರುವ ಎಷ್ಟೋ ಮಂದಿ ನಾಟಕದ ಪಾತ್ರಗಳ ಕಷ್ಟ ಕಂಡು ಕಣ್ಣೀರ್ಗರೆಯುವುದನ್ನು ನೀನು ನೋಡಿಲ್ಲವೆ ?"

" ಅದು ನಾಟಕದ ಕಣ್ಣೀರು."

" ಅಲ್ಲ – ಕಲೆಯ ಕಣ್ಣೀರು ! ನಾಟಕಕಲೆ ದೈವಿಕವಾದುದೆನ್ನುವುದನ್ನು ಸ್ಥಾಪಿಸುವ ಸಾಕ್ಷಿ."

" ಇಷ್ಟು ಹೊಲಸು ನೋಡಿ ನಿಮ್ಮ ಮಾತು ಹೇಗೆ ನಂಬಲಿ."

" ನಾಟಕದವರು ಅಯೋಗ್ಯರಾದರೆ ನಾಟಕವೂ ಅಯೋಗ್ಯವಾಗುತ್ತದೆಯೇ ? "

" ನನ್ನನ್ನೇನು ಮಾಡೆನ್ನುವಿರಿ ? "

" ನಿನ್ನ ಕಥೆ ನಾನು ಕೇಳಿದ ಮೇಲೆ, ನನ್ನ ಕಥೆ ಹೇಳಲೇ ಬೇಕು."

" ಕಡ್ಡಾಯವೇನೂ ಇಲ್ಲ. ನೀವು ಅದಕ್ಕಾಗಿ ಹೇಳಬೇಡಿ."

" ಇಲ್ಲ ಸುಧಾ – ಸಹೃದಯ ಜೀವಿಗೆ ಹೇಳಿಕೊಳ್ಳದೆ ಇರಲಾರೆ. ಕೇಳು - ನಮ್ಮ ತಾಯಿ ತಂದೆಗೆ ನಾನೂ, ನನ್ನ ಅಕ್ಕ ಮಹಾದೇವಮ್ಮ ಇಬ್ಬರೇ ಮಕ್ಕಳು. ನಾನು ಚಿಕ್ಕವನಾಗಿದ್ದಾಗಲೇ ತಂದೆ ತೀರಿಕೊಂಡರು. ಆ ವೇಳೆಗೆ ಅಕ್ಕನ ಲಗ್ನವಾಗಿ ಅವಳು ಗಂಡನ ಮನೆಯಲ್ಲಿದ್ದಳು. ತಂದೆ ತೀರಿಕೊಂಡ ಮೇಲೆ ಅಕ್ಕ ನನ್ನನ್ನೂ ನನ್ನ ತಾಯಿಯನ್ನೂ ಕರೆದೊಯ್ದು ತನ್ನ ಮನೆಯಲ್ಲಿಯೇ ಇಟ್ಟುಕೊಂಡಳು. ತಾಯಿ ಹೆಚ್ಚು ದಿನ ಬದುಕಲಿಲ್ಲ; ಅಕ್ಕನೇ ನನ್ನ ಸಾಕಿ ಸಲಹಿದಳು.

" ನನ್ನ ಭಾವ ಬಸಪ್ಪ ಬೂದಲೂರಿನಲ್ಲಿ ಭಾರೀ ಶ್ರೀಮಂತ. ಜೀವನವನ್ನು ಸಾಮಾನ್ಯವಾಗಿ ಆರಂಭಿಸಿ ಹೇರಳವಾಗಿ ಹಣ ಗಳಿಸಿದ್ದ. ಅವನು ನಮ್ಮ ಸಂಬಂಧ ಬೆಳಸುವುದಕ್ಕೆ ಅಕ್ಕನ ರೂಪವೇ ಕಾರಣವಾಗಿತ್ತು. ತಾನೇ ಬಂದು ಹೆಣ್ಣು ಕೇಳಿ, ಎರಡು ಕಡೆಯ ಖರ್ಚನ್ನೂ ಇಟ್ಟು ಲಗ್ನ ಮಾಡಿಕೊಂಡ.

"ಅಕ್ಕ ಗಂಡನ ಮನೆ ಸೇರಿದ ಮೇಲಂತೂ ಭಾವನ ಸಂಪತ್ತು ಮತ್ತಷ್ಟು ಹೆಚ್ಚಿತು. ಅಕ್ಕನನ್ನು ನನ್ನ ಭಾವ ದೇವತೆಯಂತೆ ಪೂಜಿಸುತ್ತಿದ್ದ. ಅದಕ್ಕೆ ಅಕ್ಕ ಅರ್ಹಳೆಂಬುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಲಗ್ನವಾಗಿ ಅನೇಕ

ವರ್ಷಗಳಾಗಿದ್ದರೂ ಆಕೆ ಹೊಸಿಲು ದಾಟಿ ಹೊರಗೆ ಕಾಲಿಟ್ಟಿರಲಿಲ್ಲ. ಆಕೆಯನ್ನು ಊರಿನಲ್ಲಿ ನೋಡಿದ್ದವರೇ ವಿರಳ.

"ಭಾವನಿಗೊಬ್ಬ ಅಣ್ಣನಿದ್ದ. ಸಿದ್ದಪ್ಪ. ಅದೇ ಊರಿನಲ್ಲಿ-ಮಾಡಬಾರದ್ದು ಮಾಡಿ, ನಿರ್ಗತಿಕರ ಆಸ್ತಿಪಾಸ್ತಿಯನ್ನೆಲ್ಲಾ ದೋಚಿ ಅವನೂ ಶ್ರೀಮಂತನಾಗಿದ್ದ. ಅಣ್ಣನೆಂದರೆ ಖಾಸಾ ಅಣ್ಣನಲ್ಲ. ದೊಡ್ಡಪ್ಪನ ಮಗ. ಭಾವನ ಮನೆಯವರಿಗೂ ಅವನ ಅಣ್ಣನ ಮನೆಯವರಿಗೂ ಯಾವ ವಹಿವಾಟೂ ಇರಲಿಲ್ಲ; ಒಬ್ಬರ ಮನೆಗೊಬ್ಬರು ಬಂದು ಹೋಗುತ್ತಿರಲಿಲ್ಲ. ಭಾವನಂತೂ ಈ ಅಣ್ಣನ ಹೆಸರು ಹೇಳಿದರೆ ಉರಿದು ಬೀಳುತ್ತಿದ್ದ.

"ಅಕ್ಕನಿಗೂ ಇಬ್ಬರು ಮಕ್ಕಳು. ಪರಮಶಿವ – ಮಗ; ಕಾಮಾಕ್ಷಿ – ಮಗಳು. ಅಕ್ಕ ಹೊರಗಡೆಯ ಸಂಬಂಧ ಮಾಡಲಿಚ್ಛಿಸದೆ ತನ್ನ ಮಗಳನ್ನು ನನಗೆ ಕೊಟ್ಟು ಲಗ್ನಮಾಡಿದಳು."

"ನಿಮಗೆ ಲಗ್ನವಾಗಿತ್ತೇ ?"

"ಮುಂದೆ ಕೇಳು - ಅಕ್ಕನ ಸೌಂದರ್ಯ ನನ್ನ ಹೆಂಡತಿಗೆ ಇರದಿದ್ದರೂ ಅವಳೂ ರೂಪವತಿಯಾಗಿದ್ದಳು. ಲಗ್ನವಾದಾಗ ನಾನೂ ನನ್ನ ಭಾವ ಮೈದುನ ಇಬ್ಬರೂ ತುಮಕೂರು ಹೈಸ್ಕೂಲಿನಲ್ಲಿ ಓದುತ್ತಿದ್ದೆವು. ಮೆಟ್ರಿಕ್ ಪರೀಕ್ಷೆ ಮುಗಿದ ಮೇಲೆ ನಾನು ಬೆಂಗಳೂರಿಗೆ ಹೋಗಿ ಇಂಟರ್ ಕಾಲೇಜ್ ಸೇರಿದೆ. ಹೈಸ್ಕೂಲಿನಲ್ಲಿದ್ದಾಗಲೇ ನನಗೆ ಬರೆಯುವ ಗೀಳು. ನಾನೇ ನಾಟಕ ಬರೆದು, ಶಾಲೆಯಲ್ಲಿ ಆಡಿಸುತ್ತಿದ್ದೆ. ನನ್ನ ಭಾವ ಮೈದುನನೂ ಪಾರ್ಟು ವಹಿಸುತ್ತಿದ್ದ. ಅವನಿಗೂ ನನ್ನ ಹಾಗೇ ನಾಟಕದ ಗೀಳು. ಬೆಂಗಳೂರಿಗೆ ನಾನು ಬಂದಮೇಲೆ ನನ್ನ ಬರವಣಿಗೆಗೆ ಪುಟ ಸಿಕ್ಕಿತು. ಅಲ್ಲಿ ಒಂದು ಅನುಚೂರು ಕಂಪೆನಿ ಸ್ಥಾಪಿಸಿ ನನ್ನ ನಾಟಕಗಳನ್ನೇ ಆಡಿಸುತ್ತಿದ್ದೆ – ಭಾವ ಮೈದುನನನ್ನು ಪಾರ್ಟು ಮಾಡುವುದಕ್ಕೆ ತುಮಕೂರಿನಿಂದ ಕರೆಸಿಕೊಳ್ಳುತ್ತಿದ್ದೆ.

"ಬೆಂಗಳೂರಿನಲ್ಲಿ ನನ್ನ ಪರೀಕ್ಷೆ ನಡೆಯುತ್ತಿದೆ – ತುಮಕೂರಿನಲ್ಲಿ ನನ್ನ ಭಾವಮೈದುನನ ಪರೀಕ್ಷೆ ನಡೆಯುತ್ತಿದೆ. ಊರಿನಿಂದ ನನಗೆ ಟೆಲಿಗ್ರಾಮ್ ಬಂತು – ಭಾವ ತುಂಬ ಖಾಯಿಲೆ – ಕೂಡಲೆ ಹೊರಟು ಬರುವುದು ಎಂದು. ಊರಿಗೆ ಕೂಡಲೆ ಹೋದೆ – ಭಾವನ ಕಥೆ ಮುಗಿದು ಹೋಗಿತ್ತು. ಸ್ಕೂಲಿಗೆ

ರಜವೂ ಬಂದಿತು. ರಜಾ ಮುಗಿದ ಮೇಲೆ ನಾನೂ, ಭಾವಮೈದುನ ಇಬ್ಬರೂ ಶಾಲೆ ಸೇರುವುದಕ್ಕೆ ಹೋದೆವು.

"ಯಾವ ವ್ಯವಹಾರವನ್ನೂ ತಿಳಿಯದೆ – ಮನೆಯಲ್ಲಿಯೇ ಅಡಗಿ ಕುಳಿತಿದ್ದ ಅಕ್ಕ ಹೊರಗೆ ಬರಬೇಕಾಯಿತು. ಸನ್ನಿವೇಶವನ್ನು ಅವಳು ಧೈರ್ಯವಾಗಿ ಎದುರಿಸಿದಳೆಂದೇ ಹೇಳಬೇಕು. ಸಾಲಗಾರರನ್ನು, ರೈತರನ್ನು ಬರಮಾಡಿಕೊಂಡು ಆಸ್ತಿಯ ಸ್ಥಿತಿಗತಿಯನ್ನು ವಿಚಾರಿಸಿ ತಿಳಿದುಕೊಂಡಳು.

" ಇದೇ ಸಂದರ್ಭದಲ್ಲಿ ಅಕ್ಕ, ಸಿದ್ದಪ್ಪನ ನೆರವು ಪಡೆಯಬೇಕಾಯಿತು.

" ನಾನೂ, ನನ್ನ ಭಾವಮೈದುನ ನವರಾತ್ರಿ ರಜಕ್ಕೆ ಊರಿಗೆ ಹೋದಾಗ ಅವನು ನಮ್ಮ ಮನೆಗೆ ಬಂದು ಹೋಗುತ್ತಿದ್ದುದನ್ನು ಕಂಡೆವು. ಅವನೂ ಮರ್ಯಾದೆಯಾಗಿಯೇ ನಡೆದುಕೊಳ್ಳುತ್ತಿದ್ದ. ಆದರವನು ಉದ್ದೇಶಪೂರ್ವಕವಾಗಿ ನನ್ನ ಭಾವಮೈದುನನ ಸ್ನೇಹ ಬೆಳಸುತ್ತಿದ್ದುದನ್ನು ನಾನು ಕಂಡೆ. ಆ ಬಗ್ಗೆ ಒಂದೆರಡು ಸಲ ಅಕ್ಕನಲ್ಲಿ ಪಸ್ತಾಪಿಸಿದಾಗ ' ಹೌದಪ್ಪ. ಈಗ ನಮಗೆ ಅವರ ಸಹಾಯ ಬೇಕು. ಅವರನ್ನು ದೂರಮಾಡಿಕೊಳ್ಳಲು ಸಾಧ್ಯವಿಲ್ಲ ' ಎಂದು ಹೇಳಿದಳು. ಆ ವಿಷಯಕ್ಕೆ ನಾನೂ ವಿಶೇಷ ಮಹತ್ವವನ್ನಾಗಲಿ ಲಕ್ಷ್ಯವನ್ನಾಗಲಿ ಕೊಡಲಿಲ್ಲ.

" ಕ್ರಿಸ್‌ಮಸ್ ರಜಕ್ಕೆ ನಾವು ಊರಿಗೆ ಬಂದೆವು. ನನ್ನ ಭಾವಮೈದುನ ಓದುವುದು ಸಾಕು, ನಾನು ಊರಿನಲ್ಲಿಯೇ ಇರುತ್ತೇನೆ ಎಂದು ಹೇಳಿದ. ನಾನೊಬ್ಬನೇ ಬೆಂಗಳೂರಿಗೆ ಹೋದೆ.

" ನಾನು ಪರೀಕ್ಷೆ ಮುಗಿಸಿಕೊಂಡು ಮಾರ್ಚಿ ತಿಂಗಳು ಕೊನೆಯಲ್ಲಿ ಊರಿಗೆ ಹೋದಾಗ ಮನೆಯ ಲಕ್ಷಣವೇ ಬದಲಾಯಿಸಿತ್ತು. ನನ್ನ ಭಾವಮೈದುನ ಮನೆಗೇ ಬರುತ್ತಿರಲಿಲ್ಲ – ಬಂದರೂ ಬಹಳ ಹೊತ್ತು ನಿಲ್ಲುತ್ತಿರಲಿಲ್ಲ.

" ಸಿದ್ದಪ್ಪ ಮನೆಗೆ ಬಂದರೆ ಬಾಗಿಲು ಮರೆಯಲ್ಲಿ ನಿಂತು ಮಾತನಾಡುತ್ತಿದ್ದ. ಅಕ್ಕ ಧೈರ್ಯವಾಗಿ ಅವನ ಎದುರಿಗೆ ಕುಳಿತು ಮಾತನಾಡುವುದನ್ನ ಕಂಡೆ. ಮೊದಮೊದಲು ಅದಕ್ಕೂ ನಾನು ಅಷ್ಟು ಗಮನಕೊಡಲಿಲ್ಲ.

" ಅಕ್ಕನ ಮಗ ದಾರಿ ಹಿಡಿದಿದ್ದುದೂ ಗೊತ್ತಾಯಿತು. ಒಬ್ಬ ಬೇಡಿತಿಯನ್ನು ಗಂಟು ಹಾಕಿಕೊಂಡು ಅವಳ ಮನೆಯಲ್ಲಿ ಕಾಲಹರಣ ಮಾಡುತ್ತಿದ್ದ.

ಅವನನ್ನು ದಾರಿಗೆ ತರಬೇಕೆಂದು ನಾನು ಪ್ರಯತ್ನಿಸಿದೆ. ಭಾವಮೈದುನನಿಗೂ ನನಗೂ ವ್ಯಾಜ್ಯವಾಗಿ ಮನಸ್ತಾಪಕ್ಕೆ ಕಾರಣವಾಯಿತು.

"ಊರಿನ ಜನ ಬಾಯಿಗೆ ಬಂದಂತೆ ಮಾತನಾಡಿಕೊಳ್ಳುತ್ತಿದ್ದರು. ಅಕ್ಕನಿಗೂ, ಸಿದ್ದಪ್ಪನಿಗೂ ಗಂಟು ಹಾಕಿದ್ದರು. ಅಕ್ಕನನ್ನು ದೇವತೆಯೆಂದು ಭಾವಿಸುತ್ತಿದ್ದ ಜನರೇ ಈ ಮಾತನ್ನು ಆಡಬೇಕಾದರೆ ಸ್ವಲ್ಪವಾದರೂ ಸತ್ಯವಿರಬೇಕೆಂದು ನಾನು ಭಾವಿಸಿ ಹೊಂಚುಕಾದು ನೋಡಿದೆ. ಜನರ ಆಪಾದನೆಯಲ್ಲಿ ಏನೂ ಸುಳ್ಳು ಇರಲಿಲ್ಲ. ಅವನು ಹಿಂಬಾಗಿಲನಲ್ಲಿ ರಾತ್ರಿ ಬಂದು, ನಮ್ಮ ಮನೆಯಲ್ಲಿದ್ದು ಬೆಳಗಾಗುವ ಮುನ್ನ ಎದ್ದು ಹೋಗುತ್ತಿದ್ದ.

"ನನ್ನ ಸ್ಥಿತಿಗತಿ ಏನಾಗಿರಬಹುದೆಂದು: ನೀನೇ ಯೋಚಿಸಿ ನೋಡು. ಧೈರ್ಯ ತಂದುಕೊಂಡು ಅಕ್ಕನೊಂದಿಗೆ ವಿಷಯ ಪ್ರಸ್ತಾಪಿಸಿದೆ. ಅವಳು ಹುಲಿಯ ಹಾಗೆ ಮೇಲೆ ಬಿದ್ದು 'ನನ್ನ ಮನೆಯಲ್ಲಿರಬೇಡ – ಹೊರಡು' ಎಂದಳು. ಅದೇ ದಿನ ನಾನು ಹೆಂಡತಿಯನ್ನು ಕರೆದುಕೊಂಡು ಬೆಂಗಳೂರು ಸೇರಿದೆ. ನಮ್ಮ ಸಂಸಾರಕ್ಕಾಗುವಷ್ಟು ಹಣವನ್ನು ಅಕ್ಕ ಪ್ರತಿ ತಿಂಗಳು ಕಳಿಸಿಕೊಡುತ್ತಿದ್ದಳು. ಬಡತನದಲ್ಲಿ ನಾವು ಸಂಸಾರ ಸಾಗಿಸಿದ್ದೆವು – ನನ್ನ ಓದೂ ಸಾಗಿತ್ತು.

"ಐದಾರು ತಿಂಗಳು ಹೇಗೆ ಕಳೆದಿರಬಹುದು. ಒಂದು ದಿನ ಸಂಜೆ ನಾನು ಮನೆಗೆ ಹೋಗುತ್ತೇನೆ – ತಲೆಬಾಗಿಲಿಗೆ ಬೀಗ ಹಾಕಿದೆ. ನನ್ನ ಹೆಂಡತಿ ಅಕ್ಕಪಕ್ಕದವರ ಮನೆಗೆ ಹೋಗಿರಬಹುದೆಂದು ಕಾದು ನೋಡಿದೆ. ಒಂಭತ್ತು ಗಂಟೆಯಾದರೂ ಅವಳ ಸುಳಿವಿಲ್ಲ. ಬೀಗ ಒಡೆದು ಒಳಕ್ಕೆ ಪ್ರವೇಶಿಸಿದೆ. ಅವಳು ಒಂದು ಕಾಗದ ಬರೆದಿಟ್ಟಿದ್ದಳು – ತಾಯಿಯ ಬಳಿಗೆ ಹೋಗುವುದಾಗಿಯೂ, ನಾನು ಅವಳನ್ನು ಹುಡುಕುವ ಕಾರಣವಿಲ್ಲವೆಂದೂ ಒಕ್ಕಣಿಸಿತ್ತು.

"ಮಾರನೆಯ ದಿನ ಅಕ್ಕನ ಊರಿಗೆ ಹೋದೆ. ಆ ವೇಳೆಗೆ: ಸಿದ್ದಪ್ಪ ಅಕ್ಕನ ಮನೆಯ ಯಜಮಾನ್ಯ ವಹಿಸಿದ್ದ. ಬೆಂಗಳೂರಿಗೆ ಬಾರೆಂದು ನನ್ನ ಹೆಂಡತಿಯನ್ನು ಕರೆದೆ ; ಅವಳು ಬರುವುದಿಲ್ಲವೆಂದಳು. ಹೊಸ ಯಜಮಾನನಿಗೂ ನನಗೂ ಮಾತುಕತೆಯಾಯಿತು – ಅವನು ಕತ್ತು ಹಿಡಿದು ನನ್ನನ್ನು ಮನೆಯಿಂದಾಚೆ ದಬ್ಬಿದ. ಅಲ್ಲಿಗೆ ಅಕ್ಕನ ಋಣ – ದಾಂಪತ್ಯ ಋಣ ಎಲ್ಲಾ ನನಗೆ ತೀರಿಹೋಯಿತು."

" ನಿಮ್ಮ ಭಾವಮೈದುನನ ಗತಿಯೇನಾಯಿತು ? "

" ಜೂಜು, ಕುಡಿತ, ಸೂಳೆಗಾರಿಕೆ ಎಲ್ಲವೂ ಅವನಿಗೆ ಕ್ರಮವಾಗಿ ಪಾಠವಾಯಿತು. ಆಸ್ತಿಯನ್ನು ಪೋಲು ಮಾಡಿ ಹಾಳುಮಾಡುತ್ತಾನೆಂದು ಹೊಸ ಯಜಮಾನ ಅಕ್ಕನನ್ನು ಒಪ್ಪಿಸಿ ಆಸ್ತಿಯನ್ನೆಲ್ಲಾ ತನ್ನ ಹೆಸರಿಗೆ ಮಾಡಿಸಿಕೊಂಡ. ನನ್ನ ಭಾವಮೈದುನನಿಗೆ ನಾಟಕದ ಕಂಪೆನಿಯ ಒಂದು ಹುಡುಗಿಯ ಸ್ನೇಹಮಾಡಿಸಿ ಊರು ಬಿಟ್ಟು ಹೊರಡಿಸಿದ."

" ನಿಮ್ಮ ಹೆಂಡತಿ ಏನಾದಳು ? "

" ಕಾಲಕ್ರಮೇಣ ಅವಳು ಹೊಸ ಯಜಮಾನನ ಸೂಳೆಯಾದಳು. ಅಕ್ಕನಿಗೂ ಅವಳಿಗೂ ಕುಡಿಯುವುದೂ ಅಭ್ಯಾಸವಾಯಿತು. ಈ ಮಧ್ಯೆ ಮನೆಯಲ್ಲಿ ಏನು ಹಗರಣವಾಯಿತೋ ಕಾಣೆ. ನನ್ನ ಹೆಂಡತಿ ಒಂದು ದಿನ ಕೈಗೆ ಸಿಕ್ಕಿದ ಸೀರೆ, ಒಡವೆಗಳ ಗಂಟು ಕಟ್ಟಕೊಂಡು ಮನೆಯಿಂದ ಪರಾರಿಯಾಗಿದ್ದಳು. ಅಕ್ಕ, ಸಿದ್ದಪ್ಪ ಶೋದನೆಯ ಕ್ರಮ ಜರುಗಿಸಿದರು. ಅವಳ ಪತ್ತೆ ಸಿಗಲಿಲ್ಲ."

" ಮುಂದೆ ನಿಮ್ಮ ಅಕ್ಕಾವರ ಗತಿ ? "

" ಅಧೋಗತಿ. ಆ ನೀಚ ಇಷ್ಟು ಅನರ್ಥಮಾಡಿದ್ದು ಸಾಲದೆಂದು ನಮ್ಮಕ್ಕನನ್ನು ಮನೆ ಬಿಟ್ಟು ಹೊರದೂಡಿದ "

" ಅವರ ಗತಿ ?"

" ಸೂಳೆಗೇರಿ. ನಮ್ಮಕ್ಕ ಜಾತ್ರೆ ಸೂಳೆಯಾದಳು."

" ಈಗಲೂ ಅವರು ಇದ್ದಾರೆಯೇ ?"

" ಕಲ್ಲು ಗುಂಡಿನ ಹಾಗಿದ್ದಾಳೆ. ನಮ್ಮೂರಿನ ಹೆಂಡದಂಗಡಿ ಬಳಿಗೆ ಹೋದರೆ ತಪ್ಪದೆ ಅವಳ ದರ್ಶನ ಪಡೆಯಬಹುದು."

" ಅವರನ್ನು ರಕ್ಷಿಸುವುದಕ್ಕೆ ನೀವು ಪ್ರಯತ್ನಿಸಲಿಲ್ಲವೇ ?"

" ಎಲ್ಲಾ ಪ್ರಯತ್ನವೂ ನಿಷ್ಫಲವಾಯಿತು. ಊರು ಬಿಟ್ಟು ತಾವು ಎಲ್ಲಿಗೂ ಬರುವುದಿಲ್ಲವೆಂದು ಹೇಳಿದರು."

" ಭಾವನ ಅಣ್ಣ ಏನಾದ ?"

" ಸೊಗಸಾಗಿದ್ದಾನೆ. ಆ ಊರಿನ ಮ್ಯುನಿಸಿಪಲ್ ಕೌನ್ಸಿಲರ್ ಆದ. ಈಗವನೇ ಮ್ಯುನಿಸಿಪಲ್ ಪ್ರೆಸಿಡೆಂಟ್."

ಸುಧಾ ಮೌನ ತಳೆದು ಸ್ವಲ್ಪ ಹೊತ್ತು ಕುಳಿತಳು. ಕತ್ತಲೆ ಕವಿದಿದ್ದರೂ ಅವಳ ಗಮನಕ್ಕೆ ಬಂದಿರಲಿಲ್ಲ.

"ಕೊನೆಗೂ ನಿಮ್ಮ ಹೆಂಡತಿ, ಭಾವಮೈದುನ ಎಲ್ಲಿದ್ದಾರೆ, ಏನು ಮಾಡುತ್ತಿದ್ದಾರೆಂದು ನಿಮಗೆ ಗೊತ್ತಾಗಲಿಲ್ಲವೇ ?"

"ಆರೆಂಟು ತಿಂಗಳು ನಾನು ಅದೇ ಕೆಲಸಮಾಡಿದೆ ಸುಧಾ. ಊರೂರು ಅಲೆದೆ – ಕಂಡಕಂಡವರನ್ನು ಕೇಳಿದೆ. ನಾಟಕದ ಕಂಪೆನಿಗಳನ್ನೆಲ್ಲಾ ಶೋಧಿಸಿದೆ. ಅವರ ಪತ್ತೆ ಸಿಕ್ಕಲಿಲ್ಲ – ಅವರು ಜೀವಂತರಾಗಿದ್ದಾರೆಯೋ ಇಲ್ಲವೋ ಅದೂ ನನಗೆ ಗೊತ್ತಿಲ್ಲ."

"ಲೋಕದಲ್ಲಿ ಇನ್ನೂ ಸತ್ಯ, ಧರ್ಮ ಇದೆಯೆಂದು ಹೇಳುವಿರಲ್ಲಾ - !"

"ಇದೆ ಸುಧಾ."

"ನಾವಿಬ್ಬರೂ ಒಂದೇ ದೋಣಿಯಲ್ಲಿ ತೇಲುತ್ತಿದ್ದೇವೆ."

"ತೇಲುತ್ತಿದ್ದೇವೆಯೋ ಮುಳುಗುತ್ತಿದ್ದೇವೆಯೋ ಅಂತೂ ಒಂದೇ ದೋಣಿಯಲ್ಲಿದ್ದೇವೆ."

"ಕಂಪೆನಿಯಲ್ಲಿ ನಾವಿನ್ನೂ ಇರಬೇಕೆನ್ನುವಿರಾ ?"

"ಹೋಗುವ ಕಾಲ ಬರುತ್ತದೆ. ಅಲ್ಲಿಯವರೆಗೆ ನಾವು ಸಹನೆ ತಂದುಕೊಳ್ಳಬೇಕು."

"ನನ್ನನ್ನು ಈ ನರಕಕೂಪದಿಂದ ಮೇಲಕ್ಕೆತ್ತುವುದಿಲ್ಲವೇ ?"

"ಒಂದೇ ಕೂಪದಲ್ಲಿ ಇಬ್ಬರೂ ಬಿದ್ದಿದ್ದೇವೆ - ನಮ್ಮ ಶಕ್ತಿ, ಸಾಹಸ, ತಪಸ್ಸಿನ ಪ್ರಭಾವದಿಂದ ನಾವು ಮೇಲಕ್ಕೇಳಬೇಕು."

"ನೀವು ಏನು ಮಾಡಬೇಕೆಂದಿರುವಿರಿ ?"

"ಅದನ್ನು ಮುಂದಕ್ಕೆ ಹೇಳುತ್ತೇನೆ. ಈ ಕೂಪದ ಪರಿಚಯವಿರುವ ನಾವು ಇದರ ಶುದ್ಧಿಯನ್ನು ಕೈಗೊಳ್ಳಬೇಕಾಗಿದೆ."

"ನಾವಿಬ್ಬರು ಏನು ಮಾಡಲು ಸಾಧ್ಯ ?"

"ಎಷ್ಟು ಸಾಧ್ಯವೋ ಅಷ್ಟು ಮಾಡೋಣ - ನನ್ನ ಜತೆ ನಿಲ್ಲಲು ನೀನು ಸಿದ್ಧವಾಗಿರುವೆಯಾ ?"

"ಅದನ್ನು ನೀವು ಕೇಳಬೇಕಾದ ಅಗತ್ಯವೇ ಇಲ್ಲ. ಆದರೆ. . ."

" ಹೇಳು. ಸ್ಪಷ್ಟವಾಗಿ ಹೇಳು. ಯಾವದನ್ನೂ ಮುಚ್ಚುಮರೆ ಮಾಡಬೇಡ."

" ದಾಂಪತ್ಯ ನನ್ನಿಂದ ಸಾಧ್ಯವಿಲ್ಲ. ನನಗಾಗಿರುವ ಅನುಭವ - ನಾನು ಕಂಡಿರುವ ಸ್ತ್ರೀಪುರುಷ ಸಂಬಂಧದ ಕೊಳಚೆ ನನ್ನ ಸಹಜ ಪ್ರವೃತ್ತಿಯನ್ನು ನಾಶಮಾಡಿದೆ. ಮನೆ, ಗಂಡ, ಮಕ್ಕಳು ಬೇಕೆಂದು ನಾನೂ ಎಲ್ಲರ ಹಾಗೆ ಒಂದು ಕಾಲದಲ್ಲಿ ಆಸೆಪಡುತ್ತಿದ್ದೆ. ದೇವರು ಆ ಸೌಭಾಗ್ಯವನ್ನು ನನ್ನಿಂದ ಕಿತ್ತುಕೊಂಡಿದ್ದಾನೆ - ನಾನು ಹುಟ್ಟುವಾಗಲೇ ವಿಧವೆಯಾಗಿ ಹುಟ್ಟಿದೆನೆಂದು ಕಾಣುತ್ತದೆ."

"ನೀನು ನನ್ನ ಸ್ನೇಹ ಬಯಸುತ್ತಿದ್ದಂತೆ ನಾನೂ ಬಯಸುತ್ತಿದ್ದೆ ಸುಧಾ."

" ಹೌದು - ಅದನ್ನು ನಾನು ಬಲ್ಲೆ."

" ಆದರೂ ನಿನ್ನಿಂದ ನಾನು ದೂರವಿದ್ದೆ."

" ಏಕೆ - ದೂರವಿದ್ದಿರಿ."

" ಸ್ನೇಹ, ಪ್ರೇಮವನ್ನೆಲ್ಲಿ ಬಯಸುವುದೋ ಎಂದು ಹೆದರಿ."

" ನಿಮ್ಮನ್ನು ನಾನು ಆಕ್ಷೇಪಿಸುವುದಿಲ್ಲ."

" ಇನ್ನೂ ಒಂದು ಕಾರಣವಿದೆ - ನನ್ನ ಹಣೆಯ ಮೇಲಿನ ಕುಂಕುಮ ನೋಡಿರುವೆಯಲ್ಲವೇ ?"

" ಅದು ನಿಮ್ಮ ಹಣೆ ಬಿಟ್ಟು ಮರೆಯಾದುದನ್ನೇ ಕಾಣೆ."

" ನಿಜ - ದೇವಿಯ ಉಪಾಸನೆ ಕೈಗೊಂಡಿದ್ದೇನೆ. ಸ್ತ್ರೀ ಸಂಗ ಮಾಡಿದ ದಿನ ನನ್ನ ಮೃತ್ಯು ಸಿದ್ಧ."

" ನನ್ನಿಂದ ಯಾವ ಅಪಚಾರವೂ ಆಗುವದಿಲ್ಲ, ಧೈರ್ಯವಾಗಿರಿ " ಎಂದು ಹೇಳಿದಳು.

ಇಬ್ಬರೂ ಎದ್ದು ಕಂಪೆನಿಯ ಕಡೆ ಹೊರಟರು. ಕತ್ತಲೆ ದಟ್ಟವಾಗಿ ಹಬ್ಬಿತ್ತು - ಆದರೆ ಆ ಕಾರ್ಗತ್ತಲೆಯಲ್ಲಿಯೂ ಇಬ್ಬರ ಮನಸ್ಸಿನಲ್ಲಿ ಒಂದು ನಕ್ಷತ್ರ ಮಿನುಗುತ್ತಿತ್ತು. ಅವರ ಮನಸ್ಸು ತುಸು ಹಗುರವಾಗಿತ್ತು.

ದಾರಿಯಲ್ಲಿ ಬರುತ್ತಾ ರಾಜಶೇಖರ ಕೇಳಿದ,

" ಮನಸ್ಸಿಗೆ ಸ್ವಲ್ಪ ಸಮಾಧಾನವಾಯಿತೇ ಸುಧಾ ?"

" ಏಕೆ ಹಾಗೆ ಕೇಳುವಿರಿ ?"

"ಇಬ್ಬರನ್ನೂ ಒಂದೇ ದುರ್ವಿಧಿ ಕಾಡುತ್ತಿದೆಯೆಂದು ತಿಳಿದು."

"ನಿಮ್ಮ ಬಾಳೂ ನನ್ನದರಂತೆಯೇ ಆಯಿತಲ್ಲ ಎಂದು ಮನಸ್ಸಿಗೆ ಮತ್ತಷ್ಟು ವ್ಯಸನವಾಗಿದೆ."

"ವ್ಯಸನ ಪಡಬೇಡ."

"ಲೋಕದ ಸಮಸ್ತ ಶಕ್ತಿ ಎದುರು ನಿಂತು ನಾವೇನು ಮಾಡಲು ಸಾಧ್ಯ ?"

"ಅದನ್ನೇ ನಾನೂ ವಿಚಾರಮಾಡುತ್ತಿದ್ದೇನೆ. ನಾನು ನಿರಾಶೆ ಹೊಂದಿಲ್ಲ."

"ನಿಮ್ಮ ಮಾತೇ ಒಂದೊಂದು ಸಲ ನನಗೆ ಅರ್ಥವಾಗುವುದಿಲ್ಲ."

"ಆಗುತ್ತದೆ ಸುಧಾ. ನಾನು ನನ್ನನ್ನು ಸಂಪೂರ್ಣವಾಗಿ ದೇವಿಯ ದಿವ್ಯಚರಣಕ್ಕೆ ಒಪ್ಪಿಸಿಕೊಂಡಿದ್ದೇನೆ. ಆಕೆ ಏನು ಹೇಳುತ್ತಾಳೋ ಅದನ್ನು ಮಾಡುವುದಷ್ಟೇ ನನ್ನ ಕೆಲಸ."

"ದೇವಿಯಲ್ಲಿ ನಿಮಗೆ ನಂಬಿಕೆಯಿದೆಯೇ ?"

"ಇದು ನಂಬಿಕೆಯ ಪ್ರಶ್ನೆಯಲ್ಲ – ಅನುಭವದ ಪ್ರಶ್ನೆ. ದೇವಿ ಇರುವುದನ್ನು ಅನೇಕರು ನಂಬದಿರಬಹುದು. ನನಗವಳು ನಿತ್ಯಸತ್ಯ. ನಿನ್ನನ್ನು ನಾನು ಹೇಗೆ ನೋಡುತ್ತೇನೆಯೋ ಹಾಗೆ ಆಕೆಯನ್ನು ಈ ಕಣ್ಣುಗಳಿಂದಲೇ ನೋಡುತ್ತೇನೆ. ನನ್ನ ಕಣ್ಣುಗಳನ್ನೇ ನಾನು ನಂಬದಿರಲೇ ?"

"ನನಗೂ ಆ ಕಣ್ಣುಗಳನ್ನು ಕೊಡಿ."

"ದೇವಿ ಕೊಡುತ್ತಾಳೆ." ಎಂದು ಹೇಳಿದ.

## ೧೨

ಒಂದು ಗಂಟೆಗೆ ಮುಂಚೆಯೇ ರಾಘವಾಚಾರ್ಯರು ಪ್ರಯಾಣಕ್ಕೆ ಬೇಕಾಗುವ ಪದಾರ್ಥಗಳನ್ನೆಲ್ಲಾ ತೆಗೆದುಕೊಂಡು ಶಾಲೆಗೆ ಬಂದು ಕುಳಿತರು ಸರಸ್ವತಿ ಒಂದು ಗಂಟೆಗೆ ಸರಿಯಾಗಿ ಕೈಯಲ್ಲಿ ಒಂದು ಬ್ಯಾಗ್ ಹಿಡಿದುಕೊಂಡು ಬಂದಳು.

"ಅದೇನಮ್ಮಾ ಕೈಯಲ್ಲಿ ಎಂದು ಆಚಾರ್ಯರು ಕೇಳಿದರು.

"ಸೀರೆ, ಟವಲು, ಸೋಪು, ಪೌಡರು."

"ಊಟಮಾಡಿಕೊಂಡು ಬಂದಿರೋ - ಉಪವಾಸ ಬಂದಿರೊ ?"

"ಊಟವಾಯಿತು ಮೇಷ್ಟ್ರೇ. ನಿಮಗೆ ?"

"ನಾನೂ ಊಟಮಾಡಿಕೊಂಡು, ಬುತ್ತಿ ಕಟ್ಟಿಸಿಕೊಂಡು ಬಂದೆ."

"ರಾತ್ರಿಯೆಲ್ಲಾ ನಿದ್ರೆಯೇ ಇಲ್ಲ ಮೇಷ್ಟ್ರೇ."

"ಯಾಕಮ್ಮ - ಸೊಳ್ಳೆಕಾಟವೇ ?"

"ಅಲ್ಲ ಮೇಷ್ಟ್ರೇ – ನಿಮ್ಮ ಚಿತ್ರಗಳ ಕಾಟ."

"ನಿಮಗೆ ಗೊತ್ತಿಲ್ಲದೆ ಇರುವುದು ಆ ಚಿತ್ರಗಳಲ್ಲಿ ಏನಿದೆಯಮ್ಮಾ."

"ಇದೆ ಮೇಷ್ಟ್ರೇ - ಎಷ್ಟೋ ವಿಷಯ ನನಗೆ ಗೊತ್ತಿರಲಿಲ್ಲ. ತಿಳಿದುಕೊಂಡ ಹಾಗಾಯಿತು."

"ಅದರ ಲಾಭ ಜೀವಣ್ಣರಾಯನಿಗೆ ಸಿಕ್ಕತ್ತೆ ಅನ್ನಿ."

"ಹೋಗಿ ಮೇಷ್ಟ್ರೇ–ನೀವೊಬ್ಬರು! ಎಲ್ಲಿ ನಿಮ್ಮ ಸ್ನೇಹಿತರ ಸುಳಿವೇ ಇಲ್ಲವಲ್ಲ."

"ಬರ್‍ತಾನಮ್ಮ ಬರ್‍ತಾನೆ – ಸ್ವಲ್ಪ ತಡೆದುಕೊಳ್ಳಬಾರದೆ ?"

ಎನ್ನುತ್ತಿರುವಂತೆ ಜೀವಣ್ಣರಾಯ ಒಳಗೆ ಬಂದ.

"ಬಾರಯ್ಯ ಬಾ– ನಿನಗೆ ನೂರುವರ್ಷ ಆಯುಸ್ಸು–ಇದೇ ನಿನ್ನ ಮಾತೇ ಆಡ್ತಾ ಇದ್ದೆವು. ಹೊರಡೋಣವೊ ?"

"ಡ್ರೈವರ್ ಬಂದುಬಿಡಲಿ ತಡೀ – ಹೊರಡೋಣ."

"ಅವನನ್ನೆಲ್ಲಿ ಕಳುಹಿಸಿದ್ದೀ."

"ಕಂಟೋನ್‌ಮೆಂಟಿಗೆ ಹೋಗಿದ್ದಾನೆ. ನಿನಗೇನೋ ಬೇಕೂ ಅಂದೆಯಲ್ಲಪ್ಪಾ."

"ಆಹಾ! ನಿನಗೆ ಬೇಡವೇನೋ ?"

"ಊಟ ಏನು ಮಾಡಿಸಿ ತಂದಿರುವೆ."

"ನೀನು ಹೇಳಿದ್ದೆಲ್ಲಾ ಇದೆ."

"ಪುಳಿಯೊಗರೆ ಇದೆಯೇನಯ್ಯಾ – ಭರ್ಜರಿಯಾಗಿ ಖಾರ ಹಾಕಿಸಿದ್ದೀಯೋ ಇಲ್ಲವೋ ?"

" ತಿಂದು ನೋಡು–ನೆತ್ತಿಕೂದಲು ಉದುರಿ ಹೋಗುತ್ತದೆ."

ಜೀವಣ್ಣಾರಾಯ ಸರಸ್ವತಿಯ ಕಡೆ ತಿರುಗಿ

" ನೀನು ಬಂದು ಎಷ್ಟು ಹೊತ್ತಾಯಿತು ?" ಎಂದು ಕೇಳಿದ.

" ಸ್ವಲ್ಪ ಹೊತ್ತಾಯಿತು. ಅಲ್ಲಾಂದ್ರೆ–ರಾತ್ರಿ ಅಲ್ಲೇ ಇರೋದೆ ? "

" ಪೂ–ಓಡಿಹೋಗಿ ಓಡಿಬರುವುದೇ ? "

" ಅದಕ್ಕಲ್ಲ ನಾನು ಕೇಳಿದ್ದು. ರಾತ್ರಿ ಅಲ್ಲಿ ಇರುವ ಹಾಗಿದ್ದರೆ ಹಾಸಿಗೆ ತೆಗೆದುಕೊಳ್ಳಬೇಡವೆ ? "

" ಅಲ್ಲಿ ಎಲ್ಲಾ ಸಿಕ್ಕುತ್ತದೆ. ನೀನೇನೋ ಗಂಟು ತಂದಿದ್ದೀ."

" ಬಟ್ಟೆ ಬರೆ."

ಹೊರಗಡೆ ರಸ್ತೆಯಲ್ಲಿ ಮೋಟಾರ್ ಹಾರ್ನ್ ಆಯಿತು.

" ಕಾರು ಬಂತು ಆಚಾರಿ – ಸಾಮಾನೆಲ್ಲಾ ಇಟ್ಟು ಬಾ."

ಎಂದು ಜೀವಣ್ಣರಾಯ ಹೇಳಿದ.

ರಾಘುವಾಚಾರ್ಯರು ಟಿಫನ್ ಕ್ಯಾರಿಯರ್, ಬುಟ್ಟಿಯನ್ನು ಕಾರಿನಲ್ಲಿಟ್ಟು ಬಂದು, ಸರಸ್ವತಮ್ಮನ ಬ್ಯಾಗನ್ನೂ ತೆಗೆದುಕೊಂಡು ಹೋಗಿ ಇಟ್ಟರು.

ಜೀವಣ್ಣರಾಯ ಮೊದಲು ಹೋಗಿ ಕಾರಿನ ಹಿಂದುಗಡೆ ಸೀಟಿನಲ್ಲಿ ಕುಳಿತ. ರಾಘವಾಚಾರ್ಯರು ಸರಸ್ವತಿಯೊಂದಿಗೆ ಕಾರು ಬಳಿ ಬಂದರು. ಜೀವಣ್ಣರಾಯ ತಾನು ಕುಳಿತಿದ್ದ ಸೀಟಿನ ಬಾಗಿಲು ತೆಗೆದು ' ಬೇಗ ಹತ್ತು' ಎಂದು ಹೇಳಿದ. ಸರಸ್ವತಿ ಅವನ ಮಗ್ಗುಲಿನಲ್ಲಿ ಕುಳಿತಳು; ರಾಘವಾಚಾರ್ಯರು ಡ್ರೈವರ್ ಮಗ್ಗುಲಿನಲ್ಲಿ ಕುಳಿತರು.

ಡ್ರೈವರ್ ಬಿಲ್ಲುಗಳನ್ನು ಹಣವನ್ನೂ ಕೊಡಲು ಬಂದ. ಜೀವಣ್ಣರಾಯ ರೇಗಿ

" ಅದು ಆಮೇಲಾಗಲಿ. ಮೊದಲು ಕಾರು ಬಿಡು – ಜೋರಾಗಿ ಬಿಡು ?"

ಎಂದ. ಕಾರು ಹೊರಟಿತು. ಡ್ರೈವರ್ ಆ್ಯಕ್ಸಿಲರೇಟರ್ ಮೇಲೆ ಕಾಲು ಒತ್ತಿ ಫುಲ್ ಸ್ಪೀಡಿನಲ್ಲಿ ಬಿಟ್ಟ.

ಉಕ್ಕಡ ದಾಟುವವರೆಗೆ ಜೀವಣ್ಣರಾಯನಿಗೆ ಜೀವದಲ್ಲಿ ಜೀವವಿರಲಿಲ್ಲ.

" ನಿಧಾನವಾಗಿ ಹೋಗು ಡ್ರೈವರ್. ಸಿಗರೇಟ್ ಡಬ್ಬ ತಂದೆಯಾ"

ಎಂದು ಕೇಳಿದ. ಡ್ರೈವರ್ ಸಿಗರೇಟ್ ಡಬ್ಬ, ಬೆಂಕಿಪೊಟ್ಟಣ ಕೊಟ್ಟು, ಬಿಲ್ಲು ಉಳಿದ ಹಣ ಕೊಟ್ಟ. ಜೀವಣ್ಣರಾಯ ಸ್ಥೂಲವಾಗಿ ಬಿಲ್ ನೋಡಿಕೊಂಡು, ಅವುಗಳನ್ನು ಹರಿದು ಹೊರಗೆ ಒಗೆದು, ಡ್ರೈವರ್ ಕೊಟ್ಟಿದ್ದ ರೂಪಾಯಿ, ಚಿಲ್ಲರೆಯನ್ನು ಅವನಿಗೇ ಕೊಟ್ಟು ಬಿಟ್ಟ.

ಜೀವಣ್ಣರಾಯ ಸಿಗರೇಟ್ ಹಚ್ಚಿಕೊಂಡು, ಆಚಾರ್ಯರಿಗೆ ಡಬ್ಬ, ಕಡ್ಡಿ ಪೊಟ್ಟಣವನ್ನಿತ್ತ. ಆಚಾರ್ಯರೂ ಹಚ್ಚಿಕೊಂಡರು.

" ನೀವೂ ಸಿಗರೇಟ್ ಸೇದುತ್ತಿರಾ ಮೇಷ್ಟ್ರೇ "

ಎಂದು ಸರಸ್ವತಿ ಅಚ್ಚರಿಯಿಂದ ಕೇಳಿದಳು.

" ಅವನು ಏನೇನು ಮಾಡುವುದಿಲ್ಲ."

ಎಂದು ಜೀವಣ್ಣರಾಯ ನಗೆಯಾಡಿ,

" ಇವತ್ತು ನಾಳೆ ನಿನ್ನ ಪಾಠಗಳು ಹೋಯಿತಲ್ಲೋ ಆಚಾರಿ."

" ಹೋಯಿತು. ಏನು ಮಾಡುವುದಪ್ಪಾ. ನಾಳೆ ಬಂದು ಬಿಡುತ್ತೇವಲ್ಲಾ."

" ನಾಳೆಯೋ – ನಾಡಿದ್ದೋ ಬರುತ್ತೇನೆ. ನನಗೇ ಇಲ್ಲದ ಅವಸರ ನಿನಗೇನಯ್ಯಾ."

" ನಿನಗೇನಪ್ಪಾ ಪುಣ್ಯವಂತ. ಒಂದಲ್ಲ ಹತ್ತು ದಿವಸ ಹೊರಗಿದ್ದರೂ ನಿನ್ನನ್ನು ಕೇಳುವವರಿಲ್ಲ. ನಾನು ಕೂಲಿ ಮಾಡಿಕೊಂಡು ಜೀವನ ಮಾಡುವವನು."

" ಏನು ವೇಷ ಕಟ್ಟುತ್ತೀಯೋ ಆಚಾರಿ."

ಎಂದ. ಆಚಾರ್ಯರು ದೇಶಾವಾರದ ನಗೆಬೀರಿದರು.

ಜೀವಣ್ಣರಾಯನದು ಹೊಸ ಸೆಡಾನ್ ಬಾಡಿಯ ಬ್ಯೂಕ್ ಕಾರು. ನಲವತ್ತು ಐವತ್ತು ಮೈಲಿ ವೇಗದಲ್ಲಿ ಹೋಗುತ್ತಿದ್ದರೂ ಒಳಗೆ ಕುಳಿತಿದ್ದವರ ಮೈ ಅಲುಗಾಡುತ್ತಿರಲಿಲ್ಲ. ಕಾರು ಧಾವಿಸುತ್ತಿದ್ದಂತೆ ಒಂದು ಪಕ್ಕಕ್ಕೆ ವಾಲಿತು. ಆಚಾರ್ಯರು ಬಾಗಿಲು ಮೇಲೆ ಬಿದ್ದರು. ಎಡಭಾಗದಲ್ಲಿ ಕುಳಿತಿದ್ದ ಸರಸ್ವತಿಯ ಮೇಲೆ ಜೀವಣ್ಣರಾಯ ಬಿದ್ದ. ಮರುಕ್ಷಣದಲ್ಲಿಯೇ ಕಾರು ಯಥಾಸ್ಥಿತಿಗೆ ಬಂದಿತು. ಡ್ರೈವರು ಕಾರು ನಿಲ್ಲಿಸಿದ. ಜೀವಣ್ಣರಾಯ ಗಾಬರಿಯಿಂದ

" ಏನಾಯಿತು ಡ್ರೈವರ್ " ಎಂದು ಕೇಳಿದ.

ಡ್ರೈವರ್ ಉತ್ತರಕೊಡುವುದಕ್ಕೆ ಅಸಮರ್ಥನಾಗಿದ್ದ. ಸರಸ್ವತಿ, ಜೀವಣ್ಣರಾಯ, ಆಚಾರ್ಯರು ಕಾರಿನಿಂದಿಳಿದು ಸ್ವಲ್ಪ ದೂರ ಹಿಂದಕ್ಕೆ ನಡೆದು ಹೋದರು.

ರಸ್ತೆಯ ಮಗ್ಗುಲಿಗೆ ಮಾಟವಾಗಿ ಕಟ್ಟಲ್ಪಟ್ಟಿದ್ದ ಕಲ್ಲು ರಾಶಿಯ ಕಡೆ ಕೈ ತೋರಿಸಿ ಆಚಾರ್ಯರು

" ಡ್ರೈವರ್ ಕೊಟ್ಟಿದ್ದ ಕೈ. ಕಲ್ಲುರಾಶಿಯ ಮೇಲೆ ಕಾರು ಹತ್ತಿಸಿದ್ದ."

" ಇವತ್ತು ಈ ರಸ್ತೆಯಲ್ಲಿ ನಮ್ಮ ಮೃತ್ಯುವಿತ್ತು. ಗುರುದೇವರು ಬಂದು ಕಾಪಾಡಿದರು."

ಎಂದು ಜೀವಣ್ಣರಾಯ ತಕ್ಷಣ ಗುರುಸ್ಮರಣೆ ಮಾಡಿದ.

" ಈ ವಿಷಯ ಡ್ರೈವರ್ ಜತೆ ಮಾತಾಡಬೇಡ ಆಚಾರಿ. ಅವನು ಮತ್ತಷ್ಟು ಹೆದರಿ ಯಾವದಾದರೂ ಮರಕ್ಕೆ ಕಾರು ಡಿಕ್ಕಿ ಹೊಡೆಸಿಬಿಟ್ಟಾನು."

ಡ್ರೈವರು ಗಡಗಡನೆ ನಡುಗುತ್ತ ನಿಂತಿದ್ದ. ಜೀವಣ್ಣರಾಯ ಅವನ ಬಳಿ ಹೋಗಿ ಭುಜ ಚಪ್ಪರಿಸಿ

" ಯಾಕೋ – ಹೀಗೆ ನಿಂತುಕೊಂಡಿದ್ದೀ."

" ಬೇಕೂಫ್ ಕೆಲಸ ಮಾಡಿಬಿಟ್ಟೆ ಸ್ವಾಮಿ."

" ಹುಚ್ಚ ! ಏನಾಯಿತು. ಧೈರ್ಯವಾಗಿರು. ಸ್ವಲ್ಪ ಸುಧಾರಿಸಿಕೊ. ನಿಧಾನವಾಗಿ ಹೋದರಾಯಿತು."

ಎಂದು ಹೇಳಿ ಕಾರು ಹತ್ತಿ ಕುಳಿತ. ಸರಸ್ವತಿ, ಆಚಾರ್ಯರು ಸ್ವಸ್ಥಾನಗಳಲ್ಲಿ ಕುಳಿತರು.

ಜೀವಣ್ಣರಾಯನ ಮನಃಸ್ಥೈರ್ಯ ಕಂಡು ಸರಸ್ವತಿ ಬೆಕ್ಕಸಬೆರಗಾದಳು.

ಐದು ನಿಮಿಷಗಳ ತರುವಾಯ ಡ್ರೈವರ್ ಕಾರಿನಲ್ಲಿ ಬಂದು ಕುಳಿತು.

" ಹೊರಡೋಣವೇ ಸಾರ್." ಎಂದು ಕೇಳಿದ."

" ನೋಡು–ಬೇಕಾದರೆ ಇನ್ನೂ ಹತ್ತು ನಿಮಿಷ ಬಿಟ್ಟು ಹೊರಡೋಣ." ಎಂದ. ಡ್ರೈವರ್ ಕಾರ್ ಸ್ಟಾರ್ಟ್ (start) ಮಾಡಿದ.

ಸ್ವಲ್ಪ ಹೊತ್ತಿನಲ್ಲಿಯೇ ಕಾರು, ಯಾವ ಅಪಘಾತಕ್ಕೂ ಸಿಕ್ಕದೆ ಸುಸೂತ್ರವಾಗಿ ತಿಪ್ಪಗೊಂಡನಹಳ್ಳಿ ಸೇರಿತು.

ಪ್ರವಾಸಿಗರ ಬಂಗಲೆಯ (Traveller's Bauglow) ಮೇಟಿಯನ್ನು ಕರೆದು ಜೀವಣ್ಣರಾಯ ಎರಡು ರೂಮುಗಳನ್ನು ತೆಗೆದುಕೊಂಡ.

ಜೀವಣ್ಣರಾಯ ತನಗಾಗಿ ತೆಗೆದುಕೊಂಡ ರೂಮಿನಲ್ಲಿಯೇ ಸ್ನಾನ ಗೃಹವೂ ಇದ್ದಿತು. ಕಾರಿನಲ್ಲಿದ್ದ ಎಲ್ಲಾ ಸಾಮಾನುಗಳನ್ನೂ ಡ್ರೈವರ್ ಆ ರೂಮಿನಲ್ಲಿ ತಂದಿಟ್ಟ. ಸರಸ್ವತಿ ತನ್ನ ಬ್ಯಾಗ್ ತೆಗೆದು ಟವಲು, ಸೋಪು, ಪೌಡರು, ಸೀರೆ, ಕುಪ್ಪಸ ತೆಗೆದುಕೊಂಡು ಸ್ನಾನ ಗೃಹ ಸೇರಿದಳು.

ಅವಳು ಹೊರಗೆ ಬರುವಷ್ಟರಲ್ಲಿ ಮೇಜಿನ ಮೇಲೆ ಜೀವಣ್ಣರಾಯ ಬಾಟಲುಗಳನ್ನಿಟ್ಟು, ಬಂಗಲೆಯಲ್ಲಿದ್ದ ರೆಸ್ಟುರಾದಿಂದ (Resturant) ಸೋಡಾ ಶೀಷೆಗಳು, ಗ್ಲಾಸುಗಳನ್ನು ತರಿಸಿಟ್ಟ. ಆಚಾರ್ಯರು ಹೊರಗಿನ ಬಾಗಿಲು ಹಾಕಿ, ಹೋಟೆಲ್ ತಿಂಡಿಯ ಪೊಟ್ಟಣ ಬಿಚ್ಚಿ ಒಂದು ತಟ್ಟೆಯಲ್ಲಿ ಹಾಕಿ ಮೇಜಿನ ಮೇಲಿಟ್ಟರು.

ಜೀವಣ್ಣರಾಯ, ಆಚಾರ್ಯರು ಸರಸ್ವತಿಯ ದಾರಿ ನೋಡುತ್ತ ಕುಳಿತರು.

ಸರಸ್ವತಿ ಮುಖಮಾರ್ಜನೆ ಮಾಡಿಕೊಂಡು, ಪೌಡರ್ ಹಚ್ಚಿಕೊಂಡು, ಸೀರೆ ಬದಲಾಯಿಸಿಕೊಂಡು ಹೊರಬರುವುದಕ್ಕೆ ಅರ್ಧ ಗಂಟೆ ಹಿಡಿಯಿತು.

ಸರಸ್ವತಿ ಸ್ನಾನಗೃಹ ಸೇರುವಾಗ

'ಈಗವರು ಕುಡಿಯುವುದಕ್ಕೆ ಕೊಡುತ್ತಾರೆ. ನಾನು ಮುಟ್ಟ ಬಾರದು. ನಾನು ತೆಗೆದುಕೊಂಡುದನ್ನು ಕಂಡರೆ ಅವರ ಅಭಿಪ್ರಾಯ ಕೆಡಬಹುದು.'

ಎಂದುಕೊಂಡೇ ಹೋಗಿದ್ದಳು.

ಹೊರಗೆ ಬಂದು ಮೇಜಿನ ಮೇಲಿದ್ದ ಶೀಷೆಗಳನ್ನು ನೋಡಿದಾಗ ಅವಳ ಅಭಿಪ್ರಾಯ ಬದಲಾಯಿಸಿತು.

ಜೀವಣ್ಣರಾಯ ಸರಸ್ವತಿಯನ್ನು ಪಕ್ಕದಲ್ಲಿ ಕೂಡಿಸಿಕೊಂಡ. ಎದುರಿಗೆ ಆಚಾರ್ಯರು ಕುಳಿತು ಗ್ಲಾಸುಗಳಿಗೆ ಪಾನೀಯ ಬಗ್ಗಿಸಿದರು.

ಜೀವಣ್ಣರಾಯ ಕೈಗೆ ಒಂದು ಗ್ಲಾಸು ತೆಗೆದುಕೊಂಡು ಸರಸ್ವತಿಯ ಮುಂದೆ ಹಿಡಿದು

"ಅಭ್ಯಾಸವಿದೆಯೋ" ಎಂದು ಕೇಳಿದ.

"ಅಭ್ಯಾಸವಿಲ್ಲ" ಎಂದಳು.

"ಇರಲಿ ತೊಗೊಳ್ಳಿರಮ್ಮ - ಜಂಭ ಮಾಡಬೇಡಿ"

ಎಂದು ಆಚಾರ್ಯರು ಅಪ್ಪಣೆಕೊಡಿಸಿದರು.

ಸರಸ್ವತಿ ಅನುಮಾನಿಸುತ್ತಲೇ ಕೈಗೆ ಗ್ಲಾಸು ತೆಗೆದುಕೊಂಡಳು. ಜೀವಣ್ಣರಾಯ ಅವಳ ಕಡೆ ನೋಡದಿದ್ದರೂ ಅವಳ ಪ್ರತಿಯೊಂದು ಚಲನ ವಲನವನ್ನೂ ಎಚ್ಚರಿಕೆಯಿಂದ ಗಮನಿಸುತ್ತಿದ್ದ.

"ಇಷ್ಟು ಹೆಚ್ಚಾಗಬಹುದು" ಎಂದಳು.

"ಏನಿಲ್ಲ ತೊಗೊಳ್ಳಿ" ಎಂದು ಆಚಾರ್ಯರು ಉಪಚರಿಸಿದರು.

ಸರಸ್ವತಿ ಔಷಧ ಕುಡಿದಂತೆ ಗ್ಲಾಸಿನ ಅರ್ಧದಷ್ಟು ಮದ್ಯ ಮುಗಿಸಿ

"ನನಗೆ ತಿನ್ನುವುದಕ್ಕೆ ಏನಾದರೂ ಬೇಕು."

"ಏನು ಬೇಕು" ಎಂದು ಜೀವಣ್ಣರಾಯ ಕೇಳಿದ.

"ಆಮ್ಲೆಟ್ ಸಿಕ್ಕಬಹುದಲ್ಲವೇ ?"

"ಬೇಕಾದ್ದು ಸಿಕ್ಕುತ್ತದೆ. ಹೇಳಿ ಬಾ ಆಚಾರಿ"

ಎಂದು ಆಚಾರ್ಯರಿಗೆ ಸೂಚಿಸಿ ಮೂರು ಗ್ಲಾಸುಗಳಿಗೂ ಮತ್ತೆ ಮದ್ಯ ಸುರಿದ.

ಆಚಾರ್ಯರು ಬಂದು ಕುಳಿತರು. ಜೀವಣ್ಣರಾಯ, ಆಚಾರ್ಯರು ಗ್ಲಾಸುಗಳನ್ನು ಖಾಲಿ ಮಾಡಿದರು. ಸರಸ್ವತಿ ತನ್ನ ಗ್ಲಾಸು ಮುಟ್ಟಿರಲಿಲ್ಲ.

"ನೀನು ತೆಗೆದುಕೊಂಡೇ ಇಲ್ಲ" ಎಂದ ಜೀವಣ್ಣರಾಯ.

"ಆಮ್ಲೆಟ್ ಬರಲಿ" ಎಂದು ಸರಸ್ವತಿ ಹೇಳಿದಳು.

ಗ್ಲಾಸುಗಳನ್ನು ಮತ್ತೆ ತುಂಬಿಕೊಂಡು ಆಚಾರ್ಯರು, ಜೀವಣ್ಣರಾಯ ಕುಳಿತು ಸಿಗರೇಟ್ ಹಚ್ಚಿದರು.

"ನಿನ್ನ ದೊಡ್ಡ ಮಗಳಿಗೆ ಎಷ್ಟು ವಯಸ್ಸು."

"ಇಪ್ಪತ್ತಿರಬಹುದು."

"ಚಿಕ್ಕವಳಿಗೆ."

"ಹದಿನೆಂಟು."

"ಇಬ್ಬರೂ ಪಾರ್ಟೈಮ್ ಮಾಡುತ್ತಾರೆಯೋ ?"

"ಅವರೂ ಮಾಡುತ್ತಾರೆ. ಸರಸ್ವತಮ್ಮನೋರು ಪಾರ್ಟ್ ಮಾಡುತ್ತಾರೆ ಜೀವಣ್ಣ."

ಎಂದು ಆಚಾರ್ಯರು ಉತ್ಸಾಹದಲ್ಲಿ ಹೇಳಿದರು.

"ನಾಟಕದ ಜೀವನ ತುಂಬ ಕಷ್ಟ."

"ನಿಮಗೆ ನಾಟಕದ ಅನುಭವವಿದೆಯೋ?"

"ಒಂದು ಕಂಪೆನಿ ಉದ್ಧಾರ ಮಾಡುವುದಕ್ಕೆ ಹೋಗಿ ದುಡ್ಡು ಕೊಟ್ಟು ಕಳೆದುಕೊಂಡೆ."

ಬಾಗಿಲು ತಟ್ಟಿದ ಶಬ್ದವಾಯಿತು.

ಆಚಾರ್ಯರು ಹೋಗಿ ಬಾಗಿಲು ತೆಗೆದು ರೆಸ್ಟುರಾದ 'ಬಾಯ್' ಜತೆಯಲ್ಲಿ ಬಂದರು. ಬಾಯ್ ಟ್ರೇಯಲ್ಲಿ ತಂದಿದ್ದ ಆಮ್ಲೆಟ್, ಬ್ರೆಡ್, ಉಪ್ಪು, ಮೆಣಸಿನ ಕಾಳಿನ ಪುಡಿಯ ಶೀಷೆಗಳು, ವಿನೀಗಾರ್, ಚೂರು ಮಾಡಿದ ಈರುಳ್ಳಿ, ಟೊಮಾಟೋ, ಸೌತೇಕಾಯಿ ಮೇಜಿನ ಮೇಲೆ ಹರಡಿ ಟ್ರೇಯನ್ನು ಹಿಂದಕ್ಕೆ ತೆಗೆದುಕೊಂಡು ನಿಂತ.

"ಕಾರಿನಲ್ಲಿ ನಮ್ಮ ಡ್ರೈವರ್ ಇದ್ದಾನೆ ಬಾಯ್, ಅವನಿಗೇನು ಬೇಕೋ ಕೊಡು"

ಎಂದು ಜೀವಣ್ಣರಾಯ ಹೇಳಿದ.

ಬಾಯ್ ಹೋಗಲು ಜೀವಣ್ಣರಾಯ ಎರಡು ತಟ್ಟೆಗಳಲ್ಲಿದ್ದ ಆಮ್ಲೆಟ್‌ಗಳನ್ನು ನೋಡಿ

"ಎರಡು ಇದೆಯಲ್ಲಾ!" ಎಂದ.

"ಒಂದು ನಿಮಗೆ - ಇನ್ನೊಂದು ನನಗೆ" ಎಂದಳು ಸರಸ್ವತಿ.

"ನಾನು ಮುಟ್ಟುವುದಿಲ್ಲ - ನಿನಗೆ ಬೇಕಾದರೆ ತೆಗೆದುಕೋ ಆಚಾರಿ."

"ಅನ್ಯಾಯವಾಗತ್ತೇಂತ ತೆಗೆದುಕೊಳ್ಳುತ್ತೇನಪ್ಪಾ"

ಎಂದು ಆಚಾರ್ಯರು ಕೈಗೆ ಸ್ಪೂನ್, ಫೋರ್ಕ್ ತೆಗೆದುಕೊಂಡರು.

ಒಂದೆರಡು ಆಮ್ಲೆಟ್ ಚೂರುಗಳನ್ನು ಬಾಯಿಗೆ ಹಾಕಿಕೊಂಡು ತಿಂದು ಸರಸ್ವತಿ ಗ್ಲಾಸಿನಲ್ಲಿದ್ದ ಪಾನೀಯ ಮುಗಿಸಿದಳು. ಜೀವಣ್ಣರಾಯ ಮತ್ತೆ ಅದನ್ನು ತುಂಬಿದ.

ಉಪಾಹಾರ ಮುಗಿಯಲು ಆಚಾರ್ಯರು ಸ್ಪೂನ್, ಫೋರ್ಕ್, ಪ್ಲೇಟು

ಗಳನ್ನು ಇನ್ನೊಂದು ಮೇಜಿಗೆ ಸಾಗಿಸಿದರು. ಮೂವರೂ ಗ್ಲಾಸುಗಳನ್ನೂ ಪಾನೀಯದ ಶೀಷೆಯನ್ನೂ ಮೇಜಿನ ಮೇಲಿಟ್ಟುಕೊಂಡು ಕುಳಿತರು.

ಆಚಾರ್ಯರು ಸಿಗರೇಟ್ ಹಚ್ಚಿ

"ನಿಮ್ಮ ಯಜಮಾನರಿಗೆ ತಾಂಬೂಲ ಕೊಡ್ರಮ್ಮ"

ಎಂದರು. ಸರಸ್ವತಿ ಎದ್ದು ಟೀಪಾಯ್ ಮೇಲಿದ್ದ ಎಲೆ, ಅಡಿಕೆ, ಸುಣ್ಣ ತಂದು ಬೀಡಗಳನ್ನು ಸಿದ್ಧಗೊಳಿಸಿ ಜೀವಣ್ಣರಾಯನಿಗೂ, ಆಚಾರ್ಯರಿಗೂ ಕೊಟ್ಟು, ತಾನೂ ಭುಜಿಸಿದಳು.

'ಆಚಾರ್ಯರು ಸಿಗರೇಟ್ ಕಚ್ಚಿಕೊಂಡೆದ್ದು ಕುರ್ಚಿಯ ಬೆನ್ನು ಹಿಡಿದು ಕೊಂಡು

"ನಾನು ಸ್ವಲ್ಪ ಮಲಗಿಕೊಳ್ಳುತ್ತೇನಪ್ಪಾ – ಕಣ್ಣು ಎಳೆದುಕೊಂಡು ಹೋಗುತ್ತಿದೆ."

"ಡ್ರೈವರ್ ಕರೆಯಲೇನೋ ಆಚಾರಿ ?"

"ಯಾಕಪ್ಪಾ."

"ನಿನ್ನ ರೂಮಿಗೆ ಹೊತ್ತು ಹಾಕುವುದಕ್ಕೆ. ಈಗಾಗಲೇ ತೂಕಾಡುತ್ತಿದ್ದೀ."

"ಅಂಥದೇನೂ ಇಲ್ಲಯ್ಯಾ."

"ಎಷ್ಟು ಹೊತ್ತಿಗೆ ಏಳುತ್ತೀ ?"

"ಏಳು ಗಂಟೆಗೆ ?"

"ಪುಳಿಯೋಗರೆ ಬೇರೆ ಇದೆ ಮರೆಯಬೇಡ."

"ಇಲ್ಲ."

ಎಂದುಕೊಂಡೇ ಆಚಾರ್ಯರು ತೂರಾಡಿಕೊಂಡು ಬಾಗಿಲು ತೆಗೆದು ಹೊರಟು ಹೋದರು.

ಸರಸ್ವತಿ ಕೂಡಲೆ ಎದ್ದು ಬಾಗಿಲು ಹಾಕಿದಳು. ಅವಳೂ ಸ್ವಲ್ಪ ತೂರಾಡುತ್ತಿದ್ದುದನ್ನು ಜೀವಣ್ಣರಾಯ ಗಮನಿಸಿದ.

ಸರಸ್ವತಿ ಜೀವಣ್ಣರಾಯನ ಬೆನ್ನು ಹಿಂದೆ ಬಂದು ಅವನಕುತ್ತಿಗೆಯನ್ನು ಅಪ್ಪಿದಳು. ಜೀವಣ್ಣ ಬಲಗೈಯಿಂದ ಅವಳ ಕುತ್ತಿಗೆ ಬಳಸಿ, ಅವಳನ್ನು ಹತ್ತಿರ ಸೆಳೆದುಕೊಂಡು ತೊಡೆಯ ಮೇಲೆ ಕೂಡಿಸಿಕೊಂಡ.

" ಏಳಿ – ನನಗೆ ನಿದ್ರೆ ಬರುತ್ತಿದೆ."

ಎಂದಳು. ಜೀವಣ್ಣರಾಯ ಮರು ಮಾತಾಡದೆ ಎದ್ದು ಅವಳು ಕರೆದೊಯ್ದಲ್ಲಿಗೆ ಹೋದ.

ಏಳು ಗಂಟೆಯ ವೇಳೆಗೆ ಆಚಾರ್ಯರು ಬಂದು ಬಾಗಿಲು ಬಡಿದರು. ಸರಸ್ವತಿ ಬಾಗಿಲು ತೆಗೆದಳು.

ಆಚಾರ್ಯರು ಜೀವಣ್ಣರಾಯನನ್ನೂ ಸರಸ್ವತಿಯನ್ನೂ ಗಾಳಿ ಸಂಚಾರಕ್ಕೆ ಕರೆದೊಯ್ದರು.

ರಾತ್ರಿ ಬಂಗಲೆಗೆ ಹಿಂದಿರುಗಿದ ಮೇಲೆ ಆಚಾರ್ಯರು ಬುತ್ತಿ ಬಿಚ್ಚಿದರು.

" ಮೊದಲು ಡ್ರೈವರಿಗೆ ಊಟ ಕೊಟ್ಟು ಬಾ ಆಚಾರಿ " ಎಂದು ಜೀವಣ್ಣರಾಯ ಹೇಳಿದ. ಆಚಾರ್ಯರು ಊಟಕೊಟ್ಟು ಬರುವ ವೇಳೆಗೆ ಜೀವಣ್ಣರಾಯ, ಸರಸ್ವತಿ ಬಾಟಲು ಮುಂದಿಟ್ಟುಕೊಂಡಿದ್ದರು.

ಪಾನೀಯ ಸೇವನೆ, ಊಟ ಮುಗಿಯಿತು.

ಆಚಾರ್ಯರು ಮಲಗುವ ತಮ್ಮ ರೂಮಿಗೆ ಹೋದರು.

ಸರಸ್ವತಿ ತನ್ನ ಪೂರ್ಣ ಕಳೆಯಿಂದ ವಿರಾಜಿಸಿ ಜೀವಣ್ಣರಾಯನಿಗೆ ದಿಗ್ಭ್ರಾಂತಿ ಹಿಡಿಸಿದಳು.

ಬೆಳಿಗ್ಗೆ ಆಚಾರ್ಯರು ಬಂದು ಎಬ್ಬಿಸುವಾಗ ಎಂಟು ಗಂಟೆಯಾಗಿತ್ತು. ಒಳಗಿನಿಂದಲೇ ಜೀವಣ್ಣರಾಯ

" ಕಾಫಿ ಕಳುಹಿಸು ಆಚಾರಿ " ಎಂದು ಹೇಳಿದ.

ಬಾಯ್ ಕಾಫಿ ತಂದಿಟ್ಟು ಹೋದ.

ಜೀವಣ್ಣ ಕಾಫಿಯನ್ನು ಸರಸ್ವತಿಯೊಂದಿಗೆ ಸೇವಿಸಿ, ಮುಖಮಾರ್ಜನೆ ಮಾಡಿಕೊಂಡು ಬಂದು

" ಇನ್ನು ಹೊರಡೋಣವೇ ಸರಸಾ " ಎಂದು ಕೇಳಿದ.

" ನಿಮ್ಮ ಇಷ್ಟ."

" ಹೊರಡೋಣ – ನಾವು ನಿಂತರೆ ಆಚಾರಿಗೆ ತೊಂದರೆಯಾಗುತ್ತದೆ."

" ಹಾಗಾದರೆ ನಾನೂ ಸಿದ್ಧವಾಗುತ್ತೇನೆ"

ಎಂದು ಸರಸ್ವತಿ ಹೇಳಿದಳು.

ಜೀವಣ್ಣ ಪರ್ಸ್ ತೆಗೆದು ಕೈಗೆ ಕೆಲವು ನೋಟುಗಳನ್ನು ತೆಗೆದು ಕೊಂಡು, ಸರಸ್ವತಿಯನ್ನು ಕರೆದ.

"ಕೈ ಹಿಡಿ"

ಅವಳು ಕೈ ಹಿಡಿದಳು. ನೋಟುಗಳನ್ನು ಅವಳ ಕೈಯಲ್ಲಿಟ್ಟ.

"ಇನ್ನೂರಿದೆ – ಸಾಕೋ."

"ಇದು ಯಾಕೆ ?"

"ಹೆಂಗಸರ ಋಣ ಇಟ್ಟುಕೊಳ್ಳಬಾರದು."

"ಋಣ ತೀರಿದ ಹಾಗೆ ಮಾತನಾಡುತ್ತಿರುವಿರಲ್ಲಾ !"

"ಹಾಗೇನಿಲ್ಲ. ಮುಂದಿನ ಮಾತು ಮುಂದಕ್ಕೆ."

"ಪುನಃ ನಿಮ್ಮನ್ನು ನೋಡುವುದು."

"ನಾಳೆ ಮಧ್ಯಾಹ್ನ - ಆಚಾರಿ ಶಾಲೆಯಲ್ಲಿ."

"ನಾನು ಬೆಂಗಳೂರಿಗೇ ಬಂದು ಬಿಡಲೇ ?"

"ನಾಳೆ ಮಾತನಾಡೋಣ."

"ಆಚಾರ್ಯರು ತೊಂದರೆಯಲಿದ್ದಾರಂತೆ !"

"ಅವನ ತೊಂದರೆ ತಪ್ಪಿದ್ದೆಂದು ?"

"ಸಹಾಯಮಾಡುವಂತೆ ಹೇಳಬೇಕೆಂದು ನನಗೆ ತಿಳಿಸಿದರು."

"ನಿನ್ನ ಶಿಫಾರಸು ಬೇಕಾಯಿತೋ ?"

"ಸಹಾಯ ಮಾಡಿ."

"ಅವನಿಗೇನು ಬೇಕು ಗೊತ್ತೋ ?"

"ಇಲ್ಲ."

"ಸೈಟು ತೆಗೆದುಕೊಂಡಿದ್ದಾನೆ. ಕಾಲೋನಿಯಲ್ಲಿ ಮನೆ ಕಟ್ಟಬೇಕಂತೆ!"

"ಕಟ್ಟಿಸಿ ಕೊಡಿ. ಬಡವರಿಗೆ ಸಹಾಯ ಮಾಡಿದರೆ ದೇವರು ಮೆಚ್ಚು ತ್ತಾನೆ."

"ಆಗಲಿ – ಯೋಚನೆ ಮಾಡುತ್ತೇನೆ."

ಎಂದು ಬಟ್ಟೆ ಧರಿಸಿ ಬಾಗಿಲು ತೆಗೆದ. ಆಚಾರ್ಯರು ಒಳಗೆ ಬಂದು ಟಿಫಿನ್ ಕ್ಯಾರಿಯರ್ ಮೇಟಿಯ ಕೈಗೆ ಕೊಟ್ಟು ತೊಳೆದು ತರಲು ಹೇಳಿದರು.

"ಹಣ್ಣೂ ಹಂಪಲು ಹಾಗೇ ಉಳಿಯಿತಲ್ಲಯ್ಯಾ"

“ನೀನು ಮನೆಗೆ ತೊಗೊಂಡು ಹೋಗು.”

“ಎರಡು ಬಾಟಲೂ ಉಳಿದಿದೆ.”

“ಅದನ್ನು ನಿನ್ನ ಶಾಲೆಯಲ್ಲಿಟ್ಟಿರು ಆಚಾರಿ.”

ಆಚಾರ್ಯರು ಬಾಟಲುಗಳನ್ನು ಬುಟ್ಟಿಯಲ್ಲಿಟ್ಟು ಸಾಮಾನುಗಳನ್ನು ಕಾರಿಗೆ ಸಾಗಿಸಿ ಸರಸ್ವತಿಯೊಂದಿಗೆ ಕಾರಿನ ಬಳಿ ಹೋದರು. ಮೋಟಿ ಕಾರಿಗೆ ಟಿಫಿನ್ ಕ್ಯಾರಿಯರ್ ತಂದುಕೊಟ್ಟ.

ಹೋಟೇಲ್ ಬಿಲ್, ಮೋಟಿಯ ಬಿಲ್, ಭಕ್ಷೀಸು ಎಲ್ಲಾ ಕೊಟ್ಟು ಜೀವಣ್ಣರಾಯ ಕಾರಿನ ಬಳಿ ಬಂದ.

ಹನ್ನೊಂದು ಗಂಟೆಯ ವೇಳೆಗೆ ಕಾರು ಊರು ತಲುಪಿತು. ಮುತ್ತಮ್ಮನ ಮನೆಗೆ ಸ್ವಲ್ಪ ದೂರದಲ್ಲಿದ್ದ ಪ್ರಧಾನ ರಸ್ತೆಯೊಂದರ ಬಳಿ ಕಾರು ನಿಲ್ಲಿಸಲಾಯಿತು. ಅಲ್ಲಿ ಸರಸ್ವತಿ ಕೆಳಗಿಳಿದಳು.

ಆಚಾರ್ಯರನ್ನು ಶಾಲೆಯ ಬಳಿ ಇಳಿಸಿ ಜೀವಣ್ಣರಾಯ ತನ್ನ ಮನೆಗೆ ಹೋದ.

ಆಚಾರ್ಯರು ಬುಟ್ಟಿಯನ್ನು ಶಾಲೆಯೊಳಗೆ ತಂದು, ಅದರಲ್ಲಿದ್ದ ಶೀಷೆಗಳನ್ನು ತೆಗೆದು ರೂಮಿನ ಗೂಡಿನಲ್ಲಿಟ್ಟು ಬೀಗ ಹಾಕಿ, ಬುಟ್ಟಿ ಟಿಫಿನ್ ಕ್ಯಾರಿಯರ್ ಹೊತ್ತುಕೊಂಡು ಮನೆಗೆ ಹೋದರು.

ಸರಸ್ವತಿ ಮುತ್ತಮ್ಮನ ಮನೆಗೆ ಬಂದೊಡನೆಯೇ ಮುತ್ತಮ್ಮ

“ಎಲ್ಲಿಗೆ ಓಗಿಬಿಟ್ಟಿದ್ದೈಮ್ಮ - ರಾತ್ರಿ ಬರಲೇ ಇಲ್ಲ.”

“ಯಾರೋ ತಿಪ್ಪಗೊಂಡನಹಳ್ಳಿಗೆ ಕರ್ಕೊಂಡು ಹೋಗಿದ್ದರು. ರಾತ್ರಿ ಅಲ್ಲಿಯೇ ಇದ್ದೆ. ಏನು ಸಮಾಚಾರ

“ನಿನಗೊಂದು ಕಾಗಜ ಬಂದೈತೆ - ಟೆಲಿಗ್ರಾಮ್ ಬಂದೈತೆ”

ಎಂದು ಕಾಗದ, ಟೆಲಿಗ್ರಾಮ್ ತಂದಿತ್ತಳು. ಸರಸ್ವತಿ ಒಡೆದು ನೋಡುತ್ತಿರಲು

“ಯಾರದಮ್ಮ ಕಾಗಜ.”

“ಶ್ರೀಕಂಠಮೂರ್ತಿಗಳದ್ದು. ನಾಡಿದ್ದು ಶನಿವಾರ ಶಿವಮೊಗ್ಗೆಯಲ್ಲಿ ನಾಟಕವಂತೆ. ಕೂಡಲೆ ಹೊರಟು ಬರುವಂತೆ ಬರೆದಿದ್ದಾರೆ.”

“ಇವತ್ತೇ ಒಲ್ಟು ಬಿಡ್ತೀಯಾ ?”

" ಇಲ್ಲ ಮುತ್ತಮ್ಮ - ನಾಳೆ ರಾತ್ರಿ ಹೊರಡುತ್ತೇನೆ."

"ರಾತ್ರಿ ನೀನು ಬತ್ತೀಂತ ಭಾಳ ಒತ್ತು ದೀಪ ಉರ್ಸ್ಕೊಂಡೇ ಕುಳಿತಿದ್ದೆ."

" ಏನು ಸಮಾಚಾರ – ಯಾರಾದರೂ ಬಂದಿದ್ದರೇನು ?"

" ರಾಮರಾಜಪ್ಪನ ನ್ಯಾಸ್ತ ವೀರಣ್ಣ, ಒಬ್ಬ ಸಿನೇಹಿತನ್ನ ಕರ್ಕೊಂಡು ಬಂದಿದ್ದ."

" ಅವರು ಯಾರು ?"

" ಬೂದಲೂರೊಳಗೆ ಪೋಲೀಸ್ ಇನಿಸ್ಪೇಟರಂತೆ !"

" ತಿರುಗಿ ಯಾವಾಗ ಬರುತ್ತಾರೆ ?"

" ಎಂಗೆ ಏಳಲಿ – ನೀನು ಬರೋದು ಓಗೋದೂ ಒಂದೂ ಗೊತ್ತಾ ಗಾಕಿಲ್ಲ. ಅವರ್ನ ಯಾವಾಗ ಬಾ ಅಂತಾ ಏಳಲಿ ?"

" ಆಗಲಿ – ನೋಡೋಣ – ಯಾವದಕ್ಕೂ ಋಣಾನುಬಂಧವಿರ ಬೇಕು."

ತಿಪ್ಪಗೊಂಡನಹಳ್ಳಿ ಬಿಟ್ಟು ಬರುವುದಕ್ಕೆ ಸರಸ್ವತಿಗೂ ಸ್ವಲ್ಪವೂ ಮನಸ್ಸಿರಲಿಲ್ಲ. ಅಲ್ಲಿ ಒಂದೆರಡು ದಿನವಾದರೂ ಜೀವಣ್ಣರಾಯ ನಿಲ್ಲಬಹುದೆಂದು ನಿರೀಕ್ಷಿಸಿಕೊಂಡಿದ್ದಳು. ಜೀವಣ್ಣರಾಯ ಅವಳನ್ನು ಹೊರಡಿಸಿಕೊಂಡು ಬಂದುದಕ್ಕಿಂತಲೂ ಹೆಚ್ಚಾಗಿ, ದುಡ್ಡು ಕೊಟ್ಟು ಅವನು ಆಡಿದ ಮಾತು ಅವಳ ಹೃದಯಕ್ಕೆ ಶಲ್ಯದಂತೆ ನೆಟ್ಟಿತ್ತು. 'ಹೆಂಗಸರ ಋಣ ಇಟ್ಟುಕೊಳ್ಳ ಬಾರದು.' – ಈ ಮಾತು ಏಕೆ ಆಡಿದರು – ವ್ಯವಹಾರ ಇಲ್ಲಿಗೇ ಮುಗಿಯಿ ತೆಂದು ಅರ್ಥವೇ ? ರಾತ್ರಿ ನಡೆದುದನ್ನು, ಜೀವಣ್ಣರಾಯ ಆಡಿದ ಮಾತು ಗಳನ್ನು ಜ್ಞಾಪಿಸಿಕೊಂಡಳು. ಅವರಿಗೆ ಬೇಸರವಾಗಿದ್ದರೆ 'ನಾನು ಏನೋ ಅನ್ನುತ್ತಿದ್ದೆ – ನೀನು ಮಹಾ ಪಂಡಿತೆ ಕಣೇ ಸರಸೂ' ಎಂದು ಹೇಳುತ್ತಿ ದ್ದರೇ ? ಇವರು ನನ್ನ ಜೀವನದಲ್ಲಿ ಚಂದ್ರನಂತೆ ಮೂಡಿದ್ದಾರೆ – ಇವರ ಸ್ನೇಹ ಭದ್ರಪಡಿಸಿಕೊಳ್ಳಬೇಕು ಎಂದು ಆಲೋಚಿಸುತ್ತ ಸರಸ್ವತಿ ಸ್ನಾನ, ಊಟ ಮುಗಿಸಿ ಮಲಗಿ ಚೆನ್ನಾಗಿ ನಿದ್ರಿಸಿದಳು.

ಮುತ್ತಮ್ಮ ಬಂದು ಆರು ಗಂಟೆಗೆ ಎಬ್ಬಿಸಿದಾಗಲೇ ಎಚ್ಚರ ಸರಸ್ವತಿಗೆ.

" ಗಂಟೆಯೆಷ್ಟು ಮುತ್ತಮ್ಮ."

" ಆರು ಗಂಟೆ ಬಡೀತಲ್ಲಮ್ಮ."

" ರಾತ್ರಿ ಕಣ್ಣು ಮುಚ್ಚಲಿಲ್ಲಮ್ಮ. ಚೆನ್ನಾಗಿ ನಿದ್ರೆ ಬಂತು."
" ಏಳು ಮುಕ ತೊಳ್ಕೊಂಡು ತಲೆ ಬಾಚಿಕೋ."
" ಯಾರು ಬರುತ್ತಾರೆ ?"
" ಯಾರಿಗೂ ಏಳಿಲ್ವೇ !"
" ಹಾಗಾದರೇನು ಅವಸರ."
" ನಿನ್ನೆ ಯಾರಮ್ಮ ಕರ್ಕೊಂಡು ಓಗಿದ್ದೋರು."
" ಬಸವನಗುಡಿಯಲ್ಲಿ ದೊಡ್ಡ ವ್ಯಾಪಾರಿಗಳಂತೆ."
" ಏನು ಯಾಪಾರ ಮಾಡ್ತಾನೆ."
" ಕಾಫಿ ಪುಡಿ – ಕಾಫಿ ಬೀಜ."
" ಆಯಪ್ಪನ ಎಸರೇನು ಏಳು."
" ಜೀವಣ್ಣರಾಯರು."
" ಆಯಪ್ಪನೇ !"
" ಅವರನ್ನು ನೀನು ಬಲ್ಲೆಯಾ ಮುತ್ತಮ್ಮ."
" ಚಂದಾಕಿ ಬಲ್ಲೆ. ಎಷ್ಟೋ ಸಲ ಇಲ್ಲಿಗೂ ಬಂದವ್ನೆ."
" ಈಗ ಬರುವುದಿಲ್ಲವೇ ?"
" ಬರಾಕಿಲ್ಲಮ್ಮ – ಒಂದ್ಸಾರಿ ಎಂಥಾ ಕೆಲ್ಸವಾಯ್ತೂಂತೀ."
" ಏನಾಯ್ತು ಮುತ್ತಮ್ಮ."

" ಜೀವಣ್ಣರಾಯಪ್ಪ ಬಂದು ಬಾಲೂನ ಕರೆಸೂಂತ ಏಳಿ ಓಗಿದ್ದ. ನಾನು ಬಾಲೂನ ಕರ್ಸಿ ಮಡಿಗ್ಕೊಂಡಿದ್ದೆ. ಆಯಪ್ಪ ಬರ್ನಿಲ್ಲ – ರಾಮರಾಜಪ್ಪ ಬಂದೋನೇ ಬಾಲೂನ ಕರ್ಕೊಂಡು ರೂಮಿಗೆ ಓದ. ಜೀವಣ್ಣರಾಯಪ್ಪ ಬಂದು ಬಿಡೋಣವಾ – ಬಾಲೂ ಬರ್ನಿಲ್ಲ ಅಂತ ಏಳಿ ಸಾಗಿಸೋ ಏರ್ಪಾಟು ನಾನು ಮಾಡಿದೆ. ಆಯಪ್ಪ ಕುಂತೇ ಬುಟ್ಟ. ರಾಮರಾಜಪ್ಪ ಒರಗೆ ಬಂದು ಓದ. ಜೀವಣ್ಣರಾಯಪ್ಪ ಒಳಗಿದ್ದೋಳು ಬಾಲೂ ಅಂತ ತಿಳಿದ್ಮೆಲೇ ಧಂಪ ಮಾಡಿ, ನನ್ನ ಬಯ್ದು ಓದ – ಅವತ್ನಿಂದ ಈ ಕಡೆ ಸುಳಿಲೇ ಇಲ್ಲಮ್ಮ."

ಮುತ್ತಮ್ಮನಿಗೆ ಜೀವಣ್ಣರಾಯರ ಪರಿಚಯವಿದ್ದ ಸಂಗತಿ ಕೇಳಿದ ಮೇಲೆ ಸರಸ್ವತಿಯ ಜಂಘಾಬಲವೇ ಉಡುಗಿ ಹೋಯಿತು. ' ಇನ್ನು ಅವರ ಮುಂದೆ ನನ್ನಾಟ ನಡೆಯುವುದಿಲ್ಲ ' ಎಂದು ಖಿನ್ನಳಾದಳು.

ಅಂದೇ ಜೀವಣ್ಣರಾಯನನ್ನು ನೋಡುವ ವ್ಯವಸ್ಥೆ ಮಾಡಿಕೊಳ್ಳಲಿಲ್ಲವಲ್ಲ ಎಂದು ಸರಸ್ವತಿ ವಿಷಾದ ಪಟ್ಟುಕೊಂಡಳು. ಮಲಗಿದ್ದಂತೆ ಥಟ್ಟನೆ ಒಂದು ವಿಚಾರ ಹೊಳೆಯಿತು. ಮಿಂಚಿನಂತೆದ್ದು ಮುಖಮಾರ್ಜನೆ ಮಾಡಿಕೊಂಡು, ಅಲಂಕಾರ ಮಾಡಿಕೊಂಡು ಹೊರಡಲು ಸಿದ್ಧವಾದಳು. ಮುತ್ತಮ್ಮ ಆಶ್ಚರ್ಯದಿಂದ

"ಇಷ್ಟು ಹೊತ್ತಿನಾಗ ಎಲ್ಲೀಗೆ ಒರಟೆಯಮ್ಮ ?"

"ಎಲ್ಲೀಗೇಂತ ಹೊರಡುವಾಗ ಕೇಳಬೇಡ ಮುತ್ತಮ್ಮ."

"ರಾತ್ರೀಗೆ ಬತ್ತೀಯಾ ?"

"ಗೊತ್ತಿಲ್ಲ - ಬಂದರೂ ಬರುತ್ತೇನೆ."

"ಬೀಟು ಪೋಲೀಸಿನವರನ್ನ ನೋಡ್ಕೊಂಡು ಬಾಮ್ಮ."

ಸರಸ್ವತಿ ಉತ್ತರ ಕೊಡದೆ ಅಲ್ಲಿಂದ ವೇಗವಾಗಿ ಹೊರಟುಬಿಟ್ಟಳು.

ಅವಳು ಆಚಾರ್ಯರ ಶಾಲೆಗೆ ಬಂದಾಗ, ಆಚಾರ್ಯರು ಪಾಠ ಮುಗಿಸಿ, ಮನೆಗೆ ಹೋಗುವ ಸಿದ್ಧತೆಯಲ್ಲಿದ್ದರು. ಸರಸ್ವತಿ ಬಂದ ಸ್ಥಿತಿ ನೋಡಿ ಗಾಬರಿಯಾಗಿ

"ಏನಾಯಿತಮ್ಮ" ಎಂದು ಕೇಳಿದರು.

"ಏನೂ ಆಗಿಲ್ಲ ಮೇಷ್ಟ್ರೆ. ಅವರನ್ನು ನೋಡಬೇಕೆನ್ನಿಸಿತು ಬಂದುಬಿಟ್ಟೆ."

"ನಾಳೆ ಬರ್ತೀನೀಂತ ಹೇಳಿದ್ದಾನಲ್ಲಾ !"

"ನಾನು ಈಗಲೇ ನೋಡಬೇಕು ಮೇಷ್ಟ್ರೇ – ಅಂಗಡಿಯಲ್ಲಿ ಇರುತ್ತಾರಲ್ಲವೇ ?"

"ನೀವು ಅಂಗಡಿಗೆ ಹೋಗುತ್ತೀರಾ ?"

"ಏಕೆ - ಹೋಗಬಾರದೇನು ? ಕಾಫಿ ಪುಡಿ ವ್ಯಾಪಾರ ಮಾಡುವ ಹಾಗೆ ಹೋಗುತ್ತೇನೆ."

"ನಿಮ್ಮ ದಮ್ಮಯ್ಯ ಸುಮ್ಮನೆ ಕೂಡಿ. ಅಂಗಡಿಗೆ ಹೋಗಿ ಅವನನ್ನು ನೋಡಿದರೆ ನಮ್ಮಿಬ್ಬರಿಗೂ ವ್ಯಾಜ್ಯ ಹುಟ್ಟುತ್ತದೆ."

"ಹಾಗಾದರೆ ಎಲ್ಲಿ ನೋಡುವುದು. ನೀವು ಹೋಗಿ ಹೇಳಿಬನ್ನಿ."

ಜೀವಣ್ಣರಾಯನಿಗೆ ಹೇಳಿಬರದೆ ಗತ್ಯಂತರವೇ ಇಲ್ಲವೆಂದು ತಿಳಿದ ಆಚಾರ್ಯರು

" ನೀವು ಇಲ್ಲೇ ಇರಿ - ನಾನು ಹೇಳಿಬರುತ್ತೇನೆ"

ಎಂದು ಎದ್ದು ಹೋದರು.

ಆಚಾರ್ಯರು ಹಿಂದಿರುಗಿ ಬರುವವರೆಗೆ ಸರಸ್ವತಿಗೆ ಜೀವದಲ್ಲಿ ಜೀವವಿಲ್ಲ. 'ಬರುತ್ತಾರೋ ಬರುವುದಿಲ್ಲವೋ - ಬಂದರೂ ನನ್ನ ಮೇಲೆ ಕೋಪವಮಾಡಿ ಕೊಳ್ಳುವರೇನೋ ?' ಎಂಬ ಚಿಂತೆ ಅವಳನ್ನು ಕೊರೆಯಲಾರಂಭಿಸಿತು.

ಆಚಾರ್ಯರು ಹಿಂದಿರುಗಿ ಬಂದ ಕೂಡಲೆ ಆತುರದಿಂದ ಕೇಳಿದಳು

" ಏನು ಹೇಳಿದರು ಮೇಷ್ಟ್ರೇ."

" ಬರುತ್ತಾನಂತಮ್ಮ. ಲಾಲ್‌ಬಾಗ್ ಗೇಟಿನ ಹತ್ತಿರ ನಿಮ್ಮನ್ನ ಕಾಣುತ್ತಾರಂತೆ."

" ಯಾವಾಗ ?"

" ಈಗಲೇ – ನೀವು ಹೊರಡಿ - ಅವನು ಕಾರಿನಲ್ಲಿ ಬರುತ್ತಾನೆ."

" ಅವರು ಯಾವ ಕಡೆ ಬರುತ್ತಾರೆ."

" ಕ್ರಿಷ್ಣರಾವ್ ಪಾರ್ಕಿನ ಮುಂದೆ ಹೋಗಿ - ದಾರಿಯಲ್ಲೇ ಸಿಕ್ಕಿದರೂ ಸಿಕ್ಕಬಹುದು."

ಸರಸ್ವತಿ ಅಲ್ಲಿ ನಿಲ್ಲದೆ ಹೊರಟಳು.

ಅವಳು ಲಾಲ್‌ಬಾಗ್ ಗೇಟು ತಲಪುವಷ್ಟರಲ್ಲಿ ಜೀವಣ್ಣರಾಯ ಕಾರಿನಲ್ಲಿ ಬಂದ. ಡ್ರೈವರ್ ಸರಸ್ವತಿಯ ಬಳಿಗೆ ಕಾರು ತಂದು ನಿಧಾನವಾಗಿ ನಡೆಸಿದ. ಜೀವಣ್ಣರಾಯ ಬಾಗಿಲು ತೆಗೆಯಲು ಸರಸ್ವತಿ ಅದರಲ್ಲಿ ಕುಳಿತಳು.

ಡ್ರೈವರ್ ಕಾರು ಲಾಲ್‌ಬಾಗ್ ಒಳಗೆ ಓಡಿಸಿ ತಂದು ಅದನ್ನೊಂದು ಮೂಲೆಯಲ್ಲಿ ಹೆಚ್ಚು ಬೆಳಕಿಲ್ಲದಿರುವ ಕಡೆ ನಿಲ್ಲಿಸಿ ತಾನು ಹೋಗಿ ದೂರನಿಂತ.

" ಇದೇನು ಸರಸಾ ಈಗ ಬಂದೆ. ಅಂಗಡೀಗೆ ಬರಬೇಕೂಂತಿದ್ದೆ ಎನ್ನುವುದನ್ನು ಆಚಾರಿ ತಿಳಿಸಿದ."

" ಅರ್ಜೆಂಟಾಗಿ ನೋಡಬೇಕಾಗಿತ್ತು. ನಾಳೆ ಮದ್ಯಾನ್ಹದವರೆಗೆ ಕಾಯಲು ಸಾಧ್ಯವಿರಲಿಲ್ಲ."

" ಏನು ವಿಶೇಷ."

" ಸರಸ್ವತಿ ತನಗೆ ಬಂದಿದ್ದ ಕಾಗದ, ಟೆಲಿಗ್ರಾಮ್ ತೆಗೆದು ಜೀವಣ್ಣ ರಾಯನ ಕೈಯ್ಯಲ್ಲಿಟ್ಟಳು. ಅವನು ಕಾರು ಇಳಿದು ಹೋಗಿ ರಸ್ತೆಯ ದೀಪದ ಬೆಳಕಿನಲ್ಲಿ ಅವುಗಳನ್ನೋದಿಕೊಂಡು ಬಂದು ಮತ್ತೆ ಕಾರಿನಲ್ಲಿ ಕುಳಿತು

" ನೀನು ಹೊರಡಬೇಕಾಗಿದೆ ? "

" ಹೌದು - ಅದಕ್ಕೇ ನಿಮ್ಮನ್ನು ನೋಡಲು ಆತುರಳಾದೆ."

" ಯಾವಾಗ ಹೊರಡುವುದು ? "

" ನೀವು ಹೋಗಬೇಡವೆಂದರೆ ಹೋಗುವುದಿಲ್ಲ."

" ಛೆ ! ಛೆ ! ಹಾಗೆ ಮಾಡುವುದುಂಟೆ ? ಶ್ರೀಕಂಠಮೂರ್ತಿಗೆ ಹೇಳದೆ ಕೇಳದೆ ನಿಲ್ಲಬಾರದು."

" ನಾನು ಹೋದ ಮೇಲೆ ನೀವು ಕಾಗದ ಬರೆದು ಕರೆಸಿಕೊಳ್ಳುವಿರಾ ?" ಎಂದು ಸರಸ್ವತಿ ಜೀವಣ್ಣರಾಯನ ಮೈ ಕೈ ನೇವರಿಸಲಾರಂಭಿಸಿದಳು.

" ಇದು ನಡು ರಸ್ತೆ ಸರಸಾ. ದೂರವೇ ಕುಳಿತು ಮಾತನಾಡು."

" ಹೀಗೆ ಮಾತನಾಡಲು ನನ್ನಿಂದಾಗುವುದಿಲ್ಲ. ನಡೆಯಿರಿ – ಎಲ್ಲಿಗಾದರೂ ಹೋಗೋಣ."

" ಎಲ್ಲಿಗೆ ಹೋಗುವುದು ? "

" ಯಾವುದಾದರೂ ಹೋಟೆಲಿಗೆ ! "

" ನನಗೆ ಹೋಟಲುಗಳ ಪರಿಚಯವಿಲ್ಲವಲ್ಲಾ !"

"ಯಾವ ಹೋಟೆಲಿಗೂ ನೀವು ಕಾಫಿಪುಡಿ ಸಪ್ಲೈ ಮಾಡುವುದಿಲ್ಲವೇ?"

" ಮಾಡುತ್ತೇನೆ. ಸನ್‌ರೈಸ್ ಹೋಟೆಲಿನವರು ನನ್ನಿಂದ ಸಾವಿರಾರು ರೂಪಾಯಿ ಪುಡಿ ಕೊಂಡಿದ್ದಾರೆ."

" ಅಲ್ಲಿಗೇ ಹೋಗೋಣ."

" ನನಗೂ ಹೋಟೆಲಿನವರಿಗೂ ಕೇವಲ ವ್ಯಾಪಾರಸಂಬಂಧ. ಈ ಈ ಕೆಲಸ ನಾನೆಂದಿಗೂ ಮಾಡಿಲ್ಲ."

" ಚಿಂತೆಯಿಲ್ಲ – ಇವತ್ತು ನನಗಾಗಿ ಮಾಡಿ."

ಸರಸ್ವತಿಯ ಸಲಹೆಯನ್ನೊಪ್ಪಿಕೊಳ್ಳುವುದೂ ನಿರಾಕರಿಸುವುದೂ ಎರಡೂ ಜೀವಣ್ಣರಾಯನಿಗೆ ಕಷ್ಟವಾಯಿತು. ಒಪ್ಪಿಕೊಂಡರೆ ಹೋಟೇಲಿನಲ್ಲಿ ಗುಲ್ಲಾಗುತ್ತದಲ್ಲ ಎನ್ನುವ ಭಯ. ಸರಸ್ವತಿಯ ಧ್ವನಿಯಲ್ಲಿ ಭಿಕ್ಷೆ - ನಿರೀಕ್ಷೆ –

ಆತುರಗಳು ತುಂಬಿದ್ದವು. ಅವಳ ಮನಸ್ಸನ್ನು ನೋಯಿಸುವುದೂ ಸಾಧ್ಯವಾಗಿರಲಿಲ್ಲ.

ಜೀವಣ್ಣರಾಯ ಯೋಚನೆ ಮಾಡುತ್ತ ಕುಳಿತ.

ಸರಸ್ವತಿಯ ಕಣ್ಣಲ್ಲಿ ನೀರೇ ತುಂಬಿ ಬಂದಿತ್ತು. ಅವಳ ಧ್ವನಿ ಗದ್ಗದವಾಗಿತ್ತು.

" ಹೋಗಲಿ ಬಿಡಿ – ನಿಮಗೇಕೆ ತೊಂದರೆ – ನಾನು ಇಳಿದು ಮನೆಗೆ ಹೋಗುತ್ತೇನೆ "

ಎಂದು ಕಾರಿನ ಹ್ಯಾಂಡಲ್‌ಗೆ ಕೈ ಹಾಕಿದಳು. ಜೀವಣ್ಣರಾಯ ಅವಳ ಕೈ ಬಿಡಿಸಿಕೊಂಡು

" ಹೋಗೋಣ ನಡಿ – ಆದರೆ ನಾನು ಹನ್ನೆರಡು ಗಂಟೆಯ ವೇಳೆಗೆ ಮನೆಗೆ ಹೋಗಿ ಬಿಡಬೇಕು, ಮನೆಯವರಿಗೆ ಮೈಯಲ್ಲಿ ಸರಿಯಿಲ್ಲ."

" ಅಷ್ಟು ಹೊತ್ತಿನ ಮೇಲೆ ನಾನು ಎಲ್ಲಿಗೆ ಹೋಗಲಿ."

" ನಿನ್ನನ್ನು ಮನೆಯಲ್ಲಿ ಬಿಟ್ಟು ಹೋಗುತ್ತೇನೆ."

" ನಮ್ಮ ಮನೆಯವರು ಬೇರೆ ಭಾವಿಸಬಹುದು."

ಎಂದು ಹೇಳುತ್ತಿರುವಂತೆ ಸರಸ್ವತಿಯ ಮನಸ್ಸಿನಲ್ಲಿ ಅನುಮಾನ ಮೂಡಿತು. ' ನನ್ನ ಅನುಕೂಲ – ಅನಾನುಕೂಲ ತಿಳಿಸಿದರೆ ಅವರು ಒಪ್ಪದೆ ಹೋಗಬಹುದು ' ಎಂದುಕೊಂಡು

" ಸನ್‌ರೈಸ್ ಹೋಟಲಿನವರು ನಿಮಗೆ ಚೆನ್ನಾಗಿ ಗುರುತೇ."

" ಅವರು ನನ್ನ ಗಿರಾಕಿಗಳು ಎಂದು ಹೇಳಿದ್ದೇನಲ್ಲ. ಮ್ಯಾನೇಜರ್ ನನ್ನ ಪರಮ ಶಿಷ್ಯ. ಪೌಂಡಿಗೆ ಅರ್ಧಾಣೆಯಂತೆ ಕಮಿಷನ್ ಬೇರೆ ಅವನಿಗೆ ಕೊಡುತ್ತಿದ್ದೇನೆ."

" ಸರಿ – ಹಾಗಾದರೇನು ಭಯ. ನೀವು ಹನ್ನೆರಡು ಗಂಟೆಗೆ ಹೋಗಲೇ ಬೇಕು."

" ಅದು ಅತ್ಯಗತ್ಯ. ನಿನ್ನೆಯೂ ನಾನು ಊರಿನಲ್ಲಿರಲಿಲ್ಲ."

" ಒಂದು ಕೆಲಸ ಮಾಡಬಹುದಲ್ಲ ; "

" ಏನು ಹೇಳು."

" ಮ್ಯಾನೇಜರಿಗೆ ಹೇಳಿ ನೀವು ಹನ್ನೆರಡು ಗಂಟೆಗೆ ಹೋಗಿ – ನಾನು ಅಲ್ಲಿಯೇ ರಾತ್ರಿ ಕಳೆದು ಬೆಳಿಗ್ಗೆ ಎದ್ದು ಹೋಗುತ್ತೇನೆ."

ಜೀವಣ್ಣರಾಯ ಕ್ಷಣಕಾಲ ಯೋಚಿಸಿ ' ಹಾಗೇ ಆಗಲಿ ' ಎಂದು ಒಪ್ಪಿಕೊಂಡ."

ಜೀವಣ್ಣರಾಯ ಹಾರ್ನ್ ಮಾಡಲು ಡ್ರೈವರ್ ಬಂದ – ಹೋಟೆಲ್ ವ್ಯವಸ್ಥೆ ಮಾಡುವ ರೀತಿಯನ್ನು ಡ್ರೈವರಿಗೆ ತಿಳಿಸಿ 'ಸನ್‌ರೈಸಿಗೆ ಬಿಡು' ಎಂದು ಹೇಳಿದ.

ಡ್ರೈವರ್ ಕಾರು ತಂದು ' ಸನ್‌ರೈಸ್ ಹೊಟೇಲಿ'ನ ಪಕ್ಕದ ರಸ್ತೆಯಲ್ಲಿ ನಿಲ್ಲಿಸಿ ಕೆಳಗಿಳಿದು ಹೋದ.

ಜೀವಣ್ಣರಾಯ ಕಾರಿನ ಒಂದು ಮೂಲೆಯಲ್ಲಿ ಅಡಗಿಕೊಂಡು ಕುಳಿತ. ಕ್ಷಣಗಳು ಅವನಿಗೆ ಯುಗಗಳಂತೆ ಕಂಡು ಬಂದವು.

ಡ್ರೈವರ್ ಹೋಟೆಲ್ ಮ್ಯಾನೇಜರ್ ಜತೆ ಬಂದುದನ್ನು ಕಂಡ ಮೇಲೆ ಜೀವಣ್ಣರಾಯ ಉಸಿರಾಡಲಾರಂಭಿಸಿದ.

ಮ್ಯಾನೇಜರ್ ಕಾರ್ ಬಳಿಗೆ ಬಂದು.

" ನಮಸ್ಕಾರ ಸಾರ್. ಒಳಗೆ ಬನ್ನಿ" ಎಂದು ಕರೆದ.

" ಜತೆಯಲ್ಲಿ ಒಬ್ಬರನ್ನು ಕರೆತಂದಿದ್ದೇನೆ ಗಣೇಶ್ – ರೂಮ್ ಕೊಡುತ್ತೀಯಾ ? "

" ಒಳಗೆ ಬನ್ನಿ ಸಾರ್ – ಎಲ್ಲಾ ಅನುಕೂಲ ಮಾಡಿಕೊಡುತ್ತೇನೆ."

" ಹೇಗೆ ಒಳಕ್ಕೆ ಹೋಗುವುದು."

" ಹಿಂದುಗಡೆ ಮೆಟ್ಟಲಿದೆ – ಅಲ್ಲಿಂದ ಕರೆದುಕೊಂಡು ಹೋಗುತ್ತೇನೆ ಬನ್ನಿ."

ಜೀವಣ್ಣರಾಯ ಡ್ರೈವರಿಗೆ ' ಇಲ್ಲೇ ಇರು ಡ್ರೈವರ್ – ನಾನು ಬರುವವರೆಗೆ ' ಎಂದು ಹೇಳಿ ಗಣೇಶನ ಹಿಂದೆ ಹೋದ. ಸರಸ್ವತಿ ಅವನ ಜತೆ ಹೊರಟಳು.

ಗಣೇಶ ಎರಡನೆಯ ಅಂತಸ್ತಿನಲ್ಲಿದ್ದ ಸಾಲು ರೂಮುಗಳಿಗೆ ಕರೆದೊಯ್ದು, ಫ್ಲೋರ್‌ಬಾಯ್ (Floor Boy)ಗೆ ಬೀಗದ ಕೈ ತೆಗೆದುಕೊಂಡು ಬಾರೆಂದು ಹೇಳಿದ.

ಬಾಯ್ ಬೀಗದ ಕೈ ತರಲು ಹೋದ ಮೇಲೆ ಗಣೇಶ ಅತಿಥಿಗಳನ್ನು ೧೯ ನೆಯ ರೂಮಿನ ಮುಂದಿದ್ದ ಬಾಲ್‌ಕನಿ (Balcony)ಗೆ ಕರೆದುಕೊಂಡು ಬಂದ. ಅಲ್ಲಿನ ದೀಪ ಹಚ್ಚಲು ಅವನು ಪ್ರಯತ್ನಿಸಲು ಜೀವಣ್ಣರಾಯ ತಡೆದ.

ಬಾಯ್ ರೂಮಿನ ಬೀಗದ ಕೈಗಳನ್ನು ತಂದು ಗಣೇಶನ ಕೈಗೆ ಕೊಡಲು ಅವನು ೧೯ ನೆಯ ರೂಮಿನ ಬೀಗ ತೆಗೆದು ಅತಿಥಿಗಳನ್ನು ಒಳಕ್ಕೆ ಕರೆದೊಯ್ದ.

ರೂಮು ಸೊಗಸಾದ ಕರೀಮರದ ಕುರ್ಚಿ, ಮೇಜು, ಮಂಚ, ಡ್ರೆಸ್ಸಿಂಗ್ ಟೇಬಲ್‌ಗಳಿಂದ ಅಲಂಕೃತವಾಗಿತ್ತು. ಗಣೇಶ ಪಕ್ಕದಲ್ಲಿದ್ದ ಕಿರುಕೋಣೆ ಬಾಗಿಲು ತೆಗೆದು

"ಅಟ್ಯಾಚ್ಡ್ ಬಾತ್‌ರೂಮ್ ಇದೆ" ಎಂದು ಹೇಳಿದ.

ಗಣೇಶ ಫ್ಲೋರ್ ಬಾಯನ್ನು ಕಾಫಿ ತರಲು ಹೇಳಿ ಕಳುಹಿಸಿ

"ಸುಖವಾಗಿರಿ ಸಾರ್. ಯಾವ ಭಯವೂ ಇಲ್ಲ. ನಾನು ನೋಡಿ ಕೊಳ್ಳುತ್ತೇನೆ."

"ಫ್ಲೋರಿನಲ್ಲಿ ಇನ್ನೂ ಎಷ್ಟು ಜನರಿದ್ದಾರೆ ಗಣೇಶ್."

"ಈ ಸಾಲಿನ ಕೊನೆಗೆ ೨೬ – ೨೭ ರೂಮುಗಳಲ್ಲಿ ಎರಡು ಸಿಂಧಿ ಸಂಸಾರಗಳಿವೆ – ಅವರೂ ಇವತ್ತೇ ಬಂದರು. ಉಳಿದ ರೂಮುಗಳೆಲ್ಲಾ ಖಾಲಿ."

ಜೀವಣ್ಣರಾಯನಿಗೆ ಸಮಾಧಾನವಾಯಿತು.

"ನೋಡು ಗಣೇಶ್ – ನಾನು ಹನ್ನೆರಡು ಗಂಟೆಗೆ ಹೋಗುತ್ತೇನೆ. ಈಕೆ ರಾತ್ರಿ ಇಲ್ಲೇ ಇದ್ದು ಬೆಳಿಗ್ಗೆ ಹೊರಡುತ್ತಾರೆ – ಆಗಬಹುದೋ ?"

"ಇದೇನು ಸಾರ್ ಹೀಗೆ ಕೇಳುತ್ತೀರಿ – ಹೋಟೆಲೇ ನಿಮ್ಮದಲ್ಲವೇ ? ಡ್ರಿಂಕ್ಸ್ ಏನಾದರೂ ಕಳಿಸಿ ಕೊಡಲೇನು ?"

"ಕಳುಹಿಸಿಕೊಡು – ಈಗ ಏಳೂವರೆ – ಸುಮಾರು ಒಂಭತ್ತು ಗಂಟೆಗೆ ಊಟ ಕಳುಹಿಸಿಕೊಡು."

"ರಾತ್ರಿ ನಾನು ಹೋಗಬೇಕಾದರೆ . . . "

"ನಾನು ಆಫೀಸಿನಲ್ಲಿಯೇ ಮಲಗಿರುತ್ತೇನೆ. ಫ್ಲೋರ್‌ಬಾಯ್ ಇಲ್ಲೆ ವೆರಾಂಡದಲ್ಲಿ ಮಲಗಿರುತ್ತಾನೆ. ಅವನಿಗೆ ತಿಳಿಸಿದರೆ ನನಗೆ ಸುದ್ದಿ ಮುಟ್ಟಿಸುತ್ತಾನೆ."

"ನೀನೇ ಬಂದು ನನ್ನ ಕಳಿಸಿಕೊಡಪ್ಪಾ."

" ಹಾಗೇ ಆಗಲಿ ಸಾರ್ – ನಾನು ಒಂದು ಗಂಟೆಗೆ ಮುಂಚೆ ಮಲಗುವುದೇ ಇಲ್ಲ."

" ದಿನವೂ ಅಷ್ಟು ಹೊತ್ತಾಗುತ್ತದೆಯೋ ? "

" ಹನ್ನೆರಡರವರೆಗೂ ಪ್ಯಾಸೆಂಜರ್‌ಗಳು ಇದ್ದೇ ಇರುತ್ತಾರೆ. ಆ ಮೇಲೆ ದಿನದ ಜಮಾ ಖರ್ಚು ನೋಡಿ ಲೆಕ್ಕ ಬರೆದು ನಾನು ಮಲಗುತ್ತೇನೆ."

ಪ್ಲೋರ್ ಬಾಯ್ ಕಾಫಿ ತಂದಿಟ್ಟ. ಗಣೇಶ ಅತಿಥಿಗಳಿಗೆ ಕಾಫಿ ಕೊಟ್ಟು ತಾನೂ ಸೇವಿಸಿ ಹೊರಟುನಿಂತು

" ಡ್ರಿಂಕ್ಸ್ ಈಗಲೇ ಕಳಿಸಿಕೊಡುತ್ತೇನೆ."

" ಹಾಗೇ ಮಾಡು - ಬೆಳಿಗ್ಗೆ ಇವರನ್ನು ಕಳಿಸಿಕೊಡುವ ವಿಷಯ."

" ನೀವು ಯೋಚನೆ ಮಾಡಬೇಡಿ ಸಾರ್. ಹೋಟೆಲ್ ಕಾರಿನಲ್ಲಿ ಕಳಿಸಿಕೊಟ್ಟು ನಿಮಗೆ ಅಂಗಡೀಗೆ ಸುದ್ದಿ ಮುಟ್ಟಿಸುತ್ತೇನೆ - ಆಗಬಹುದೊ ?"

" ಗಣೇಶ – ನಿನ್ನಿಂದ ತುಂಬ ಉಪಕಾರವಾಯಿತಪ್ಪಾ."

" ಇದೇನು ಸಾರ್ - ಹೀಗೆ ಹೇಳುತ್ತೀರಿ. ನಿಮ್ಮ ಉಪ್ಪು ತಿಂದಿದ್ದೇನೆ ತಿನ್ನುತ್ತಾ ಇದ್ದೇನೆ. ನಾನು ಇಷ್ಟು ಮಾಡಬೇಡವೇ ?" ಎಂದು ಹೇಳಿ ಹೋದ.

ತಾನು ಪ್ರತಿಯೊಂದು ಹೆಜ್ಜೆಯನ್ನೂ ಜೋಕೆಯಿಂದ ಇಡಬೇಕೆನ್ನುವುದನ್ನರಿತು ಸರಸ್ವತಿ

" ನಾನು ನಿಮಗೆ ತುಂಬ ತೊಂದರೆಕೊಟ್ಟೆ " ಎಂದಳು.

" ಇದೆಲ್ಲಾ ನನಗೆ ಅಭ್ಯಾಸವಿಲ್ಲ. ಆದ್ದರಿಂದ ಹೆದರಿದೆ."

" ಈಗ . . . ? "

" ಈಗೇನೂ ಭಯವಿಲ್ಲವೆನ್ನುವುದು ಗೊತ್ತಾಯಿತು."

" ಡ್ರಿಂಕ್ಸ್‌ಗೆ ಏಕೆ ಹೇಳಿದಿರಿ ? "

" ಅದಿಲ್ಲದಿದ್ದರೆ ಸೊಗಸೇ ಇಲ್ಲ."

" ನಿತ್ಯ ಡ್ರಿಂಕ್ಸ್ ತೆಗೆದುಕೊಳ್ಳುತ್ತೀರಾ ? "

" ಅಭ್ಯಾಸವಾಗಿ ಹೋಗಿದೆ. ಏನು ಮಾಡಲಿ ಹೇಳು."

" ನಿತ್ಯ ತೆಗೆದುಕೊಳ್ಳಬೇಡಿ - ಆರೋಗ್ಯ ಚೆನ್ನಾಗಿರಬೇಡವೆ ? "

" ನನ್ನ ಆರೋಗ್ಯದ ವಿಷಯದಲ್ಲಿ ನಿನಗಷ್ಟು ಚಿಂತೆಯೇ ? "

"ಹಾಳು ಪ್ರೀತಿ ಕೆಟ್ಟದ್ದೊಂದ್ರೆ !"

"ಏಕೆ ಸರಸಾ !"

"ಹೋಗಲಿ ಆ ಮಾತು ಬೇಡ."

"ಇಲ್ಲ - ನೀನು ಹೇಳಲೇ ಬೇಕು."

"ಬೆಳಿಗ್ಗೆ ಮನೆಯ ಹತ್ತಿರ ನೀವು ಇಳಿಸಿ ಹೊರಟು ಹೋದಿರಿ. ನಿಂತರೆ ಕುಳಿತರೆ ನಿಮ್ಮ ಧ್ಯಾನವಾಯಿತು. ಈ ಕಾಗದ ಟೆಲಿಗ್ರಾಮೂ ಬಂದಿತ್ತು – ನಿಮ್ಮನ್ನು ಬಿಟ್ಟು ಹೋಗಬೇಕಲ್ಲ ಎಂದು ಮನಸ್ಸಿಗೆ ತುಂಬ ವ್ಯಥೆ ಯಾಯಿತು. ಮನಸ್ಸು ತಡೆಯದೇ ಹುಚ್ಚಿಯಂತೆ ಓಡಿಬಂದೆ."

"ನನ್ನ ಬಗ್ಗೆ ಹೀಗೆ ವಿಶ್ವಾಸ ತೊರಿಸಿದವರು ವಿರಳ ಸರಸು."

"ಆಹಾ ; ಎಷ್ಟು ನಿಜವೋ !—ನಿಮಗೆ ಹೆಂಗಸರ ಸ್ನೇಹವಾಗಿಯೇ ಇಲ್ಲವೇನೋ ?"

"ಇಲ್ಲವೆಂದು ನಾನು ಹೇಳಿದೆನೇ ! ಹಿಂದೆ ನಾನೊಬ್ಬಳ ಸ್ನೇಹ ಮಾಡಿದೆ - ಅದೂ ಒಂದು ಮಾಮೂಲು ಮನೆಯಲ್ಲಿ. ಅವಳೂ ವಿಶ್ವಾಸ ವಾಗಿದ್ದಳು. ಒಂದು ದಿನ ಗೊತ್ತುಮಾಡಿಕೊಂಡಿದ್ದಂತೆ ಅವಳನ್ನು ಕಾಣಲು ಹೋದೆ – ನಾನು ಕಂಡದ್ದೇನು ಬಲ್ಲೆಯಾ – ಅವಳು ಇನ್ನೊಬ್ಬನೊಂದಿಗಿದ್ದು ಎದ್ದು ಬಂದಳು. ಅದೇ ಕೊನೆಯಾಯಿತು. ನಾನು ಯಾರ ಸ್ನೇಹಮಾಡು ವುದಕ್ಕೂ ಹೋಗಲಿಲ್ಲ. ನಿನ್ನ ಅಂಗಡಿ ಬೀದಿಯಲ್ಲಿ, ಆಚಾರಿ ಶಾಲೆಯಲ್ಲಿ ಕಂಡಿದ್ದೆ. ಆಚಾರಿಯನ್ನು ಒಂದೆರಡು ಸಲ ಕೇಳಿದೆ. ನೀನು ನಾಟಕದ ಕಂಪೆನಿಯಲ್ಲಿರುವ ವಿಷಯ ಹೇಳಿದ್ದ. ಮೊನ್ನೆ ಅವನೇ ಬಂದು ನೀನು ಬಂದಿರುವ ಸಂಗತಿ ತಿಳಿಸಿದ – ಮುಂದಿನ ವಿಷಯ ನಿನಗೆ ಗೊತ್ತೇ ಇದೆ."

"ನಾನು ಹೆಚ್ಚೇನೂ ಬಯಸುವುದಿಲ್ಲ – ನೀವು ಸ್ವಲ್ಪ ವಿಶ್ವಾಸವಿಟ್ಟು ಕೊಂಡಿದ್ದರೆ ಸಾಕು."

ಬಾಗಿಲು ತಟ್ಟಿದ ಶಬ್ದ ಕೇಳಿಬಂತು.

ಜೀವಣ್ಣರಾಯ ಹೋಗಿ ಬಾಗಿಲು ತೆಗೆಯಲು ಫ್ಲೋರ್ ಬಾಯ್ ಪಾನೀಯ, ಅದರ ಪರಿಕರಗಳನ್ನು ತಂದು ಮೇಜಿನ ಮೇಲಿಟ್ಟು

"ಒಂಭತ್ತು ಗಂಟೆಗೆ ಊಟ ತರುತ್ತೇನೆ ಸಾರ್." ಎಂದ.

"ಹಾಗೇ ಮಾಡಪ್ಪ."

ಎಂದು ಜೀವಣ್ಣರಾಯ ಅವನನ್ನು ಕಳುಹಿಸಿ ಬಾಗಿಲು ಹಾಕಿಕೊಂಡು ಬಂದು ಕುಳಿತ.

ಸರಸ್ವತಿ, ಜೀವಣ್ಣರಾಯ ಇಬ್ಬರೂ ಒಂದೊಂದು ಗ್ಲಾಸು ಪಾನೀಯ ಸೇವಿಸಿದ ಮೇಲೆ

"ನನ್ನ ವಿಶ್ವಾಸದಲ್ಲಿ ನಿನಗೆ ಅಪನಂಬಿಕೆಯೇ ಸರಸೂ."

ಎಂದು ಕೇಳಿದ. ಸರಸ್ವತಿ ಪಾನೀಯ ಗ್ಲಾಸಿನ ಮೇಲೆ ಬೆರಳಾಡಿಸುತ್ತ

"ಖಂಡಿತವಾಗಿಯೂ ಅಪನಂಬಿಕೆ ಇಲ್ಲ."

"ಮನಸ್ಸಿನಲ್ಲಿ ಏನಿದೆ ಸ್ಪಷ್ಟವಾಗಿ ಹೇಳು."

"ಜೀವನದಲ್ಲಿ ನಾನೂ ತುಂಬ ನೊಂದಿದ್ದೇನೆ. ಜನ ನನ್ನನ್ನು ನಂಬಿಸಿ ನಂಬಿಸಿ ಮೋಸ ಮಾಡಿದ್ದಾರೆ. ಜೀವನವನ್ನೇ ಮುಗಿಸಿಬಿಡಬೇಕೆಂದು ಮನಸ್ಸು ಮಾಡಿಕೊಂಡಿದ್ದೆ. ಆಗ ರಾಘವಾಚಾರ್ಯರು ಈ ನಾಟಕದ ಕಂಪೆನಿ ನನಗೆ ಗಂಟು ಹಾಕಿ 'ಹೋಗೀಯಮ್ಮ – ದುಃಖ ಮರೆಯುವುದಕ್ಕೆ ಕೈ ತುಂಬ ಕೆಲಸ ಇದ್ದರೆ ಒಳ್ಳೆಯದು' ಎಂದು ಹೇಳಿದರು. ನಾಟಕದ ಕಂಪೆನಿಯ ಹೊಲಸು ನೋಡಿ ನೋಡಿ ನನಗೂ ಸಾಕಾಗಿ ಹೋಗಿದೆ. ನೀವು ಕೈಹಿಡಿದು ಉದ್ಧಾರ ಮಾಡಿದರೆ ನಾನೂ ಮನುಷ್ಯಳಂತೆ ಬಾಳಲು ಸಾಧ್ಯವಾಗುತ್ತದೆ."

ಜೀವಣ್ಣರಾಯ ವಿಚಾರಪರವಶನಾಗಿ ಗ್ಲಾಸುಗಳನ್ನು ಮತ್ತೆ ಭರ್ತಿ ಮಾಡಿದ.

"ನಾನು ನಿಮ್ಮನ್ನು ಯಾವದಕ್ಕೂ ಪೀಡಿಸುವುದಿಲ್ಲ. ಎರಡು ಹೊತ್ತು ಊಟ – ವರ್ಷಕ್ಕೆರಡು ಸೀರೆ ಕೊಟ್ಟರಾಯಿತು. ನನ್ನ ಮಕ್ಕಳಿಗೂ ಅಷ್ಟೇ ನಾನು ಕೇಳುವುದು."

"ಆ ವಿಷಯ ಈಗ ಒತ್ತಾಯ ಮಾಡಬೇಡ ಸರಸೂ. ನನಗೂ ಕೆಲವು ಕಷ್ಟಗಳಿವೆ. ಈಗಲೇ ಖಚಿತವಾಗಿ ನಾನು ಏನನ್ನೂ ಹೇಳಲಾರೆ. ನೀನೂ ಶಿವಮೊಗ್ಗೆಗೆ ಹೊರಟದ್ದೀ – ಕೆಲವು ದಿವಸ ಬಿಟ್ಟು ನಾನು ಕಾಗದ ಬರೆಯುತ್ತೇನೆ."

"ನಿಮ್ಮ ಕಾಗದ ನೋಡಿದ ಕೂಡಲೆ ನಾನು ಬಂದುಬಿಡುತ್ತೇನೆ."

"ಹಾಗೇ ಆಗಲಿ"

ಎಂದು ಹೇಳಿದ. ಜೀವಣ್ಣರಾಯನ ಉತ್ಸಾಹ ಕುಂದುತ್ತಿದ್ದುದು ಸರಸ್ವತಿಗೆ ಸ್ಪಷ್ಟವಾಯಿತು. ಅಂದೇ ತನ್ನ ವಿಶ್ವಾಸಕ್ಕೆ ಬಲವಾದ ಅಸ್ತಿಭಾರ ಹಾಕದಿದ್ದರೆ ಮುಂದೆ ಇಂಥ ಅವಕಾಶ ಸಿಕ್ಕುವುದಿಲ್ಲವೆನ್ನುವುದೂ ಅವಳಿಗೆ ಮನವರಿಕೆಯಾಯಿತು.

ತುಂಬಿದ್ದ ತನ್ನ ಗ್ಲಾಸು ತೆಗೆದುಕೊಂಡು ಜೀವಣ್ಣರಾಯನ ಬಳಿಗೆ ಬಂದು, ಅದರಿಂದಲೇ ಅವನಿಗೆ ಕುಡಿಸಿದಳು. ಅವನು ಕುಡಿದು ಮಿಕ್ಕುದನ್ನು ತಾನು ಸೇವಿಸಿ ಅವನ ಕಣ್ಣಲ್ಲಿ ಕಣ್ಣಿಟ್ಟು ತನ್ನ ಆತುರ ವ್ಯಕ್ತಮಾಡಿದಳು.

ಜೀವಣ್ಣರಾಯ ಎದ್ದು ರೂಮಿನ ದೀಪ ಆರಿಸಿದ.

ಊಟ ತೆಗೆದುಕೊಂಡು ಫ್ಲೋರ್ ಬಾಯ್ ಒಂಭತ್ತು ಗಂಟೆಗೆ ಬಂದು ರೂಮ್ ಬಾಗಿಲು ತಟ್ಟಿದ.

ರಾಯ, ಸರಸ್ವತಿ ಇಬ್ಬರೂ ಹಾಸಿಗೆ ಬಿಟ್ಟೆದ್ದು ಕುಳಿತರು.

ಊಟ ಮುಗಿದ ಕೂಡಲೆ ಜೀವಣ್ಣರಾಯ ಕೈಗೆ ಕೋಟು ತೆಗೆದುಕೊಂಡ. ಸರಸ್ವತಿ ಅದನ್ನು ಕಿತ್ತುಕೊಂಡು

"ಇದೇನಿದು ?"

"ಹೋಗೋಣ – ಹೊತ್ತಾಗುತ್ತಾ ಬಂತು."

"ಹನ್ನೆರಡು ಗಂಟೆಗೆ ಹೋಗುತ್ತೇವೆಂದವರು ಒಂಭತ್ತು ಗಂಟೆಗೆ ಹೊರಡುತ್ತಿರುವಿರಿ? ಏಕೆ ಹೀಗೆ ಮಾಡುತ್ತಿರುವಿರಿ ?"

"ಸುಮ್ಮನೆ ಕಾಲ ಏಕೆ ಕಳೆಯಬೇಕು. ನಿನ್ನೆಯೂ ನಿನಗೆ ನಿದ್ರೆಯಿಲ್ಲ."

"ನಾಟಕದಲ್ಲಿ ನನಗೆ ನಿದ್ರೆಗೆಟ್ಟು ಅಭ್ಯಾಸವಿದೆ."

"ನನಗೆ ಅಭ್ಯಾಸವಿಲ್ಲ."

ಕೋಟನ್ನು ಜೀವಣ್ಣರಾಯನ ಕೈಗಿತ್ತು ಕುರ್ಚಿಯ ತುದಿಯಲ್ಲಿ ಸರಸ್ವತಿ ಕುಕ್ಕರಿಸಿ ಬಿಟ್ಟಳು. ಅವಳು ಕಣ್ಣುಗಳು ಹನಿಗೂಡಿದುದನ್ನು ಕಂಡು ರಾಯ ಕೋಟನ್ನು ತನ್ನ ಕುರ್ಚಿಯ ಮೇಲೆ ಒಗೆದು ಅವಳ ಸಮೀಪಕ್ಕೆ ಬಂದು

"ಕಣ್ಣೀರು ಹಾಕಬೇಡ ಸರಸೂ."

ಸರಸ್ವತಿ ಅವನ ಕೈಗಳನ್ನೆತ್ತಿ ಕಣ್ಣಿಗೊತ್ತುಕೊಂಡು

"ನನ್ನೇಕೆ ಇಷ್ಟು ಕೆಟ್ಟದಾಗಿ ಕಾಣುತ್ತಿರುವಿರಿ. ನಿಮ್ಮನ್ನು ಪ್ರೀತಿಸಿದ್ದೇ ನನ್ನ ತಪ್ಪೇ"

ಜೀವಣ್ಣ ಅವಳ ಮೈ ಮೇಲೆ ಕೈಯಾಡಿಸಿ ಗಲ್ಲ ಹಿಡಿದೆತ್ತಿ ಮುದ್ದಿಟ್ಟ. ಸರಸ್ವತಿ ಎದ್ದು ನಿಲ್ಲುವಷ್ಟರಲ್ಲಿ ದೀಪ ಆರಿಸಲ್ಪಟ್ಟಿತ್ತು.

ಕತ್ತಲೆಯಲ್ಲಿಯೇ ಜೀವಣ್ಣರಾಯ ತನ್ನ ಕೈ ಗಡಿಯಾರ ನೋಡಿದ. ರೇಡಿಯಂ ಡಯಲಿನಲ್ಲಿ ಮುಸಕು ಮುಸಕಾಗಿ ವೇಳೆ ಕಾಣುತ್ತಿತ್ತು. ಮಂಚದಿಂದ ಎದ್ದು ಕುಳಿತ

"ಗಂಟೆಯೆಷ್ಟು" ಎಂದು ಸರಸ್ವತಿ ಕೇಳಿದಳು.

"ಹನ್ನೊಂದೂವರೆ"

ಎಂದವನೇ ಕತ್ತಲೆಯಲ್ಲಿಯೇ ತನ್ನ ಬಟ್ಟೆಗಳನ್ನು ತೆಗೆದುಕೊಂಡು ಧರಿಸಿದ. ಸರಸ್ವತಿಯೂ ವಸ್ತ್ರಗಳನ್ನು ಧರಿಸಿದಳು.

ಜೀವಣ್ಣರಾಯ ಸ್ವಿಚ್ ಹಾಕಿ ಮತ್ತೆ ಗಡಿಯಾರ ನೋಡಿ.

"ತಪ್ಪು ಹೇಳಿದೆ – ಸರಸೂ. ಗಂಟೆ ಹತ್ತೂವರೆ."

"ಈಗಲೇ ಹೊರಡುತ್ತಿರಾ."

"ಎದ್ದದ್ದಾಯಿತು – ಹೊರಟು ಬಿಡುತ್ತೇನೆ."

ಎಂದು ಉಳಿದಿದ್ದ ಮದ್ಯವನ್ನು ಗ್ಲಾಸಿಗೆ ಬಗ್ಗಿಸಿಕೊಂಡು ಸೇವಿಸಿ.

"ನೀನು ಬೆಳಿಗ್ಗೆಯವರೆಗೂ ಇಲ್ಲೇ ಇರುವೆಯಾ ?"

"ಹೂ – ಹಾಗೇ ಮಾಡಬೇಕಾಗಿದೆ."

"ಬೆಳಿಗ್ಗೆ ಗಣೇಶ ಮನೆಗೆ ಕಳಿಸಿಕೊಡುತ್ತಾನೆ."

"ನಿಮ್ಮನ್ನು ಪುನಃ ನೋಡುವುದು ?"

"ನಾಳೆ ಊರಿಗೆ ಯಾವ ಗಾಡಿಗೆ ಹೊರಡುತ್ತೀ ?"

"ರಾತ್ರಿ ಗಾಡೀಗೆ."

"ಮಧ್ಯಾನ್ಹ ಆಚಾರಿ ಶಾಲೆಗೆ ಬರುತ್ತೇನೆ."

"ತಪ್ಪದೆ ಬರುವಿರಾ ?"

"ನಾನು ಮಾತಿಗೆ ತಪ್ಪಿದ್ದುಂಟೇ ?"

ಜೀವಣ್ಣರಾಯ ಪರ್ಸಿನಿಂದ ಕೆಲವು ನೋಟುಗಳನ್ನು ತೆಗೆದು ಸರಸ್ವತಿಯ ಕೈಯಲ್ಲಿಟ್ಟ.

"ಇದೇಕೆ – ನಿನ್ನೆ ಕೊಟ್ಟಿದ್ದೀರಲ್ಲಾ."

"ಇರಲಿ – ಖರ್ಚಿಗೆ ಬೇಕಾಗಬಹುದು."

ಸರಸ್ವತಿ ಹಣವನ್ನು ತನ್ನ ಪರ್ಸಿಗೆ ಸೇರಿಸುತ್ತಾ

"ಹೋಟೆಲ್ ಬಿಲ್ ನಾನು ಕೊಡುತ್ತೇನೆ" ಎಂದಳು

"ಛೆ; ನೀನೇಕೆ ಕೊಡಬೇಕು. ಗಣೇಶ ನನ್ನ ಅಕೌಂಟಿಗೆ ಬರೆದುಕೊಳ್ಳುತ್ತಾನೆ"

ಎಂದು ಹೇಳಿ ಬಾಗಿಲು ಬಳಿ ಸರಿದ. ಸರಸ್ವತಿ ಇವನ ಹತ್ತಿರ ಬಂದು ಅವನಿಗೆ ತೆಕ್ಕೆಬಿದ್ದು

"ನನ್ನನ್ನು ಮರೆಯಬೇಡಿ" ಎಂದಳು.

ಜೀವಣ್ಣರಾಯ ಮೆಲ್ಲನೆ ಬಾಗಿಲು ತೆಗೆದು 'ಬಾಯ್' ಎಂದು ಕೂಗಿದ. ಬಾಯ್ – ಬರಲು 'ಮ್ಯಾನೇಜರನ್ನ ಕರೆ' ಎಂದು ಹೇಳಿದ.

ಗಣೇಶ ಬಂದವನೇ 'ಹೊರಡೋಣವೇ?' ಎಂದು ಕೇಳಿದ.

"ನನ್ನ ಕಾರು ಮುಟ್ಟಿಸಿಬಿಡಪ್ಪ. ಇವರನ್ನು ಸರಿಯಾಗಿ ನೋಡಿಕೋ ಬೆಳಿಗ್ಗೆ ಮನೆಗೆ ಕಳುಹಿಸಿಕೊಡು"

ಎಂದು ಹೇಳಿ ಅವನ ಜತೆ ಹೊರಟ.

ಕಣ್ಮರೆಯಾಗುವವರೆಗೂ ಸರಸ್ವತಿ ಜೀವಣ್ಣರಾಯನನ್ನು ನೋಡಿ ಒಳಕ್ಕೆ ಬಂದಳು. ಅವಳ ಹಿಂದೆಯೇ ಬಂದ ಫ್ಲೋರ್ ಬಾಯ್ ಊಟದ ತಟ್ಟೆಗಳು, ಕಾಫಿ ಕಪ್ಪು ಸಾಸರ್ ತೆಗೆದು ಹೊರಗಿಟ್ಟು, ಆಷ್ ಟ್ರೇಯಲ್ಲಿದ್ದ (ash tray) ಸಿಗರೇಟು ತುಂಡುಗಳನ್ನು ಹೊರಗೆ ಬಿಸುಡಿ, ಆಷ್ ಟ್ರೇ ತಂದು ಮೇಜಿನ ಮೇಲಿಟ್ಟು, ಸಿಗರೇಟ್ ಪಾಕೆಟ್, ಕಡ್ಡಿ ಪೊಟ್ಟಣವನ್ನು ಮೇಜಿನ ಮೇಲಿಟ್ಟು, ಹಾಸಿಗೆಗಳನ್ನು ಸರಿಮಾಡಿ

"ಏನಾದರೂ ಬೇಕೇನ್ರಮ್ಮಾ" ಎಂದು ಕೇಳಿದ.

"ಏನೂ ಬೇಡಪ್ಪ" ಎಂದಳು.

ಫ್ಲೋರ್ ಬಾಯ್ ಗೂಡಿನಲ್ಲಿದ್ದ ನೀರಿನ ಹೂಜಿ ತೆಗೆದುಕೊಂಡು

"ಕುಡಿಯುವುದಕ್ಕೆ ನೀರು ತಂದಿಡುತ್ತೇನೆ. ಆ ಮೇಲೆ ನೀವು ಬಾಗಿಲು ಹಾಕಿಕೊಳ್ಳಿ."

ಎಂದು ಹೇಳಿ ಹೋದ.

ಸರಸ್ವತಿ ಯೋಚಿಸುತ್ತ ಕಳಿತಳು. ಸಾಕಷ್ಟು ಮದ್ಯಸೇವನೆಯಾಗಿದ್ದರೂ ಬುದ್ಧಿ ಭ್ರಮಣೆಯಾಗಿರಲಿಲ್ಲ. ಅವಳ ಕಣ್ಣುಗಳು ಮಾತ್ರ ಕೆಂಪು ತಿರುಗಿದ್ದವು.

ಸರಸ್ವತಿ ಯೋಚಿಸುತ್ತಲೇ ಎದ್ದು ಸಿಗರೇಟ್ ಪ್ಯಾಕೆಟ್ ಕೈಗೆ ತೆಗೆದುಕೊಂಡಳು. ಫ್ಲೋರ್‌ಬಾಯ್ ಬರುವ ವಿಷಯ ನೆನಪಿಗೆ ಬಂದು ಅದನ್ನು ಇದ್ದಲ್ಲಿಯೇ ಬಿಟ್ಟಳು.

ಗಣೇಶರಾಯ ಬಂದವನೇ ಒಮ್ಮೆ ಸುತ್ತಲೂ ನೋಡಿ.

" ಬಾಯ್ ಎಲ್ಲಿ " ಎಂದು ಕೇಳಿದ,

" ನೀರು ತರುವುದಕ್ಕೆ ಹೋಗಿದ್ದಾನೆ."

ಗಣೇಶ ಕುರ್ಚಿಯ ಮೇಲೆ ಕುಳಿತು ಮೇಜಿನ ಮೇಲಿದ್ದ ಸಿಗರೇಟ್ ಪ್ಯಾಕಿನಿಂದ ಒಂದು ಸಿಗರೇಟ್ ಹಚ್ಚಿಕೊಂಡು ಹೊತ್ತಿಸಿದ.

ಫ್ಲೋರ್ ಬಾಯ್ ನೀರಿನ ಹೂಜಿ ತಂದಿಟ್ಟ. ಗಣೇಶ ಅವನ ಕಡೆ ತಿರುಗಿ

" ಇಪ್ಪತ್ತೇಳನೆಯ ರೂಮಿನ ಪ್ಯಾಸೆಂಜರ್ ಬಿಲ್ ಮಾಡಿದ ಹಾಗಿತ್ತು ನೋಡಿ, ವೆರಾಂಡಾ ದೀಪ ಆರಿಸಿ ನೀನು ಹೋಗಿ ಮಲಗಿಕೋ."

ಎಂದ. ಗಣೇಶನೇಕೆ ಎದ್ದು ಹೋಗಲಿಲ್ಲವೆಂದು ಸರಸ್ವತಿ ಯೋಚಿಸ ತೊಡಗಿ

" ರಾಯರು ಹೋದರೇ ? "

" ಹೋದರು. ಶುದ್ಧ ಪುಕ್ಕಲು ಮನುಷ್ಯ."

" ಇಲ್ಲಿಗೆ ಬರುತ್ತಿರುತ್ತಾರೋ ? "

" ಇಲ್ಲಮ್ಮ. ಇದೇ ಮೊದಲು . . . ನಿಮ್ಮನ್ನು ನಾನು ಎಲ್ಲಿಯೋ ನೋಡಿದ್ದೇನೆ. ಮರೆತು ಹೋಗಿದೆ."

" ನೋಡಿರಬಹುದು. ನಾನು ಇದೇ ಊರಿನಲ್ಲಿದ್ದೆ."

ಗಣೇಶ ಯೋಚಿಸುತ್ತ ಕುಳಿತ.

" ಏನು ಯೋಚಿಸುತ್ತಿರುವಿರಿ ? "

" ಎಲ್ಲಿ ನೋಡಿದ್ದೇಂತ ಯೋಚಿಸುತ್ತಿದ್ದೇನೆ. ಗಂಟಲಲ್ಲಿದೆ ಬಾಯಿಗೆ ಬರಲೊಲ್ಲದು . . . ಹಾಃ ಈಗ ಜ್ಞಾಪಕಕ್ಕೆ ಬಂತು."

" ಎಲ್ಲಿ ನೋಡಿದ್ದೀರಿ ? "

" ಬಟ್ಟೆ ಅಂಗಡಿ ನಂಜಪ್ಪನ ಜತೆಯಲ್ಲಿ—ಸರಿಯೇ ? "

" ನಂಜಪ್ಪನವರು ನಿಮಗೆ ಗುರುತೇ ? "

" ಚೆನ್ನಾಗಿ ಗುರುತು. ನಾನೂ ಅವನೂ ಸ್ನೇಹಿತರು."

ಅರೆಕ್ಷಣದಲ್ಲಿ ಸರಸ್ವತಿ ಮನಸ್ಸಿನಲ್ಲಿಯೇ ಲೆಕ್ಕ ಹಾಕಿಕೊಂಡು

" ನನ್ನ ಕಾಡುಪಾಲು ಮಾಡಿಬಿಟ್ಟರು."

" ಯಾಕಮ್ಮ – ಏನಾಯಿತು."

" ನಿಮ್ಮ ಸ್ನೇಹಿತರೂಂತ ಅಂದ ಮೇಲೆ ಎಲ್ಲಾ ನಿಮಗೆ ಗೊತ್ತೇ ಇರಬೇಕು."

" ಗೊತ್ತಿದೆ."

" ಅವರು ಇಲ್ಲಿಗೆ ಬರುತ್ತಿರುತ್ತಾರೆಯೇ ? "

" ದಿನಕ್ಕೊಮ್ಮೆಯಾದರೂ ಬಂದೇ ಬರುತ್ತಾನೆ."

"ನಾಳೆ ಅವರನ್ನಿಲ್ಲಿ ಬರಮಾಡುವಿರಾ-ನಾನು ಮಾತನಾಡಬೇಕಾಗಿದೆ."

" ಬರಮಾಡಬಲ್ಲೆ - ಅವರಿಂದ ಪ್ರಯೋಜನವಿಲ್ಲವಮ್ಮಾ."

" ಏಕೆ ?"

ನಿಮ್ಮ ವಿಷಯದಲ್ಲಿ ಅವನ ಮನಸ್ಸು ತುಂಬ ಕೆಟ್ಟುಹೋಗಿದೆ. ಅಲ್ಲದೆ ಕುಂತಳಮ್ಮನಿಗಾಗಿ ಅವನು ಪ್ರಾಣ ಬಿಡುತ್ತಾನೆ."

" ಕುಂತಳಮ್ಮ ! "

ಎಂದವಳೇ ಸರಸ್ವತಿ ತಿರಸ್ಕಾರವಾಗಿ ನಕ್ಕಳು.

" ನಿಮ್ಮ ಮುಂದೆ ಎಲ್ಲಿ ಕುಂತಳಮ್ಮ ! "

" ಅದನ್ನೂ ಅವರೇ ಹೇಳಿದ್ದರೇ ? "

" ನಿಮ್ಮ – ತನ್ನ ಸಂಬಂಧದ ವಿಷಯವೆಲ್ಲಾ ನಂಜಪ್ಪ ಹೇಳಿದ್ದಾನೆ. ಹಾಳು ನಾಟಕದ ಕಂಪೆನಿ ಸೇರುವುದಕ್ಕೆ ಏಕೆ ಹೋದಿರಮ್ಮ. ಬೆಂಗಳೂರು ಹಾಳಾಗಿತ್ತೇ ? "

" ಏನು ಮಾಡಲಿ – ಸಂದರ್ಭ ಹಾಗೆ ಬಂತು ! ಬೆಂಗಳೂರಿಗೇ ಹಿಂದಿರುಗಿ ಬರಬೇಕೆಂದು ನನಗೆ ತುಂಬ ಆಸೆ. ಜೀವಣ್ಣರಾಯರು ಏನೋ ಹೇಳಿದ್ದಾರೆ – ನೋಡೋಣ ಏನಾಗುತ್ತದೋ ? "

“ ಇದೆಲ್ಲಾ ಆಗಲಿಲ್ಲ ಹೋಗಲಿಲ್ಲ. ಜೀವಣ್ಣರಾಯರು ತುಂಬ ಲೆಕ್ಕಾಚಾರಸ್ಥರು. ಜವಾಬ್ದಾರಿ ಮೈಮೇಲೆ ಹಾಕಿಕೊಳ್ಳುವ ಸ್ವಭಾವದವರಲ್ಲ.”

“ ನನ್ನ ಗ್ರಹಚಾರ ಇನ್ನೂ ಹರಿದಿಲ್ಲವೆಂದು ಕಾಣುತ್ತದೆ.”

“ ಅದೇ ನಿಮ್ಮ ತಪ್ಪು ತಿಳಿವಳಿಕೆ. ನಮ್ಮ ಹೋಟಲಿಗೆ ಬರುತ್ತಿದ್ದವರು ಇವತ್ತು ಹೇಗಾಗಿದ್ದಾರೆ ಬಲ್ಲಿರಾ ? ಪದ್ಮಾ ಮೊನ್ನೆ ಒಂಭತ್ತು ಸಾವಿರ ಕೊಟ್ಟು ಮನೆ ತೆಗೆದುಕೊಂಡಳು ; ಶಿವನಂಜಿಯನ್ನು ದಾವಣಗೆರೆ ಸಾಹುಕಾರರು ಕರೆದುಕೊಂಡು ಹೋದರು ; ಚಂದ್ರಿಯನ್ನು ಹುಬ್ಬಳ್ಳಿಯವನೊಬ್ಬ ಮದುವೇನೆ ಮಾಡಿಕೊಂಡ. ನೀವು ಧೈರ್ಯತಂದುಕೊಂಡು ಬೆಂಗಳೂರಿಗೆ ಬಂದು ಬಿಡ್ರಮ್ಮಾ.”

“ ನನ್ನ ಯೋಗಕ್ಷೇಮ ನೀವು ನೋಡಿಕೊಳ್ಳುವಿರಾ ? ”

“ ಎರಡು ದಿವಸ ಇಲ್ಲೇ ನಿಲ್ಲಿ - ನಿಮಗೇ ಗೊತ್ತಾಗತ್ತೆ.”

“ ನಾನು ನಾಳೆ ಹೊರಡಬೇಕಲ್ಲಾ ಗಣೇಶರಾಯರೇ.”

“ ಹೋಗೋದು ಇದ್ದೇ ಇದೆ – ಒಳ್ಳೆಯ ಅವಕಾಶ ಪ್ರತಿನಿತ್ಯ ಬಾಗಿಲಿಗೆ ಬಂದು ಬೀಳುವುದಿಲ್ಲವಮ್ಮ. ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಳ್ಳಬಾರದು.”

“ ಅಂಥ ಸಂದರ್ಭ ಈಗೇನು ಬಂದಿದೆ ? ”

“ ಹೇಳಿದರೆ ನಿಮಗೆ ಅಸಮಾಧಾನವಾಗುವುದಿಲ್ಲವಷ್ಟೆ ! ”

“ ಅಸಮಾದಾನವೇಕೆ ಹೇಳಿ.”

“ ನಾನು ಹೇಳುವುದು ಹೇಳುತ್ತೇನೆ. ನಿಮಗೆ ಸೂಕ್ತ ಕಂಡರೆ ಒಪ್ಪಿಕೊಳ್ಳಿ. ಇಲ್ಲದಿದ್ದರೆ ಬಿಟ್ಟು ಬಿಡಿ, ಆದರೆ ಈ ಮಾತು ಹೊರಗೆ ಹೋಗಬಾರದು.”

“ ಇತರರ ಹತ್ತಿರ ಇವುಗಳನ್ನೆಲ್ಲಾ ನಾನೇಕೆ ಮಾತನಾಡಲಿ ಹೇಳಿ.”

“ ನನ್ನ ಸ್ನೇಹಿತ ಒಬ್ಬ ಹಾಸನದಲ್ಲಿ ವ್ಯಾಪಾರ ಮಾಡಿಕೊಂಡಿದ್ದಾನೆ. ತಿಂಗಳಿಗೊಮ್ಮೆ ಮಾಲು ಖರೀದಿ ಮಾಡುವುದಕ್ಕೆ ಇಲ್ಲಿಗೆ ಬರುತ್ತಿರುತ್ತಾನೆ-”

“ ಏನು ವ್ಯಾಪಾರ ಅವರದು.”

“ ಕಬ್ಬಿಣದ ಸಾಮಾನು ಹಾಸನದಲ್ಲಿ ದೊಡ್ಡ ಅಂಗಡಿ ಇದೆ. ಯುದ್ಧಕ್ಕೆ ಮುಂಚೆ ಸಾಧಾರಣವಾಗಿದ್ದ - ಯುದ್ಧ ಬಂತು, ಕಬ್ಬಿಣದ

ಸಾಮಾನುಗಳ ಬೆಲೆ ಒಂದಕ್ಕೆ ನಾಲ್ಕು – ಆರು – ಎಂಟು ಆಯ್ತು. ಆದಿ ರಾಜಯ್ಯನ ಹತ್ತಿರ ಭಾರಿ ಸ್ಟಾಕ್ ಇತ್ತು. ಹೊಡಿಯಿತು ನೋಡಿ ಶುಕ್ರದೆಸೆ. ಎರಡು ಮೂರು ವರ್ಷದಲ್ಲಿ ಅವನು ಮೂರು ನಾಲ್ಕು ಲಕ್ಷ ರೂಪಾಯಿ ಕುಳ ವಾದ.”

“ಅಷ್ಟು ಸಂಪಾದನೆಯಾಯಿತೇ ?”

“ಆಗದೆ ಏನಮ್ಮಾ. ಬಂಗಾರಕ್ಕಿಂತ ಬೆಲೆಯಾಗಿದೆ ಕಬ್ಬಿಣ ಈಗ. ಆದಿ ಸ್ವಲ್ಪ ಷೋಕಿ ಆಸಾಮಿ. ಇಲ್ಲಿಗೆ ಬಂದರೆ ಎರಡು ಮೂರು ದಿನಸ ನಿಲ್ಲು ತ್ತಾನೆ – ಆ ಎರಡು ಮೂರು ದಿನಸದಲ್ಲಿ ಅವನು ಖರ್ಚು ಮಾಡುವ ಹಣ ಎರಡು ಮೂರು ಸಂಸಾರಗಳನ್ನು ಸಾಕಬಲ್ಲುದು.”

“ಅಷ್ಟು ಧಾರಾಳಿಯೋ ಅವರು ?”

“ಧಾರಾಳಿ ಎನ್ನುವುದಕ್ಕಿಂತ ದಂದರ ಹಾಳ ಎಂದು ಹೇಳ ಬಹುದು.”

“ಈಗ ಬಂದಿದ್ದಾರೇನು ?”

“ಹೂ - ಬಂದು ಎರಡು ದಿನಸವಾಯಿತು. ನಾಳೆ ಅವನೂ ಭದ್ರಾ ವತೀಗೆ ಹೊರಟಿದ್ದಾನೆ. ಇಲ್ಲೇ ಹತ್ತನೆಯ ನಂಬರು ರೂಮಿನಲ್ಲಿದ್ದಾನೆ. ಅವನೂ ಯಾವಾಗ ಬಂದರೂ ನಮ್ಮ ಹೋಟೆಲಿಗೇ ಬರುವುದು. ಕರೆಸ ಲೇನು - ನಿಮಗೆ ನಿದ್ರೆ ಬರುತ್ತಿದೆಯೋ ಏನೋ ?”

“ಅವರು ನಿದ್ರೆ ಮಾಡುತ್ತಿರುವರೋ ಏನೋ ?”

“ಇಲ್ಲ - ಫಿಲ್ಮ್ ಇಂಡಿಯಾ ಓದಿಕೊಂಡು ರೂಮಿನಲ್ಲಿ ಕುಳಿತಿದ್ದಾನೆ.”

“ನಾನು ಹಾಗಾದರೆ ಶಿವಮೊಗ್ಗೆಗೆ ಹೋಗಿ ಅಲ್ಲಿ ನನ್ನ ಸಂಬಳದ ಬಾಕಿ ವಸೂಲ್ಮಾಡಿಕೊಂಡು ಇಲ್ಲೇ ಬಂದು ಬಿಡುತ್ತೇನೆ – ನಿಮ್ಮ ಹೋಟೆಲಿ ನಲ್ಲಿಯೇ ಒಂದು ರೂಮ್ ಕೊಟ್ಟು ಬಿಡಿ - ಈ ರೂಮೇ ಕೊಡಿ - ಚೆನ್ನಾಗಿದೆ.”

“ಅದೊಂದೇ ಸಾಧ್ಯವಿಲ್ಲ. ನೀವು ಬನ್ನಿ – ನಾನು ಮನೆ ಗೊತ್ತು ಮಾಡಿಕೊಡುತ್ತೇನೆ. ಹೊಟೇಲಿಗೆ ಬಂದು ಹೋಗುತ್ತಿರಬಹುದು. ಹೊಟೇ ಲಿನಲ್ಲಿಯೇ ನಾವು ಹೆಂಗಸರನ್ನು ಇಟ್ಟುಕೊಂಡರೆ ಗುಮಾನಿ ಬಂದು ಗಲಾಟೆ ಯಾಗಬಹುದು. ಆದಿರಾಜಯ್ಯನ ವಿಷಯ.”

“ಕರೆಸುತ್ತೇನೆ ಎಂದಿರಿ”

ಎಂದಳು. ಗಣೇಶ ಹುಸಿನಗೆ ನಗುತ್ತಾ ಎದ್ದು ಹೋಗಿ ಮಲಗಿದ್ದ ಫ್ಲೋರ್ ಬಾಯ್ ಎಬ್ಬಿಸಿ ಆದಿರಾಜಯ್ಯನಿಗೆ ಹೇಳಿ ಕಳಿಸಿದ.

ಆದಿರಾಜಯ್ಯ ಬರಲು ತಡವಾಗಲಿಲ್ಲ. ಗಣೇಶ ಅವರಿಬ್ಬರಿಗೂ ಪರಿಚಯ ಮಾಡಿಕೊಟ್ಟ.

"ಇನ್ನು ನೀವು ನೀವು ಉಂಟು. ರೂಮ್ ಬೀಗ ಹಾಕಿಕೊಂಡು ಬಂದಿರುವೆಯಾ ಆದಿ."

"ಹೂ ! ಬೀಗದ ಕೈ ಕೊಡಲೇನು ?"

"ನನಗೇನು ಬೇಡ. ನಿನ್ನಲ್ಲಿಯೇ ಇರಲಿ - ಬೆಳಿಗ್ಗೆ ಸುತ್ತ ಮುತ್ತ ನೋಡಿಕೊಂಡು ಹೊರಕ್ಕೆ ಬಾ."

ಎಂದು ಹೇಳಿ ಹೋದ. ಆದಿ ರೂಮು ಬಾಗಿಲು ಹಾಕಿ

"ನೀನು ಬಂದದ್ದು ನಾನು ನೋಡಿದೆ."

ಸರಸ್ವತಿ ಉತ್ತರ ಕೊಡಲಿಲ್ಲ. ಆದಿರಾಜಯ್ಯನ ರೂಪ, ಅಲಂಕಾರದ ಲೆಕ್ಕ ತೆಗೆದುಕೊಳ್ಳುತ್ತಿದ್ದಳು, ಆದಿರಾಜಯ್ಯ ಮಧ್ಯ ವಯಸ್ಸು ದಾಟಿರಲಿಲ್ಲ.

ಸ್ವಲ್ಪ ಕುಳ್ಳು - ಎಣೆಗೆಂಪು ಬಣ್ಣ. ತಲೆಯ ಮೇಲೆ ಕ್ರಾಪು ತುಂಬಿದ ಕೆನ್ನೆಗಳು - ಕಣ್ಣುಗಳಿಗೆ ಕನ್ನಡಕ - ಕೊರಳಲ್ಲಿ ಸಣ್ಣ ಚಿನ್ನದ ಸರ - ಬೆರಳುಗಳಲ್ಲಿ ವಜ್ರ ಕೆಂಪಿನ ಉಂಗುರಗಳು - ಮೈ ಮೇಲೆ ಸಿಲ್ಕ್ ಷರ್ಟು.

"ನಿನ್ನ ಜತೆಯಲ್ಲಿ ಯಾರೋ ಇದ್ದರು."

"ಅವರೊಬ್ಬರು ಹಳೆಯ ಸ್ನೇಹಿತರು."

"ನೀವು ನಾಳೆ ಭದ್ರಾವತಿಗೆ.ಹೊರಟಿರುವಿರಂತೆ !"

"ಹೌದು - ಕಬ್ಬಿಣದ ಕಾರ್ಖಾನೆ ಚೇರ್‌ಮನ್ನರನ್ನು ನೋಡಬೇಕಾಗಿತ್ತು."

"ನಾನೂ ಶಿವಮೊಗ್ಗೆಗೆ ಹೊರಟಿದ್ದೇನೆ."

"ಒಳ್ಳೆಯದೇ ಆಯಿತು. ಜತೆಯಲ್ಲಿ ಹೊರಡಬಹುದು. ನಾಳೆ ರಾತ್ರಿ ನಿನಗೂ ಒಂದು ಬರ್ತ್ ರಿಸರ್ವ್ ಮಾಡಿಸುತ್ತೇನೆ."

"ಶಿವಮೊಗ್ಗೆಗೆ ಬಂದು ನಮ್ಮ ನಾಟಕ ನೋಡಿಕೊಂಡು ಹೋಗಿ."

"ಭದ್ರಾವತಿಯಲ್ಲಿ ನನ್ನ ಕೆಲಸ ಬೇಗ ಮುಗಿದರೆ ಬರುತ್ತೇನೆ. ನೀನು ಭದ್ರಾವತಿಯಲ್ಲಿ ಇಳಿದು ಒಂದು ದಿನವಿದ್ದು ಏಕೆ ಹೋಗಬಾರದು."

" ಅಯ್ಯೋ - ಯಜಮಾನರು ಗಲ್ಲೀಗೆ ಹಾಕಿಬಿಡುತ್ತಾರೆ – ನಾಡಿದ್ದು ನಮ್ಮ ಸೀಸನ್ ಆರಂಭ."

" ಒಂದು ದಿನಕ್ಕೆ ಹೇಗಾದರೂ ಮಾಡಿಕೊಳ್ಳುತ್ತಾರೆ."

" ನೋಡೋಣ."

ಎಂದು ಹೇಳಿದಳು.

— ಬೆಳಿಗ್ಗೆ ಎಂಟು ಗಂಟೆ ಸಮಯವಾಗಿರಬಹುದು. ಫ್ಲೋರ್ ಬಾಯ್ ಬಂದು ಬಾಗಿಲು ತಟ್ಟಿದ. ಸರಸ್ವತಿ ಎದ್ದು ಬಾಗಿಲು ತೆಗೆದಳು.

ಬಾಯ್ ಒಳಕ್ಕೆ ಬಂದು ಕಾಫಿಯನ್ನು ಮೇಜಿನ ಮೇಲಿಟ್ಟ. ಆದಿ ರಾಜಯ್ಯ ಇನ್ನೂ ಮಲಗಿಯೇ ಇದ್ದ

" ಗಂಟೆಯೆಷ್ಟಯ್ಯ ?" ಎಂದು ಕೇಳಿದ.

" ಎಂಟು ಗಂಟೆ ಆಯಿತು ಸ್ವಾಮಿ. ಸ್ನಾನಕ್ಕೆ ನೀರು ಇಲ್ಲೇ ತಂದು ಕೊಡಲೋ - ನಿಮ್ಮ ರೂಮಿಗೆ ತಂದು ಕೊಡಲೋ ?"

" ಆಮೇಲೆ ಹೇಳುತ್ತೇನೆ."

" ನಿಮಗೆ ನೀರು ತಂದುಕೊಡಲೇನಮ್ಮಾ."

" ಬೇಡಪ್ಪ. ನಾನು ಹೊರಡಬೇಕೂಂತ ಮ್ಯಾನೇಜರಿಗೆ ತಿಳಿಸು."

ಬಾಯ್ ಹೋಗಲು ಆದಿರಾಜಯ್ಯ ಎದ್ದು ಹಾಸಿಗೆಯ ಮೇಲೇ ಕುಳಿತ. ಸರಸ್ವತಿ ಅವನ ಕೈಗೆ ಕಾಫಿಲೋಟ ಕೊಟ್ಟಳು. ಅವಳ ಕೈ ಹಿಡಿದು ಪಕ್ಕದಲ್ಲಿ ಕೂಡಿಸಿಕೊಂಡು

" ಈಗಲೇ ಹೊರಡಬೇಕೇ ?"

" ಹೂ ! ನಾನು ರಾತ್ರಿ ಮನೆ ಬಿಟ್ಟದ್ದು."

" ತಿರುಗಿ ನಿನ್ನ ಕಾಣುವುದು."

" ನನ್ನ ಸಾಮಾನು ತೆಗೆದುಕೊಂಡು ಸಂಜೆಗೆ ಬರುತ್ತೇನೆ. ರಾತ್ರಿ ಇಲ್ಲಿಂದಲೇ ರೈಲಿಗೆ ಹೋಗಬಹುದು."

" ಸಂಜೆಗೇಕೆ - ಮನೆಗೆ ಹೋಗಿ ಸಾಮಾನು ತೆಗೆದುಕೊಂಡು ಈಗಲೇ ಬಂದುಬಿಡು. ನನ್ನ ಕೆಲಸವೂ ಮುಗಿದಿದೆ – ಇವತ್ತು ನನಗೂ ಪುರಸತ್ತು. ಟ್ಯಾಕ್ಸಿ ತೊಗೊಂಡು ಎಲ್ಲಿಗಾದರೂ ಹೋಗಿ ತಿರುಗಾಡಿಕೊಂಡು ಬರೋಣ."

" ಹಾಗೇ ಆಗಲಿ – ಆದಷ್ಟು ಬೇಗ ಬರುತ್ತೇನೆ"

ಎಂದಳು. ಗಣೇಶ ಬಂದ.

" ಹೊರಡಲೋ ಮ್ಯಾನೇಜರೇ ? "

" ಇದ್ಯಾಕ್ರಮ್ಮ ಇಷ್ಟು ಅವಸರ. ತಿಂಡಿ ಕಾಫಿ ತೆಗೆದು ಕೊಂಡು ಹೋಗಿ."

" ಇಲ್ಲ – ಮನೆಗೆ ಹೋಗಿ ಬೇಗ ಬಂದು ಬಿಡುತ್ತೇನೆ."

" ಟ್ಯಾಕ್ಸಿ ತರಿಸುತ್ತೇನೆ ತಡೆಯಿರಿ."

" ಇಬ್ಬರೂ ಜತೆಯಲ್ಲಿ ಪ್ರಯಾಣ ಮಾಡುತ್ತೇವೆ ಗಣೇಶ್. ಭದ್ರಾವತೀಗೆ ಎರಡು ಸೆಕೆಂಡ್ ಕ್ಲಾಸ್ ರಿಸರ್ವೇಷನ್ ಮಾಡಿಸಿಬಿಡು."

ಗಣೇಶ ಕೆಳಗೆ ಹೋಗಿ ಟ್ಯಾಕ್ಸಿ ಸಿದ್ಧಗೊಳಿಸಿ ಸರಸ್ವತಿಗೆ ಹೇಳಿ ಕಳಿಸಿದ. ಅವಳು ಬರಲು, ಕಾರಿಗೆ ಅವಳನ್ನು ತುಂಬಿ ಡ್ರೈವರಿಗೆ

" ಅಮ್ಮಾವರನ್ನು ಮನೆಯಲ್ಲಿ ಬಿಟ್ಟುಬಂದೆ ಎಂದು ಜೀವಣ್ಣರಾಯರಿಗೆ ಹೇಳಿ ಬಂದುಬಿಡು ಡ್ರೈವರ್ "

ಎಂದು ಆಜ್ಞಾಪಿಸಿದ.

ಟ್ಯಾಕ್ಸಿ ಹೊರಟಿತು.

ಮನೆಗೆ ಬಂದವಳೇ ಸರಸ್ವತಿ ಮಹಡಿಯ ಮೇಲೆ ಹೋದಳು. ಮುತ್ತಮ್ಮ ಅವಳನ್ನನುಸರಿಸಿ ಬಂದು

" ರಾತ್ರಿ ಎಲ್ಲೀಗೆ ಓಗಿದ್ದೆಮ್ಮ - ನೀನು ಬತ್ತೀಂತ ದೀಪ ಉರಿಸ್ಕೊಂಡು ನಾನು ಕಾದೇ ಇದ್ದೆ."

" ಯಾರೋ ಕರ್‍ಕೊಂಡು ಹೋದರು ಮುತ್ತಮ್ಮ. ಹೋಟಲಿನಲ್ಲಿದ್ದು ಈಗ ಬರುತಾ ಇದ್ದೇನೆ."

" ಓಟ್ಲೆಗೆ ಓಗಬಾರದಮ್ಮ - ಅಲ್ಲೆಲ್ಲಾ ಪೋಲೀಸಿನೋರ ಉಸ್ತುವಾರಿ ಬಾಳ."

" ಅಂಥ ಭಯವೇನೂ ಇರಲಿಲ್ಲ."

" ಊರಿಗೆ ಓಗಾದು ಏನ್ಮಾಡ್ದೆ."

" ಈಗ ಊಟಮಾಡಿಕೊಂಡು ಹೊರಡುತ್ತೇನೆ - ಸ್ವಲ್ಪ ಕೆಲಸವಿದೆ - ಮುಗಿಸಿಕೊಂಡು ರಾತ್ರಿ ಗಾಡೀಗೆ ಪ್ರಯಾಣ ಮಾಡುತ್ತೇನೆ."

" ಈಗಲೇ ಒರಟು ಬಿಡ್ಬೇಕಾ !"

" ಯಾಕೆ ಮುತ್ತಮ್ಮ."

" ಯಾರೋ ಬತ್ತೀನೀಂತ ಏಳಿದ್ರು."

" ಇವತ್ತು ನನಗೇನೂ ಸಾಧ್ಯವಿಲ್ಲ ಮುತ್ತಮ್ಮ."

" ಓಗ್ಲಿ ಬಿಡಮ್ಮ - ಏಳು ಸಾನಾ ಮಾಡು."

ಸರಸ್ವತಿ ಸ್ನಾನ, ಊಟ ಮುಗಿಸಿ ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಂಡಳು.

ಗಂಟೆ ಹನ್ನೆರಡಾಗಿತ್ತು. ತನ್ನ ಟ್ರಂಕಿಗೆ ಬಟ್ಟೆಗಳನ್ನು ಹಾಕಿ, ಹಾಸಿಗೆ ಕಟ್ಟಿ ಅದರಲ್ಲಿ ಪಕ್ಕದಲ್ಲಿಯೇ ಚೆಂಬನ್ನಿಟ್ಟು ಭಾಗ್ಯಮ್ಮನನ್ನು ಕೂಗಿ

" ಇಲ್ಲಿಗೇ ಒಂದು ಗಾಡಿ ಬರಹೇಳುವೆಯಾ ಭಾಗ್ಯಮ್ಮ."

" ಈಗಲೇ ಒರಡಬೇಕೇನಮ್ಮ."

" ಹೂ - ಕೆಲಸವಿದೆ."

ಭಾಗ್ಯಮ್ಮ ಗಾಡಿ ತರುವುದಕ್ಕೆ ಹೋದಳು. ಸರಸ್ವತಿ ಕೆಳಗಿಳಿದು ಬಂದು ಮುತ್ತಮ್ಮನನ್ನು ಕರೆದು ಅವಳ ಕೈಗೆ ಸ್ವಲ್ಪ ದುಡ್ಡು ಹಾಕಿ

" ನಿನಗೆ ಇಪ್ಪತ್ತೈದು - ಪುಟ್ಟನಿಗೆ ಭಾಗ್ಯಮ್ಮನಿಗೆ ಹತ್ತು ಹತ್ತು."

" ಒಳ್ಳೇದಮ್ಮ - ಯಾವಾಗ ಬತ್ತೀ."

" ಕಾಗದ ಬರೆಯುತ್ತೇನೆ. ನನಗೊಂದು ಮನೆ ನೋಡಿರು ಮುತ್ತಮ್ಮ. ಬಾಡಿಗೆ ೪೦ - ೫೦ ಆದರೂ ಚಿಂತೆಯಿಲ್ಲ."

" ಯಾರೋ ಸಾವಕಾರ ಸಿಕ್ಕನ್ನೆ."

" ಇನ್ನೂ ಸಿಕ್ಕಿಲ್ಲ - ನಿನ್ನ ವಿಶ್ವಾಸದಿಂದ ಸಿಕ್ಕಬಹುದು."

" ಆಗಲಮ್ಮ - ದೇವರು ಚಂದಾಕಿರಸ್ಲಿ."

" ಪುಟ್ಟ ಮನೆಯಲ್ಲಿಲ್ಲವೇ ?"

" ಎಲ್ಲಿ ಓಗವ್ನೋ - ಚಂಚೀಲಿ ಮುಂಡೆ."

ಗಾಡಿ ಬಂದು ಮನೆಯ ಮುಂದೆ ನಿಂತಿತು. ಭಾಗ್ಯಮ್ಮ ಗಾಡಿಯಿಂದ ಇಳಿದು, ಗಾಡಿಯುವನೊಂದಿಗೆ ಒಳಗೆ ಬಂದು ಮೇಲಕ್ಕೆ ಹೋಗಿ ಸಾಮಾನು ತರುವಂತೆ ಗಾಡಿಯುವನಿಗೆ ಹೇಳಿದಳು.

" ಹೋಗಿಬಿಟ್ಟು ಬರುತ್ತೇನೆ ಭಾಗ್ಯಮ್ಮ."

" ಒಳ್ಳೆದಮ್ಮ. ದೇವರು ಒಳ್ಳೆದು ಮಾಡಲಿ."

"ಮುತ್ತಮ್ಮನ ಕೈಗೆ ಕೊಟ್ಟಿದ್ದೇನೆ - ತೆಗೆದುಕೋ"

ಎಂದು ಭಾಗ್ಯಮ್ಮನಿಗೂ ಹೇಳಿ ಗಾಡಿಯಲ್ಲಿ ಕುಳಿತಳು.

ಗಾಡಿ ಶಬ್ದವಾದೊಡನೆಯೇ ಆಚಾರ್ಯರು ಹೊರಗೆ ಬಂದು ನೋಡಿದರು. ಸರಸ್ವತಿ ಗಾಡಿಯಿಂದಿಳಿದು ಸಾಮಾನುಗಳನ್ನು ಗಾಡಿಯವನೊಂದಿಗೆ ತೆಗೆಸಿಕೊಂಡು ಶಾಲೆಗೆ, ಬಂದಳು. ದಾರಿಯಲ್ಲಿಯೇ ಗಾಡಿಯವನಿಗೆ ಬಾಡಿಗೆ ಕೊಟ್ಟಿದ್ದುದರಿಂದ ಅವನು ನಿಲ್ಲಲಿಲ್ಲ.

"ಇದೇನಮ್ಮ - ಸಾಮಾನು ಸಮೇತ ಬಂದು ಬಿಟ್ಟಿದ್ದೀರಿ."

"ರಾತ್ರಿ ಪ್ರಯಾಣ ಮಾಡಬೇಕಲ್ಲ ಮೇಷ್ಟ್ರೇ."

"ಮನೆಗೇನು ಎಂಟಕ್ಕೆ ಬಂದರೋ?"

"ಎಂಟೋ ಒಂಭತ್ತೋ ಆಗಿರಬಹುದು. ರಾಯರು ಎಷ್ಟು ಹೊತ್ತಿಗೆ ಬರುತ್ತಾರೆ."

"ರಾಯರನ್ನು ನಾನು ನೋಡಿಕೊಂಡೇ ಬರುತ್ತಿದ್ದೇನೆ."

"ಏನು ಸಮಾಚಾರ?"

"ಹೇಳಿ ಕಳಿಸಿದ್ದರು – ಹೋಗಿದ್ದೆ."

"ಅವರು ಎಷ್ಟು ಹೊತ್ತಿಗೆ ಬರುತ್ತಾರೆ – ಮೊದಲು ಹೇಳಿ."

"ಅವರು ಬರುವುದಿಲ್ಲಮ್ಮ. ಅದನ್ನು ತಿಳಿಸುವುದಕ್ಕೇ ನನಗೆ ಹೇಳಿ ಕಳಿಸಿದ್ದರು."

"ಬರುವುದಿಲ್ಲವೇ! ಏಕೆ?"

"ಕುಳಿತುಕೊಳ್ಳಿ. ನಿಧಾನವಾಗಿ ಹೇಳಬೇಕು."

"ಏನೋ ಅಚಾತುರ್ಯ ನಡೆದ ಹಾಗೆ ಕಾಣುತ್ತಲ್ಲ ಮೇಷ್ಟ್ರೇ."

"ಅಚಾತುರ್ಯವೇನಿಲ್ಲ! ಮಾಡಿದ ಪಾಯಸವನ್ನು ನಾಯಿ ಬಂದು ತನ್ನ ಬಾಲದಲ್ಲಿ ತೊಳಸಿತು."

"ನಾಯಿ ಯಾರು?"

"ನಿಮ್ಮ ನಂಜಪ್ಪ!"

"ನಂಜಪ್ಪನವರಿಗೂ ಇದಕ್ಕೂ ಏನು ಸಂಬಂಧ."

"ಅವನೂ ರಾಯಾ ಸ್ನೇಹಿತರು."

" ಅವರ ಕಥೆ ಮುಗಿಯಿತಲ್ಲ. ಇನ್ನು ನನ್ನ ಪಾಡು ಕಟ್ಟಿಕೊಂಡು ಅವರಿಗೇನು ?"

" ನಾನು ಕೇಳುವುದೂ ಅದೇ - ಇನ್ನೊಬ್ಬರ ವ್ಯವಹಾರಕ್ಕೆ ಏಕೆ ಬಾಯಿ ಹಾಕಬೇಕು."

" ಅವರೇನು ಮಾಡಿದ್ದಾರೆ. ಬಿಡಿಸಿ ಹೇಳಿ ಮೇಷ್ಟ್ರೇ."

" ನಿನ್ನೆ ಸಂಜೆ ನೀವು ಲಾಲ್‌ಬಾಗಿಗೆ ಹೋಗಿದ್ದಿರಂತಲ್ಲಾ – ಅಲ್ಲಿ ನಿಮ್ಮನ್ನೂ ರಾಯರನ್ನೂ ಅವನು ಕಂಡನಂತೆ. ಇವತ್ತು ಬೆಳಿಗ್ಗೆ ಬಿಟ್ಟದ್ದು ಬಿಟ್ಟು ರಾಯನ್ನ ಹುಡುಕಿಕೊಂಡು ಬಂದಿದ್ದಾನೆ. ಅವನು ಅಂಗಡಿಯಲ್ಲಿ ಕುಳಿತಿರುವಾಗಲೇ ಹೊಟೇಲಿನ ಕಾರಿನ ಡ್ರೈವರು ಬಂದು ' ಅಮ್ಮಾವರ್ನ ಮನೇಲಿ ಬಿಟ್ಟು ಬಿಟ್ಟು ಬಂದೆ ' ಎಂದು ಹೇಳಿದ. ನಂಜಪ್ಪ ತನಿಖೆ ಆರಂಭಿಸಿದ - ಈ ಪೆಚ್ಚುರಾಯ ಎಲ್ಲಾ ಬಾಯಿ ಬಿಟ್ಟು ಹೇಳಿ ಬಿಡೋದೇ ? "

" ಆ ಮೇಲೆ . . . "

" ನಂಜಪ್ಪ ನಿಮ್ಮ ವಿಷಯವೆಲ್ಲಾ ಹೇಳಿದ್ದಾನೆ. ಬಣ್ಣ ಕಟ್ಟಿ ಸುಳ್ಳು ಬೆರಸಿ ಹೇಳಿದ್ದಾನೆ. ನೀವು ಅವನನ್ನು ಮುತ್ತಮ್ಮನ ಮನೆಗೆ ಕರೆಸಿಕೊಂಡಿದ್ದಿರಾ ? "

" ಕರೆಸಿಕೊಂಡಿದ್ದೆ."

" ಹಾಗಾದರೆ ಸುಳ್ಳಲ್ಲ ಬಿಡಿ."

" ರಾಯರ ಮನಸ್ಸು ಕೆಟ್ಟಿತೋ ? "

" ಅವನು ಹೇಳಿದ್ದೇ ತಿಳಿಸಲೇನು – ಬೇಡ ಬಿಡಿ – ಸುಮ್ಮನೆ ಮನಸ್ಸಿಗೆ ಪೇಚಾಟ ಮಾಡಿಕೊಳ್ಳುತ್ತೀರಿ."

" ಹೇಳಿ ಮೇಷ್ಟ್ರೇ – ಯಾವುದೂ ಮರೆಮಾಚಬೇಡಿ."

" ನಂಜಪ್ಪ ಹೇಳಿದನಂತೆ ' ನೋಡು ಜೀವಣ್ಣ ನಾಯಿಯನ್ನು ತೆಗೆದುಕೊಂಡು ಹೋಗಿ ನಾನು ಸಿಂಹಾಸನದ ಮೇಲೆ ಕೂಡಿಸಿದೆ. ಅದು ಎಂಜಲು ಹಾಳೆ ಕಂಡು ಇಳೀ ಬಿತ್ತು. ಇವಳು ಶುದ್ಧ ಕರ್ಮದ ಹೆಂಗಸು ಇವಳ ಕೈ ಹಿಡಿದವರು ಯಾರೂ ಊರ್ಜಿತವಾಗುವುದಿಲ್ಲ. ಸಾಲದ್ದಕ್ಕೆ ಸರಸ್ವತಿ ಬಹಳ ತೆವಲಿನ ಹೆಂಗಸು - ಯಾರನ್ನೂ ನಂಬಿಕೊಂಡು ಅವರಿಗೆ ಸತ್ಯವಾಗಿ ನಡೆದುಕೊಳ್ಳುವುದು ಅವಳಿಗೆ ಸಾಧ್ಯವೇ ಇಲ್ಲ. ನೀನು ಇವಳ ಸಹ

ವಾಸ ಮಾಡಿದರೆ ಮನೆ ಮಠ ಎಲ್ಲಾ ಕಳೆದುಕೊಂಡು ಬೀದಿ ಭಿಕಾರಿಯಾಗುತ್ತೀ."

ಸರಸ್ವತಿಗೆ ಸಿಡಿಲು ಬಡಿದಂತಾಯಿತು. ಕ್ಷಣಕಾಲ ಅವಕ್ಕಾಗಿ ಕುಳಿತು

"ಅವರಿಗೆ ನಾನೇನು ಅನ್ಯಾಯ ಮಾಡಿದೆ ಮೇಷ್ಟ್ರೇ. ನಿಮ್ಮಲ್ಲಿ ನಿಜ ಹೇಳುತ್ತೇನೆ – ಅವರ ಮೇಲೆ ನಾನಿಟ್ಟ ವಿಶ್ವಾಸ ಯಾರ ಮೇಲೂ ಇಡಲಿಲ್ಲ. ಇಂದಿಗೂ ನನಗೆ ಅವರ ಮೇಲಿನ ವ್ಯಾಮೋಹ ಹೋಗಿಲ್ಲ. ಇದನ್ನು ತಿಳಿದುಕೊಂಡೂ ನನ್ನ ಹೊಟ್ಟೆಯ ಮೇಲೆ ಹೊಡೆಯುವುದು ಯಾವ ನ್ಯಾಯ?"

"ನಂಜಪ್ಪ ದೊಡ್ಡ ಮನುಷ್ಯ ಎಂದು ಕೊಂಡಿದ್ದೆ."

"ಕೊನೆಗೆ ರಾಯರು ಏನು ಹೇಳಿದರು."

"ಕೈ ಮುಗಿದೆ ಎಂದು ತಿಳಿಸಪ್ಪಾ ಎಂದರು. ನಿಮ್ಮ ಪರಿಚಯ ಮಾಡಿಸಿದ್ದಕ್ಕೆ ನನಗೂ ಛೀಮಾರಿಮಾಡಿದರು."

"ನನ್ನಿಂದ ನೀವೂ ಕೆಟ್ಟ ಮಾತು ಕೇಳಬೇಕಾಯಿತು. ನಂಜಪ್ಪನವರು ಹೇಳಿದ್ದು ನಿಜ ಮೇಷ್ಟ್ರೇ – ನಾನು ಹೀನಭಾಗ್ಯದ ಮುಂಡೆ – ನನ್ನ ಕೈ ಹಿಡಿದವರು ಯಾರೂ ಊರ್ಜಿತವಾಗುವುದಿಲ್ಲ"

ಎಂದು ಅಳಲಾರಂಭಿಸಿದರು. ಆಚಾರ್ಯರು ಅವಳಿಗೆ ಸಮಾಧಾನ ಹೇಳಿ

"ಹುಟ್ಟಿದ ದೇವರು ಹುಲ್ಲು ಮೇಯಿಸುತ್ತಾನೇನ್ರಮ್ಮಾ – ಇದು ಯಾವ ದೊಡ್ಡ ಮಾತೂಂತ ಇಷ್ಟು ಪೇಚಾಡುತ್ತೀರಿ" ಎಂದರು.

ಸರಸ್ವತಿ ಸಮಾಧಾನ ತಂದುಕೊಂಡು

"ಒಂದು ಗಾಡಿ ಕರೆಯಿರಿ ಮೇಷ್ಟ್ರೇ - ನಾನು ಹೊರಡುತ್ತೇನೆ."

"ಎಲ್ಲಿಗಮ್ಮ."

"ಹೊಟೇಲಿಗೆ ಹೋಗಿ - ರಾತ್ರಿ ಪ್ರಯಾಣ ಮಾಡುತ್ತೇನೆ."

ಆಚಾರ್ಯರು ಗಾಡಿ ಗೊತ್ತುಮಾಡಿ, ಸರಸ್ವತಿಯನ್ನು ಕಳಿಸಿಕೊಟ್ಟರು.

ಸರಸ್ವತಿಯನ್ನು ನಿರೀಕ್ಷಿಸುತ್ತಾ ಆದಿರಾಜಯ್ಯ ೧೯ನೆಯ ನಂಬರು ರೂಮಿನಲ್ಲೇ ಕುಳಿತಿದ್ದ- ಫ್ಲೋರ್‌ಬಾಯ್ ಅವಳ ಸಾಮಾನುಗಳನ್ನು ತಂದಿಟ್ಟು ಅವಳನ್ನು ಕರೆದುಕೊಂಡು ಬಂದುದನ್ನು ನೋಡಿ ಆದಿರಾಜಯ್ಯ ಸ್ಪಷ್ಟವಾಗಿ ತನ್ನ ಸಂತೋಷ ವ್ಯಕ್ತಗೊಳಿಸಿದ.

ಅದೇ ಸಂಜೆ ಹೊಟೇಲ್ ಟ್ಯಾಕ್ಸಿ ಆದಿರಾಜಯ್ಯನನ್ನೂ ಸರಸ್ವತಿ

ಯನ್ನೂ ತುಂಬಿಕೊಂಡು ಊರಿನಲ್ಲೆಲ್ಲಾ ಮೆರೆದಾಡಿತು. ರಾತ್ರಿ ಇಬ್ಬರೂ ಭದ್ರಾವತಿಗೆ ಪ್ರಯಾಣ ಬೆಳಸಿದರು.

ಶನಿವಾರ ಆದಿರಾಜಯ್ಯನ ಜತೆ ಭದ್ರಾವತಿಯಲ್ಲಿ ಕಳೆದು ಭಾನುವಾರ ಬೆಳಿಗ್ಗೆ ಸರಸ್ವತಿ ಶಿವಮೊಗ್ಗೆ ಸೇರಿದಳು.

ಒಟ್ಟನಲ್ಲಿ ಬೆಂಗಳೂರಿನ ಪ್ರವಾಸ ಲಾಭದಾಯಕವಾದುದಕ್ಕೆ ಸರಸ್ವತಿಗೆ ಸಂತೋಷವಾಗಿತ್ತು. ಖರ್ಚುಕಳೆದು ಕೈಯಲ್ಲಿ ಐದುನೂರು ರೂಪಾಯಿ ತಂದಿದ್ದಳು. ಆದಿರಾಜಯ್ಯ ತನ್ನ ವಿಳಾಸ ಕೊಟ್ಟು ಹಾಸನಕ್ಕೆ ಬರುವ ಸಂದರ್ಭ ಬಿದ್ದರೆ ತಿಳಿಸಬೇಕೆಂದು ಹೇಳಿದ್ದ. ರಾಯರ ಸ್ನೇಹ ತಪ್ಪಿ ಹೋದರೂ ಆದಿರಾಜಯ್ಯನ ಸ್ನೇಹವಾಯಿತಲ್ಲ ಎಂದು ಸರಸ್ವತಿ ತೃಪ್ತಿ ಗೊಂಡಿದ್ದಳು.

ಶಿವಮೊಗ್ಗೆಯ ಸ್ಟೇಷನ್ನಿನಲ್ಲಿಳಿದು ತಾನೇ ಒಂದು ಗಾಡಿ ಗೊತ್ತು ಮಾಡಿಕೊಂಡು ಕಂಪೆನಿ ಮನೆಗೆ ಬಂದಳು. ಹಿಂದಿನ ರಾತ್ರಿ ನಾಟಕವಾಗಿತ್ತು. ಮಲಗಿರುವವರು ಮಲಗಿದ್ದರು, ಅದೇ ಎದ್ದವರು ಪ್ರಾತರ್ವಿಧಿಗಳಲ್ಲಿ ನಿರತ ರಾಗಿದ್ದರು. ಯಜಮಾನರು ಥಿಯೇಟರಿನ ಕಛೇರಿಗೆ ದಯಮಾಡಿಸಿದ್ದರು.

ಕಂಪೆನಿಯ ಆಳು ಸರಸ್ವತಿಯನ್ನು ಅವಳ ರೂಮಿಗೆ ಕರೆದೊಯ್ದು ಬಿಟ್ಟ. ಯಜಮಾನರು ಮಾಡಿದ್ದ ಹೊಸ ವ್ಯವಸ್ಥೆ ಕಂಡು ಸರಸ್ವತಿಗೆ ಆಶ್ಚರ್ಯವಾಯಿತು. 'ಮಂಜುಳನಿಗೇತಕ್ಕೆ ಪ್ರತ್ಯೇಕ ರೂಮು' ಎಂದು ಕೊಂಡಳು. ಅವಳ ಸಮಸ್ಯೆ ಬಿಡಿಸಲು ಗುಂಡೂರಾಯ ಇರಲಿಲ್ಲ. ಕಂಪೆನಿ ಆಳು ಓಡಿಹೋಗಿ ಸರಸ್ವತಿ ಬಂದಿರುವ ವಿಷಯವನ್ನು ಯಜಮಾನರಿಗೆ ತಿಳಿಸಿ ಬಂದ. ಮಂಜುಳಾ, ಸುಧಾ ಇನ್ನೂ ಮಲಗಿಯೇ ಇದ್ದರು.

## ೧೩

'ನಿನ್ನೆ ನಾಟಕವಿದ್ದುದು ಗೊತ್ತಿದ್ದು ಏಕೆ ಬರಲಿಲ್ಲ' ಎಂದು ಯಜ ಮಾನರು ಕಂಪೆನಿ ಮನೆಗೆ ಬಂದ ಕೂಡಲೆ ಕೇಳುತ್ತಾರೆಂಬುದು ಸರಸ್ವತಿಗೆ ಗೊತ್ತಿತ್ತು. ಅದಕ್ಕೆ ಉತ್ತರ ಜೋಡಿಸಿಕೊಳ್ಳುತ್ತಾ ಸರಸ್ವತಿ ಕುಳಿತಳು.

ನಾರಾಯಣ ಬಂದು ಒಂದು ಕಪ್ ಕಾಫಿ ತಂದುಕೊಟ್ಟು ಹೋದ. ಸರಸ್ವತಿ ಕಂಪೆನಿ ಆಳನ್ನು ಕರೆದು

"ಮಂಜುಳಮ್ಮ, ಸುಧಮ್ಮ ಎದ್ದ ಮೇಲೆ ಇಲ್ಲಿಗೇ ಬರಹೇಳು"

ಎಂದು ತಿಳಿಸಿದಳು. ಸರಸ್ವತಿಯನ್ನು ಕಾಣಲು ದೊರೆಸ್ವಾಮಿ ಬಂದ.

"ಬನ್ನಿ ದೊರೆಸ್ವಾಮಿಗಳೇ ಕುಳಿತುಕೊಳ್ಳಿ." ಎಂದಳು.

"ದೊರೆಸ್ವಾಮಿ ಕುಳಿತುಕೊಂಡ ಮೇಲೆ

"ನಿನ್ನೆ ನಾಟಕ ಹೇಗಾಯಿತು ? "

"ಸೊಗಸಾಗಿ ಆಯಿತಮ್ಮ. ಸಾವಿರದಿನ್ನೂರು ರೂಪಾಯಿ ಕಲೆಕ್ಷನ್."

"ನನ್ನ ಪಾರ್ಟು ಯಾರು ಮಾಡಿದರು ? "

"ಸುಂದರಿ ಮಾಡಿದಳು - ನೀವೇಕೆ ಬರಲಿಲ್ಲ."

"ರೈಲು ತಪ್ಪಿಹೋಯಿತು. ಯಜಮಾನರು ರೇಗಿಕೊಂಡರೋ ? "

"ಅದು ಯಾಕೆ ಹೇಳುತ್ತೀರಿ – ನರಸಿಂಹಾವತಾರ ತೋರಿಸಿ ಬಿಟ್ಟರು."

"ಇನ್ನೇನು ಸಮಾಚಾರ."

"ಒಂದು ವಿಶೇಷ ಸಮಾಚಾರವಿದೆ - ಅದಕ್ಕೇ ಬಂದೆ."

"ಹೇಳಿ - ನೀವು ಇಲ್ಲಿಗೆ ಯಾವಾಗ ಬಂದಿರಿ ? "

"ಮೊನ್ನೆಯೇ-ಬಂದೆ - ಮಂಜುಳ ನನ್ನ ಮೇಲೆ ಏಕೋ ಗುರುಗುಟ್ಟುತ್ತಿದ್ದಾಳೆ. ಮೊನ್ನೆಯಿಂದಲೂ ನನ್ನ ಹತ್ತಿರ ಸೇರಿಸಿಲ್ಲ."

"ಏಕೆ ? "

"ಅದನ್ನು ನೀವು ವಿಚಾರಿಸಬೇಕು. ಕಂಪೆನಿಯ ರೂಲ್ಸು ಈಗ ಬಹಳ ವಿಚಿತ್ರವಾಗಿದೆ. ನಾವು ಯಾರೂ ಮಹಡಿಯನ್ನೇರಿ ಬರಕೂಡದಂತೆ ? ಇಲ್ಲಿ ನಾವು ಯಾರಾದರೂ ಸುಳಿದಾಡಿದ್ದು ಕಂಡರೆ ಕೂಡಲೆ ಕಂಪೆನಿಯಿಂದ ಹೊರಗೆ ಹಾಕುವರಂತೆ ! "

"ಈ ರೂಲ್ಸು ನಿಮಗಲ್ಲ ದೊರೆಸ್ವಾಮಿಗಳೇ - ಕಂಪೆನಿಯಲ್ಲಿ ಎಲ್ಲಾ ತರಹ ಜನ ಬಂದು ಸೇರಿಕೊಂಡಿರುತ್ತಾರೆ. ಅವರಿಗಿರಬೇಕು."

"ಅಲ್ಲಮ್ಮಾ - ನನಗೋಸ್ಕರೇ ರೂಲ್ಸು ಮಾಡಿದ ಹಾಗಿದೆ."

"ಗುಂಡೂರಾಯರು ಏನು ಹೇಳುತ್ತಾರೆ."

"ಸರಿ. ಅವನು ಮಾತು ಯಾವ ಲೆಕ್ಕ ಎಲ್ಲಾ ಯಜಮಾನರ ಮೇಲೆ

ಹಾಕಿ ಕೈ ಕಟ್ಟಿಕೊಡುತ್ತಾನೆ. ಇಲ್ಲಿ ನನ್ನ ಮೇಲೆ ಏನೋ ಪಿತೂರಿ ನಡೆಯುತ್ತಿದೆಯಮ್ಮಾ - ಏನಾದರೂ ಆಗಲಿ - ಇವತ್ತು ನೀವು ಮಂಜುಳನಿಗೂ ನನಗೂ ರಾಜಿ ಮಾಡಿಸಬೇಕು."

" ಏನೋ ನಡೆಯುತ್ತಿದೆ ದೊರೆಸ್ವಾಮಿಗಳೇ - ನನಗೂ ಅರ್ಥವಾಗಿಲ್ಲ ಅರ್ಥವಾಗತ್ತೆ."

" ಜಯಪಾಲ ಚರಿತ್ರೆಯಲ್ಲಿ ಹೀರೋ ಮಾಡುವವರು ಯಾರು ಗೊತ್ತೊ?"

" ಇನ್ನು ಯಾರು – ನೀವೇ ? "

" ನಾನಲ್ಲ - ಅಣ್ಣಯ್ಯ, ಪಾರ್ಟು ಗಟ್ಟಿಮಾಡಿಕೊಂಡು ಅವನು ಸಿದ್ಧವಾಗಿದ್ದಾನೆ. ಕಂಪೆನಿಯಿಂದ ನನ್ನ ಎಬ್ಬಿಸಬೇಕೂಂತ ಯಾರೋ ಮಸಲತ್ತು ಮಾಡಿದ್ದಾರೆ - ಯಜಮಾನ ಸೇರಿಕೊಂಡಿದ್ದಾನೆಯೋ ಇಲ್ಲವೋ ನನಗೆ ಪತ್ತೆಯಾಗಿಲ್ಲ."

" ನಾಲ್ಕೈದು ದಿವಸಗಳಲ್ಲಿ ಕಂಪೆನಿಯಲ್ಲಾಗಿರುವ ಬದಲಾವಣೆ ಕಂಡರೆ ಆಶ್ಚರ್ಯವಾಗುತ್ತದೆ."

" ಸುಡುಗಾಡು - ಈ ಹಾಳು ಸಹವಾಸವೇ ಬೇಜಾರಾಗಿ ಹೋಗಿದೆ. ಜಯಪಾಲ ಚರಿತ್ರೆಯಲ್ಲಿ ನನ್ನ ಪಾರ್ಟು ಬದಲಾಯಿಸಿದರೆ ನಾನು ಕಂಪೆನಿ ಬಿಟ್ಟು ಬಿಡುತ್ತೇನಮ್ಮ."

" ಬಿಟ್ಟು ಏನು ಮಾಡುತ್ತೀರಿ."

" ಈ ಕಂಪೆನಿಯೊಂದೇನೇ ನನಗೆ ಗತಿ – ಇವತ್ತು ನಾನು ದಾವಣಗೆರೆ ಹೋದರೆ ಸಂತೋಷವಾಗಿ ಸಾಹುಕಾರ ರುದ್ರಪ್ಪ ತನ್ನ ಕಂಪೆನಿಗೆ ಸೇರಿಸಿಕೊಳ್ಳುತ್ತಾನೆ."

" ದುಡುಕಬೇಡಿ – ದೊರೆಸ್ವಾಮಿಗಳೇ - ತಡೆಯಿರಿ ನೋಡೋಣ "

ಎಂದು ಸಮಾಧಾನ ಹೇಳಿ ಅವನನ್ನು ಕಳುಹಿಸಿ ಕೊಟ್ಟಳು.

ಮಂಜುಳಾ, ಸುಧಾ ಬರದಿದ್ದುದನ್ನು ಕಂಡು ಸರಸ್ವತಿ ಎದ್ದು ಮಂಜುಳನ ರೂಮಿಗೆ ಹೋದಳು. ಮಂಜುಳಾ ತಲೆ ಬಾಚಿಕೊಳುತ್ತ ನಿಂತಿದ್ದಳು.

" ಈಗ ಎದ್ದೆಯಾ ಮಂಜೂ."

" ಆಗಲೇ ಎದ್ದೆ."

" ನಿನಗೂ ಸುಧನಿಗೂ ಹೇಳಿ ಕಳಿಸಿದ್ದೆ."

" ನಾನೂ ಸುಧಾ ಬಂದಿದ್ದೆವು. ನೀನು ದೊರೆಸ್ವಾಮಿ ಹತ್ತಿರ ಮಾತ ನಾಡುತ್ತಾ ಕುಳಿತಿದ್ದೆ. ಹಿಂದಕ್ಕೆ ಬಂದೆವು."

" ಸುಧಾ ಎಲ್ಲಿ ?"

" ಎಲ್ಲಿಗೋ ಹೋದಳು."

" ನನ್ನ ನೋಡದೆ ಹೋದಳೇ ! - ನೀನು ಚೆನ್ನಾಗಿದ್ದೀಯಾ ?"

" ನನ್ನ ಮಾತಿರಲಿ – ಬೆಂಗಳೂರು ಟ್ರಿಪ್ ಹೇಗಾಯಿತು ?"

" ಚೆನ್ನಾಗಿ ಆಯಿತು."

" ನಿನ್ನೆ ಏಕೆ ಬರಲಿಲ್ಲ."

" ಬೆಂಗಳೂರಿಗೇ ಹಿಂದಕ್ಕೆ ಹೋಗುವ ವ್ಯವಸ್ಥೆ ಮಾಡುತ್ತಿದ್ದೆ."

" ಹಾಗಂದರೆ . . ."

" ಕಂಪೆನಿ ವಾಸ ನನಗೆ ಸಾಕಾಗಿದೆ."

" ಬೆಂಗಳೂರಿನಲ್ಲಿ ಯಾರು ಸಿಕ್ಕಿದ್ದರು ?"

" ರಾಘವಾಚಾರ್ಯರು ಸಿಕ್ಕಿದ್ದರು."

" ಹೊಸ ಪರಿಚಯ ಯಾವದಾದರೂ ಮಾಡಿಸಿದರೋ ?"

" ಮಂಜೂ . . ."

" ನನ್ನಲ್ಲಿ ಹೇಳುವುದಕ್ಕೆ ನಾಚಿಕೆಯೇ ?"

" ನಾನು ನಿನ್ನ ತಾಯಿ."

" ಆ ವಿಷಯ ನಾವು ಬಹಳ ದಿವಸ ಹಿಂದೆಯೇ ಚರ್ಚೆ ಮಾಡಿ ಒಂದು ಇತ್ಯರ್ಥಕ್ಕೆ ಬಂದಿದ್ದೆವಲ್ಲಾ."

" ಏನು ಇತ್ಯರ್ಥ."

" ನಾನೂ ನೀನೂ ತಾಯಿ ಮಕ್ಕಳಲ್ಲ – ಇಬ್ಬರೂ ಹೆಂಗಸರು, ಪ್ರತಿ ಸ್ಪರ್ಧಿಗಳು."

" ಪೀತಾಂಬರನ ಪ್ರಕರಣ ನೀನು ಮರೆಯುವುದೇ ಇಲ್ಲವೇನೇ ?"

" ಈ ಜನ್ಮವಿರುವವರೆಗೂ ಸಾಧ್ಯವಿಲ್ಲ. ಅದರಿಂದ ನನ್ನ ಬಾಳೇ ಕುಲಗೆಟ್ಟು ಹೋದುದನ್ನು ಹೇಗೆ ಮರೆಯಲಿ. ನೀನು ಒಬ್ಬಳು ಸೂಳೆ, ನಿನ್ನ ಮಗಳು ನಾನು ಸೂಳೆ."

" ಎಷ್ಟು ಕಲ್ಲೇ ಮಂಜೂ ನಿನ್ನ ಮನಸ್ಸು."

" ಆ ಮನಸ್ಸಿನಲ್ಲಿಯೂ ದಯೆ, ಕನಿಕರ, ವಿಶ್ವಾಸಗಳಿದ್ದವು. ಆ ಮನಸ್ಸೂ ಒಮ್ಮೆ ಎಲ್ಲರಂತೆ ಗೌರವವಾಗಿ ಬಾಳಬೇಕೆಂದು ಬಯಸುತ್ತಿತ್ತು ಈಗ ಕಲ್ಲಾಗಿದೆ. ಅದನ್ನು ಕಲ್ಲು ಮಾಡಿದವರು ಯಾರು ? "

" ಹೋಗಲಿ ಹಳೇ ಕಥೆ ತೆಗೆದುಕೊಂಡು ನಾವೇಕೆ ವ್ಯಾಜ್ಯ ಕಾಯ ಬೇಕು. ದೊರೆಸ್ವಾಮಿಗೇನು ಮಾಡಿದೆ ? "

" ಏನೂ ಮಾಡಿಲ್ಲವಲ್ಲ - ಅವರು ನನ್ನ ಮೇಲೆ ದೂರು ಹೇಳಿದರೇನು ?"

" ಮೂರು ದಿವಸದಿಂದ ಹತ್ತಿರವೇ ಸೇರಿಸಿಲ್ಲವಂತೆ ! "

" ಅದೇ, ಹೌದು - ಸೇರಿಸಿಲ್ಲ."

" ಏಕೆ ? "

" ನನ್ನ ಇಷ್ಟ. ಅವನು ನನಗೆ ಬೇಕಿಲ್ಲ."

" ಅವನ ಋಣದಲ್ಲಿ ನಾವಿರುವೆವಲ್ಲ."

" ಆ ಋಣ ನಾನೆಂದೋ ತೀರಿಸಿಬಿಟ್ಟಿದ್ದೇನೆ. ಸಾಯುವವರೆಗೆ ಅವನ ದಾಸಿಯಾಗಿರುತ್ತೇನೆಂದು ಪತ್ರ ಬರೆದುಕೊಟ್ಟಿಲ್ಲ."

" ಅವನು ಕಂಪೆನಿ ಬಿಟ್ಟು ಹೋಗುತ್ತಾನಂತೆ ! "

" ಹೋಗಲಿ ನನಗಾಗಬೇಕಾದುದೇನು ! ನಾಟಕಕ್ಕೆ ಬೇಕಾದವರನ್ನು ತರುವುದು ಯಜಮಾನರ ಜವಾಬ್ದಾರಿ."

" ಮಂಜೂ – ನಿನಗೇನು ಬಂತೇ ? "

" ಹೋಗು – ಬೆಂಗಳೂರಿನಲ್ಲಿ ತುಂಬ ದುಡಿದು ಬಂದಿದ್ದೀ ಊಟಮಾಡಿ ಮಲಗಿಕೋ ಹೋಗು. ರಾತ್ರೀಗೆ ನಾಟಕವಿದೆ."

ಸರಸ್ವತಿಯ ಕಪಾಳಕ್ಕೆ ಹೊಡೆದಂತಾಯಿತು. ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಮಿಂಚಿನಂತೆದ್ದು ಬಂದು ತನ್ನ ರೂಮು ಸೇರಿ, ಬಾಗಿಲು ಭದ್ರಪಡಿಸಿಕೊಂಡು, ಹಾಸಿಗೆ ಹಾಸಿಕೊಂಡು ಮಲಗಿದಳು.

ಶ್ರೀಕಂಠಮೂರ್ತಿ ಸುಮಾರು ಒಂದು ಗಂಟೆಗೆ ಕಂಪೆನಿ ಮನೆಗೆ ಬಂದ. ಗುಂಡೂರಾಯನ ಜತೆ ಕುಳಿತುಕೊಂಡು ಊಟ ಮುಗಿಸಿ ಮಹಡಿಯೇರಿ ಬಂದು ತನ್ನ ರೂಮಿನಲ್ಲಿ ಕುಳಿತು

" ಸರಸ್ವತಿಯನ್ನು ಕರೆ ಗುಂಡೂ " ಎಂದು ಹೇಳಿದ.

ಗುಂಡೂ ಕರೆಯುವುದಕ್ಕೆ ಹೋದಾಗ ಸರಸ್ವತಿ ಇನ್ನೂ ಮಲಗಿಯೇ

ಇದ್ದಳು. ಎದ್ದು ಮುಖ ತೊಳೆದುಕೊಂಡು, ಹಣೆಗೆ ಸಾದಿನ ಚುಕ್ಕೆಯನ್ನಿಟ್ಟುಕೊಂಡು, ಸೀರೆ ಬದಲಾಯಿಸಿಕೊಂಡು ಬಂದಳು.

ಶ್ರೀಕಂಠಮೂರ್ತಿ ಅವಳ ಮುಖ ಕಂಡೊಡನೆಯೇ

" ಊಟ ಮಾಡಿದೆಯಾ ?" ಎಂದು ಕೇಳಿದ.

" ಇನ್ನೂ ಇಲ್ಲ."

" ಮಲಗಿದ್ದೆಯಾ ?"

" ಹೂ !"

" ಊಟ ಮಾಡಿಕೊಂಡು ಬಾ ಹೋಗು."

" ನನಗೆ ಹಸಿವಿಲ್ಲ – ಆಮೇಲೆ ಮಾಡುತ್ತೇನೆ."

" ನನ್ನ ಕಾಗದ – ವೈರು ಬರಲಿಲ್ಲವೇ ?"

" ಬಂತು ?"

" ನಿನ್ನೆ ಬರುವುದಕ್ಕೆ ಏನಾಗಿತ್ತು ?"

" ನಮ್ಮಣ್ಣ ಮೈಸೂರಿಗೆ ಕರೆದುಕೊಂಡು ಹೋದರು. ಸುಧಾ ಲಗ್ನದ ವಿಷಯ ಮಾತನಾಡುವುದಿತ್ತು. ಗಂಡು ನೋಡಲು ನಿನ್ನೆ ಭದ್ರಾವತಿಗೆ ಬಂದು ಇವತ್ತು ಅಲ್ಲಿಂದ ಹೊರಟೆ."

" ಗಂಡು ಗೊತ್ತಾಯಿತೇ ?"

" ಅವರು ಅಪಾರ ವರದಕ್ಷಿಣೆ ಕೇಳುತ್ತಾರೆ."

" ನಿನ್ನ ಮಾತಿನಲ್ಲಿ ಒಂದು ಗುಂಜಿಯಷ್ಟು ಸತ್ಯವಿದೆಯೇ ?"

" ನಾನು ಸುಳ್ಳೇಕೆ ಹೇಳಲಿ."

" ಅದು ನಿನ್ನ ಹುಟ್ಟುಗುಣ."

" ಕಂಪೆನಿಯಲ್ಲಿ ಬಹಳ ಬದಲಾವಣೆ ಮಾಡಿರುವಿರಿ ?"

" ಏನು ಬದಲಾವಣೆ ಮಾಡಿದ್ದೇನೆ."

" ನಿಮ್ಮ ಹಾಸಿಗೆ ಇಲ್ಲೇಕೆ ಬಂತು ?"

" ಆಕ್ಟರುಗಳು ಬಂದು ನನ್ನ ಜತೆ ಮಾತನಾಡಲು ತೊಂದರೆಯಾಗುತ್ತಿತ್ತು. ನನ್ನ ಸುಖ ನೋಡಿಕೊಂಡು ನಾನು ಆಕ್ಟರುಗಳನ್ನು ಕಡೆಗಾಣಿಸುವ ಹಾಗಿಲ್ಲ."

" ಮಂಜುಳನಿಗೇಕೆ ಪ್ರತ್ಯೇಕ ರೂಮ್ ಕೊಟ್ಟಿರಿ ?"

"ಅವಳು ನನ್ನ ಸ್ಟಾರ್ (Star) – ರೂಮ್ ಬೇಕು ಎಂದು ಕೇಳಿದಳು – ಕೊಟ್ಟೆ."

"ದೊರೆಸ್ವಾಮಿಗಳ ಪಾರ್ಟಗಳನ್ನು ಅಣ್ಣಯ್ಯನಿಗೆ ಕೊಡುವಿರಂತೆ?"

"ಹೌದು – ಅವನಿಗೆ ಕೊಟ್ಟಿರುವ ಅಡ್ವಾನ್ಸ್ ಮುಗಿಯುವವರೆಗೆ ಇಟ್ಟುಕೊಂಡಿದ್ದು ಅವನನ್ನು ಕಂಪೆನಿಯಿಂದ ಕಳಿಸಿಬಿಡುತ್ತೇನೆ."

"ಅವರೇನು ಮಾಡಿದರು?"

"ಕಂಪೆನಿ ರಹಸ್ಯವನ್ನೆಲ್ಲಾ ನಾನು ನಿನ್ನ ಜತೆ ಚರ್ಚೆಮಾಡುವ ಹಾಗಿಲ್ಲ."

"ಮಿಕ್ಕವರಿಗೂ ನನಗೂ ಏನೂ ವ್ಯತ್ಯಾಸವಿಲ್ಲಾನ್ನಿ."

"ಏನು ವ್ಯತ್ಯಾಸವಿದೆ."

"ನೀವು ನನ್ನನ್ನು ಕರೆದುಕೊಂಡು ಬಂದಾಗ ಆಡಿದ ಮಾತೇ ಬೇರೆ."

"ಇರಬಹುದು – ನೀನು ನನ್ನ ಕಂಪೆನಿಯನ್ನು ಸೂಳೆಗೇರಿ ಮಾಡುವ ವಿಷಯವೂ ಆಗ ತಿಳಿದಿರಲಿಲ್ಲ."

"ನಾನೇನು ಮಾಡಿದೆ!"

"ದೊರೆಸ್ವಾಮಿಗೆ ಮಂಜುಳನನ್ನು ಏಕೆ ಗಂಟು ಹಾಕಿದೆ."

"ಅವರವರಲ್ಲಿ ಸ್ನೇಹ ಬೆಳೆದರೆ ಅದಕ್ಕೆ ನಾನು ಹೊಣೆಯೇ?"

"ಸುಳ್ಳೇಕೆ ಬೊಗಳುವೆ. ಅವನಿಂದ ಒಂದು ಸಾವಿರ ರೂಪಾಯಿ ತೆಗೆದುಕೊಂಡು ನೀನು ಈ ಸಂಬಂಧ ಕುದುರಿಸಿಲ್ಲವೇ?"

"ಇದನ್ನು ಯಾರು ಹೇಳಿದರು?"

"ದೊರೆಸ್ವಾಮಿ ಬಾಯಲ್ಲಿಯೇ ಕೇಳಿದ್ದೇನೆ."

"ಅವರು ನಿಮ್ಮಲ್ಲಿ ಹೇಳಿದರೆ?"

"ಇಲ್ಲ – ಇನ್ನೂ ಯಾರಲ್ಲಿಯೋ ಹೇಳಿಕೊಳ್ಳುತ್ತಿದ್ದ. ನನ್ನ ಕಿವಿಯ ಮೇಲೆ ಬಿತ್ತು."

ಸರಸ್ವತಿಗೆ ಬಾಯಲ್ಲಿ ಮಾತು ಹೊರಡಲಿಲ್ಲ. ತನ್ನ ಗುಟ್ಟು ಇಷ್ಟು ಬೇಗ ರಟ್ಟಾಗುತ್ತದೆಂದು ಅವಳು ನಿರೀಕ್ಷಿಸಿರಲಿಲ್ಲ. ಶ್ರೀಕಂಠಮೂರ್ತಿಯ ಆಪಾದನೆಯನ್ನು ಧೈರ್ಯವಾಗಿ ಎದುರಿಸಿ

"ಈಗ ನೀವೇನು ಹೇಳುವುದು?" ಎಂದಳು.

"ಏನೂ ಇಲ್ಲ. ಈ ತರಹ ನಡೆವಳಿಕೆ ಬಿಟ್ಟು ಮರ್ಯಾದೆಯಾಗಿ ಇರುವ ಹಾಗಿದ್ದರೆ ಕಂಪೆನಿಯಲ್ಲಿರಬಹುದು; ಬೇಡವಾದರೆ ಹೋಗಬಹುದು. ನನ್ನ ಕಂಪೆನಿ ಮರ್ಯಾದೆ ಕಾಪಾಡಿಕೊಳ್ಳುವುದು ನನ್ನ ಧರ್ಮ."

ಆ ಕ್ಷಣವೇ ಶ್ರೀಕಂಠಮೂರ್ತಿಯ ಕಪಾಳಕ್ಕೆ ಬಿಗಿದು ಕಂಪೆನಿ ಬಿಟ್ಟು ಹೋಗಬೇಕೆಂದು ಸರಸ್ವತಿಗೆ ಮನಸ್ಸಾಯಿತು. ಆದರೆ ಮುಂದಿನ ವ್ಯವಸ್ಥೆ ಭದ್ರವಾಗದೆ ಕಂಪೆನಿ ಬಿಡುವುದು ಮೂರ್ಖತನವೆಂದು ಮನಸ್ಸನ್ನು ಹತೋಟಿಗೆ ತಂದುಕೊಂಡಳು.

"ಕಂಪೆನಿಯ ಯಜಮಾನರು ಪೇಲ್ಪಂಕ್ತಿ ಹಾಕಿಕೊಟ್ಟರೆ ಇತರರು ಅನುಸರಿಸಲು ಅನುಕೂಲವಾಗುತ್ತದೆ."

"ನನ್ನ ಆಕ್ಷೇಪಿಸುತ್ತಿರುವೆಯಾ ?"

"ಆಕ್ಷೇಪಿಸುವುದಕ್ಕೆ ನಾನು ಯಾರು – ನಿಮ್ಮ ಕಂಪೆನಿಯ ಒಬ್ಬ ನೌಕರಳು."

"ಒಳ್ಳೆಯದು – ರಾತ್ರಿ ಪಾರ್ಟಿದೆ – ನೋಡಿಕೋ ಹೋಗು."

ಎಂದು ಹೇಳಿದ. ಸರಸ್ವತಿ ಮುಖ ಸಪ್ಪಗೆ ಮಾಡಿಕೊಂಡು ಅಲ್ಲಿಂದೆದ್ದು ಬಂದಳು.

ಶ್ರೀಕಂಠಮೂರ್ತಿ ಮತ್ತು ತನ್ನ ಸಂಬಂಧ ಯಾವ ಮಟ್ಟಕ್ಕೆ ಬಂದಿದೆ ಯೆಂಬುದು ಸರಸ್ವತಿಗೆ ಚೆನ್ನಾಗಿ ನುಂದಟ್ಟಾಯಿತು. ಇಷ್ಟು ಬೇಗ ಈ ವ್ಯತ್ಯಾಸ ಬರಲು ಕಾರಣವೇನು – ಗುಂಡೂರಾಯ ಇನ್ನೂ ಯಾರನ್ನಾದರೂ ಯಜಮಾನರಿಗೆ ಗಂಟು ಹಾಕಿದ್ದಾನೆಯೇ – ಎನ್ನುವ ಸಂಶಯ ಸರಸ್ವತಿ ಯನ್ನು ಕಾಡಲಾರಂಭಿಸಿತು.

ಈಯೆಲ್ಲ ಕಿರಿಕಿರಿಗೆ ಕಳಶವಿಟ್ಟಂತೆ ಸುಧಾ ನೋಡದೆ – ಮಾತನಾಡಿಸದೆ ಹೋಗಿದ್ದಳು.

ಸರಸ್ವತಿ ಊಟ ಮಾಡದೆ ಕುಳಿತಿರುವ ಸಂಗತಿ ಸುಧಾ ಬಂದಕೂಡಲೆ ಗೊತ್ತಾಯಿತು. ತಾಯಿಯನ್ನು ಹುಡುಕಿಕೊಂಡು ಅವಳ ರೂಮಿಗೆ ಬಂದಳು. ಸರಸ್ವತಿ ಅಳುತ್ತ ಮಲಗಿದ್ದುದನ್ನು ಕಂಡು

"ಯಾಕಮ್ಮ ಊಟ ಮಾಡದೆ ಕುಳಿತಿರುವೆ ?"

"ನಾನು ಊಟ ಮಾಡಿದರೆಷ್ಟು, ಬಿಟ್ಟರೆಷ್ಟು – ಯಾರಿಗೇನಾಗಬೇಕಾಗಿದೆ ಸುಧಾ."

"ನೀನು ಹೇಳುವುದೂ ನಿಜವೇ. ಇದು ಕಂಪೆನಿಯ ಮನೆ. ಅವರವರ ಯೋಗಕ್ಷೇಮ ಅವರವರೇ ನೋಡಿಕೊಳ್ಳಬೇಕು."

"ನಾನು ಊರಿಗೆ ಬಂದದ್ದು ತಿಳಿದೂ ಎಲ್ಲಿಗೆ ಹೋದೆ ಸುಧಾ?"

"ಪಾರ್ಟಿ ಬರೆದುಕೊಳ್ಳಬೇಕಾಗಿತ್ತು."

"ಊರಿಗೆ ಹೋಗುವ ಮುಂಚೆ ನಾನು ಹೊಡೆದದ್ದಕ್ಕೆ ಕೋಪವೇ?"

"ನೀನು ಏನು ಮಾಡಿದರೂ ಕೋಪ ಮಾಡಿಕೊಳ್ಳಬಾರದೆಂದು ನಿರ್ಧರಿಸಿದ್ದೇನೆ."

"ಏಕೆ?"

"ಕೋಪ ಮಾಡಿಕೊಳ್ಳುವುದರಿಂದ ಏನು ಪ್ರಯೋಜನ? ನಿನ್ನ ದಾರಿ ನಿನಗೆ. ನಿನ್ನ ಸುಖಕ್ಕೆ ಚ್ಯುತಿ ಬರದಿದ್ದರೆ ಇಂದೇ ಪ್ರಪಂಚ ಹತ್ತಿಕೊಂಡು ಉರಿದರೂ ನೀನು ಯೋಚಿಸುವುದಿಲ್ಲ."

"ನೀನೂ ಹೀಗೆ ಹೇಳುತ್ತೀಯಾ! ನೀನೂ ಮಂಜೂ ಚೆನ್ನಾಗಿರಲಿ ಎಂದು ನಾನು ಎಷ್ಟು ಕಷ್ಟಪಟ್ಟಿರುವೆ ಗೊತ್ತೇ? ನಿನಗೆ ನಾನು ಮಾಡಿರುವ ಅನ್ಯಾಯವಾದರೂ ಏನು?"

"ಇನ್ನೂ ಏನೂ ಮಾಡಿಲ್ಲ."

"ಮುಂದೆ ಮಾಡುತ್ತೇನೆಂದು ಅರ್ಥವೋ?"

"ಮಂಜೂ ಸ್ಥಿತಿ ಏನು ಮಾಡಿದೆ ಎಂಬುದನ್ನು ಜ್ಞಾಪಿಸಿಕೋ."

"ಅವಳ ಕರ್ಮಕ್ಕೆ ನಾನು ಹೊಣೆಯೇ?"

"ಅವಳ ಸ್ಥಿತಿಗೆ ಅವಳ ಕರ್ಮವಲ್ಲ ಹೊಣೆ."

"ಇನ್ನು ಯಾರು ಹೊಣೆ."

"ನೀನು."

"ಇದು ನಿನ್ನ ರಾಜಶೇಖರನ ಉಪದೇಶವೋ?"

"ನಾನು ಹಾಲುಕುಡಿಯುವ ಮಗು ಎಂದು ತಿಳಿದುಕೊಂಡೆಯಾ—ಅವರನ್ನು ಈ ಮಾತಿಗೆ ಎಳೆಯಬೇಡ."

"ಅವನು ನಿನಗಿಷ್ಟು ಮುಚ್ಚಟೆಯಾದನೇನು?"

"ಅವರನ್ನು ನೀನು ಅರ್ಥಮಾಡಿಕೊಳ್ಳಲಾರೆ. ಸುಮ್ಮನೆ ಅವರ ಸುದ್ದಿ ಏಕೆ ತೆಗೆಯುತ್ತೀ ?"

"ಹೋಗು – ಹಾಳಾಗಿ ಹೋಗು – ಅವನನ್ನೇ ಕಟ್ಟಿಕೊಂಡು ಕೆರೆಯೋ ಭಾವಿಯೋ ಮುಗುಚಿಕೊ – ಅನಿಷ್ಟಮುಂಡೇದೇ !"

ಎಂದು ಸರಸ್ವತಮ್ಮ ಅಬ್ಬರಿಸಿದಳು. ಸುಧಾ ತಾಯಿಯನ್ನೊಮ್ಮೆ ದಿಟ್ಟಿಸಿ ನೋಡಿದಳು. ದುಷ್ಟ ಜೀವನದ ಪ್ರತಿಚ್ಛಾಯೆ, ಉದ್ವಿಗ್ನಗೊಂಡಿದ್ದ ತಾಯಿಯ ಮುಖದ ಮೇಲೆ ಮೂಡಿದ್ದುದನ್ನು ಕಂಡು ಅವಳ ಹೃದಯದಲ್ಲಿ ಉತ್ಕಟ ವೇದನೆಯಾಯಿತು. ಅಲ್ಲಿ ನಿಲ್ಲಲು ಸುಧಳಿಗೆ ಸಾಧ್ಯವಾಗಲಿಲ್ಲ.

ತನ್ನನ್ನು ಕಸಕ್ಕಿಂತ ಕಡೆಯಾಗಿ ಕಂಡು ಸುಧಾ ಹೊರಟುಹೋದುದನ್ನು ನೋಡಿ ಸರಸ್ವತಿ ಹಣೆ ಹಣೆ ಚಚ್ಚಿಕೊಂಡಳು.

## ೧೪

ಶಿವಮೊಗ್ಗೆಗೆ ಅಣ್ಣಯ್ಯ ಹೊಸಬನಾಗಿರಲಿಲ್ಲ. ಹಿಂದೆ ಬೇರೆ ನಾಟಕದ ಕಂಪೆನಿಯ ಜತೆ ಬಂದಿದ್ದಾಗ ಅವನು ಆ ಊರಿನಲ್ಲಿ ಕೆಲವು ಸ್ನೇಹಿತರನ್ನು ಸಂಪಾದಿಸಿಕೊಂಡಿದ್ದ. ತೋಟದ ಮನೆ ಸಣ್ಣಪ್ಪಗೌಡ ಆ ಪ್ರಾಂತ್ಯದಲ್ಲೆಲ್ಲಾ ಹೆಸರು ವಾಸಿಯಾಗಿದ್ದ ಜಮೀನುದಾರನಾಗಿದ್ದ. ಶಿವಮೊಗ್ಗೆಗೆ ಎಂಟೇ ಮೈಲಿ ದೂರದಲ್ಲಿ ಅವನ ತೋಟದ ಮನೆ ಇದ್ದಿತು. ಗೌಡ ಕಾರ್‌ನಲ್ಲಿ ಪ್ರತಿನಿತ್ಯ ಶಿವಮೊಗ್ಗೆಗೆ ಬಂದು ಹೋಗುತ್ತಿದ. ಅವನಿಗೂ ಸಿದ್ಧವೀರಪ್ಪನಿಗೂ ಸ್ನೇಹವೂ ಇತ್ತು, ವ್ಯವಹಾರ ಸಂಬಂಧವೂ ಇತ್ತು. ಗೌಡ ಬೆಳೆದ ಭತ್ತವೆಲ್ಲಾ ಸಿದ್ಧವೀರಪ್ಪನ 'ರೇಣುಕಾ ರೈಸ್ ಮಿಲ್ಸ್'ಗೇ ಬರುತ್ತಿತ್ತು. ಸಿದ್ಧವೀರಪ್ಪನ ಸಹಪಾಠಿಯಾಗಿದ್ದ ರಾಮಶಾಸ್ತ್ರಿ ಪೇಟೆಯಲ್ಲಿ ಒಂದು ಪುಸ್ತಕದಂಗಡಿ ಇಟ್ಟುಕೊಂಡಿದ್ದ. ಸ್ಕೂಲ್ ಸೀಸನ್ನಿನಲ್ಲಿ ಎರಡು ತಿಂಗಳು ವ್ಯಾಪಾರ ಭರಾಟೆಯಿಂದ ಸಾಗುತ್ತಿತ್ತು. ಉಳಿದ ತಿಂಗಳಲ್ಲಿ 'ಜನರಲ್ ಬುಕ್ಸ್' ತರಿಸಿ ಮಾರುತ್ತಿದ್ದುದಲ್ಲದೆ ಕೆಲವು ಇಂಗ್ಲಿಷ್, ಕನ್ನಡ ಪತ್ರಿಕೆಗಳ ಏಜಂಟಾಗಿ ಕೆಲಸ ಮಾಡುತ್ತಿದ್ದ. ರಾಮಾಶಾಸ್ತ್ರಿ ಅಂಗಡಿಯ ಮೇಲಿದ್ದ ರೂಮೇ ಗೌಡ,

ಸಿದ್ದವೀರಪ್ಪನ ನಿಲ್ದಾಣವಾಗಿತ್ತು. ಸಂಜೆ ಒಂದೆರಡು ಗಂಟೆ ಅಲ್ಲಿ ಕುಳಿತು ಇಸ್ಪೇಟ್ ಆಡಿದಲ್ಲದೆ ಗೌಡ ತೋಟದ ಮನೆಗೆ ಹೋಗುತ್ತಿರಲಿಲ್ಲ.

ಅಣ್ಣಯ್ಯನ ಪಾರ್ಟು ನೋಡಿ ಮೆಚ್ಚಿಕೊಂಡ ಗೌಡ ಅವನ ಸ್ನೇಹ ಬೆಳಸಿದ್ದ. ಗೌಡನ ಸ್ನೇಹದ ಜತೆಯಲ್ಲಿ ಸಿದ್ದವೀರಪ್ಪ, ಶಾಸ್ತ್ರಿಯ ಸ್ನೇಹವೂ ಅವನಿಗೆ ಲಭಿಸಿತ್ತು. ನಾಟಕ, ರಿಹರ್ಸಲ್ ವೇಳೆ ಬಿಟ್ಟು ಉಳಿದ ವೇಳೆಯ ಬಹುಭಾಗವನ್ನು ಅಣ್ಣಯ್ಯ ಶಾಸ್ತ್ರಿಯ ಅಂಗಡಿಯಲ್ಲೋ ಮಹಡಿಯ ಮೇಲೋ ಕಳೆಯುತ್ತಿದ್ದ.

ಅಣ್ಣಯ್ಯನ ವ್ಯಾಪ್ತಿ ಕಂಡು ಕಂಪೆನಿಯ ಇತರ ನಟರು ಅಸೂಯೆ ಪಡದಿರಲಿಲ್ಲ. ಎಂಟರವರೆಗೆ ಇಸ್ಪೇಟ್ ಆಡಿ ಗೌಡ ತನ್ನ ಕಾರಿನಲ್ಲಿ ಅಣ್ಣಯ್ಯನನ್ನು ಕರೆದುಕೊಂಡು ಬಂದು ಥಿಯೇಟರಿನಲ್ಲಿ ಬಿಟ್ಟು ಹೋಗುತ್ತಿದ್ದ. ಅಣ್ಣಯ್ಯ ಕಾರಿನಲ್ಲಿ ಓಡಿಯಾಡುವುದನ್ನು ಕಂಡ ಮೇಲಂತೂ ಕಂಪೆನಿಯ ಜನರ ಹೊಟ್ಟೆ ಉರಿದು ಹೋಯಿತು. ಎಲ್ಲರಿಗಿಂತ ಹೆಚ್ಚಾಗಿ ಅಣ್ಣಯ್ಯನ ಮೇಲೆ ವಿಷಕಾರುತ್ತಿದ್ದವನು ದೊರೆಸ್ವಾಮಿ. ಗೌಡ, ಸಿದ್ದವೀರಪ್ಪ, ಶಾಸ್ತ್ರಿಯ ಸ್ನೇಹ ಅಣ್ಣಯ್ಯನಿಗೆ ಕಂಪೆನಿಯಲ್ಲಿ ವಿಶಿಷ್ಟಸ್ಥಾನ ಕಲ್ಪಿಸಿಕೊಟ್ಟಿತ್ತು. ಹೊಟ್ಟೆಯ ಒಳಗೆ ಎಷ್ಟೇ ಉರಿಯಿದ್ದರೂ ಎಲ್ಲರೂ ಅವನನ್ನು ಗೌರವದಿಂದ ಕಾಣುತ್ತಿದ್ದರು. ಯಜಮಾನರು ಕೂಡ ಅಣ್ಣಯ್ಯನ ಮಾತಿಗೆ ಪ್ರತಿ ಹೇಳುತ್ತಿರಲಿಲ್ಲ.

ಮಂಜುಳನ ಸ್ನೇಹ ತಪ್ಪಿ ಹೋದ ಸಂಕಟದ ಜತೆಗೆ ಅಣ್ಣಯ್ಯನ ಅಭ್ಯುದಯವೂ ಸೇರಿಕೊಂಡು ದೊರೆಸ್ವಾಮಿಗೆ ನಿದ್ರಾಹಾರ ಕೂಡ ಬೇಡವಾಯಿತು. ಅನೇಕ ಸಲ ರಂಗದ ಮೇಲೆ ತನ್ನ ದುಃಖವನ್ನು ತೋಡಿಕೊಂಡು ಬಾಯಿಗೆ ಬಂದಂತೆ ಮಾತೂ ಆಡಿಬಿಡುತ್ತಿದ್ದ.

ಅಣ್ಣಯ್ಯನ ಹಿಂದೆ ಅವನ ಟೀಕೆಯನ್ನು ಕಂಪೆನಿಯ ಜನ ಆರಂಭಿಸಿದರೆ ಅವನ ಪರ ವಹಿಸಿಕೊಂಡು ಮಾತನಾಡುತ್ತಿದ್ದವಳು ಮಂಜುಳಾ. ದೊರೆಸ್ವಾಮಿಗೆ ಅಣ್ಣಯ್ಯನನ್ನು ಕಂಡರೆ ಆಗುತ್ತಿರಲಿಲ್ಲ – ತನಗೆ ದೊರೆಸ್ವಾಮಿಯನ್ನು ಕಂಡರೆ ಆಗುತ್ತಿರಲಿಲ್ಲ; ಆದ್ದರಿಂದ ತಾನು ಅಣ್ಣಯ್ಯನ ಪರ ವಹಿಸಬೇಕೆಂಬುದೇ ಮಂಜುಳನ ತರ್ಕವಾಗಿತ್ತು.

ಮಂಜುಳ ತನ್ನ ಪಕ್ಷ ವಹಿಸಿರುವ ವಿಷಯ ತಿಳಿದ ಮೇಲೆ ಅಣ್ಣಯ್ಯ

ಅವಳಿಗೆ ಸ್ವಲ್ಪ ಲಕ್ಷ್ಯ ಕೊಡಲಾರಂಭಿಸಿದ. ಮಂಜುಳ ಪರ್ಯಾಯವಾಗಿ ಅವನಿಗೆ ಉತ್ತೇಜನ ಕೊಡುತ್ತ ಬಂದಳು. ಮಂಜುಳಾ, ಅಣ್ಣಯ್ಯ ಮಾತ ನಾಡುತ್ತ ನಿಂತಿರುವುದನ್ನು ಕಂಡರೆ ದೊರೆಸ್ವಾಮಿ ಕಿಡಿಕಿಡಿಯಾಗುತ್ತಿದ್ದ. ದೊರೆಸ್ವಾಮಿ ಸುಳಿದಾಡುತ್ತಿದ್ದರೆ ಮಂಜುಳಾ ಉದ್ದೇಶಪೂರ್ವಕವಾಗಿ ಅಣ್ಣಯ್ಯನನ್ನು ಮಾತನಾಡಿಸಿಕೊಂಡು ಹೋಗಿ ಅವನನ್ನು ಮತ್ತಷ್ಟು ಕೆರಳಿಸುತ್ತಿದ್ದಳು.

ಮಂಜುಳಾ, ಶ್ರೀಕಂಠಮೂರ್ತಿಯ ಸಂಬಂಧ ಹೆಚ್ಚು ದಿನ ಗೋಪ್ಯ ವಾಗಿ ಉಳಿಯಲು ಸಾಧ್ಯವಾಗಲಿಲ್ಲ. ಮಂಜುಳನ ಎದುರು ರೂಮಿನಲ್ಲಿ ರುತ್ತಿದ್ದ ಸುಂದರಿ, ನಾಗರತ್ನ, ಸುಬ್ಬುಲಕ್ಷ್ಮಿ, ವೇಳಾಪಟ್ಟಿಯನ್ನು ಸಿದ್ಧಗೊಳಿಸಿ ಕಂಪೆನಿ ಮನೆಯಲ್ಲಿ ಪ್ರಸಾರ ಮಾಡಿದರು.

ಈ ಸುದ್ದಿಯನ್ನು ಸೂಕ್ಷ್ಮವಾಗಿ ಸರಸ್ವತಿಗೆ ಸುಂದರಿಯೇ ಮುಟ್ಟಿಸಿದಳು.

ಒಂದು ರಾತ್ರಿ ನಾಟಕ ಮುಗಿಸಿಕೊಂಡು ಎಲ್ಲರೂ ಕಂಪೆನಿ ಮನೆಗೆ ಬಂದಿದ್ದಾರೆ. ಮಂಜುಳಾ ತನ್ನ ರೂಮಿಗೆ, ಸುಭಾ ಮತ್ತಿತರು ತಮ್ಮ ರೂಮಿಗೆ ಹೋಗಿದ್ದಾರೆ. ಸರಸ್ವತಿ ತನ್ನ ರೂಮಿಗೆ ಬಂದು ಕತ್ತಲೆಯಲ್ಲಿಯೇ ಬಾಗಿಲು ಬಿರುಕಿನಲ್ಲಿ ನೋಡುತ್ತ ನಿಂತಿದ್ದಾಳೆ. ಹತ್ತು ನಿಮಿಷವಾಗಿರ ಬಹುದು. ಶ್ರೀಕಂಠಮೂರ್ತಿ ಎದ್ದು ಸರಸ್ವತಿಯ ರೂಮಿನ ಬಳಿಗೆ ಬಂದು, ಬಾಗಿಲು ಹಾಕಿದ್ದುದನ್ನು ಗಮನಿಸಿ ಮಂಜುಳನ ರೂಮಿಗೆ ಪ್ರವೇಶಿಸಿದ. ಅವನು ಹೋದ ಮೇಲೆ ಸ್ವಲ್ಪ ಹೊತ್ತು ಸುಮ್ಮನಿದ್ದು ಸರಸ್ವತಿ ಹೋಗಿ ಮಂಜುಳನ ರೂಮಿನ ಬಾಗಿಲು ತಟ್ಟಿದಳು.

ರೂಮಿನ ಒಳಗಿದ್ದ ಶ್ರೀಕಂಠಮೂರ್ತಿಯ ಮೈ ಬೆವತು ಹೋಯಿತು. ಬಾಗಿಲು ಬಡಿತ ಹೆಚ್ಚಾಗಲು ಒಳಗಿನಿಂದ ಮಂಜುಳಾ 'ಯಾರು' ಎಂದಳು. 'ತೆಗೆಯೋ ಬಾಗಿಲು' ಎಂದು ಸರಸ್ವತಿ ಆರ್ಭಟಿಸಿದಳು.

"ಬಾಗಿಲು ತೆಗೆಯಬೇಕಾದ ಅಗತ್ಯವಿಲ್ಲ."

"ನೀನು ಬಾಗಿಲು ತೆಗೆಯದಿದ್ದರೆ ಕಂಪೆನಿಯವರನ್ನೆಲ್ಲಾ ಎಬ್ಬಿಸಿ ಕರೆದು ಕೊಂಡು ಬರುತ್ತೇನೆ ನೋಡು"

ಸ್ವಲ್ಪ ಹೊತ್ತು ನಿಶ್ಶಬ್ದ.

ಒಳಗೆ ಪಿಸುದನಿಯಲ್ಲಿ ಮಂಜುಳಾ ಶ್ರೀಕಂಠಮೂರ್ತಿಗೆ

"ಏನು ಮಾಡಲಿ" ಎಂದು ಕೇಳಿದಳು.

"ಒಳ್ಳೆಯ ಮಾತು ಹೇಳಿ ಕಳಿಸಿಬಿಡು"

ಮಂಜುಳಾ ಬಾಗಿಲು ಬಳಿ ಬಂದು ನಿಂತುಕೊಂಡು

"ಏನು ಬೇಕಾಗಿತ್ತಮ್ಮಾ" ಎಂದಳು.

"ಬಾಗಿಲು ತೆಗೆ ಹೇಳುತ್ತೇನೆ."

"ಈಗ ತೆಗೆಯುವ ಹಾಗಿಲ್ಲ."

"ಏಕೆ ? ಯಾರಿದ್ದಾರೆ ?"

"ಯಾರೋ ಇದ್ದಾರೆ – ಬೆಳಿಗ್ಗೆ ಎಲ್ಲಾ ಹೇಳುತ್ತೇನೆ."

ಸರಸ್ವತಿ ಸತತವಾಗಿ ಬಾಗಿಲು ಬಡಿಯಲಾರಂಭಿಸಿದಳು.

ಎದುರು ರೂಮಿನಲ್ಲಿದ್ದ ಸುಂದರಿ, ಸುಬ್ಬುಲಕ್ಷ್ಮಿ, ನಾಗರತ್ನ ತಮ್ಮ ರೂಮಿನ ಬಾಗಿಲನ್ನು ಸ್ವಲ್ಪ ತೆಗೆದು, ಬಿರುಕಿನಲ್ಲಿ ಈ ಪ್ರಸಂಗ ನೋಡುತ್ತಿದ್ದರು.

ಸುಧಾ ಮುಖದ ತುಂಬ ಹೊದಿಕೆ ಕವಿದುಕೊಂಡು ನಿದ್ರೆ ಮಾಡುತ್ತಿರುವಂತೆ ನಟಿಸಿದಳು.

ಸರಸ್ವತಿಯ ಬಾಗಿಲು ಬಡಿತ ಬಲವಾಗಲು ಶ್ರೀಕಂಠಮೂರ್ತಿ ರೇಗಿ

"ಬಾಗಿಲು ತೆಗೆ - ಮಂಜುಳಾ - ಬಂದರೆ ಬರಲಿ"

ಎಂದು ಕೂಗಿದ. ಮಂಜುಳಾ ಬಾಗಿಲು ತೆಗೆದೊಡನೆಯೇ ಬಾಗಿಲಿನ ರೆಕ್ಕೆಯೊಡನೆಯೇ ಸರಸ್ವತಿ ವ್ಯಾಘ್ರಿಯಂತೆ ಒಳಹೊಕ್ಕಳು. ಮಂಜುಳನ ಹಾಸಿಗೆಯ ಮೇಲೆ ಕುಳಿತಿದ್ದ ಶ್ರೀಕಂಠಮೂರ್ತಿಯನ್ನು ನೋಡಿದ ಮೇಲಂತೂ ಸರಸ್ವತಮ್ಮನಿಗೆ ಸಹನೆ ಉಳಿಯಲಿಲ್ಲ.

"ಇದೇನು ನೀವು ಮಾಡುತ್ತಿರುವುದು" ಎಂದು ಅರಚಿದಳು.

ಮಂಜುಳಾ ಮೆಲ್ಲನೆ ಕದಹಾಕಿ, ಒಳಗಡೆ ಅಗಣಿ ಹಾಕಿದಳು.

"ನನ್ನ ಮಗಳಾಗಿ ಈ ಕೆಲಸಮಾಡೋದೇನು ನೀನು – ಹಾದರಗಿತ್ತಿ ರಂಡೆ"

ಎಂದು ಮಗಳ ನೆತ್ತಿಯ ಕೂದಲು ಹಿಡಿದು ಅವಳನ್ನು ಥಳಿಸಿದಳು.

ಶ್ರೀಕಂಠಮೂರ್ತಿ ಎದ್ದು ಅವರಿಬ್ಬರ ಮಧ್ಯೆ ಬಂದು ಸರಸ್ವತಿಯನ್ನು ಮೂಲೆಗೆ ನೂಕಿದ. ಸರಸ್ವತಿಗೆ ಸ್ವಲ್ಪ ಪೆಟ್ಟು ತಾಕಿತು. ಪೆಟ್ಟಿನ

ನೋವನ್ನು ಗಮನಿಸದೆ ಮತ್ತೆ ಹಾರಿ ಬಂದು ಮಗಳನ್ನು ಹಿಡಿದುಕೊಳ್ಳಲೆತ್ನಿಸಿದಳು. ಶ್ರೀಕಂಠಮೂರ್ತಿ ಕೈಚಾಚಿ ಅವಳನ್ನು ದೂರದಲ್ಲಿ ನಿಲ್ಲಿಸಿದ.

ಮಂಜುಳ ಎದ್ದು ನಿಂತು ತಲೆ ಸವರಿಕೊಂಡಳು. ಕೆನ್ನೆಯ ಮೇಲೆ ಸರಸ್ವತಿಯ ಬೆರಳು ಗುರುತು ಚೆನ್ನಾಗಿ ಮೂಡಿತ್ತು.

"ನನ್ನ ಹಾದರಗಿತ್ತಿ ಎನ್ನುವವಳು ನೀನು ಮಹಾ ಪತಿವ್ರತೆಯೇನೆ ? ಬೆಂಗಳೂರನ್ನೇ ಹಾಳು ಮಾಡಿ ಇಲ್ಲಿಗೆ ಬಂದಿದ್ದೀ – ನೀನು ಕಲಿಸಿಕೊಟ್ಟದ್ದೇ ಈ ಪಾಠ."

"ಈತ ನಿನ್ನ ತಂದೆಯಾಗ ಬೇಡವೇನೇ ?"

"ಊರೆಲ್ಲಾ ನನ್ನ ತಂದೆಯರೇ !"

"ತಂದೆ ಜತೆ ಚಲ್ಲಾಟವೇ ?"

"ಅಳಿಯನ ಜತೆ ಚಲ್ಲಾಟವಾಡಿದವರು ಯಾರು ?"

ಶ್ರೀಕಂಠಮೂರ್ತಿ ತಾಯಿ ಮಗಳ ವಾದ ವಿವಾದ ಕೇಳುತ್ತ ನಿಂತ.

ಎದುರು ರೂಮಿನಲ್ಲಿ ಸುಂದರಿ, ಸುಬ್ಬುಲಕ್ಷ್ಮಿ, ನಾಗರತ್ನ, ಅವರ ಸಂಭಾಷಣೆಯನ್ನು ಕಿವಿಗೊಟ್ಟು ಲಾಲಿಸುತ್ತಿದ್ದರು.

ಮುಸುಕಿನೊಳಗಿನಿಂದಲೇ ಸುಧಾ ಎಲ್ಲವನ್ನೂ ಕೇಳಿಸಿಕೊಳ್ಳುತ್ತಿದ್ದಳು.

ಹೊರಗಡೆ ಮೆಟ್ಟಲು ಕೆಳಗೆ ಕಂಪೆನಿಯ ನಟರೆಲ್ಲಾ ಗುಂಪುಕಟ್ಟಿ ನಿಂತುಕೊಂಡು ಕೇಳುತ್ತಿದ್ದರು.

"ನಿನ್ನ ತುಂಡು ತುಂಡಾಗಿ ಕಡಿದು ನಾಯಿ ನರಿಗಳಿಗೆ ಹಾಕಿದರೂ ಪಾಪ ಬರುವುದಿಲ್ಲ."

"ನಿಜ – ನಿನ್ನ – ನಿನ್ನ ಮಕ್ಕಳನ್ನು ಯಾರೂ ಉಳಿಸಬಾರದು."

"ಈ ಪುಣ್ಯಕ್ಕೆ ನಿನ್ನ ಹೊತ್ತು, ಹೆತ್ತು, ಸಾಕಿ, ಸಲಹಿ, ವಿದ್ಯಾ ಕಲಿಸಿ ಮುಂಡ ಮೋಚಿಕೊಂಡೆ."

"ನೀನಿನ್ನೂ ಎಷ್ಟು ಮನೆ ಹಾಳು ಮಾಡಬೇಕಾಗಿದೆಯೋ – ಈಗಲೇ ಮುಂಡ ಎಲ್ಲಿ ಮೋಚಿಕೊಳ್ಳುತ್ತೀ. ಸುಬ್ಬಕ್ಕನೇ ಆ ಕೆಲಸ ಮಾಡಬೇಕಾಗಿತ್ತು – ಏಕೋ ಅವಳು ನಿನ್ನ ಉಳಿಸಿದಳು."

ತಾಯಿ ಮಗಳು ಯಾರೂ ಮಾತಿನಲ್ಲಿ ಹಿಂದೆ ಬೀಳಲಿಲ್ಲ. ಸರಸ್ವತಿಯ ಸಮಸ್ತ ಚರಿತ್ರೆಯೂ ಅವರ ಸಂಭಾಷಣೆಯಿಂದ ಬಯಲಿಗೆ ಬಂತು.

ಮಗಳು ಸೇರಿಗೆ ಸವ್ವಾಸೇರಾಗಿ ನಿಂತುದನ್ನು ನೋಡಿ ಸರಸ್ವತಿಯ ಉಸಿರೇ ಮೆತ್ತಗಾಯಿತು. ಆದರೆ ಎದೆಯಲ್ಲಿ ಪ್ರಜ್ವಲಿತವಾದ ಬೆಂಕಿ ಆರಿರ ಲಿಲ್ಲ. ತನ್ನ ದೃಷ್ಟಿಯನ್ನು ಶ್ರೀಕಂಠಮೂರ್ತಿಯ ಕಡೆ ಹೊರಳಿಸಿ

"ನೀವು ಮನುಷ್ಯರೇನ್ರೀ. ದನಕ್ಕಿಂತ ಕಡೆಯಾದ್ರಲ್ಲರೀ. ತಾಯಿ, ಮಗಳು ಎನ್ನುವ ವ್ಯತ್ಯಾಸ ಕೂಡ ನೋಡಬೇಡವೇ. ದೊಡ್ಡ ನಾಟಕದ ಕಂಪೆನಿ ಮಾಲಿಕರು – ನಾಟ್ಯ ಬ್ರಹ್ಮನ ಉಪಾಸಕರು – ಕಲೋದ್ಧಾರಕರು – ಇದೇ ನೀವು ಮಾಡುತ್ತಿರುವ ಕಲೋಪಾಸನೆ . . . . ಕಾಮೋಪಾಸನೆ. ಸೂಳೆಗೇರಿಗಿಂತ ಕಡೆಯಾಯಿತಲ್ರೀ ನಿಮ್ಮ ನಾಟಕದ ಕಂಪೆನಿ.

"ಬಾಯಿ ಮುಚ್ಚು ಸಾಕು."

"ಯಾಕೆ ಮುಚ್ಚಲಿ – ಊರಿಗೇ ಕೇಳುವಂತೆ ಗಟ್ಟಿಯಾಗಿ ಕೂಗು ತ್ತೇನೆ. ನಿಮ್ಮ ಕಲ್ಯಾಣ ಗುಣ ಲೋಕಕ್ಕೆ ಗೊತ್ತಾಗಲಿ – ನಿಮ್ಮ ನಾಟಕದ ಕಂಪೆನಿ ಹೆಣ್ಣಿನ ಸಂತೆಯೆಂದು ಎಲ್ಲರಿಗೂ ಗೊತ್ತಾದರೆ ನಿಮ್ಮ ಸಂಪಾದನೆಯೂ ಹೆಚ್ಚುತ್ತದೆ."

"ನನ್ನ ಬೇಕಾದ್ದು ಅಂದುಕೊ. ನಾಟಕದ ಕಂಪೆನಿ ವಿಷಯ ಮಾತಾ ಡಿದರೆ ಹಲ್ಲು ಮುರಿದು ಬಿಡುತ್ತೇನೆ."

"ಹಲ್ಲು ಮುರಿಯುತ್ತಾರಂತೆ! ನಿಮಗಷ್ಟು ಗಂಡಸುತನವಿದೆಯೇ?"

ಶ್ರೀಕಂಠಮೂರ್ತಿಗೆ ತಡೆಯುವುದಾಗಲಿಲ್ಲ. ಸರಸ್ವತಿಯ ಮುಖ ಮೂತಿ ನೋಡದೆ ಅವಳು ಹಣ್ಣಾಗುವಂತೆ ಥಳಿಸಿ, ಅವಳ ಕೂದಲು ಹಿಡಿದು ಎಳೆದು ತಂದು ರೂಮಿನಲ್ಲಿ ಕೂಡಿ ಹೊರಗಡೆ ಬಾಗಿಲು – ಚಿಲಕ ಹಾಕಿ ಬಂದು ತನ್ನ ರೂಮಿನಲ್ಲಿ ಕುಳಿತ.

ಶ್ರೀಕಂಠಮೂರ್ತಿಯ ಆತ್ಮಗೌರವ, ಪ್ರತಿಷ್ಠೆಗೆ ಪ್ರಬಲವಾದ ಧಕ್ಕೆ ತಗುಲಿತ್ತು. 'ಇನ್ನು ಕಂಪೆನಿಯನ್ನು ದರ್ಪದಲ್ಲಿ ಆಳುವುದು ಸಾಧ್ಯವೇ' ಎಂಬ ಚಿಂತೆ ಅವನನ್ನು ಕೊರೆಯ ತೊಡಗಿತು.

ರೂಮಿನಲ್ಲಿ ಕುಳಿತು ಯೋಚಿಸುತ್ತಾ ಗುಂಡೂರಾಯನನ್ನು ಕೂಗಿದ. ಯಜಮಾನರ ಧ್ವನಿ ಕೇಳಲು ಇನ್ನು ತನಗೇನು ಕಾದಿದೆಯೋ ಎಂದು ಅಂಜಿ ಕೊಂಡೇ ಗುಂಡೂ ಯಜಮಾನರಿಗೆ ಕಾಣಿಸಿಕೊಂಡ.

"ಕೂಗಿದಿರಾ ಸ್ವಾಮಿ."

" ಹೂ – ಕೂಗಿದೆ. ಬೆಳಿಗ್ಗೆ ಸರಸ್ವತಿ ಲೆಕ್ಕ ನೋಡಿ, ಅವಳಿಗೇನಾದರೂ ಕೊಡುವುದಿದ್ದರೆ ಕೊಟ್ಟುಬಿಟ್ಟು ಅವಳನ್ನೂ ಅವಳ ಮಕ್ಕಳನ್ನೂ ಇಲ್ಲಿಂದ ಮೊದಲು ಹೊರಗೆ ಹಾಕು."

" ಅವರಿಗೆ ಎರಡು ತಿಂಗಳ ಸಂಬಳ ಕೊಡಬೇಕಾಗಿದೆ."

" ಅಡ್ವಾನ್ಸ್ ಹಣದಲ್ಲಿ ಉತ್ತಾರ ಹಾಕು."

" ಮಂಜುಳಮ್ಮ, ಸುಧಮ್ಮನನ್ನೂ ಕಳಿಸಿಬಿಡಬೇಕೇ ?"

" ಆ ಚಂಡಾಲ ಸಂಸಾರದಲ್ಲಿ ಯಾರೂ ಇಲ್ಲಿ ಇರಬೇಕಾಗಿಲ್ಲ."

ಗುಂಡೂ ಮೆಲ್ಲನೆ ಹೋಗಿ ಯಜಮಾನರ ಎದುರಿಗೆ ಕುಳಿತು

" ಕೋಪದಲ್ಲಿ ಕೊಯ್ದುಕೊಂಡ ಮೂಗು ಶಾಂತವಾದ ಮೇಲೆ ಬರುವುದಿಲ್ಲ ಎಂದು ಹಳೆಯ ಗಾದೆಯೊಂದಿದೆ."

" ನನಗೆ ಉಪದೇಶ ಬೇಕಿಲ್ಲ – ನಾನು ಹೇಳಿದಷ್ಟು ಮಾಡು. ಸೂರಪ್ಪ ಎಲ್ಲಿದ್ದಾನೆ. ಲೆಕ್ಕದ ಪುಸ್ತಕ ತೆಗೆದುಕೊಂಡು ಬೆಳಿಗ್ಗೆ ನಾನು ಏಳುವ ಹೊತ್ತಿಗೆ ಸೂರಪ್ಪ ಇಲ್ಲೀಗೆ ಬಂದಿರಬೇಕು."

" ನನ್ನ ಮಾತು ಸ್ವಲ್ಪ ಕೇಳಿ ಸ್ವಾಮಿ."

" ನನಗೆ ಯಾರ ಮಾತೂ ಬೇಕಾಗಿಲ್ಲ."

" ಕೇಳುವುದು ಕೇಳಿಬಿಡಿ. ಆ ಮೇಲೆ ತಮಗೆ ತಿಳಿದದ್ದು ಮಾಡಬಹುದು."

" ಹೇಳು."

" ಮೂರು ಜನರನ್ನೂ ಒಟ್ಟಿಗೆ ಕಳಿಸಿಬಿಟ್ಟರೆ ನಾಟಕಗಳನ್ನು ನಿಲ್ಲಿಸಿಬಿಡಬೇಕಾಗುತ್ತದೆ."

" ಎಂಟು ಹತ್ತು ದಿವಸ ನಾಟಕಗಳನ್ನು ನಿಲ್ಲಿಸಿದರೂ ಚಿಂತೆಯಿಲ್ಲ."

" ನಾಟಕಗಳು ಈಗ ಒಳ್ಳೆಯ ಭರಾಟೆಯಲ್ಲಿ ನಡೆದಿವೆ – ಈಗ ನಾವು ನಿಲ್ಲಿಸಿದರೆ ಮುಂದೆ ಈ ಕಲೆಕ್ಷನ್ ಸಿಕ್ಕುವುದಿಲ್ಲ. ಜಯಪಾಲ ಚರಿತ್ರೆ ಮುಂದಿನ ವಾರದಿಂದ ಎಂದು ಪ್ರಕಟನೆಯನ್ನೂ ಮಾಡಿದ್ದಾಗಿದೆ."

" ನನ್ನ ಏನು ಮಾಡೆನ್ನುವೆ ? "

" ನಾನೇನೂ ಹೇಳುವುದಿಲ್ಲ. ತಾವು ಧಣಿಗಳು – ತಾವು ಹೇಗೆ ಅಪ್ಪಣೆಕೊಡಿಸಿದರೆ ಹಾಗೆ ಮಾಡಲು ನಾನು ಸಿದ್ಧ."

"ರಾಘವಾಚಾರಿ ಮಾತು ಕೇಳಿಕೊಂಡು ಈ ಗಂಡಸತ್ತ ಮುಂಡೆಯನ್ನು ರಂಗದ ಮೇಲೆ ತಂದು ರಂಗಮಂಟಪವನ್ನೇ ಅಪವಿತ್ರ ಮಾಡಿಬಿಟ್ಟೆ ಗುಂಡೂ."

"ನೀವೂ ತಾಳ್ಮೆ ಕೆಡಿಸಿಕೊಳ್ಳಬಾರದಾಗಿತ್ತು."

"ಅವಳ ಬಾಯಿ ಕೇಳಿದೆಯಲ್ಲ – ತಾಳ್ಮೆ ಉಳಿಸಿಕೊಳ್ಳುವುದು ಹೇಗೆ ಸಾಧ್ಯ. ಕಂಪೆನಿಯಲ್ಲಿ ನನ್ನ ಗೌರವ ಏನು ಉಳಿಯಿತು - ಯಾವ ಸೌಭಾಗ್ಯಕ್ಕೆ ನಾನು ಕಂಪೆನಿ ನಡೆಸಬೇಕು – ಈ ಸೀಸನ್ ಮುಗಿಯುತ್ತಲೇ ನಾನೂ ಕಂಪೆನಿ ನಿಲ್ಲಿಸಿಬಿಡುತ್ತೇನೆ ಗುಂಡೂ."

"ಉಗುರಲ್ಲಿ ತೆಗೆಯುವ ಸಿಬಿರಿಗೆ ಕೊಡಲಿ ಪ್ರಯೋಗಿಸಿದರು ಎನ್ನುವ ಹಾಗೇ ಮಾಡುತ್ತಿರುವಿರಿ. ಒಬ್ಬಳ ಅವಿವೇಕಕ್ಕೆ ಎಪ್ಪತ್ತು ಜನರ ಹೊಟ್ಟೆಯ ಮೇಲೆ ಹೊಡೆಯುವಿರಾ ? ಹತ್ತು ಹನ್ನೆರಡು ವರ್ಷದಿಂದ ಕಂಪೆನಿ ಸೇವೆ ಮಾಡಿಕೊಂಡು ಬಂದಿರುವವರ ಕೈಗೆ ಭಿಕ್ಷಾಪಾತ್ರೆ ಕೊಟ್ಟು ಬೀದಿಗಟ್ಟುವಿರಾ?"

"ಅವಳ ಮುಖ ನೋಡಲಾರೆ ಗುಂಡೂ ಮೊದಲು ಅವಳನ್ನು ಕಂಪೆನಿಯಿಂದ ಹೊರಗೆ ಕಳಿಸು. ನಾಳೆ ಮೊದಲು ಅವಳನ್ನು ರೂಮು ಬಿಡಿಸು."

"ಬಿಡಿಸಿ ಎಲ್ಲೀಗೆ ಕಳಿಸಲಿ."

"ಸುಂದರಿ, ನಾಗರತ್ನ ಇರುವ ರೂಮಿಗೆ."

"ಒಂದು ರೂಮಿನಲ್ಲಿ ಈಗಲೇ ಅವರು ನಾಲ್ಕು ಜನರಿದ್ದಾರೆ."

"ಅಡಿಗೆಯಮನೆ ಪಕ್ಕದಲ್ಲಿ ಸೌದೆ, ಬೆರಣಿ ಹಾಕಿರುವ ರೂಮು ಇದೆಯಲ್ಲಾ. ಅದನ್ನು ಖಾಲಿ ಮಾಡಿಸಿ ಅಲ್ಲೀಗೆ ಸಾಗಿಸು."

"ಈ ವಿಷಯ ನನಗೆ ಒಪ್ಪಿಸಿ ನೀವು ನಿಶ್ಚಿಂತರಾಗಿರಿ. ಹೊತ್ತೂ ಆಗಿದೆ. ನಿಮಗೆ ಆಯಾಸವೂ ಆಗಿದೆ. ಈಗ ಸುಮ್ಮನೆ ಮಲಗಿ ನಿದ್ರೆಹೋಗಿ. ಬೆಳಿಗ್ಗೆ ನಾನು ಎಲ್ಲಾ ವಿಚಾರಿಸಿ ಕೊಳ್ಳುತ್ತೇನೆ."

"ಬೆಳಿಗ್ಗೆ ನಾನು ಏಳುವ ಹೊತ್ತಿಗೆ ಅವಳನ್ನು ರೂಮಿನಿಂದಾಚೆ ಸಾಗಿಸಿರಬೇಕು."

"ಹಾಗೇ ಆಗಲಿ - ನೀವು ಮಲಗಿಕೊಳ್ಳಿ"

ಎಂದು ಗುಂಡೂ ಯಜಮಾನರ ಹಾಸಿಗೆ ಹಾಸಿಕೊಟ್ಟು ಅವರನ್ನು ಮಲಗಿಸಿ ಬಾಗಿಲು ಮುಂದಕ್ಕೆ ಮಾಡಿಕೊಂಡು ತಾನು ಮಲಗಲು ಹೋದ.

ಬೆಳಿಗ್ಗೆ ಎಲ್ಲರೂ ಏಳುವ ಮುನ್ನ ಗುಂಡುವೆದ್ದು ಆಳಿನ ಕೈಯಲ್ಲಿ ಅಡಿಗೆಯ ಮನೆ ಪಕ್ಕದಲ್ಲಿದ್ದ ರೂಮಿನಲ್ಲಿದ್ದ ಸೌದೇ ಬೆರಣಿಯನ್ನು ಬಚ್ಚಲುಮನೆಗೆ ಸಾಗಿಸಿ ಆ ರೂಮನ್ನು ಸ್ವಚ್ಛಮಾಡಿಸಿದ.

ನಾರಾಯಣ ಎದ್ದು ಕಾಫಿಮಾಡುತ್ತಿದ್ದ. ಗುಂಡೂ ಅಡಿಗೆಯ ಮನೆಯಲ್ಲಿಯೇ ಕುಳಿತು ಒಂದು ಕಪ್ ಕಾಫಿ ಕುಡಿದು

" ನಾರಾಯಣಾ – ಸ್ವಲ್ಪ ಹೊತ್ತು ಬಿಟ್ಟು ಸರಸ್ವತಮ್ಮನವರ ರೂಮಿಗೆ ಎರಡು ಕಪ್ ಕಾಫಿ ತಂದುಕೊಡು. ಹಾಗೇ ಯಜಮಾನರು ಎದ್ದಿದ್ದರೆ ಅವರಿಗೆ ಕಾಫಿ ಕೊಡು."

" ನಿನ್ನೆ ರಾತ್ರಿ ಅದೇನು ಸ್ವಾಮಿ ರಾಮಾಯಣ."

" ರಾಮಾಯಣವಲ್ಲಪ್ಪಾ – ಭಾರತದ ಸ್ತ್ರೀಪರ್ವ."

ಎಂದೆದ್ದು ಬಂದು ಸರಸ್ವತಿಯ ರೂಮಿನ ಕದ ತಳ್ಳಿದ. ಚಿಲಕ ಹಾಕಿರಲಿಲ್ಲವಾದ್ದರಿಂದ ಕದ ತೆರೆದುಕೊಂಡಿತು. ಸರಸ್ವತಿ ಕಣ್ಣು ಬಿಟ್ಟುಕೊಂಡೇ ಮಲಗಿದ್ದಳು. ಅವಳೆರಡು ಕಣ್ಣುಗಳೂ ಕಾದ ಸಲಾಕೆಯಂತೆ ಕೆಂಡ ಕಾರುತ್ತಿದ್ದವು.

ಗುಂಡೂ ಸರಸ್ವತಿಯ ಎದುರಿಗೆ ಗೋಡೆ ಒರಗಿಕೊಂಡು ಕುಳಿತು

" ಅಮ್ಮಾ – ಸರಸ್ವತಮ್ಮನವರೇ. ಸ್ವಲ್ಪ ಎದ್ದು ಕುಳಿತುಕೊಳ್ಳಿ. ನಿಮ್ಮಲ್ಲಿ ಮಾತನಾಡಬೇಕಾಗಿದೆ."

ಸರಸ್ವತಿ ಎದ್ದು ಹಾಸಿಗೆಯ ಮೇಲೆ ಕುಳಿತು ತಲೆ ಕೂದಲನ್ನು ಗಂಟು ಹಾಕಿಕೊಂಡಳು.

" ರಾತ್ರಿ ಊರು ಹೊಲಗೇರಿ ಒಂದು ಮಾಡಿಬಿಟ್ಟರಿ."

" ನಿಮ್ಮ ಕಂಪೆನಿಗಿಂತ ಹೊಲಗೇರಿ ಬೇಕೇನು ? "

" ಇದರಿಂದ ಆದ ಸಾರ್ಥಕ ? "

" ನಿಮ್ಮ ಯಜಮಾನನ ಯೋಗ್ಯತೆ ಎಲ್ಲರಿಗೂ ತಿಳಿಯಿತು."

" ತಿಳಿಯಿತು ಸರಿ – ನಿಮಗಾದ ಪ್ರಯೋಜನ."

ಸರಸ್ವತಿಯ ಬಾಯಲ್ಲಿ ಮಾತು ಹೊರಡಲಿಲ್ಲ.

" ಪ್ರಯೋಜನವೇನಾಯಿತೆನ್ನುವುದು ನಿಮಗೆ ಗೊತ್ತಿಲ್ಲ - ನಾನು ಹೇಳುತ್ತೇನೆ ಕೇಳಿ "

ನಾರಾಯಣ ಕಾಫಿ ತೆಗೆದುಕೊಂಡು ಬಂದು ನೆಲದ ಮೇಲೆ ಎರಡು ಲೋಟ ಇಟ್ಟ.

ಗುಂಡೂರಾಯ ಅವನನ್ನು ನೋಡಿ

"ಅಲ್ಲಿ ಕೊಟ್ಟೆಯಾ ?"

"ಅವರಿನ್ನೂ ಎದ್ದಿಲ್ಲ."

"ಸರಿ - ಸ್ವಲ್ಪ ಹೊತ್ತು ಬಿಟ್ಟು ಬಂದು ನೋಡು."

ಸರಸ್ವತಿ ಕಾಫಿ ಮುಟ್ಟಲಿಲ್ಲ.

"ನನಗಾದ ಪ್ರಯೋಜನವೇನು ?"

"ಕಾಫಿ ಕುಡಿಯಿರಿ ಹೇಳುತ್ತೇನೆ."

ಸರಸ್ವತಿ ಕಾಫಿ ಕುಡಿದು ಮುಗಿಸಿದಳು. ಗುಂಡೂ ಕಾಫಿ ಕುಡಿದು ಲೋಟ ಕೆಳಗಿಡುತ್ತಾ

"ನಿಮ್ಮ ಲೆಕ್ಕ ಫೈಸಲ್ ಮಾಡಿ ಕಳಿಸಿ ಬಿಡಬೇಕು ಎಂದು ಯಜಮಾನರು ಅಪ್ಪಣೆ ಮಾಡಿದ್ದಾರೆ."

ಸರಸ್ವತಿಯ ಗುಂಡಿಗೆ ಹಾರಿತು.

ರಾತ್ರಿಯೇ ಶ್ರೀಕಂಠಮೂರ್ತಿ ತನ್ನಲ್ಲಿ ಬಂದು ಕ್ಷಮೆ ಕೇಳುತ್ತಾನೆಂದು ಭಾವಿಸಿಕೊಂಡು ರೂಮು ಬಾಗಿಲು ಚಿಲಕ ಹಾಕಿಕೊಳ್ಳದೆ ಮಲಗಿದ್ದಳು. ಅವನು ಬರಲಿಲ್ಲ. ಬೆಳಗಾಗುವ ವೇಳೆಗೆ ಈ ಗುಂಡಿನೇಟು ತನಗೆ ಕಾದಿರುತ್ತದೆಂದು ಅವಳು ನಿರೀಕ್ಷಿಸಿರಲಿಲ್ಲ.

"ಅವರು ತಪ್ಪುಮಾಡಿ – ನನಗೆ ಶಿಕ್ಷೆ ವಿಧಿಸುತ್ತಾರೆಯೇ ?"

"ತಪ್ಪು ಯಾರದೋ ಒಪ್ಪು ಯಾರದೋ ನನಗೇನು ಗೊತ್ತಮ್ಮ-ಯಜಮಾನರು ಹೇಳಿದಷ್ಟು ಮಾಡುವುದು ನನ್ನ ಕೆಲಸ."

"ನೀವೇ ಹೇಳಿ ಗುಂಡೂರಾಯರೇ – ಇದು ನ್ಯಾಯವೇ ?"

"ಯಾವುದು ?"

"ನನ್ನ ಕಳಿಸುತ್ತಿರುವುದು."

"ರಾತ್ರಿ ನೀವು ಯಜಮಾನರ ಮರ್ಯಾದೆ ತೆಗೆದುದು ನ್ಯಾಯವೋ ?"

"ಅವರು ಮಾಡುತ್ತಿದ್ದ ಕೆಲಸ ಎಂಥದು ?"

“ತಪ್ಪು ಎಂದು ಒಪ್ಪಿಕೊಳ್ಳುತ್ತೇನೆ. ನೀವು ಅದನ್ನು ತಿದ್ದಲು ಸಾಧ್ಯವಾಯಿತೇ ?”

“ನಾಯಿ ಬಾಲ ಸರಿಪಡಿಸಲು ಯಾರಿಗೆ ಸಾಧ್ಯ ?”

“ತಿಳಿದೂ ತಿಳಿದೂ ನೀವೇಕೆ ರುದ್ರಾವತಾರ ತಾಳಿದಿರಿ ?”

“ನನ್ನ ಬುದ್ಧಿ ಕೆಟ್ಟು ಹೋಯಿತು ಗುಂಡೂರಾಯರೇ.”

“ಅದರ ಫಲ ಈಗ ಅನುಭವಿಸಬೇಕಾಗಿದೆ.”

“ನನ್ನ ಗತಿಯೇನು ಗುಂಡೂರಾಯರೇ – ನನಗೆ ಯಾರು ದಿಕ್ಕು – ಮಕ್ಕಳೂ ನನ್ನ ಕೈ ಬಿಟ್ಟರು. ನೀವೇ ನನಗೊಂದು ದಾರಿ ತೋರಿಸಿ ಕಾಪಾಡಿ.”

“ನಿಮ್ಮ ಪಕ್ಷ ನಾನು ಹಿಡಿದೆಯೆಂದು ಕಂಪೆನಿಯವರೆಲ್ಲಾ ನನ್ನ ಮೇಲೆ ತಿರುಗಿಬಿದ್ದರು. ನೀವು ನನ್ನ ವಿಶ್ವಾಸ ಉಳಿಸಿಕೊಂಡದ್ದು ಹೀಗೆ !”

“ನಿಮ್ಮ ವಿಶ್ವಾಸಕ್ಕೆ ನಾನೇನೂ ದ್ರೋಹ ಮಾಡಿಲಿಲ್ಲವಲ್ಲ.”

“ನಿನ್ನೆ ಹುಯಿಲೆಬ್ಬಿಸುವುದಕ್ಕೆ ಮುಂಚೆ ನನ್ನನ್ನು ಒಂದು ಮಾತು ಕೇಳಿದಿರಾ – ಗುಂಡೂರಾಯರೇ, ಹೀಗಾಗುತ್ತಿದೆ ನೋಡಿ ಎಂದು ನೀವು ಹೇಳಿದ್ದರೆ ನಾನೇನಾದರೂ ಪರಿಹಾರ ಹುಡುಕುತ್ತಿದ್ದೆ.”

“ತಪ್ಪು ಮಾಡಿದೆ ಗುಂಡೂರಾಯರೇ. ಕ್ಷಮಿಸಿ. ಆ ಹೊತ್ತಿನಲ್ಲಿ ನನಗೆ ಹುಚ್ಚು ಹಿಡಿದಂತಾಗಿತ್ತು.”

“ಸ್ತ್ರೀ ಬುದ್ಧಿಃ ಪ್ರಳಯಾಂತಕಃ ಎನ್ನುವುದು ಇದಕ್ಕೇಮ್ಮ.”

“ನನ್ನ ಕಳಿಸಬೇಡಿ - ಯಜಮಾನರಿಗೆ ಒಂದು ಮಾತು ಹೇಳಿ ನನ್ನ ಕ್ಷಮಿಸುವಂತೆ ಮಾಡಿ.”

“ಅದಕ್ಕೊಂದೇ ಮಾರ್ಗ. ನೀವು ಚಾಚೂ ತಪ್ಪದೆ ನನ್ನ ಮಾತು ಕೇಳಬೇಕು.”

“ನಾನು ನಿಮ್ಮ ಮಾತು ಯಾವಾಗ ಮೀರಿದ್ದೇನೆ. ಹೇಳಿ - ಕೇಳು ತ್ತೇನೆ.”

“ಮೊದಲು ಈ ರೂಮು ಖಾಲಿ ಮಾಡಿ.”

“ಯಜಮಾನರು ಪೂರ್ತಿ ನನ್ನ ಬಿಟ್ಟರೇ !”

“ಅದು ನಿನ್ನೆ ರಾತ್ರೀಗೆ ಮುಗಿದು ಹೋಯಿತು. ನಾನು ಹೇಳಿದಂತೆ ನೀವು ಕೇಳಿದರೆ ಒಂದಲ್ಲ ಒಂದು ದಿನ ಆ ಸ್ನೇಹ ಮತ್ತೆ ಅಂಕುರಿಸ ಬಹುದು.”

" ಏನು ಮಾಡಬೇಕು."

" ಹೇಳಿದೆನಲ್ಲ – ಮೊದಲು ಈ ರೂಮು ಖಾಲಿ ಮಾಡಿ."

" ನಾನು ಎಲ್ಲಿಗೆ ಹೋಗಲಿ."

" ಕೆಳಗಡೆ ಒಂದು ರೂಮು ಖಾಲಿ ಮಾಡಿಸಿದ್ದೇನೆ. ಅಲ್ಲಿರಿ."

" ಆಗಲಿ."

" ನಿಮಗೆ ಸದ್ಯಕ್ಕೆ ಪಾರ್ಟು ಕೊಡುವುದಿಲ್ಲ. ಕಂಪೆನಿಯಲ್ಲಿರಿ. ಯಜಮಾನರು ಹೇಳಿದ ಮೇಲೆ ಪಾರ್ಟುಮಾಡಿ."

" ನಾನು ಪಾರ್ಟು ಮಾಡಕೂಡದೆ ?"

" ಸದ್ಯಕ್ಕೆ ಮಾಡುವ ಹಾಗಿಲ್ಲ. ಯಜಮಾನರು ಹೇಳಿರುವುದನ್ನು ಅಕ್ಷರಶಃ ಪಾಲಿಸಿ. ಅವರಿಗೇ ಕನಿಕರ ಹುಟ್ಟುತ್ತದೆ."

" ನೀವು ನನ್ನ ಬೀದಿಯ ಪಾಲು ಮಾಡುವುದಿಲ್ಲವಷ್ಟೆ !"

" ನಾನೇಕೆ ಮಾಡಲಮ್ಮ. ನಾನೂ ಕಷ್ಟ ಕಂಡವನು. ಯಾವ ಜನ್ಮದಲ್ಲಿ ಏನು ಮಾಡಬಾರದ್ದು ಮಾಡಿಯೋ ಈ ಭಂಡಬಾಳು ಬಾಳುತ್ತಿದ್ದೇನೆ. ನಿಮ್ಮ ಹೊಟ್ಟೆಯ ಮೇಲೆ ಹೊಡೆದು ಮುಂದಿನ ಜನ್ಮಕ್ಕೆ ಕರ್ಮದ ಬುತ್ತಿ ಸಿದ್ಧ ಮಾಡಿಕೊಳ್ಳಲೇ ?"

ಸರಸ್ವತಿ ಬಿಕ್ಕಿ ಬಿಕ್ಕಿ ಅಳಲುಪಕ್ರಮಿಸಿದಳು. ಗುಂಡೂರಾಯ ಗಡಸು ಧ್ವನಿಯಲ್ಲಿ

" ಏಳಿ ತಡಮಾಡಬೇಡಿ. ಯಜಮಾನರು ಏಳುವ ಹೊತ್ತಿಗೆ ನೀವು ರೂಮು ಖಾಲಿ ಮಾಡಿದರೆ ಒಳ್ಳೆಯದು. ನೀವು ತಡಮಾಡಿದರೆ ನನ್ನ ಪ್ರಯತ್ನ ನೀರಿನಲ್ಲಿ ಹೋಮ ಮಾಡಿದಂತಾಗುತ್ತದೆ."

ಸರಸ್ವತಿ ಯಜ್ಞಪಶುವಿನಂತೆ ಗುಂಡೂರಾಯನನ್ನು ಹಿಂಬಾಲಿಸಿದಳು. ಅವಳನ್ನು ಕರೆತಂದು ಕೆಳಗಡೆ ಇದ್ದ ರೂಮಿನಲ್ಲಿ ಬಿಟ್ಟ. ಆಳು ಅವಳ ಸಾಮಾನುಗಳನ್ನು ತಂದಿಟ್ಟ.

ಗುಂಡೂ ನಾರಾಯಣನನ್ನು ಕರೆದು

" ಯಜಮಾನರು ಎದ್ದಿದ್ದಾರೇನೋ ?" ಎಂದು ಕೇಳಿದ.

" ಎದ್ದಿದ್ದಾರೆ ಸ್ವಾಮಿ – ಕಾಫಿ ಕೊಟ್ಟು ಬಂದೆ."

ಎಂದು ನಾರಾಯಣ ಹೇಳಿದ. ಗುಂಡೂ ಯಜಮಾನರ ರೂಮಿಗೆ ಹೋದ.

ಶ್ರೀಕಂಠಮೂರ್ತಿ ಹಾಸಿಗೆಯ ಮೇಲೆ ಕುಳಿತು ಸೀಗರೇಟ್ ಸೇದುತ್ತಿದ್ದ ಗುಂಡೂ ಪ್ರವೇಶಿಸಿ.

“ರೂಮು ಖಾಲಿಮಾಡಿಸಿಯಾಯಿತು ಸ್ವಾಮಿ.” ಎಂದು ಹೇಳಿದ.

“ಬಡ್ಕೊಂಡಳೇನೋ ?”

“ಅವರ ದುಃಖ ಯಾಕೆ ಹೇಳುತ್ತೀರಿ. . . ಸರಸ್ವತಮ್ಮ ಇದ್ದ ರೂಮು ಯಾರಿಗೆ ಬಿಟ್ಟು ಕೊಡುತ್ತೀರಿ ?”

“ನೀನೇ ಹೇಳು – ಯಾರಿಗೆ ಕೊಡುತ್ತೀ ?”

“ಇನ್ನಾದರೂ ಈ ಕೆಲಸ ಸಾಕುಮಾಡಿ ಸ್ವಾಮಿ. ಕಂಪೆನಿಯ ಯಜಮಾನರು ಹೀಗೆ ಮಾಡುವುದು ನ್ಯಾಯವಲ್ಲ. ಕಂಪೆನಿ ಹೆಸರು ಕೆಟ್ಟು ಹೋಗುತ್ತದೆ.”

“ಕಂಪೆನಿ ಯಜಮಾನನೂ ಮನುಷ್ಯಕಣೋ ಗುಂಡಾ. ಅವನಿಗೂ ಚತುರ್ವಿಧ ಪುರುಷಾರ್ಥಗಳು ಬೇಕು.”

“ನಮ್ಮ ಯಜಮಾನರಿಗೆ ಚತುರ್ಥ ಪುರುಷಾರ್ಥದಲ್ಲಿ ಒಂದೇ ಸಾಕು.”

“ಅಯ್ಯೋ ಭಡವಾ!”

ಎಂದು ಶ್ರೀಕಂಠಮೂರ್ತಿ ನಕ್ಕ.

“ಸರಸ್ವತಿ ಸ್ಥಾನಕ್ಕೆ ಒಬ್ಬಳನ್ನು ಸಂಪಾದಿಸಬೇಕು” ಎಂದ.

“ನಾಟಕಕ್ಕೋ – ಕಂಪೆನಿಗೋ.”

“ಎರಡಕ್ಕೂ. ನಿನಗೆ ತಿಳಿದ ಹಾಗೆ ಯಾರಿದ್ದಾರೆ ?”

“ಯಾರೂ ಇಲ್ಲ ಸ್ವಾಮಿ.”

“ಕುಂದಗೋಳದಲ್ಲಿ ಗೋಹರ್ ಅಂತಾ ಇದ್ದಾಳಂತೆ – ಚೆನ್ನಾಗಿ ಹಾಡುತ್ತಾಳಂತೆ. ಉತ್ತರಾದಿ ಹಾಡುವವರೊಬ್ಬರು ಕಂಪೆನಿಯಲ್ಲಿ ಇರಬೇಕೋ ಗುಂಡಾ.”

“ಇರಬೇಕು ಸ್ವಾಮಿ – ಇರಬೇಕು” ಎಂದು ಗುಂಡು ಹೇಳಿದ.

೧೫

ಕಂಪೆನಿ ಮನೆಯಲ್ಲಿ ನಡೆದ ಪ್ರಕರಣವನ್ನು ಸುಧಾ ಕೂಲಂಕಷವಾಗಿ ರಾಜಶೇಖರನಿಗೆ ವರದಿ ಒಪ್ಪಿಸಿದಳು.

"ಇನ್ನು ಮೇಲೆ ನಿನ್ನ ತಾಯಿ ಸ್ಟೇಜಿನ ಮೇಲೆ ಬರುವ ಹಾಗೇ ಇಲ್ಲ?"

"ಸದ್ಯದ ಪರಿಸ್ಥಿತಿ ನೋಡಿದರೆ ಬರುವ ಹಾಗಿಲ್ಲವೆಂದು ಕಾಣುತ್ತದೆ. ಮುಂದೆ ಏನಾಗುತ್ತದೋ ಹೇಳಬಲ್ಲವರು ಯಾರು ?"

"ಎಂಥಾ ನಾಚಿಕೆಗೇಡು – ಕಂಪೆನಿ ಯಾವ ಸ್ಥಿತಿಗೆ ಬಂದಿತು ?"

"ಕಂಪೆನಿ ಮನೆಯಲ್ಲಿ ನಾನು ತಲೆಯೆತ್ತಿ ತಿರುಗುವುದೇ ಕಷ್ಟವಾಗುತ್ತದೆ ಎಲ್ಲಿ ನೋಡಿದರೂ ಪಿಸಪಿಸ – ಗುಸಗುಸ. ಮೊದಲೇ ನಮ್ಮ ಮೇಲೆ ವಿಷ ಕಾರುತ್ತಿದ್ದ ಸುಂದರಿ, ಸುಬ್ಬುಲಕ್ಷ್ಮಿ, ನಾಗರತ್ನರಿಗೆ ಒಳ್ಳೆಯ ಅವಕಾಶ ಸಿಕ್ಕಿತು."

"ನಿಮ್ಮ ತಾಯಿ ಏನು ಮಾಡುತ್ತಾರೆ ?"

"ಇಲ್ಲೇ ಇದ್ದಾಳೆ."

"ಇಷ್ಟು ಅಪಮಾನ ಸಹಿಸಿಕೊಂಡು ಇಲ್ಲೇ ಇರುವುದರ ಅರ್ಥವೇನು?"

"ಅವಳು ಎಲ್ಲಿಗೆ ಹೋಗಬೇಕು."

"ಎಲ್ಲಿಗೆ ಹೋದರೂ ಚಿಂತೆಯಿಲ್ಲ. ಇಲ್ಲಿ ಇರಬಾರದು."

"ಇನ್ನು ನಾನು ಕಂಪೆನಿಯಲ್ಲಿಯೂ ನಿಲ್ಲಲಾರೆ - ಕಂಪೆನಿ ಮನೆಯಲ್ಲಿಯೂ ಇರಲಾರೆ !"

"ಎಲ್ಲಿಗೆ ಹೋಗುತ್ತೀ ?"

"ನನ್ನನ್ನೇ ಕೇಳುವಿರಲ್ಲಾ ! ನಾನು ಹೋಗುವುದು ಬಿಡುವುದು ನಿಮ್ಮನ್ನು ಸೇರಿಲ್ಲವೇ ?"

"ಈಗಲೇ ಕಂಪೆನಿ ಬಿಡುವುದು ಬೇಡ."

"ಈ ನರಕ ನಾನಿನ್ನೂ ಎಷ್ಟು ದಿವಸ ಅನುಭವಿಸಬೇಕು."

"ನಾನು ಕಾಲ ಹರಣ ಮಾಡುತ್ತಿಲ್ಲ ಸುಧಾ. ವ್ಯವಸ್ಥೆ ಮಾಡುತ್ತಿದ್ದೇನೆ. ಎಲ್ಲದಕ್ಕೂ ಕಾಲ ಬರಬೇಕು. ಯಜಮಾನರಿಗೆ ಮುಂಚೆಯೇ ತಿಳಿಸಿ, ಕಂಪೆನಿ ಕೆಲಸಕ್ಕೆ ಯಾವ ರೀತಿಯಲ್ಲಿಯೂ ತೊಂದರೆಯಾಗದಂತೆ

ನಾವು ಬಿಡಬೇಕು. ಯಜಮಾನರು ಈಗ ತಾನೆ ಇಲ್ಲಿಗೆ ಬಂದಿದ್ದಾರೆ ಕ್ಯಾಂಪು ಚೆನ್ನಾಗಿ ಆರಂಭವಾಗಿದೆ. ಕೈ ತುಂಬ ದುಡ್ಡಾಗುತ್ತಿದೆ. ಹೊಸ ನಾಟಕ ಬೇರೆ ಮುಂದಿನವಾರ ಇಟ್ಟುಕೊಂಡಿದ್ದಾರೆ - ಈ ಸಮಯದಲ್ಲಿ ನಾವು ಕಂಪೆನಿ ಬಿಡುವುದು ಧರ್ಮವಲ್ಲ."

"ಹಾಗೇ ಆಗಲಿ – ಆದರೆ ಮೊದಲು ಕಂಪೆನಿಮನೆ ವಾಸ ನನಗೆ ತಪ್ಪಿಸಿ."

"ನೀನೊಬ್ಬಳೇ ಎಲ್ಲಿರುತ್ತೀ ?"

"ನಿಮ್ಮ ಜತೆ – ನಿಮ್ಮ ರೂಮಿನಲ್ಲಿರುತ್ತೇನೆ."

"ವೃಥಾ ಗುಲ್ಲಿಗೆ ಕಾರಣವಾಗುತ್ತದೆ. ನಿನ್ನ ಹೆಸರಿನ ಮೇಲೆ ರಾಡಿ ಎಳಚುತ್ತಾರೆ. ಅದು ನನಗೆ ಸ್ವಲ್ಪವೂ ಇಷ್ಟವಿಲ್ಲ. ಅನವಶ್ಯಕವಾಗಿ ನಾವು ಜನರ ಕೆಟ್ಟ ಬಾಯಿಗೆ ಬೀಳಬಾರದು."

"ವ್ಯವಸ್ಥೆ ಮಾಡುತ್ತಿದ್ದೇನೆಂದಿರಲ್ಲಾ – ಏನು ಮಾಡುತ್ತಿರುವಿರಿ ?"

"ಇನ್ನು ಎರಡು ಮೂರು ದಿವಸಗಳಲ್ಲಿ ನಿನ್ನ ಕೈಗೊಂದು ಪುಸ್ತಕ ಕೊಡುತ್ತೇನೆ. ಓದಿ ನೋಡು ನಿನಗೇ ತಿಳಿಯುತ್ತದೆ."

"ನಾಟಕವೇ !"

"ಹೌದು ನಾಟಕ."

"ನೀವು ಬರೆದಿದ್ದೀರಾ ?"

"ನಾನು ಬರೆದಿದ್ದೇನೆ – ನಮ್ಮ ಜೀವನವನ್ನೇ ಚಿತ್ರಿಸಿದ್ದೇನೆ."

"ನಮ್ಮ ಕಷ್ಟ ಸುಖ ಕಟ್ಟಿಕೊಂಡು ಲೋಕಕ್ಕೆ ಆಗಬೇಕಾದುದೇನು ? ಸ್ವಾರ್ಥ, ಕಾಠಿಣ್ಯ ತುಂಬಿರುವ ಜಗತ್ತಿನಲ್ಲಿ ನಮ್ಮಂಥವರು ಬಾಳುವುದು ಸಾಧ್ಯವೇ – ಬಾಳಿ ಆಗಬೇಕಾದುದೇನು ?"

"ನಿನ್ನ ಭಾವನೆ ತಪ್ಪು ಸುಧಾ. ಲೋಕದಲ್ಲಿ ಸ್ವಾರ್ಥ, ಕಾಠಿಣ್ಯ ತುಂಬಿದೆಯೆನ್ನುವುದು ನಿಜ – ಅವು ಬೇಗ ಕಣ್ಣಿಗೆ ಬೀಳುವ ಗುಣಗಳು. ಬೇಗ ಕಣ್ಣಿಗೆ ಬೀಳದೆ ಜೀವಂತವಾಗಿರುವ ನಿಸ್ವಾರ್ಥ, ಕಾರುಣ್ಯವೂ ಜಗತ್ತಿನಲ್ಲಿದೆ. ವೀಣೆಯಲ್ಲಿ ನಾವು ಷಡ್ಜ ಮಿಡಿದರೆ ಷಡ್ಜಸ್ವರ ಬರುತ್ತದೆ ; ಪಂಚಮ ಮಿಡಿದರೆ ಪಂಚಮಸ್ವರ ಬರುತ್ತದೆ. ಷಡ್ಜ ಮಿಡಿದು ಪಂಚಮ ಸ್ವರ ಹೊರಡಲಿಲ್ಲ ವೆಂದು ಆಕ್ಷೇಪಿಸುವುದು ನ್ಯಾಯವೇ ? ಬಾಳು ಹೋರಾಟ ನಿಜ. ಆದರ್ಶ

ಕ್ಕಾಗಿ ನಡೆಸುವ ಹೋರಾಟ ವ್ಯರ್ಥವಾಗುವುದಿಲ್ಲ. ಯೋಧನಿಗೆ ಅದರ ಲಾಭ ಸಿಕ್ಕದೆ ಹೋಗಬಹುದು. ತೆಂಗಿನ ಗಿಡ ನೆಡುವವನಿಗೆ ಅದರ ಫಲ ದೊರೆಯದೇ ಹೋಗಬಹುದು – ಆದರೆ ಮುಂದೆ ಅವನ ಮಕ್ಕಳೋ ಮೊಮ್ಮಕ್ಕಳೋ ಫಲ ಸವಿಯುತ್ತಾರೆ. ಯಾವ ಜೀವಿಯ ಜೀವನವೂ ಹೋರಾಟವೂ ನಿರರ್ಥಕವಾಗುವುದಿಲ್ಲ. ಹುತಾತ್ಮರ ರಕ್ತ ಸಮಾಧಿಯ ಮೇಲೆ ಅಲ್ಲವೇ ಸ್ವಾತಂತ್ರ್ಯ ದೇವಿಯ ಗುಡಿ ಕಟ್ಟುವುದು !"

"ನಿಮ್ಮ ಆಶಾವಾದಿತ್ವ ನನ್ನನ್ನು ಬೆರಗುಗೊಳಿಸುತ್ತದೆ. ಜೀವನದ ಉದ್ದಕ್ಕೂ ಬೇವನ್ನುಂಡಿರುವ ನೀವು ಆಶಾವಾದಿತ್ವವನ್ನು ಹೇಗೆ ರಕ್ಷಿಸಿ ಕೊಂಡಿರುವಿರಿ ?"

"ಅದಕ್ಕೇನು ಹೇಳಲಿ. ತಾಯಿಯ ಅನುಗ್ರಹವೆನ್ನಲೇ ? – ಇನ್ನಾದರೂ ಕಂಪೆನಿ ಬಿಟ್ಟು ಹೋಗುವ ಯೋಚನೆ ದೂರಮಾಡುತ್ತೀಯಾ ?"

"ನೀವು ಹೇಳಿದಂತೆಯೇ ಮಾಡುತ್ತೇನೆ."

"ಇನ್ನೊಂದು ವಿಷಯ – ಕೇಳಬಹುದೇ ?"

"ಕೇಳಿ."

"ನಿಮ್ಮ ತಾಯಿಯನ್ನು ಮಾತನಾಡಿಸಿರುವೆಯಾ ?"

"ಇಲ್ಲ – ಅವಳ ಮುಖವನ್ನೇ ನಾನು ನೋಡಿಲ್ಲ."

"ನಾವು ಯಾವುದು ಸತ್ಯ - ಒಳ್ಳೆಯದು ಎಂದು ನಂಬುತ್ತೇವೆಯೋ ಅದನ್ನು ಕಾರ್ಯರೂಪಕ್ಕೆ ತರಲೆತ್ನಿಸಬೇಕು."

"ನಿಮ್ಮ ಮಾತು ನನಗೆ ಅರ್ಥವಾಗಲಿಲ್ಲ."

"ಸರಸ್ವತಮ್ಮನವರು ನೂರು ತಪ್ಪು ಮಾಡಿದ್ದಾರೆ. ಲೋಕದ ಕಣ್ಣಲ್ಲಿ ಅವರು ಕುಲಟೆ - ಆದರೆ ನಿನಗೆ ಅವರು 'ತಾಯಿ' ಎನ್ನುವುದನ್ನು ಮರೆಯಬೇಡ."

ರಾಜಶೇಖರನ ಮಾತನ್ನು ಜೀರ್ಣಿಸಿಕೊಳ್ಳುತ್ತಾ ಸುಧಾ ಸ್ತಬ್ಧಳಾಗಿ ನಿಂತಳು.

"ಈಗವರನ್ನು ನಿಂದಿಸಲು ಎಲ್ಲರ ನಾಲಗೆಯೂ ಹರಿತಗೊಂಡಿದೆ. ಸ್ಥಾನ ಮಾನಗಳೆರಡನ್ನೂ ಕಳೆದುಕೊಂಡು ಅವರು ನೆಲ ಹಿಡಿದಿದ್ದಾರೆ. ಎಡವಿ

ಬಿದ್ದ ಪ್ರಾಣಿಯ ಮೇಲೆ ಕಲ್ಲು ಮಳೆ ಬೀಳುತ್ತಿದೆ. ಆದರೆ ಆ ಕಲ್ಲು ರಾಶಿಯಲ್ಲಿ ನಿನ್ನ ಕಲ್ಲು ಸೇರಿರಬಾರದು."

ಸುಧೆಯ ಕಣ್ಣಿನಿಂದ ನೀರಿಳಿಯಿತು.

"ಎಷ್ಟಾದರೂ ಅವರು ನಿನ್ನ ತಾಯಿ. ತಾಯಿ ಎನ್ನುವುದನ್ನು ಮರೆತು ಬಿಡೋಣ. ಆಕೆ ಹೆಣ್ಣು. ಈ ಪುರುಷ ಜಗತ್ತಿನಲ್ಲಿ ಪುರುಷನ ಅಪರಾಧಕ್ಕೂ ಸ್ತ್ರೀಯೇ ಶಿಕ್ಷೆ ಅನುಭವಿಸುವುದು. ಲೋಕ ನೋಡಿರುವುದಕ್ಕಿಂತಲೂ ಹೆಚ್ಚಾಗಿ, ಹೆಚ್ಚು ಸಮೀಪದಲ್ಲಿ ನೀನೂ ನಾನೂ ಪಾಪವನ್ನು ನೋಡಿದ್ದೇವೆ. ನಮ್ಮ ತಿಳುವಳಿಕೆ ನಮ್ಮ ಅಂತಃಕರಣವನ್ನು ಶುಚಿಗೊಳಿಸಿ ಅದನ್ನು ಪ್ರೇಮದ ಅಮೃತ ಕುಂಭ ಮಾಡಬೇಕು. ಅಮೃತ, ವಿಷ ಎರಡೂ ಒಂದೇ ಎಡೆ ಇರಲು ಸಾಧ್ಯವಿಲ್ಲ."

ಸುಧಾ ಉತ್ಕಂಠಿತಳಾಗಿ

"ಕ್ಷಮಿಸಿ - ಅವಳನ್ನು ಮಾತನಾಡಿಸುತ್ತೇನೆ. ಆದರೆ ನಾಲ್ಕು ದಿನ ಕಳೆಯುವುದೊಳ್ಳೆಯದು. ಈಗ ನನ್ನ ಮನಸ್ಸಿಗೂ ಶಾಂತಿಯಿಲ್ಲ. ಬಾಯಿ ತಪ್ಪಿ ಕಠಿಣವಾದ ಮಾತು ಬಂದು, ನಮ್ಮಿಬ್ಬರಿಗೂ ಮತ್ತಷ್ಟು ವಿರಸವಾಗ ಬಹುದು" ಎಂದಳು.

ರಾಜಶೇಖರನ ತೃಪ್ತ ಹೃದಯದ ಮೇಲೆ ತಂಗಾಳಿ ಬೀಸಿದಂತಾಯಿತು.

ಸರಸ್ವತಿ ರೂಮು ಬಿಟ್ಟು ಕದಲಲಿಲ್ಲ. ಕಂಪೆನಿ ಜನ ಏಳುವುದಕ್ಕೆ ಮುಂಚೆಯೆದ್ದು ಸ್ನಾನ ಮುಗಿಸಿಕೊಂಡು ಬಂದು ರೂಮಿನಲ್ಲಿ ಕೂಡುತ್ತಿದ್ದಳು. ಅಡಿಗೆ ನಾರಾಯಣ ಕಾಫಿ, ಊಟ ರೂಮಿಗೇ ತಂದುಕೊಡುತ್ತಿದ್ದ.

ಅಂದಿನ ಪ್ರಕರಣದ ತರುವಾಯ ತಾನು ಕಂಪೆನಿ ಮನೆಯಲ್ಲಿ ಉಳಿಯುವುದು ಶುದ್ಧ ಅವಿವೇಕವೆಂಬುದು ಸರಸ್ವತಿಗೆ ಚೆನ್ನಾಗಿ ಮಂದಟ್ಟಾಗಿತ್ತು. ಆದರೆ ಕಂಪೆನಿ ಬಿಟ್ಟು ಕೂಡಲೆ ಬೆಂಗಳೂರಿಗೆ ಹೋಗಲು ಧೈರ್ಯವಾಗಲಿಲ್ಲ. ತನ್ನ ಜತೆಯಲ್ಲಿ ಮಂಜುಳಾ, ಸುಧಾ, ಬರುವುದಿಲ್ಲವೆನ್ನುವುದು ಅವಳಿಗೆ ಗೊತ್ತಿತ್ತು. ಮಕ್ಕಳನ್ನು ಬಿಟ್ಟು ಹೋಗಲು ಅವಳಿಗೆ ಮನಸ್ಸಾಗಲಿಲ್ಲ.

ಸರಸ್ವತಿ ಮುತ್ತಮ್ಮನಿಗೆ, ಗಣೇಶರಾಯನಿಗೆ, ರಾಘವಾಚಾರ್ಯರಿಗೆ, ಕಾಗದ ಬರೆದು ಉತ್ತರ ನಿರೀಕ್ಷಿಸುತ್ತಿದ್ದಳು.

ತಾನು ಯಾವದೋ ಬುಡವಿಲ್ಲದ ಪರ್ವತಕ್ಕೆ ಬಿದ್ದಿರುವಳೆಂಬ ಭಾವನೆ

ಸರಸ್ವತಿಗೆ ಬಂದಿತ್ತು. ಬೆಂಗಳೂರಿನಲ್ಲಿ ರಾಮರಾಜಪ್ಪ – ನಂಜಪ್ಪ – ಜೀವಣ್ಣರಾಯ ಸಂಪೂರ್ಣವಾಗಿ ಕೈಬಿಟ್ಟಿದ್ದರು. ಶ್ರೀಕಂಠಮೂರ್ತಿಯ ಸಂಬಂದವೂ ಕೊನೆಗಂಡಿತ್ತು. ಮುತ್ತಮ್ಮ ಇದ್ದಳು ನಿಜ – ಆದರೆ ಅವಳ ಮನೆಯಲ್ಲಿಯೂ ತನಗೆ ಸ್ವಾತಂತ್ರ್ಯವಿರಲಿಲ್ಲ.

ಸರಸ್ವತಿಯ ಸುತ್ತ ಶೂನ್ಯತೆಯ ಮಬ್ಬುಕವಿದಂತಾಯಿತು. ಯಾರೂ ನನ್ನ ಭಾಗಕ್ಕೆ ಇಲ್ಲವಾದರೇ – ನನ್ನ ಮಕ್ಕಳು ಕೂಡ ನನ್ನ ಕಡೆಗಾಣಿಸಿದರೇ' ಎನ್ನುವ ಚಿಂತೆ ಅವಳನ್ನು ಕೀಟದಂತೆ ಕೊರೆಯಲಾರಂಭಿಸಿತು.

ಸರಸ್ವತಿ ಸಂಗ ಬಯಿಸುತ್ತಿದ್ದಳು. ಸ್ನೇಹ ಬಯಿಸುತ್ತಿದ್ದಳು. ಕಂಪೆನಿ ಮನೆಯಲ್ಲಿ ಯಾರೂ ಅವಳ ಬಳಿ ಸುಳಿಯುತ್ತಿರಲಿಲ್ಲ. ಅಯ್ಯೋ ದೇವರೇ – ಏನು ಗತಿಗೆ ನನ್ನನ್ನು ತಂದೆ' ಎಂದು ವ್ಯಥೆಪಡುತ್ತಿದ್ದಳು.

ಸರಸ್ವತಿಯ ಬಗ್ಗೆ ತೀರ ನಿರ್ದಯ ತೋರಿಸದಿದ್ದವನು ಗುಂಡು ಒಬ್ಬನೇ. ಒಂದು ರಾತ್ರಿ ಕಂಪೆನಿಯ ನಟನಟಿಯರೆಲ್ಲಾ ಊಟ ಮುಗಿಸಿಕೊಂಡು ಥಿಯೇಟರಿಗೆ ಹೋಗಿದ್ದರು. ಗುಂಡೂ ಊಟ ಮುಗಿಸಿಕೊಂಡು ಸರಸ್ವತಿಯ ರೂಮಿಗೆ ಬಂದು

"ಏಕಮ್ಮ – ಇನ್ನೂ ಊಟ ಮಾಡಿಲ್ಲ." ಎಂದು ಕೇಳಿದ.

"ಮಾಡಿದರಾಯಿತು. ಯಾವಾಗ ಮಾದಿದರೇನು ಗುಂಡೂರಾಯರೇ."

"ನಾನು ಕಾಯುತ್ತೇನೆ. ಊಟಮಾಡಿಕೊಂಡು ಬನ್ನಿ. ಥಿಯೇಟರಿಗೆ ಹೋಗೋಣ."

"ಅಲ್ಲಿ ನನಗೇನು ಕೆಲಸ ?"

"ಹೀಗೆ ಒಬ್ಬರೇ ಕುಳಿತು ಯೋಚಿಸಿದರೆ ನಿಮ್ಮ ಆರೋಗ್ಯ ಹಾಳಾಗಿ ಹೋಗುತ್ತದೆ – ಏಳಿ – ನಾಟಕ ನೋಡಿಕೊಂಡಾದರೂ ಬರುವಿರಂತೆ."

"ಯಾವ ಮುಖವಿಟ್ಟುಕೊಂಡು ಬರಲಿ ಗುಂಡೂರಾಯರೇ."

"ಕಾಲಕ್ರಮೇಣ ಎಲ್ಲಾ ಸರಿಹೋಗುತ್ತದೆ. ಏಳಿರಮ್ಮ."

"ಇಲ್ಲಪ್ಪ – ನೀವು ಹೋಗಿ – ನಾನು ಎಲ್ಲಿಯೂ ಬರುವುದಿಲ್ಲ."

ಎಂದು ಖಂಡಿತವಾಗಿ ಹೇಳಿದಳು.

"ನಿಮ್ಮ ಸ್ಥಿತಿ ನೋಡಿ ನನಗೆ ತುಂಬ ವ್ಯಸನವಾಗುತ್ತದಮ್ಮ. ನಾನು ಏನಾದರೂ ಮಾಡಲು ಸಾಧ್ಯವಿದ್ದರೆ ತಿಳಿಸಿ."

" ಒಂದು ಉಪಕಾರ ಮಾಡುವಿರಾ ಗುಂಡೂರಾಯರೇ."

" ಹೇಳಿ - ನನ್ನ ಕೈಯಲ್ಲಿ ಸಾಧ್ಯವಾಗುವುದನ್ನು ಖಂಡಿತ ಮಾಡುತ್ತೇನೆ."

" ಯಜಮಾನರಿಗೆ ಹೇಳಿ ನನ್ನ ಪಾರ್ಟುಗಳು ಕೊಡಿಸಿ. ಹೀಗೇ ನಾನು ನಿರುದ್ಯೋಗಿಯಾಗಿ ಕುಳಿತಿದ್ದರೆ ನನಗೆ ಹುಚ್ಚು ಹಿಡಿಯುತ್ತದೆ. ಇದೇ ರೂಮಿನಲ್ಲೇ ಇರುತ್ತೇನೆ - ಯಜಮಾನರು ಯಾವುದಕ್ಕೂ ಭಯಪಟ್ಟುಕೊಳ್ಳಬೇಕಾದದ್ದಿಲ್ಲ."

" ಆಗಲಮ್ಮಾ – ಯಜಮಾನರಿಗೆ ಹೇಳುತ್ತೇನೆ "

ಎಂದು ಆಶ್ವಾಸನಕೊಟ್ಟು ಗುಂಡೂ ಥಿಯೇಟರಿಗೆ ಹೋದ.

ನಾರಾಯಣ ಊಟ ತೆಗೆದುಕೊಂಡು ಬಂದು ಸರಸ್ವತಿಯ ರೂಮಿನಲ್ಲಿಟ್ಟ.

" ನಿನ್ನ ಊಟವಾಯಿತೇ ನಾರಾಯಣ"

" ಇನ್ನೂ ಇಲ್ರಮ್ಮಾ."

" ನೀನು ಊಟಮಾಡು ಹೋಗು. ಇದನ್ನೂ ತೆಗೆದುಕೊಂಡು ಹೋಗಿ ನನಗೆ ಹಸಿವಿಲ್ಲ."

" ಬೆಳಿಗ್ಗೆ ಊಟಮಾಡಿದ್ದು - ಹಸಿವಿಲ್ಲವೆಂದರೇನ್ರಮ್ಮಾ ? "

" ಒಬ್ಬಳೇ ಕುಳಿತುಕೊಂಡು ನಾಯಿಯ ಹಾಗೆ ತಿಂದರೆ ಅನ್ನ ಹೇಗೆ ಸೇರಬೇಕು ನಾರಾಯಣ,"

" ನಾನು ಕೂತಿರುತ್ತೇನೆ - ನೀವು ಊಟಮಾಡ್ರಮ್ಮಾ."

" ನೀನು ಊಟಮಾಡಿಕೊಂಡು ಬಾ. ಆ ಮೇಲೆ ಊಟಮಾಡುತ್ತೇನೆ."

ಸರಸ್ವತಮ್ಮ ಮನಸ್ಸು ಬದಲಾಯಿಸುವಳೇನೋ ಎಂದು ನಾರಾಯಣ ಸ್ವಲ್ಪ ಹೊತ್ತು ನೋಡಿದ. ಅವಳು ಟಿಫನ್ ಕ್ಯಾರಿಯರಿಗೆ ಕೈ ಹಾಕದಿದ್ದುದನ್ನು ನೋಡಿ ನಾರಾಯಣ ಊಟಕ್ಕೆ ಹೋದ.

ನಾರಾಯಣ ಊಟ ಮಾಡಿಕೊಂಡು, ಕೈಯಲ್ಲಿ ವೀಳೆಯದೆಲೆ ಅಡಿಕೆ ಹಿಡಿದುಕೊಂಡು ಬಂದ. ಸರಸ್ವತಮ್ಮ ಕುಳಿತಲ್ಲಿಯೇ – ಅದೇ ಭಂಗಿಯಲ್ಲೇ ಕುಳಿತಿದ್ದಳು.

" ನೀವು ಕುಳಿತುಕೊಳ್ರಮ್ಮ – ನಾನು ಬಡಿಸುತ್ತೇನೆ"

ಎಂದು ಹೇಳಿ ಎಲೆ ಅಡಿಕೆಯನ್ನು ನೆಲದ ಮೇಲಿಟ್ಟು ಊಟದೆಲೆ ಹಾಕಿ ಬಡಿಸಿದ.

ಸರಸ್ವತಿ ಊಟಕ್ಕೆ ಕುಳಿತುಕೊಂಡಳು.

ನಾರಾಯಣ ಲೋಕಾಭಿರಾಮವಾಗಿ ಮಾತನಾಡುತ್ತ ಅವಳಿಗೆ ಬಡಿಸಿದ.

ಸರಸ್ವತಿ ಊಟ ಮುಗಿಸಲು ನಾರಾಯಣ ಎಲೆ ತೆಗೆದು ಗೋಮಯ ಹಚ್ಚಿ ಟಿಫನ್ ಕ್ಯಾರಿಯರ್ ಹೊರಗಿಟ್ಟು ಬಂದು ತನ್ನ ಎಲೆ ಅಡಿಕೆ ತೆಗೆದು ಕೊಂಡು

"ಮಾತು ಬರತ್ತೆ ಮಾತು ಹೋಗುತ್ತೆ. ಅದನ್ನೆಲ್ಲಾ ಮನಸ್ಸಿಗೆ ಹಚ್ಚಿ ಕೊಂಡು ಊಟ ಬಿಟ್ಟರೆ ಆಗುತ್ತೇನಮ್ಮ."

"ನನಗಷ್ಟು ಎಲೆ ಅಡಿಕೆ ಕೊಡು ನಾರಾಯಣ."

ನಾರಾಯಣ ಎಲೆ ಅಡಿಕೆಯನ್ನು ಅವಳ ಮುಂದಿಟ್ಟು, ಸುಣ್ಣದ ಡಬ್ಬಿ ತೆಗೆದಿಟ್ಟ. ಸರಸ್ವತಿ ಎಲೆಗೆ ಸುಣ್ಣ ಹಚ್ಚಿ, ಅಡಿಕೆಯ ಸಮೇತ ನಾರಾಯಣ ನಿಗೆ ಕೊಟ್ಟಳು. ಅವಳ ಕೈಯಿಂದ ತಾಂಬೂಲ ತೆಗೆದುಕೊಳ್ಳುವಾಗ ನಾರಾ ಯಣನ ಕೈ ನಡುಗುತ್ತಿತ್ತು. ಸರಸ್ವತಿ ತಾನೂ ತಾಂಬೂಲ ಸವಿದು ನಸು ನಗುತ್ತಾ

"ನಿನ್ನ ಕೈ ನಡುಗುತ್ತಾ ಇದೆ ನಾರಾಯಣ."

"ಸ್ವಲ್ಪ ಚಳಿಯಾಯಿತಮ್ಮ. ನೀವು ಮಲಗಿಕೊಳ್ಳಿ – ನಾನು ಹೋಗುತ್ತೇನೆ."

ಕುಳಿತಸ್ಥಳ ಬಿಟ್ಟೇಳಲು ನಾರಾಯಣ ಪ್ರಯತ್ನಿಸಿದ. ಸರಸ್ವತಿ ಕಣ್ಣೋಟ ಅವನನ್ನು ಭರ್ಜಿಗಳಂತೆ ಇರಿದವು.

"ಇಲ್ಲೇ – ಹತ್ತಿರ ಬಾರೋ."

"ಇದೇನ್ರಮ್ಮ – ನೀವು ಯಜಮಾನರ . . ."

"ಆ ಕಾಲ ಎಂದೋ ಮುಗಿದು ಹೋಯಿತು."

"ನನಗೆ ಭಯವಾಗತ್ರಮ್ಮ . . . ."

"ನಾನಿರುವಾಗ ನಿನಗೇನು ಭಯವೋ?"

ಎಂದೆದ್ದು ಬಾಗಿಲು ಹಾಕಿ ದೀಪ ಆರಿಸಿದಳು.

೧೬

ಹೊಸ ನಾಟಕದ ಸಿದ್ಧತೆ ರಭಸದಿಂದ ಸಾಗಿತ್ತು. ಗುರುವಾರ ದಿನ ಚೆನ್ನಾಗಿದೆಯೆಂದು ನಾಟಕಾರಂಭ ಮಹೋತ್ಸವವನ್ನು ನಿಶ್ಚಯಿಸಲಾಗಿತ್ತು. ಅಂದಿನ ಅಧ್ಯಕ್ಷ ಪದವಿ ಅಲಂಕರಿಸುವುದಕ್ಕೆ ಜಿಲ್ಲಾಧಿಕಾರಿಗಳು ಒಪ್ಪಿಕೊಂಡಿದ್ದರು.

ಕಂಪೆನಿಯಲ್ಲಿ ವಿಶೇಷ ಸಂಭ್ರಮ. ಯಾರಿಗೂ ಪುರಸತ್ತು ಇಲ್ಲ. ಬೆಳಿಗ್ಗೆ – ಮಧ್ಯಾಹ್ನ ರಿಹರ್ಸಲ್ ಒಂದೇ ಸಮನೆ ನಡೆದಿತ್ತು. ತಮ್ಮ ಪಾತ್ರಗಳಲ್ಲಿ ಯಶಸ್ಸು ಪಡೆಯಬೇಕೆಂದು ಮಂಜುಳಾ, ಅಣ್ಣಯ್ಯ ಉತ್ಸುಕರಾಗಿದ್ದರು.

ದೊರೆಸ್ವಾಮಿ ಗುರುಗುಟ್ಟಿಕೊಂಡು ಉಪನಾಯಕನ ಪಾತ್ರ ಅಭಿನಯಿಸುವುದಕ್ಕೆ ಒಪ್ಪಿಕೊಂಡಿದ್ದ. ದೊರೆಸ್ವಾಮಿಯ ಕೋಪಾಗ್ನಿ ಸಿಡಿಯುವುದನ್ನು ನೋಡಲು ಕಂಪೆನಿಯ ನಟರು ಆತುರರಾಗಿದ್ದರು.

'ಜಯಪಾಲ ಚರಿತ್ರೆ' ಮಂಜುಳ ಅಣ್ಣಯ್ಯನ ಪರಿಚಯವನ್ನು ಕ್ರಮಕ್ರಮೇಣ ಸ್ನೇಹವಾಗಿ ಬೆಳೆಯುತ್ತಿತ್ತು. ಅಣ್ಣಯ್ಯನ ವ್ಯಕ್ತಿತ್ವ, ಪಾತ್ರಾಭಿನಯ ಕೌಶಲ್ಯ, ಸುಶ್ರಾವ್ಯ ಹಾಡುಗಾರಿಕೆಯನ್ನು ಮಂಜುಳಾ ಮನಃಪೂರ್ವಕವಾಗಿ ಮೆಚ್ಚಿಕೊಂಡಿದ್ದಳು.

ಇಬ್ಬರೂ ಭೂಮಿಕೆ ಧರಿಸಿ ರಂಗ ಪ್ರವೇಶಿಸಲು ಸಿದ್ಧರಾಗಿ ಸೈಡ್ ವಿಂಗ್ಸ್‌ನಲ್ಲಿ (Side Wings) ನಿಂತುಕೊಂಡಿದ್ದಾರೆ. ಮೊದಲನೆಯ ಗಂಟೆ ಬಾರಿಸಿತು. ಅಧ್ಯಕ್ಷರು ಸಂಸಾರ ಸಮೇತವಾಗಿ ಬಂದು ನಿರ್ದಿಷ್ಟ ಸ್ಥಾನದಲ್ಲಿ ಮಂಡಿಸಿದರು.

ಶ್ರೀಕಂಠಮೂರ್ತಿ ರಂಗದೊಳಗೆ ಬಂದು ನಟನಟಿಯರು ಸಿದ್ಧರಾಗಿದ್ದುದನ್ನು ನೋಡಿ ಹೋದ.

ನೇಪಥ್ಯದಲ್ಲಿದ್ದ ಕಿಂಡಿಯಿಂದ ಮಂಜುಳಾ ಜನಸ್ತೋಮವನ್ನು ನೋಡಿದಳು. ಸಾಗರದಂತೆ ಹಬ್ಬಿದ ಪ್ರೇಕ್ಷಕವರ್ಗ ಅವಳನ್ನು ಅಧೀರಳಾನ್ನಾಗಿ ಮಾಡಿತು. ಅವಳ ಮುಖದ ಬಣ್ಣ ಬದಲಾಯಿಸಿತು. ಅಣ್ಣಯ್ಯ ಅವಳ ಹತ್ತಿರ ಬಂದು.

"ಏಕೆ ಮಂಜುಳಾ – ಮೈಯಲ್ಲಿ ಸರಿಯಾಗಿಲ್ಲವೇ ?"

" ಜನ ನೋಡಿ."

ಅಣ್ಣಯ್ಯನೂ ಕಿಂಡಿಯಲ್ಲಿ ಪ್ರೇಕ್ಷಕವರ್ಗ ನೋಡಿ

" ಜನ ನೋಡಿ ಹೆದರಿಕೆಯಾಗಿದೆಯೇ ?"

" ಕೈಕಾಲು ಥರಥರ ನಡುಗುತ್ತಿದೆ."

" ನೀನೆ ಇವತ್ತು ನಾಯಕಿ – ಜಯಪಾಲ ಚರಿತ್ರೆಗೆ ನೀನೇ ಆಧಾರ ಸ್ತಂಭ. ನಿನ್ನ ಪಾತ್ರ ಇವತ್ತು ಕುಸಿದು ಬಿದ್ದರೆ ನಾಟಕವೇ ಕುಸಿದು ಬೀಳುತ್ತದೆ."

" ಏನು ಮಾಡಲಿ ?"

" ಏನೂ ಮಾಡಬೇಡ – ಧೈರ್ಯವಾಗಿರು. ಎದುರಿಗೆ ಯಾರೂ ಇಲ್ಲವೆಂದುಕೊಂಡು ಬಿಡು. ನಿನ್ನ ಪ್ರತಿ ದೃಶ್ಯದಲ್ಲಿಯೂ ನಾನಿರುತ್ತೇನೆ - ಹೆದರಬೇಡ. ಮಿಕ್ಕ ವೇಳೆಯಲ್ಲಿ ನಾನಿಲ್ಲೇ ವಿಂಗ್ಸ್‌ನಲ್ಲಿರುತ್ತೇನೆ – ಬಹಳ ಭಯವಾದರೆ ಒಮ್ಮೆ ನನ್ನ ಕಡೆ ನೋಡು " ಎಂದು ಹೇಳಿದ.

ಎರಡನೆಯ ಗಂಟೆ ಬಾರಿಸಿತು.

" ನಿನ್ನದೇ ಮೊದಲನೆಯ ಪ್ರವೇಶ – ಹೆದರಬೇಡ ಮಂಜುಳಾ."

ಎಂದಂದು ಅವಳ ಕೈ ಹಿಡಿದು ಅದುಮಿದ.

ಮಂಜುಳನಿಗೆ ಹೋದ ಜೀವ ಬಂದಂತಾಯಿತು.

ಅಣ್ಣಯ್ಯ ಮಂಜುಳನನ್ನು ಕಿಂಡಿಯ ಬಳಿಗೆ ಕರೆದೊಯ್ದು.

" ಅಲ್ಲಿ ನೋಡು – ಜಿಲ್ಲಾಧಿಕಾರಿಗಳ ಹಿಂದೆ ಕುಳಿತಿದ್ದಾರಲ್ಲಾ ಅವರೇ ನನ್ನ ಸ್ನೇಹಿತರು ಸಣ್ಣಪ್ಪಗೌಡ, ಸಿದ್ದವೀರಪ್ಪ, ರಾಮಶಾಸ್ತ್ರಿ – ನಿನ್ನ ಅಭಿನಯದ ಬಗ್ಗೆ ಅವರಿಗೆ ಬಹಳ ಹೇಳಿದ್ದೇನೆ. ನೀನು ಕೆಡಿಸಿ ಬಿಟ್ಟರೆ ನನ್ನ ಮರ್ಯಾದೆ ಹೋಗುತ್ತದೆ."

ಮಂಜುಳ ಅಣ್ಣಯ್ಯನ ಕಡೆ ತಿರುಗಿ

" ಕೆಡುಸುವುದಿಲ್ಲ - ನೀವು ಇಲ್ಲೇ ಇರುವಿರಷ್ಟೆ" ಎಂದಳು.

" ಇಲ್ಲೇ ಇರುತ್ತೇನೆ."

ಎಂದು ಅವಳ ತಲೆ ನೇವರಿಸಿದ.

ಮೂರನೆಯ ಗಂಟೆ ಬಾರಿಸಿತು — ನಾಟಕ ಆರಂಭವಾಯಿತು. ಮಂಜುಳಾ ರಂಗ ಪ್ರವೇಶಿಸಿದಳು.

ನಾಟಕ ನಿರ್ವಿಘ್ನವಾಗಿ ಸಾಗಿತು. ಅಣ್ಣಯ್ಯನ ಒಂದೊಂದು ಹಾಡಿಗೂ ಮೂರು ನಾಲ್ಕು ಸಲ 'ಒನ್ಸ್ ಮೋರ್' (Once more) ಕೂಗೇಳುತ್ತಿತ್ತು. ಮಂಜುಳಾ ಪ್ರೇಕ್ಷರ ಚಿತ್ತವನ್ನು ಸೂರೆಗೊಂಡಳು. ಅಧ್ಯಕ್ಷರು ತಮ್ಮ ಭಾಷಣದಲ್ಲಿ ಮಂಜುಳಾ, ಅಣ್ಣಯ್ಯನನ್ನೇ ಬಹುವಾಗಿ ಪ್ರಶಂಸಿದರು.

ನಾಟಕ ಜಯಪ್ರದವಾದುದಕ್ಕೆ ಶ್ರೀಕಂಠಮೂರ್ತಿ ಹಿಗ್ಗಿ ಹೋದ. ಅಣ್ಣಯ್ಯನಿಗೆ ಅಭಿನಂದನೆ ಅರ್ಪಿಸಿ, ಮಂಜುಳನ ಬಳಿಗೆ ಬಂದು ಅವಳನ್ನು ಹುತ್ಪೂರ್ವಕವಾಗಿ ಅಭಿನಂದಿಸಿದ. ಮಂಜುಳಾ ಶ್ರೀಕಂಠಮೂರ್ತಿಯನ್ನು ಒಂದು ಪಕ್ಕಕ್ಕೆ ಕರೆದು ಕಿವಿಯಲ್ಲೇನೋ ಉಸುರಿದಳು. ಅವನು ನಗುತ್ತಾ 'ಹಾಗೇ ಆಗಲಿ' ಎಂದ.

ಶ್ರೀಕಂಠಮೂರ್ತಿ ಹೋದಮೇಲೆ ಅಣ್ಣಯ್ಯ ಮೆಲ್ಲನೆ ಮಂಜುಳನ ಬಳಿಗೆ ಬಂದ. ಅವನ ಮುಖದಲ್ಲಿ ಸಂತೋಷ, ತೃಪ್ತಿ ತುಂಬಿ ತುಳುಕುತ್ತಿತ್ತು.

"ಮಂಜುಳಾ. . . ."

"ನೀವೇನು ಹೇಳಬೇಕೆಂದಿರುವಿರಿ ನನಗೆ ಗೊತ್ತು. ನನ್ನ ಪಾರ್ಟು ಚೆನ್ನಾದುದರ ಕೀರ್ತಿ ನಿಮಗೆ ಸೇರಬೇಕು."

ಅಣ್ಣಯ್ಯ ಮೆಲ್ಲನೆ ಮಂಜುಳನನ್ನು ಸೈಡ್‌ವಿಂಗ್ಸಿನ ಒಂದು ಕೊನೆಗೆ ಬರಮಾಡಿಕೊಂಡು.

"ನಿನ್ನ ಯಾವಾಗ ನೋಡುವುದು ಮಂಜುಳಾ,"

"ದಿನವೂ ನೋಡುತ್ತಿರುವಿರಲ್ಲ."

"ಹಾಗಲ್ಲ ! ನನ್ನ ಮನಸ್ಸಿನಲ್ಲಿ ಏನಿದೆ ನಿನಗೆ ಅರ್ಥವಾಗದೆ."

"ನೋಡಲೇ ಬೇಕೆ ?"

"ಬಹಳ ದಿವಸಗಳಿಂದ ಕಾಯುತ್ತಿದ್ದೇನೆ."

"ನಾನೂ ಕಾಯುತ್ತಿದ್ದೇನೆ."

"ಎಂದು ನೀವೇ ಹೇಳಿ"

"ಇಂದೇ ಏಕಾಗಬಾರದು ?"

ಆಗಬಹುದೆಂದು ಮಂಜುಳಾ ತಲೆಯುಳ್ಳಾಡಿಸಿದಳು. ಅಣ್ಣಯ್ಯ ಸಂಶಯಗ್ರಸ್ತನಾಗಿ

"ಯಜಮಾನರು . . ."

"ವಿಶ್ರಾಂತಿ ಬೇಕು – ಬರಬೇಡಿ ಎಂದು ಅವರಿಗೆ ಹೇಳಿದ್ದೇನೆ."

"ಮೇಕಪ್ ತೆಗೆದು ಕಂಪೆನಿ ಮನೆಗೆ ಹೋಗುತ್ತೇನೆ."

"ಹೋಗಿ – ನಾನು ಎಲ್ಲರ ಜತೆ ಬರುತ್ತೇನೆ."

"ನೀನು ಬಂದದ್ದು ನನಗೆ ಗೊತ್ತಾಗುವುದು ಹೇಗೆ ? '

"ರೂಮಿನ ದೀಪ ಎರಡು ಸಲ ಹತ್ತಿಸಿ ಆರಿಸುತ್ತೇನೆ."

"ಹಾಗಾದರೆ ಸರಿ"

ಎಂದಂದು ಮೆಲ್ಲನೆ ಬಣ್ಣದ ಕೋಣೆಗೆ ನುಸುಳಿಕೊಂಡ.

ನಾಟಕ ಯಶಸ್ವಿಯಾದುದಕ್ಕೆ ಎಲ್ಲರಿಗೂ ಹಿಡಿಸಲಾರದಷ್ಟು ಸಂತೋಷ. ಶ್ರೀಕಂಠಮೂರ್ತಿ 'ಈ ನಾಟಕದ ಶತಮಾನೋತ್ಸವ ಮಾಡಿಯೇ ಈ ಊರು ಬಿಡುವುದು' ಎಂದು ಹೇಳಿದ. ಮಂಜುಳಾ ದೊರಕಿಸಿಕೊಂಡ ಕೀರ್ತಿ ಕಂಡು ಸುಬ್ಬುಲಕ್ಷ್ಮಿ, ನಾಗರತ್ನ ಅಸೂಯಗ್ರಸ್ತರಾಗಿದ್ದರು. ಮಂಜುಳೆಯ ಭರ್ತ್ಸನೆ ನಡೆದಾಗ ಸುಂದರಿ ಮಧ್ಯೆ ಬಾಯಿ ಹಾಕಿ 'ಯಾಕೆ ಹೊಟ್ಟೆ ಉರ್ಕೊಂಡು ಸಾಯ್ತೀರೆ. ಪಾರ್ಟು ಚೆನ್ನಾಗಿ ಮಾಡಿದಳು ಎಂದು ಒಪ್ಪಿ ಕೊಂಡರೆ ನಿಮ್ಮ ಬಾಯಿಗೆ ಹುಳು ಬೀಳುತ್ತದೆಯೇ' ಎಂದು ಗದರಿ ಕೊಂಡಿದ್ದಳು. ದೊರೆಸ್ವಾಮಿಗೂ ಇದೇ ಶಾಸ್ತಿಯಾಗಿತ್ತು. ಅವನು ಅಣ್ಣಯ್ಯನನ್ನು ಅವಾಚ್ಯ ಬಯ್ಯುವುದಕ್ಕಾರಂಭಿಸಿದಾಗ ನಿರುಪದ್ರವಿ ಪರಮೇಶ್ವರಯ್ಯನೇ ಮುಂದೆ ಬಂದು 'ರೀ - ದೊರೆಸ್ವಾಮಿಗಳೇ. ಅಣ್ಣಯ್ಯನ ಹಾಗೆ ಪಾರ್ಟು ಮಾಡೋಕೆ ನಿಮ್ಮ ಹಣೆಯಲ್ಲಿ ಬರೆದಿಲ್ಲ ಕಣ್ರೀ. ಇವತ್ತು ಮಂಜುಳಮ್ಮ ಮಾಡಿದ ಆಕ್ಟಿಂಗಿಗೆ ನೀವಾಗಿದ್ದರೆ ತತ್ತರಿಸಿ ಹೋಗುತ್ತಿದ್ದಿರಿ. ಅಣ್ಣಯ್ಯ ಅದನ್ನು ಜೀರ್ಣಿಸಿಕೊಂಡದ್ದಲ್ಲದೆ ತನ್ನ ಛಾಪೂ ಹೊಡೆದ. ನಾನೂ ನಲವತ್ತು ವರ್ಷ ನಾಟಕದ ಕಂಪೆನಿ ಸರ್ವೀಸ್ ಮಾಡಿದ್ದೀನಿ – ಇಂಥ ಆಕ್ಟರ್ ನಾನು ನೋಡಿರಲಿಲ್ರೀ.' ಎಂದು ಹೇಳಿದ್ದ.

'ಅಣ್ಣಯ್ಯ ಎಲ್ಲಿ – ಅಣ್ಣಯ್ಯ ಎಲ್ಲಿ' ಎಂದು ಎಲ್ಲರೂ ಹುಡುಕಿದ್ದರು. ಗುಂಡೂರಾಯ 'ಅವನ ಸ್ನೇಹಿತರು ನಾಟಕ ನೋಡುವುದಕ್ಕೆ ಬಂದಿದ್ದಾರೆ – ಅವರ ಜೊತೆ ಹೋಗಿರಬಹುದು' ಎಂದು ಹೇಳಿದ್ದ.

ನಟನಟಿಯರು ಗುಂಪು ಗುಂಪಾಗಿ ಕಂಪೆನಿ ಮನೆ ಸೇರಿದರು. ಎಲ್ಲ

ರಿಗೂ ಆಯಾಸವಾಗಿತ್ತು. ನೀರು ಕುಡಿಯುವವರು ನೀರು ಕುಡಿದು ಹಾಸಿಗೆ ಸೇರಿದರು.

ಕಂಪೆನಿ ಮನೆಯ ಮೂಲೆಯೊಂದರಲ್ಲಿ ಅಡಗಿ ಕುಳಿತಿದ್ದ ಅಣ್ಣಯ್ಯ ಮೆಲ್ಲನೆ ಹೊರಬಿದ್ದು, ಕತ್ತೆತ್ತಿ ನೋಡಿದ. ಮಂಜಳನ ರೂಮಿನಲ್ಲಿ ದೀಪದ ಸಂಜ್ಞೆಯಾಯಿತು. ಮಹಡಿಯೇರಲು ಅಣ್ಣಯ್ಯ ಆತುರಪಡಲಿಲ್ಲ. ಕಿಟಕಿಯ ಮರೆಯಲ್ಲಿ ನಿಂತು ಇಣಕಿ ನೋಡಿದ. ಒಬ್ಬೊಬ್ಬರಾಗಲೇ ಗೊರಕೆ ಆರಂಭಿಸಿದ್ದರು. ಯಾರೋ ಸೊಳ್ಳೆ ಷಿಕಾರಿ ಮಾಡುತ್ತಿದ್ದರು. ಅಣ್ಣಯ್ಯ ಸ್ವಲ್ಪ ಹೊತ್ತು, ತಡೆದು ಮಹಡಿಯೇರಿ ಹೋದ.

ಮಂಜಳ ರೂಮು ಬಾಗಿಲು ಹಾಕಿದ್ದರೂ, ಚಿಲಕ ಹಾಕಿರಲಿಲ್ಲ. ಅಣ್ಣಯ್ಯ ಮೆಲ್ಲನೆ ಒಳಕ್ಕೆ ಪ್ರವೇಶಿಸಿದ. ಬಾಗಿಲು ಸಮೀಪದಲ್ಲಿದ್ದ ಮಂಜಳ ಚಿಲಕ ಹಾಕಿದಳು.

ಹೊರಗಡೆ ಓಣಿಯಲ್ಲಿದ್ದ ಲಾಂದ್ರ ಕಂಬದ ಬೆಳಕು ಮಂಜುಳನ ರೂಮು ಬೆಳಗಿಸುತ್ತಿದ್ದರಿಂದ ಸ್ವಿಚ್ ಹಾಕುವ ಅಗತ್ಯವಿರಲಿಲ್ಲ.

"ಏಕೆ ಇಷ್ಟು ಹೊತ್ತು" ಎಂದು ಪಿಸು ಮಾತಿನಲ್ಲಿ ಕೇಳಿದರು.

"ಈಗ ತಾನೆ ಎಲ್ಲರೂ ಬಂದು ಮಲಗಿದರು" ಎಂದು ಹೇಳಿದ.

ಬೆಳಿಗ್ಗೆ ಐದು ಗಂಟೆಯ ಸುಮಾರಿಗೆ ಅಣ್ಣಯ್ಯ ಹಾಸಿಗೆ ಬಿಟ್ಟೆದ್ದು, ಜೇಬಿನಲ್ಲಿದ್ದ ತನ್ನ ಗಡಿಯಾರ ತೆಗೆದು ಬೆಂಕಿಕಡ್ಡಿ ಗೀರಿ ಗಂಟೆ ನೋಡಿದ. ಮಂಜುಳಾ ಮೆಲ್ಲನೆ

"ಗಂಟೆಯೆಷ್ಟು ?" ಎಂದಳು.

"ಐದಕ್ಕೆ ಬಂದಿದೆ. ?"

ಎಂದು ಅವಳ ಪಕ್ಕಕ್ಕೆ ಬಂದು ಕುಳಿತು

"ನಾಳೆ ನಿನ್ನನ್ನು ನೋಡದಿರಲಾರೆ ಮಂಜೂ."

"ನಾನೂ ನಿಮ್ಮನ್ನು ನೋಡದಿರಲಾರೆ ?"

"ಹೇಗೆ ಮಾಡುವುದು. ಈ ಯಜಮಾನನನ್ನು ಯಾಕೆ ಗಂಟು ಹಾಕಿಕೊಂಡೆ ? "

"ಅದು ನನ್ನ ಕೆಲಸವಲ್ಲ. ನನ್ನ ತಾಯಿ ಮಾಡಿದ ಉಪಕಾರ."

"ನಾಳೆ ವಿಷಯ ಏನು ಮಾಡುತ್ತೀ ?"

" ಇವತ್ತು ಬಂದ ಹಾಗೇ ನೀವು ಬನ್ನಿ."

" ಯಜಮಾನ ಇದ್ದರೆ."

" ನಾನು ಒಳಗಿಲ್ಲವೆಂದು ಹೇಳಿರುತ್ತೇನೆ."

" ಇವನನ್ನು ಕೊಡವಿಕೊಳ್ಳಲಾಗುವುದಿಲ್ಲವೇ ?"

" ಆಗುತ್ತದೆ – ' ಜಯಪಾಲ ಚರಿತ್ರೆ ' ನನ್ನ ಭಾಗದ ದೇವರು ಬಂದ ಹಾಗೆ ಬಂದಿದೆ."

" ಅದಕ್ಕೂ ಇದಕ್ಕೂ ಏನು ಸಂಬಂಧ."

" ಅಷ್ಟು ನಿಮಗೆ ಅರ್ಥವಾಗಲಿಲ್ಲವಲ್ಲ ! ಈಗ ಎಲ್ಲರ ಕಣ್ಣಲ್ಲಿ ಮೆರೆಯುತ್ತಿರುವವರು ಯಾರು ?"

" ನೀನು – ನಾನು."

" ಯಜಮಾನರನ್ನು ನಾವೀಗ ಬುಗುರಿ ಆಡಿಸಿದ ಹಾಗೆ ಆಡಿಸಬಹುದು. ಸಮಯ ಸಾಧಿಸಿ ಅವರ ಸಂಬಂಧ ಕಡಿದುಕೊಳ್ಳುತ್ತೇನೆ ಆದರೆ . . ."

" ಏನು ಹೇಳು."

" ನೀವು ನನಗೆ ವಂಚನೆ ಮಾಡಕೂಡದು."

" ಖಂಡಿತವಾಗಿಯೂ ನಿನ್ನನ್ನು ವಂಚಿಸುವುದಿಲ್ಲ."

" ಇನ್ನು ಯಾರ ಸಹವಾಸವೂ ಮಾಡಕೂಡದು."

" ಮಾಡುವುದಿಲ್ಲ – ನೀನು."

" ನಿಮ್ಮನ್ನು ಬಿಟ್ಟು ನನಗೆ ಯಾರೂ ಬೇಡ."

" ಈ ಮಾತು ಸತ್ಯವೇ ?"

" ದೇವರ ಆಣೆಯಿಟ್ಟು ಹೇಳುತ್ತೇನೆ."

" ನಿಮ್ಮ ತಾಯಿ ಅವತ್ತು ಹೇಳಿದ್ದೆಲ್ಲಾ ಸುಳ್ಳೇ."

" ಅರ್ಧ ಸುಳ್ಳು – ಅರ್ಧ ನಿಜ. ನಿಜವಾದುದಕ್ಕೆಲ್ಲಾ ಅವಳೇ ಕಾರಣ" ನನಗೆ ಈ ದಾರಿ ತೋರಿಸಿ, ನನ್ನ ಬಾಳು ಹಾಳುಮಾಡಿದವಳೇ ಅವಳು. ಅವಳು ನನ್ನ ತಾಯಿಯಲ್ಲ – ಪೂರ್ವ ಜನ್ಮದ ಶತ್ರು."

" ನಾನು ಹೊರಡಲೇ ?"

" ಕಂಪೆನಿ ಮನೆಯೊಳಗೆ ಈಗ ಹೇಗೆ ಹೋಗುವಿರಿ ? ಬಾಗಿಲು ಹಾಕಿಕೊಂಡು ಎಲ್ಲರೂ ಮಲಗಿ ನಿದ್ರಿಸುತ್ತಿರುತ್ತಾರೆ."

" ಹೊಳೆಯ ಕಡೆ ಹೋಗಿ ತಿರುಗಾಡಿಕೊಂಡು ಹೋಟಲಿನಲ್ಲಿ, ಕಾಫಿ ಕುಡಿದುಕೊಂಡು ಎಂಟು ಗಂಟೆಗೆ ಬರುತ್ತೇನೆ."

" ನನ್ನಿಂದ ನಿಮಗೆಷ್ಟು ತೊಂದರೆ."

" ಇಂಥ ಸಾವಿರ ತೊಂದರೆಯನ್ನು ನಿನಗಾಗಿ ಅನುಭವಿಸಲು ಸಿದ್ಧನಾಗಿದ್ದೇನೆ."

ಮಂಜುಳ ಮೇಲಕ್ಕೆದ್ದು ಶಬ್ದವಾಗದಂತೆ ಚಿಲಕ ತೆಗೆದು ' ತಡೆಯಿರಿ – ನಾನು ಹೊರಗೆ ನೋಡಿ ಬರುತ್ತೇನೆ ' ಎಂದು ಹೇಳಿ ಹೋದಳು. ಅಣ್ಣಯ್ಯ ಕಿಟಕಿಯ ಬಳಿ ನಿಂತುಕೊಂಡು ಹೊರಗೆ ಯಾರಾದರೂ ಇದ್ದಾರೆಯೇ ಎಂದು ನೋಡಿದ. ಅವನು ನೋಡುತ್ತಿದ್ದಂತೆ ಸರಸ್ವತಿಯ ರೂಮಿನಿಂದ ನಾರಾಯಣ ಹೊರಬಿದ್ದ. ಅಣ್ಣಯ್ಯ ಚಕಿತನಾಗಿ ಕಿಟಕಿಯ ಪಕ್ಕಕ್ಕೆ ಬಂದು ನಿಂತುಕೊಂಡ. ಒಳಗೆ ಬಂದ ಮಂಜುಳಾ ' ಯಾರೂ ಇಲ್ಲ – ಹೊರಡಬಹುದು ' ಎಂದಳು. ಅಣ್ಣಯ್ಯ ಮಾತನಾಡಲಿಲ್ಲ.

ಮಂಜುಳಾ ಗಾಬರಿಯಾಗಿ

" ಯಾಕೆ ? ಏನಾಯಿತು " ಎಂದಳು.

ಅಣ್ಣಯ್ಯ ಉಸಿರೆಳೆದುಕೊಂಡು

" ನಿನ್ನ ತಾಯಿ ರೂಮಿನಿಂದ ಯಾರೋ ಹೊರಬಿದ್ದರು."

" ಯಾರು ? – ಚೆನ್ನಾಗಿ ನೋಡಿದಿರಾ ?"

" ನೋಡಿದೆ – ಚೆನ್ನಾಗಿ ನೋಡಿದೆ."

" ಯಾರು ?"

" ಅದನ್ನು ಕೇಳಬೇಡ. ನಿನ್ನ ಮನಸ್ಸಿಗೆ ತುಂಬ ವ್ಯಥೆಯಾಗುತ್ತದೆ."

" ಇಲ್ಲ ಹೇಳಿ -"

" ಬೇಡ ಮಂಜೂ."

" ನೀವು ಹೇಳುವಿರೋ ಇಲ್ಲವೋ ? ನನ್ನಾಣೆ. ನೀವು ಹೇಳಲೇಬೇಕು."

ಅಣ್ಣಯ್ಯ ಅನುಮಾನಿಸಿ

" ಅಡಿಗೆ ನಾರಾಯಣ " ಎಂದ.

" ನಿಜವೇ ?"

" ನಾಳೆ ನೀನೇ ನೋಡುವೆಯಂತೆ ಸುಮ್ಮನಿರು"

ಎಂದು ಹೆಜ್ಜೆಯ ಮೇಲೆ ಹೆಜ್ಜೆಯನ್ನಿಕ್ಕುತ್ತಾ ಹೊರಗೆ ಬಂದು, ಅತ್ತಿತ್ತ ನೋಡಿಕೊಂಡು, ತೋಟದ ಕಡೆಯಿಂದ ಮಾಯವಾದ.

ಬೆಳಿಗ್ಗೆ ಯಜಮಾನರು ಸುಪ್ರಸನ್ನರಾಗಿದ್ದರು. ನಾಟಕದ ಯಶಸ್ಸಿನ ಗುಂಗು ಅವರಿಗಿನ್ನೂ ಇಳಿದಿರಲಿಲ್ಲ. ಗುಂಡೂರಾಯ ನಾರಾಯಣನ ಕೈಯಲ್ಲಿ ಕಾಫಿ ತೆಗೆಸಿಕೊಂಡು ಬಂದ.

ಯಜಮಾನರು ಕಾಫಿಲೋಟ ಕೈಗೆ ತೆಗೆದುಕೊಂಡು

" ಬಹಳ ಹೆದರಿದ್ದೆ ಗುಂಡೂ. ಶಿವಮೊಗ್ಗೆಯಲ್ಲಿ ಜಯಭೇರಿ ಹೊಡೆದ ಹಾಗಾಯಿತು."

" ನಿಮಗೇನು ಸ್ವಾಮಿ ಈಗ ಮಹಾದೆಸೆ ನಡೆಯುತ್ತಿದೆ. ನೀವು ಮುಟ್ಟಿದ್ದೆಲ್ಲಾ ಚಿನ್ನ."

" ಅಣ್ಣಯ್ಯನ್ನ ನಾನು ಏನೋಂತಿದ್ದೆನಯ್ಯಾ – ಅಸಾಧ್ಯ ಆಸಾಮಿ."

" ನಾನು ಹೇಳಿದರೆ ನಿಮಗೆ ನಂಬಿಕೆಯೆಲ್ಲಿ ಬರಬೇಕು."

" ನಿನ್ನ ಮಾತು ಕೇಳಿಯೇ ಅವನನ್ನು ಕಂಪೆನಿಗೆ ತೆಗೆದುಕೊಂಡೆ ನಲ್ಲೋ!"

" ಹೌದು ಸ್ವಾಮಿ. ನನಗೆ ಅಣ್ಣಯ್ಯಂದೂ ಆಶ್ಚರ್ಯವಿಲ್ಲ ಸ್ವಾಮಿ. ಅವನು ಖದೀಮ – ಚಿಕ್ಕ ಮಗುವಿನಿಂದಲೂ ನಾಟಕದಲ್ಲಿ ನುರುಗಿದ್ದಾನೆ. ಮಂಜುಳಮ್ಮ ಎಂತ ಕಲಾವಿದೆ ಸ್ವಾಮಿ ನಿಮ್ಮ ಗೌರಿ, ಮನೋಹರಿಯನ್ನು ಅವಳ ಮುಂದೆ ನಿವಾಳಿಸಿ ಹಾಕಬೇಕೋ ಇಲ್ಲವೋ ? "

" ನಿಜ ಕಣಯ್ಯಾ – ನಿನ್ನ ಮಾತು ಒಪ್ಪಿಕೊಂಡೆ."

" ಅವರಮ್ಮನ ಗತಿ ಏನು ಮಾಡುತ್ತೀರಿ ಸ್ವಾಮಿ."

" ತಿಂದುಕೊಂಡು ಬಿದ್ದಿದ್ದಾಳಲ್ಲಾ ! "

" ಹೋಗಲಿ ಕ್ಷಮಿಸಿ ಬಿಡಿ ಸ್ವಾಮಿ."

" ಏನು ! ಅವಳನ್ನು ಪುನಃ ಕಟ್ಟಿಕೋ ಎಂತೀಯಾ ? "

" ಆ ಮಾತು ಹೇಗೆ ಹೇಳಲಿ ? ಅವರ ಕೈಲಿ ತಿರುಗಿ ಪಾರ್ಟು ಮಾಡಿಸಿ."

" ನಿನ್ನ ಹತ್ತಿರ ಹೇಳಿಕೊಂಡಳೋ ? "

" ಅವರ ದುಃಖ ಹೇಳತೀರದು. ತಾಯಿಯನ್ನು ನೀವು ಕೆಟ್ಟದಾಗಿ

ಕಂಡರೆ ಮಗಳ ಮನಸ್ಸಿಗೂ ಸಮಾಧಾನವಿರುವುದಿಲ್ಲ. ಮಂಜುಳ ಸಂತೋಷ ವಾಗಿರಲಿ ಎನ್ನುವುದಕ್ಕಾದರೂ ಸರಸ್ವತಮ್ಮನವರಿಗೆ ಪಾರ್ಟಿ ಕೊಡಿ."

ಶ್ರೀಕಂಠಮೂರ್ತಿ ಕ್ಷಣಕಾಲ ಆಲೋಚಿಸಿ

"ಹಾಗೇ ಆಗಲಿ ಹೋಗು - ರಾತ್ರೀಗೆ ರಾಣಿ ಗುಣವತಿ ಪಾರ್ಟಿ ಅವಳೇ ಮಾಡಲಿ."

ತನ್ನ ಸಂಧಾನ ಸಫಲವಾದುದಕ್ಕೆ ಗುಂಡೂರಾಯನಿಗೆ ಪರಮ ಸಂತೋಷವಾಯಿತು. ಕೂಡಲೇ ಹೋಗಿ ಈ ಸುದ್ದಿಯನ್ನು ಸರಸ್ವತಿಗೆ ತಿಳಿಸಿದ.

ಅವಳು ಯಾವ ಸಂತೋಷವನ್ನೂ ವ್ಯಕ್ತಮಾಡಲಿಲ್ಲ ; ಆದರೆ ಗುಂಡೂರಾಯನ ಸಲಹೆಯನ್ನೊಪ್ಪಿಕೊಂಡಳು.

## ೧೭

ರಾಮರಾಜಪ್ಪ ಒಂದು ತಿಂಗಳಾದರೂ ಮುತ್ತಮ್ಮನ ಮನೆಯಕಡೆ ಸುಳಿದಿರಲಿಲ್ಲ. ರಾಮರಾಜಪ್ಪನನ್ನು ಪ್ರತಿದಿನವೂ ನಿರೀಕ್ಷಿಸಿ ಬೇಸತ್ತು ಮುತ್ತಮ್ಮ ಅವನಿಗೆ ಒಂದು ದಿನ ಹೇಳಿಕಳಿಸಿದಳು. ರಾಮರಾಜಪ್ಪ ಬರುವ ವಿಷಯದಲ್ಲಿ ಅವಳಿಗೆ ಅನುಮಾನವೇ ಇತ್ತು. ಆದರೆ ರಾಮರಾಜಪ್ಪನು ತಪ್ಪಿಸಿಕೊಳ್ಳದೆ ಬಂದ.

ರಾಮರಾಜಪ್ಪನಲ್ಲಿ ಏನೋ ವ್ಯತ್ಯಾಸವಾಗಿದೆಯೆನ್ನುವುದನ್ನು ಗ್ರಹಿಸಲು ಮುತ್ತಮ್ಮನಿಗೆ ತಡವಾಗಲಿಲ್ಲ. ಅವನ ನಡತೆಯಲ್ಲಿ ಮೊದಲಿನ ಸೌಹಾರ್ದ ಲೋಪವಾಗಿತ್ತು.

"ನೀನು ಬರ್ತೀಯೊ ಇಲ್ವೋ ಅಂತಾ ಇದ್ನಪ್ಪ"

"ನೀನು ಹೇಳಿಕಳಿಸಿದಮೇಲೆ ಬರದೇ ಇರುತ್ತೇನೆಯೇ ?

"ಅವತ್ತು ಸರಸ್ವತಮ್ಮನ ಮ್ಯಾಕೆ ರೇಕ್ಕೊಂಡು ಓದೋನು ಇವತ್ತೇ ನೀನು ಬತ್ತಿರೋದು."

"ಏನೋ ಪುರಸೊತ್ತಾಗಲಿಲ್ಲಮ್ಮ."

"ನನ್ನ ತಾವ ಸುಳ್ಳು ಯಾಕಪ್ಪ ಏಳ್ತೀ ?"

" ಸುಳ್ಳೇನು ಬಂತು ನನಗೆ ಪುರುಸೊತ್ತಿತ್ತೇ ?"

" ಮನಸಿದ್ರೆ ಪುರುಸತ್ತು ಇದ್ದೇ ಇರ್‍ತೈತೆ ?"

" ಹಾಗೇ ತಿಳಿದುಕೊ. "

" ಸರಸೋತಮ್ಮಂಗೂ ನಿಂಗೂ ಏನಾಯಿತಪ್ಪ – ನಿನ್ನ ನೋಡೋ ನೇಂತ ಆಯಮ್ಮ ಒಂದೇ ಸಮನೆ ಬಡ್ಕೋತಿದ್ಳು. "

" ಸರಿ. ಅವಳನ್ನು ಮನುಷ್ಯ ಜಾತಿಗೆ ಸೇರಿಸುತ್ತೀಯಲ್ಲಾ ! "

" ಓಗ್ಲಿ – ಅವಳ ವಿಷಯ ಬ್ಯಾಡ. ನಾನೇನಪ್ಪಾ ನಿಂಗೆ ಅನ್ಯಾಯ ಮಾಡಿದ್ದು. "

" ಹೇಳಲೋ – ನಿನಗೆ ಅಸಮಾಧಾನವಾಗಬಹುದು. "

" ಇರಲಿ ಹೇಳಪ್ಪ. ಯಾವ್ದೂ ಮನಸ್ಸಿನಾಗ ಇಟ್ಕೋ ಬಾರ್ದು. "

" ಪಾಪನಿಗೆ ನೀನೇಕೆ ಹೇಳಿಕಳುಹಿಸಿದ್ದೆ. "

" ಯಾರೋ ಬಂದಿದ್ರು, ಏಳಿ ಕಳಿಸ್ದೆ. "

" ಆ ಕೆಲಸ ನೀನು ಮಾಡಬಹುದೆ ? ನನಗೂ ಅವಳಿಗೂ ಇರುವ ವಿಶ್ವಾಸ ನಿನಗೆ ಗೊತ್ತಿಲ್ಲವೇ ? "

" ಈಗೇನಾದ್ದು. ಅವಳು ಬಂದಾಳಾ - ಏನಾದ್ರೂ ಆಯ್ತಾ ? ಏಳಿ ಕಳಿಸ್ದಾಗ ಗೊತ್ತಿರ್‍ಲಿಲ್ಲಪ್ಪ. ನೀನು ಅವಳನ್ನ ಖಾಯಂ ಆಗಿ ಮಡಿಕ್ಕೋತೀನಿ ಎಂತಾ ನಂಗೆ ಏಳಿದ್ಯಾ ? "

" ಹೇಳುವುದನ್ನು ಮರೆತೆ ? "

" ಆ ಕೆಲಸ ನೀನು ಮಾಡಬೋದೋ ? "

" ಯಾವ ಕೆಲಸ ? "

" ನನ್ಮನೇಲಿ ಗುರುತಾದವಳನ್ನ ನೀನೇ ಮಾತಾಡ್ಸಿ ಎಲ್ಲಾ ಲೆಕ್ಕಾಚಾರ ಮಾಡಿಕೋಬೋದೋ ? ಮಡಿಕ್ಕೋ – ನಾನು ಬೇಡಾ ಅನ್ನಾಕಿಲ್ಲ. ನೀನು ಸುಕವಾಗಿರೋದೇ ನಂಗೆ ಬೇಕು. ನಿನ್ನ ರುಣ ಎಷ್ಟೋ ತಿಂದಿದ್ದೀನಿ ಮಾರಾಯ ಕೈಯೆತ್ತಿ ಕೊಟ್ಟಿದ್ದೀ."

" ನಿನ್ನ ಮನೇಲಿ ನನಗೆ ಅಷ್ಟು ಸ್ವಾತಂತ್ರ್ಯವಿಲ್ಲಾನ್ನು."

" ಇಲ್ಲಾಂತ ಯಾಂಗಂದ್ರಪ್ಪಾ. ನೀನೇನು ಮಾಡಿದ್ರೆ ನಾನು ಬ್ಯಾಡ ಅಂತೀನಿ. ನಂಗೊಂದು ಮಾತು ಏಳಿದ್ರೆ ಚೆಂದಾಕಿರತಿತ್ತು."

“ ಹೇಳಬೇಕಾಗಿತ್ತು ಮುತ್ತಮ್ಮ. ನಾನು ತಪ್ಪು ಮಾಡಿದೆ ಕ್ಷಮಿಸು.”

“ ಅಷ್ಟು ದೊಡ್ಮಾತು ಆಡ್ಬೇಡಪ್ಪ. ನೀನು ಚೆಂದಾಕಿದ್ರೆ ಸಾಕು . . . ಪಾಪ ಎಂಗವಳೆ ? ”

“ ಚೆನ್ನಾಗಿದ್ದಾಳೆ. ನಿನ್ನ ತುಂಬ ಜ್ಞಾಪಿಸಿಕೊಳ್ಳುತ್ತಾಳೆ.”

“ ಒಂದಿನ್ನ ಇಲ್ಲಿ ಕರ್ಕೊಂ ಬತ್ತಿಯೋ ? ”

“ ಆಗಲಿ – ಕರೆದುಕೊಂಡು ಬರುತ್ತೇನೆ. ಇಷ್ಟು ಅರ್ಜಂಟಾಗಿ ನನಗೇಕೆ ಹೇಳಿ ಕಳಿಸ್ದೆ.”

“ ನೋಡಲಿಲ್ಲ. ನೋಡಬೇಕು ಅನಿಸ್ತು - ಏಳಿ ಕಳಿಸ್ದೆ.”

“ ಅದು ಸರಿ. ಏನೋ ಕೆಲಸವೂ ಇರ್ಬೇಕು ಹೇಳು.”

“ ಸರಸ್ಸೋತಮ್ಮ ಕಾಗಜದ ಮೇಲೆ ಕಾಗಜ ಬರೀತವ್ಳೆ – ಅವಳು ಇಲ್ಲೀಗೆ ಬರ್ಬೇಕಂತೆ ! ”

“ ಅದಕ್ಕೆ ನಾನೇನು ಮಾಡಲಿ.”

“ ಬಡವಳು. ಬಡ್ಕೊಂತಾಳೆ. ಏನಾರ ಮಾಡಪ್ಪಾ.”

“ ನಾನು ಎಷ್ಟು ಸಂಸಾರ ನಡಸಲಿ ಮುತ್ತಮ್ಮ.?

“ ಅಳೇ ನ್ಯಾಸ್ತಳು – ಕೈ ಬಿಡ್ಬೇಡ.”

“ ಅವಳ ಸಂಬಂಧ ನನಗೆ ಬೇಕಾಗಿಲ್ಲ. ಆದರೆ ನನ್ನ ಕೈಲಾದ ಸಹಾಯ ಮಾಡೋದಿಕ್ಕೆ ಸಿದ್ಧವಾಗಿದ್ದೇನೆ.”

“ ನಿನ್ನ ಸಿನೇಹಿತ್ರು – ವೀರಣ್ಣ, ಸೋಮಸುಂದರಪ್ಪ ಬರ್ನೇ ಇಲ್ಲ.”

“ ನೋಡಿದೆಯೋ. ನಂಗೇ ಹೊಡೀತಿಯಲ್ಲಾ – ವೀರಣ್ಣ ಬಂದಿದ್ದನಂತೆ, ಜತೆಯಲ್ಲಿ ಬೂದಲೂರು ಪೋಲೀಸ್ ಇನ್‌ಸ್ಪೆಕ್ಟರನ್ನು ಕರೆದು ಕೊಂಡು ಬಂದಿದ್ದನಂತೆ.”

“ ಹೂ ! ಒಂದು ದಿನ ಬಂದಿದ್ರು. ಅವತ್ತು ಮನೇಲಿ ಯಾರೂ ಇರ್ನಿಲ್ಲ.

“ ಸರಸ್ವತಿ ಇದ್ದಳಲ್ಲಾ ! ”

“ ಅವಳು ಎಲ್ಲೋ ಹೋಗಿದ್ದಳು.”

“ ಸರಸ್ವತಿಯನ್ನು ಅವರಿಗೆ ಗಂಟು ಹಾಕು ಎಂದು ಹೇಳುತ್ತಿರುವೆಯೇನು ? ”

" ಏಳಪ್ಪಾ – ಬಡವಳು. ಎಲ್ಲಾದ್ರೂ ಬದಿಕ್ಕೊಳ್ಳಿ."

" ಆ ಘಟಸರ್ಪದ ಬಾಯಿಗೆ ನನ್ನ ಸ್ನೇಹಿತರನ್ನು ಬಲಿಕೊಟ್ಟರೆ ದೇವರು ಮೆಚ್ಚುತ್ತಾನೆಯೇ ಮುತ್ತಮ್ಮ. ಅವರಿಬ್ಬರೂ ನನ್ನ ಮನೆ ಉಳಿಸಿದ್ದಾರೆ ಅವರು ನನ್ನ ಸಹಾಯಕ್ಕೆ ಬರದಿದ್ದರೆ ನಾನು ಅಂಗಡಿ ಎತ್ತಬೇಕಾಗಿತ್ತು."

" ಅಂಗಾದ್ರೆ ಓಗ್ಲಿ ಬಿಡಪ್ಪ. ನಿಂಗೆ ಬಲವಂತ ಮಾಡಾಕಿಲ್ಲ."

ಎಂದಳು. ರಾಮರಾಜಪ್ಪ ಎದ್ದು ನಿಂತ.

" ಹೊರಟು ಬಿಡುವೆಯಾ ? "

" ಕೈತುಂಬ ಕೆಲಸ ಮುತ್ತಮ್ಮ. "

" ಒಸಬರು ಯಾರಾದ್ರು ಬಂದ್ರೆ ಏಳಿಕಳಿಸಲೇ ? "

" ಯಾರು ಬರುತ್ತಾರೆ. "

" ಗೊತ್ತಿಲ್ಲ ಭಾಗ್ಯಮ್ಮ ಓಗವ್ಳೆ. "

" ಹೇಳಿ ಕಳುಹಿಸು. "

ಎಂದು ಸೂಚಿಸಿ ರಾಮರಾಜಪ್ಪ ಹೊರಟು ಬಿಟ್ಟ.

ಸರಸ್ವತಿಯ ನಿರ್ಭಾಗ್ಯದೆಸೆ ನೆನೆದು ಮುತ್ತಮ್ಮ ಮರುಕಗೊಂಡಳು. ರಾಮರಾಜಪ್ಪನಿಗೆ ಬೇಡವಾದ ಪ್ರಾಣಿ ಕೇವಲ ನಿಷ್ಪ್ರಯೋಜಕವಾದುದೆಂಬ ಸಿದ್ಧಾಂತಕ್ಕೆ ಮುತ್ತಮ್ಮ ಬಂದಿದ್ದಳು.

ಬಾಗ್ಯಮ್ಮ ಕೈಯಲ್ಲಿ ಬ್ಯಾಗ್ ಹಿಡಿದು ಬಂದಳು. ಚೀಲ ಕೆಳಗಿಟ್ಟು, ಮುಖದಲ್ಲಿಳಿಯುತ್ತಿದ್ದ ಬೆವರನ್ನು ಸೆರಗಿನಿಂದ ಒರಸಿಕೊಳ್ಳುತ್ತಾ ಕುಳಿತಳು.

" ಅದೇನಮ್ಮ ಚೀಲ್ದಾಗೆ " ಎಂದು ಮುತ್ತಮ್ಮ ಕೇಳಿದಳು.

" ಸಕ್ಕರೆ ಕಣಮ್ಮ. "

" ಎಷ್ಟೈತೆ. "

" ದಡಿಯ ಐತೆ. "

" ಧಡಿಯ ! ಎಲ್ಲಿ ಸಿಕ್ತು ಬಾಗ್ಯಮ್ಮ ಒಂದು ಚಟಾಕು ಸಿಕ್ಕೋದೆ ಗೋಳಾಗಿ ಓಗೈತೆ – ಧಡಿಯ ಎಲ್ಲಿ ಗಿಟ್ಟಿಸಿದೆ. "

" ಒಂದು ಕೆಲಸವಾಯಿತಮ್ಮ ಇವತ್ತು. "

" ಏನಾಯಿತು ? "

" ರಾಮುರಾಜಪ್ಪಂಗೆ ಏಳಿ ನಾನು ಪೇಟೆಗೆ ಬಂದಿದ್ದೆ. ರಾಮುರಾಜಪ್ಪ ಬಂದಿದ್ನಾ ? "

" ಬಂದಿದ್ದ ಇದೇ ಓದ. "

" ಮಾರ್ಕೆಟ್ಟನಾಗ ಅಪರಂಜಿ ಸಿಕ್ಕಿದ್ದಳು. "

" ಅಪರಂಜಿ – ಅವಳು ಯಾರೇ ನಮ್ಮವ್ವ. "

" ನಾವು ಕಬ್ಬನ್. ಪೇಟೇಲಿ ಇದ್ವು ನೋಡು – ನಮ್ಮನೇತಾವಾ ಇದ್ಳು. ನನ್ನ ಮಾತಾಡಿಸಿ ಬಲವಂತ ಮಾಡಿ ಮನೇಕೆ ಕರ್ಕೊಂಡು ಓದ್ಳು. "

" ಅವ್ಳ ಮನೆ ಎಲ್ಲೈತೆ ? "

" ಕೆಂಗೇರಿ ಗೇಟ್ ಪೋಲೀಸ್ ಸ್ಟೇಷನ್ ಹಿಂದುಗಡೆ ಸಂದೀಲಿ. "

" ಪೋಲೀಸ್ ಟೇಶನ್ ತಾವಾನ !"

" ಅಲ್ಲಲ್ಲಮ್ಮ – ಹಿಂದೆ ರಸ್ತೆ ಐತಲ್ಲಾ ಅಲ್ಲಿ."

" ಮನ್ಯಾಗ ಏನು ಏಳಿದಳು."

" ಕಷ್ಟ ಏಳಿಕೊಂಡಳು – ತಿನ್ನಾಕೇ ಇಲ್ಲ."

" ನಾನ್ಯಾಕ ಯಾರವ್ರೆ – ಗಂಡಾ ಇಲ್ವಾ ?"

" ತಾಯಿ ಅವ್ಳೆ . . . ಗಂಡ ನೆಗದು ಬಿದ್ದು ವರ್ಸ ಆಯ್ತಂತೆ !"

" ಅವಳೇನು ಮಾಡ್ತಾಳೆ."

" ರೇಶ್ಮೆ ಹುರಿ ಮಾಡ್ತಾಳೆ."

" ಆಮ್ಯಾಕೆ . . . "

" ರೇಸನ್ ಅಂಗಡಿಯಪ್ಪ ಮಾತಾಡಿಸ್ತಾ ಅವ್ನೆ - ಒಸಿ ಅನುಕೂಲ ಮಾಡ್ಕೊಡವ್ವ, ಬದಿಕ್ಕೊಂತೀನಿ ಅಂದ್ಳು."

" ನೀನೇನಂದೆ !"

" ಆಗಲಿ ಅಂದೆ. ನಮುಗೂ ಒಸಿ ಅಕ್ಕಿ, ಸಕ್ಕರೆ ಕೊಡ್ಸು ಅಪರಂಜಿ ಅಂದೆ. ಕುಂತಿರು ಎಂತಾ ಏಳಿ ಓಗಿ ಸಕ್ಕರೆ ತಂದುಕೊಟ್ಳು."

" ಈಗ ಬತ್ತಾಳಾ !"

" ಊ ! ಆಯಪ್ಪನ್ನೂ ಕರ್ಕೊಂಡು ಬತ್ತಾಳಂತೆ."

" ಚಂದಾಕವಳೇನಮ್ಮ."

" ಅಪರಂಜೀನೂ ಅಪರಂಜೀನೇ ಕಣವ್ವಾ."

"ರಾಮುರಾಜಪ್ಪಂಗೆ ಏಳ್ಬೇಕು."

"ಇವತ್ತು ಬರ್ಲಿ ಸುಮ್ಕಿರು – ನಾಳೆ ಬಾ ಅಂದ್ರೆ ಬತ್ತಾಳೆ."

"ಏಳವ್ವಾ – ಉಣ್ಣು ಏಳು – ದಣಿದು ಬಂದಿದ್ದಿ."

ಎಂದು ಮುತ್ತಮ್ಮ ಭಾಗ್ಯಮ್ಮನನ್ನು ಉಪಚರಿಸಿದಳು. ಊಟ ಮಾಡುತ್ತ ಕುಳಿತಿದ್ದ ಭಾಗ್ಯಮ್ಮ

"ರಾಮುರಾಜಪ್ಪ ಏನು ಏಳಿ ಓದನವ್ವಾ" ಎಂದು ಕೇಳಿದಳು.

"ಸರಸೋತಮ್ಮಾಂದ್ರೆ ಆಯಪ್ಪ ಯಾಕೋ ಉರಿದು ಬೀಳ್ತಾನೆ ಬಾಗ್ಯಮ್ಮ."

"ಏನು ಮಾಡವ್ಳೋ ಪುಣ್ಯಾತ್ಗಿತ್ತಿ – ನೀನೇ ನೋಡ್ದೆಯಲ್ಲಾ – ಇಲ್ಲೀ ಬಂದಿದ್ಳು – ಏನೇನೋ ಮಾಡ್ಕೊಂಡು ಬಂದ್ಳು – ನಿನ್ನ ತಾವ ಬಾಯಿ ಬುಟ್ಳಾ ?"

ಭಾಗ್ಯಮ್ಮ ಊಟ ಮುಗಿಸಿಕೊಂಡು ಬಂದ ಮೇಲೆ ಇಬ್ಬರೂ ಎಲಡಿಕೆ ಮುಂದಿಟ್ಟುಕೊಂಡು ಕುಳಿತರು. ಎಲಡಿಕೆ ಮುಗಿಯುವಷ್ಟರಲ್ಲಿ ಅಪರಂಜಿ ಯಾರನ್ನೊ ಕರೆದುಕೊಂಡು ಬಂದೇ ಬಿಟ್ಟಳು. ಭಾಗ್ಯಮ್ಮ ಅವಳನ್ನು ನೋಡಿ

"ಬಂದರು ಕಣವ್ವಾ" ಎಂದಳು.

ಅಪರಂಜಿ, ಅವಳ ಜತೆಗಾರ ಮನೆಯೊಳಗೆ ಬರಲು ಮುತ್ತಮ್ಮ

"ನ್ಯಾಕ್ಕೇ ಓಗ್ಬಿಡಪ್ಪ – ಬಾಕಿಲಲ್ಲಿ ನಿಂತ್ಕೋ ಬೇಡ."

ಎಂದಳು. ಪಿಳ್ಳಣ್ಣ ಮಹಡಿಯನ್ನು ಹತ್ತಿ ಹೋಗಲು, ಮುತ್ತಮ್ಮ ಅಪರಂಜಿಯನ್ನು ಒಳಗೆ ಕರೆದುಕೊಂಡು ಬಂದಳು. ಅಪರಂಜಿಯನ್ನು ನೋಡಿದ ಕೂಡಲೇ ಮುತ್ತಮ್ಮನ ತಲೆಯಲ್ಲಿ ನೂರಾರು ವಿಚಾರಗಳು ಹೊರಟವು.

"ಈಯಪ್ಪ ಯಾರವ್ವ ?"

"ಭಾಗ್ಯಮ್ಮ ಹೇಳಿಲ್ವಾ. ರೇಸನ್ ಅಂಗಡಿ ಮಾಡಿಕೊಂಡವ್ರೆ."

"ಏನು ಗೊತ್ಮಾಡಿಕೊಂಡಿದ್ದೀ ?"

"ಏನೂ ಕೇಳಿಲ್ಲಮ್ಮಾ. ನನಗೆ ರೇಸನ್ ಸಾಮಾನು ಕೊಡ್ತಾ ಅವ್ರೆ."

"ಉಚ್ಚು ಮೂಳಿ – ಇದ್ರಲ್ಲೆಲ್ಲಾ ಒಟ್ಟೆ ತುಂಬತೈತಾ ?"

"ಏನು ಮಾಡೋದವ್ವಾ. ದೇವರು ಕೊಟ್ಟಿದ್ದರಲ್ಲಿ ತ್ರಿಪ್ತಿಪಟ್ಕೋಬೇಕು."

"ಗೌರಮ್ಮನಂಗಿದ್ದೀ – ಈ ಜುಜಿಬೀಗೆ ನೀನು ಕಸಬು ಮಾಡ್ಬೇಕಾ?"

"ಇನ್ನೇನು ಮಾಡ್ಲಿ ಏಳವ್ವಾ."

"ನೀನು ನಾಳೀಕೆ ಬಾ. ಊಟ ಮಾಡ್ಕೊಂಡು ಹನ್ನೊಂದು ಗಂಟೇಗೇ ಬಂದು ಬಿಡು ನಾನೆಲ್ಲಾ ಏಳ್ತೀನಿ – ಈಯಪ್ಪನ್ನ ಕಟ್ಕೊಂಡು ಬರ್ಬೇಡ."

"ಅಂಗೇ ಆಗಲಿ."

"ವ್ಯಾಕ್ಕೇ ನೀನೂ ಓಗು."

ಎಂದು ಅವಳನ್ನು ಮಹಡಿಯ ಮೇಲಕ್ಕೆ ಕಳಿಸಿ ಕೊಟ್ಟಳು.

ಪಿಳ್ಳಣ್ಣ, ಅಪರಂಜಿ ನಾಲ್ಕುಗಂಟೆಯ ಸುಮಾರಿಗೆ ಕೆಳಗಿಳಿದು ಬಂದರು. ಪಿಳ್ಳಣ್ಣ ಸಾವಕಾಶವಾಗಿ ಮುತ್ತಮ್ಮನ ಪರಿಚಯ ಮಾಡಿಕೊಂಡು

"ಯಾವಾಗ ಬೇಕಾದ್ರೂ ಬಂದು ಹೋಗಬಹುದೇನಮ್ಮ" ಎಂದು ಕೇಳಿದ.

"ಅದೇನು ಬಾಪ್ಪ. ಸಾಯಂತ್ರ ಆದಮ್ಯಾಕೆ ಮಾತ್ರ ಬರ್ಬೇಡ. ಪೋಲೀಸಿನೋರು ನಿಗಾ ಮಡಗವ್ರಂತೆ!"

"ಇಲ್ಲಿಗೆ ಯಾವಾಗಲಾದರೂ ಪೋಲೀಸಿನವರು ಬಂದಿದ್ದರೇ?"

"ನನ್ನ ಮನೀಗೆ ಬರಾಕೆ ಯಾವ ನನ್ನ ಅಳೀಮಗನಿಗೆ ಧೈರ್ಯ. ಉಷಾರಾಗಿರೋದು ಒಳ್ಳೇದೂಂತ ಏಳಿದೆ."

"ಅದು ಸರಿ."

"ನೀನೂ ಅಪರಂಜಿ ಜತೇಲಿ ಬಂದು ಜತೇಲೆ ಓಗಿಬಿಡ್ರಪ್ಪಾ. ಯಾರಿಗೂ ಗುಮಾನಿ ಬರಾಕಿಲ್ಲ."

"ಹಾಗೇ ಆಗಲಿ."

"ನಮ್ಗೇನಾದ್ರು ರೇಸನ್ ತಂದ್ಕೊಡಪ್ಪಾ."

"ಏನು ಬೇಕು ಹೇಳು."

"ಒಸಿ ಅಕ್ಕಿ ಸಿಕ್ಕಾಕಿಲ್ವಾ. ಗೋದಿ ಮುಕ ನೋಡಿ ಎಷ್ಟೋ ಕಾಲ ಆಗೋಯ್ತು."

"ನಾಳೆ ಅಂಗಡಿ ಬಳಿಗೆ ಭಾಗ್ಯಮ್ಮನ್ನ ಕಳುಹಿಸು. ಸಾಧ್ಯವಾದಷ್ಟು ಅಕ್ಕಿ, ಗೋದಿ ಕಳಿಸುತ್ತೇನೆ. ನಿನ್ನಿಂದ ನನಗೊಂದು ಕೆಲಸವಾಗಬೇಕಲ್ಲಮ್ಮ."

"ಏಳಪ್ಪ."

" ನನ್ನ ಸ್ನೇಹಿತರೊಬ್ಬರನ್ನು ಕರ್ಕೊಂಡು ಬರಬಹುದೋ ? "

" ಯಾರು ಆಯಪ್ಪ ? "

" ಫುಡ್ ಇನ್‌ಸ್ಪೆಕ್ಟರು. ಅವರ ಸಹಾಯವಿಲ್ಲದಿದ್ದರೆ ನಮ್ಮ ಬೇಳೆ ಕಾಳು ಬೇಯುವ ಹಾಗೇ ಇಲ್ಲ."

" ಯಾವತ್ತು ಕರ್ಕೊಂಬರ್‍ತೀ ? "

" ನೀನು ಎಂದು ಹೇಳಿದರೆ ಅವತ್ತು. ನಾಳೆ . . . "

" ನಾಳೆ ಬ್ಯಾಡ. ನಾನು ಮನೇಗಿರಾಕಿಲ್ಲ. ನಾಳಿದ್ದು ಕರ್ಕೊಂಬಾ. ಇಷ್ಟು ಹೊತ್ತಿಗೆ. ಉಡುಗೀರ್‍ನ್ನ ನೀವೇ ಕರ್ಕೊಂಬತ್ತೀರಾ ? "

" ಇಲ್ಲ – ಇಬ್ಬರನ್ನು ನೀನೇ ಕರೆಸಬೇಕು."

" ಅಪರಂಜಿ . . . "

" ಅವಳಿರಲಿ – ಬೇರೆಯವರನ್ನು ಕರೆಸು . . . ಇನಸ್ಪೆಕ್ಟರಿಗೆ ಅವಳ್ನ ಗುರುತು ಮಾಡ್ಸೋಕೆ ನಂಗೆ ಇಷ್ಟವಿಲ್ಲ."

ಎಂದು ಕಿಸೆಯಿಂದ ಐದು ರೂಪಾಯಿ ತೆಗೆದು ಮುತ್ತಮ್ಮ ಕೈಯಲ್ಲಿಟ್ಟ.

" ಇದೇನಪ್ಪಾ ಇಂಗೆ ಮಾಡ್ತೀ - ಕೊಡು ಇನ್ನೊಂದು ಅತ್ತು."

" ಈಗಿಲ್ಲ. ನಾಡಿದ್ದು ಬಂದಾಗ ಕೊಡುತ್ತೀನಮ್ಮ"

" ಇನ್ನು ಒಲ್ಟು ಬಿಡಪ್ಪಾ. ಸಾಯಂತ್ರ ಬಂದ್ರೇ ನಂಗೆ ದಿಗಲು"

ಎಂದು ಹೇಳಿದಳು. ಪಿಳ್ಳಣ್ಣ ಅಪರಂಜಿಯನ್ನು ಕರೆದುಕೊಂಡು ಹೋದ.

ಪಿಳ್ಳಣ್ಣ ಕಾಸು ಬಿಚ್ಚುವ ಆಸಾಮಿಯಲ್ಲ; ಹಾಗೂ ಹೀಗೂ ಅವನ ಹತ್ತಿರ ರೇಷನ್ ಸಾಮಾನು ಕಸಿಯುವುದೊಂದೇ ಮಾರ್ಗವೆಂಬುದನ್ನು ಮುತ್ತಮ್ಮ ಕಂಡು ಹಿಡಿದಿದ್ದಳು.

" ನೀನೂ ನಾಳೀಕೆ ಓಗಿ ರಾಮರಾಜಪ್ಪಂಗೆ ಹೇಳಿಬುಟ್ಟು, ರೇಸನ್ ಅಂಗಡಿ ತಾಕ್ಕೆ ಓಗಿ ಸಾಮಾನು ಇಸ್ಕೊಂಡು, ಅಪರಂಜೀನ ಕರ್ಕೊಂಡು ಬಾರಮ್ಮ" ಎಂದು ಭಾಗ್ಯಮ್ಮನಿಗೆ ಹೇಳಿದಳು.

" ನಾಳಿದ್ದು ಆಯಪ್ಪನ್ನ, ಇನೀಸ್ಪೇಟರ್ನ ಬಾ ಅಂದೆಯಲ್ಲಾ. ಯಾರಿಗೆ ಏಳ್ತೀ ಮುತ್ತಮ್ಮ."

" ಬಾಯಿ, ಬಾಲು ಅವ್ರಲ್ಲಾ. ಅವ್ರಿಗೂ ಏಳಿ ಬಂದ್ಬುಡು."

ಭಾಗ್ಯಮ್ಮ ಗೊಣಗಿಕೊಂಡೇ ಒಪ್ಪಿಕೊಂಡಳು.

ಬೆಳಗಾಗುವುದನ್ನೇ ಕಾದಿದ್ದ ಮುತ್ತಮ್ಮ ಒಂಭತ್ತು ಗಂಟೆಗೇ ಭಾಗ್ಯಮ್ಮನ ಕೈಗೆ ಚೀಲಗಳನ್ನು ಕೊಟ್ಟು ಪೇಟೆಯ ಕಡೆ ಅಟ್ಟಿದಳು.

ಭಾಗ್ಯಮ್ಮ ಪೇಟೆಯ ಕಡೆ ಹೋದುದರಿಂದ ಅಡಿಗೆಯ ಕೆಲಸ ಮುತ್ತಮ್ಮನಿಗೇ ಗಂಟುಬಿತ್ತು. ಪುಟ್ಟ ಸುತ್ತುಗೆಲಸ ಮಾಡಿಕೊಡುತ್ತಿದ್ದಳು.

ಸುಮಾರು ಹತ್ತೂವರೆ ಗಂಟೆಯಾಗಿರಬಹುದು. ಅಂಚೆಯಾಳು ಬಂದು ಕಾಗದವನ್ನು ಒಗೆದು ಹೋದ. ಮುತ್ತಮ್ಮ ಕಾಗದವನ್ನೆತ್ತಿಕೊಂಡು ಪುಟ್ಟ ಕೈಯಲ್ಲಿ ಕೊಟ್ಟು ಓದಲು ಹೇಳಿದಳು.

ಶಿವಮೊಗ್ಗ.

" ಶ್ರೀಮತಿ ಮುತ್ತಮ್ಮನವರ ಸಾ॥ಕ್ಕೆ. ಸರಸ್ವತಮ್ಮ ಮಾಡುವ ಅನೇಕ ನಮಸ್ಕಾರಗಳು. ಉಭಯ ಕುಶಲೋಪರಿ - ಸಾಂಪ್ರತ.

" ನಿಮ್ಮ ಕಾಗದ ಕೈಸೇರಿ ಮನಸ್ಸಿಗೆ ತುಂಬ ಸಂತೋಷವಾಯಿತು. ನಿಮ್ಮ ಮನೆಯನ್ನು ನಾನು ಯಾವಾಗಲೂ ನನ್ನ ಮನೆಯೆಂದೇ ತಿಳಿದು ಕೊಂಡಿದ್ದೇನೆ.

" ಕಂಪೆನಿಯ ಸ್ಥಿತಿಗತಿ ನನಗೆ ತುಂಬ ಬೇಸರವನ್ನುಂಟುಮಾಡಿದೆ. ನನ್ನ ಮೇಲೆ ತಪ್ಪುಬರಬಾರದೆಂದು ಇಷ್ಟು ದಿವಸ ಇಲ್ಲಿ ಕಚ್ಚಿಕೊಂಡಿದ್ದೇನೆ. ಯಜ ಮಾನರ ಸ್ವಭಾವ ದಿವಸ ದಿವಸಕ್ಕೆ ಬದಲಾಯಿಸುತ್ತಿದೆ. ಅವರು ಕಂಡವರ ಮಾತು ಕೇಳುವುದು ಹೆಚ್ಚು.

" ನಾನು ಇಲ್ಲಿ ಹೆಚ್ಚು ದಿವಸ ನಿಲ್ಲಲಾರೆ. ಬೆಂಗಳೂರಿಗೆ ಹೊರಟು ಬರು ತ್ತೇನೆ. ಮುಂದಿನ ತಿಂಗಳ ಸಂಬಳ ಬಟವಾಡೆಯಾದ ಕೂಡಲೆ ನಾನು ಬಂದರೂ ಬರಬಹುದು. ಬರುವುದಕ್ಕೆ ಮುಂಚೆ ನಿಮಗೆ ಕಾಗದ ಬರೆಯುತ್ತೇನೆ.

" ಮ॥ ರಾ॥ ರಾಮರಾಜಪ್ಪನವರಿಗೆ ಒಂದು ಮಾತು ಹೇಳಿ ಅವರ ಅಭಿ ಪ್ರಾಯ ತಿಳಿಸಬೇಕಾಗಿ ಪ್ರಾರ್ಥನೆ.

" ಪುಟ್ಟೇಗೆ ನನ್ನ ವಿಶ್ವಾಸ ತಿಳಿಸಿ. ಶ್ರೀಮತಿ ಭಾಗ್ಯಮ್ಮನವರಿಗೆ ನನ್ನ ಜ್ಞಾಪಕ ಹೇಳಿ. ಇಂತೀ ನಮಸ್ಕಾರಗಳು.

ಮುತ್ತಮ್ಮ ಸಿಡಿಗುಟ್ಟುತ್ತ

“ರಾಮರಾಜಪ್ಪಾಂತ ಇವಳು ಬಡ್ಕೊಂತಾಳೆ. ಆಯಪ್ಪ ಇವಳ ಎಸರು ಕೇಳಿದರೆ ಉರಿದು ಬೀಳ್ತಾನೆ.”

ಎಂದು ವಟಗುಟ್ಟುತ್ತಿರುವಲ್ಲಿ ಪುಟ್ಟ

“ಅಮ್ಮಾ – ಅಣ್ಣಯ್ಯ ಬಂದ” ಎಂದಳು.

ರಾಮರಾಜಪ್ಪ ಒಳಕ್ಕೆ ಬಂದು ಕುಳಿತುಕೊಂಡು

“ಅರ್ಜಂಟಾಗಿ ಬರಬೇಕೂಂತ ಹೇಳಿಕಳಿಸಿದೆಯಂತೆ. ಏನಮ್ಮ ಸಮಾಚಾರ” ಎಂದ.

ಮುತ್ತಮ್ಮ ಅವನ ಕೈಗೆ ಸರಸ್ವತಿಯ ಕಾಗದವನ್ನಿತ್ತು.

“ಇದಕ್ಕೇನು ಬರೀಲಿ – ನೀನೇ ಏಳಪ್ಪ” ಎಂದಳು.

ರಾಮರಾಜಪ್ಪ ಸಾವಕಾಶವಾಗಿ ಕಾಗದ ಓದಿಕೊಂಡು

“ಸರಸ್ವತಿ ಸಹವಾಸ ಸಾಕು ಎಂತಾ ನಾನು ಅವತ್ತೇ ಹೇಳಿದ್ದೆನಲ್ಲ, ಈ ವಿಷಯ ಹೇಳುವುದಕ್ಕೆ ನನ್ನನ್ನು ಕರೆಸಿದೆಯಾ ?”

“ಬಡವಳು – ಅವಳನ್ನ ಒದ್ಗೋ ಬ್ಯಾಡಪ್ಪಾ.”

“ತಿಳಿದೂ ತಿಳಿದೂ ಈ ವಿಷಯ ನೀನು ಮತ್ತೆಮತ್ತೆ ಪ್ರಸ್ತಾಪಿಸುವುದು ಕಂಡು ನನಗೆ ಆಶ್ಚರ್ಯವಾಗುತ್ತೆ ಮುತ್ತಮ್ಮ.”

“ಓಗ್ಲಿ ಬಿಡಪ್ಪ – ನಿಂಗ್ಯಾಕ್ಕೆ ಬ್ಯಾಸರ.”

“ಅಷ್ಟೇತಾನೆ. ನಾನಿನ್ನು ಹೊರಡಬಹುದಷ್ಟೆ.”

“ಇದೇನಪ್ಪ. ಕುದುರೇ ನ್ಯಾಕೆ ಬಂದ್ಹಂಗೆ ಆಡ್ತೀ ?”

“ಪಾಪನ ಮನೆಗೆ ಊಟಕ್ಕೆ ಬರ್ತೀನೀಂತ ಹೇಳಿದ್ದೀನಿ. ಕಾಯ್ತಾ ಇರ್ತಾಳೆ.”

“ನಿಂಗೋಸ್ಕರ ಒಸಬರು ಯಾರಿಗೋ ಏಳಿಕಳ್ಸಿನ್ನಿ. ಬ್ಯಾಡವಾದ್ರೆ ಬುಡು.”

“ಯಾರು ಮುತ್ತಮ್ಮ ?”

“ಓಗಬೇಕೂಂತ ಒದ್ದಾಡ್ತಿದ್ದೀ.”

“ಯಾರು ಹೇಳು ಮುತ್ತಮ್ಮ.”

“ಅಪರಂಜಿ.”

" ಅಪರಂಜಿ. ಹೆಸರು ಒಳ್ಳೆಯ ಚೆನ್ನಾಗಿದೆ. ಈಗ ಬರ್ತಾಳೆಯೋ?"

" ಕರ್ಕೊಂಬರಾಕೆ ಭಾಗ್ಯಮ್ಮ ಓಗವ್ಳೆ."

" ಚೆನ್ನಾಗಿದ್ದಾಳೆಯೇ ?"

" ಕೈತೊಳ್ಕೊಂಡು ಮುಟ್ಬೇಕಪ್ಪಾ. ನವರಾತ್ರಿ ಗೊಂಬೆ ಇದ್ದಂಗವಳೆ."

" ಕಸುಬಿನದೋ ?"

" ಅಲ್ಲಪ್ಪಾಂದ್ರೆ. ಸಂಸಾರಿ. ಗಂಡ ವಾದವರ್ಸ ಗ್ವಾತಾ ಒಡದ್ನಂತೆ. ನಿನ್ನೆ ರೇಸನ್ ಅಂಗಡಿಯೋನು ಕರ್ಕೊಂಡು ಬಂದಿದ್ದ. ನಿಂಗೋಸ್ಕರ ಇವತ್ತು ಬಾ ಅಂತಾ ಏಳಿವ್ನಿ."

" ಎಷ್ಟಾಗಿ ಹೋಯ್ತಮ್ಮ ಇದು. ಸಂಸಾರಿಗಳೆಲ್ಲಾ ಕಸುಬು ಮಾಡೋಕೆ ಹೊರಟು ಬಿಟ್ಟಿದ್ದಾರೆ."

" ಒಟ್ಟೆಗಿಲ್ದಿದ್ರೆ ಏನ್ಮಾಡ್ತಾರಪ್ಪಾ."

" ಅಪರಂಜಿ ಈಗೇನು ಮಾಡುತ್ತಿದ್ದಾಳೆ."

" ರೇಶ್ಮೆ ಉರಿ ಮಾಡ್ತಾಳಂತೆ. ಅದರಲ್ಲೇನಾಗತ್ತಪ್ಪ."

" ನಿಜಾನ್ನು. ಒಂದು ರೂಪಾಯಿ ಸಾಮಾನಿಗೆ ಈಗ ನಾಲ್ಕು ರೂಪಾಯಿಯಾಗಿದೆ. ಎಷ್ಟು ಬಂದರೂ ಜನಕ್ಕೆ ತಿನ್ನುವುದಕ್ಕೇ ಸಾಲುವುದಿಲ್ಲ."

" ಈಗ ಗಾಂಧಿ ಸರ್ಕಾರ ಬಂದೈತಲ್ಲ. ನಮ್ಮಂಥಾವ್ರಿಗೆಲ್ಲಾ ಏನಾರ ಮಾಡಾಕಿಲ್ವೇನಪ್ಪಾ."

" ಏನು ಮಾಡಬಹುದು ನೀನೇ ಹೇಳು."

" ನನ್ನ ಮಾತು ಓಗ್ಲಿ ಬುಡು. ಈಗ ಬಾಲು, ಬಾಯಿ, ಪಾಪ, ಅಪರಂಜಿ ಇವರೆಲ್ಲಾ ಒಟ್ಟೇಗೆ ಸಾಲ್ದೂಂತ ತಾನೆ ಕಸುಬಿಗೆ ಬಂದದ್ದು."

" ಹೌದು."

" ಇಂಥಾವ್ರಿಗೆಲ್ಲಾ ಸರ್ಕಾರ ಅನ್ನಾ ಕೊಡಬ್ಯಾಡ್ವಾ ?"

" ಸರ್ಕಾರವೇನು ಧರ್ಮ ಛತ್ರ ಕೆಟ್ಟು ಹೋಯಿತೇ ಮುತ್ತಮ್ಮ."

" ಅಲ್ಲಪ್ಪ – ಓಟುಕೊಡಿ ಅಂತಾ ಕೇಳಾಕ ಬಂದಾಗ – ಈ ದೇಸದಾಗೆ ಎಲ್ಲಾರ್ಗೂ ಅನ್ನಾ ಕೊಡ್ತೀವಿ, ಬಟ್ಟೆ ಕೊಡ್ತೀವಿ, ಮನೆ ಕೊಡ್ತೀವಿ ಅಂತ ಮಿಸೀನ್ನೊಳಗೆ ಬಾಯಿಟ್ಟು ಉಯ್ಕೊಂಡ್ರು."

ರಾಮರಾಜಪ್ಪನಿಗೆ ಹಿಡಿಸಲಾರದಷ್ಟು ನಗೆ ಬಂತು.

"ಲೌಡ್ ಸ್ಪೀಕರ್ ಅನ್ನು ಮುತ್ತಮ್ಮ."

"ಏನು ಸುಡುಗಾಡೋ - ನಂಗೆ ಇಂಗ್ಲಿಸ್ ಬರ‍್ತಿದ್ರೆ ಇಂಗ್ಯಾಕೆ ಇರ‍್ತಿದ್ದೆ."

"ಚುನಾವಣೆ ಕಾಲದಲ್ಲಿ ಎಲ್ಲಾರೂ ಹಾಗೇ ಹೇಳೋದು ಮುತ್ತಮ್ಮ."

"ಗಾಂಧೀ ಜನಾನು ಇಂಗೆ ಮೋಸ ಮಾಡೋದು ನ್ಯಾಯಾನಾ."

"ನ್ಯಾಯವಲ್ಲ. ಆದರೆ ಪ್ರಪಂಚ ಇರುವುದು ಹೀಗೆ . . . ಗಾಂಧಿಯವರು ಹೇಳಿದ್ದೆಲ್ಲಾ ಅವರ ಜತೇಲೆ ಹೋಯ್ತು ಅನ್ನೋದು ನಿನಗೆ ಗೊತ್ತಿಲ್ಲವೇನು ? ಒಂದು ವೇಳೆ ಸರ್ಕಾರ ನಿನ್ನ ಕೈಯಲ್ಲಿದ್ದರೆ ಏನು ಮಾಡುತ್ತಿದ್ದೆ ಮುತ್ತಮ್ಮ."

"ಬುಡಪ್ಪಾ - ಏನ್ಮಾತೂಂತ ಆಡ್ತೀ. ನನ್ನ ಕೈಗೆ ಸರ್ಕಾರ ಯಾವಾನು ಕೊಡಾಕೆ ಬಂದಾನು !"

"ಮಾತಿಗೆ ಹೇಳಿದೆ. ಒಂದು ವೇಳೆ ನೀನು ಮುಖ್ಯ ಮಂತ್ರಿಯಾಗಿದ್ದರೆ . . ."

"ಎಂಗ್ಸರಿಗೆಲ್ಲಾ ಓದು ಬರಾ ಕಲಿಸ್ತಿದ್ದೆ - ಕಾಯಿಲೆ ಬಂದೋರಿಗೆ ಬಿಟ್ಟಿ ಔಸ್ದ ಕೊಡಿಸ್ತಿದ್ದೆ - ಕಸುಬಿನಲ್ಲಿರೋ ಮದುವೆ ವಯಸ್ನೋರಿಗೆಲ್ಲಾ ಮದ್ವೆ ಮಾಡಸ್ತಿದ್ದೆ - ವಯಸ್ಸಾದೋರ‍್ಗೆ ಕೆಲ್ಸಾ ಅಚ್ಚಿಕೊಡ್ತಿದ್ದೆ."

"ಸರಸ್ವತಮ್ಮನಂಥವರನ್ನು . . ."

"ಉಚ್ಚರ ಆಸ್ಪತ್ರೇಗೆ ಕಳಿಸ್ತಿದ್ದೆ."

ಮುತ್ತಮ್ಮನ ಮಾತಿಗೆ ರಾಮರಾಜಪ್ಪ ಗಪಗಹಿಸಿ ನಕ್ಕ.

ಭಾಗ್ಯಮ್ಮ ಕೈಯ್ಯಲ್ಲಿ ಎರಡು ಚೀಲ ಹಿಡಿದುಕೊಂಡು ಒಬ್ಬಳೇ ಬಂದಳು. ಅವಳನ್ನು ನೋಡಿ ಮುತ್ತಮ್ಮ

"ಎಷ್ಟು ಚಿಕ್ಕಿತು" ಎಂದು ಕೇಳಿದಳು.

"ಐದು ಸೇರು ಅಕ್ಕಿ, ಎರಡು ಸೇರು ಗೋದಿ."

"ಅವಳೇನಾದಳು ?"

"ಬರಲಿಲ್ವಾ !"

"ಅವಳುಟ್ಟೇ ಕಾಣೆ."

"ಆಗಲೇ ಓಗ್ತೀನಿಂದ್ಳು."

" ಜತೇಲಿ ಕರ್ಕೊಂಬರ್ದ್ರಿ ನೀನು ಅಂಗೇಯಾಕ್ಬಂದೆ ಬಾಗ್ಯಮ್ಮ."

"ನೀರುಯ್ಯೋ ಬೇಕಾಗೈತೆ–ನೀನು ಓಗು ಕಂಡಿತಾ ಬತ್ತೀನೀಂದಳಮ್ಮ. ನಂಗೂ ಬ್ಯಾರೆ ಕೆಲ್ಸಾ ಇತ್ತು."

" ನಾನು ಹೊರಡುತ್ತೇನಮ್ಮ. ಅವಳು ಬರೋ ಹಾಗೆ ಕಾಣಲಿಲ್ಲ."

ಎಂದು ರಾಮುರಾಜಪ್ಪ ಎದ್ದು ನಿಂತ.

" ಕುಂತ್ಕೊಳ್ಳಪ್ಪಾ, ಬತ್ತಾಳೆ. ಕಂಡಿತ ಬರ್ತೀನೀಂತ ಏಳವ್ಳೆ "

ಎಂದು ಭಾಗ್ಯಮ್ಮ ಬಲವಂತ ಮಾಡಿದಳು.

ರಾಮುರಾಜಪ್ಪ ಕುಳಿತು ಸೀಗರೇಟ್ ಹಚ್ಚಿಕೊಂಡು

" ನೀವು ಊಟಮಾಡಿ " ಎಂದ.

" ನೀನು."

" ಬೆಳಿಗ್ಗೆ ಬಲವಾಗಿ ನಾಷ್ಟಾ ಮಾಡಿ ಬಂದಿದ್ದೇನೆ."

" ನಮ್ಗೆ ಅನಸರವಿಲ್ಲಕಣಪ್ಪಾ."

ಎಂದು ಮುತ್ತಮ್ಮ ಬಾಗಿಲನ್ನೇ ನೋಡುತ್ತ ರಾಮುರಾಜಪ್ಪನ ಜತೆ ಮಾತನಾಡುತ್ತಾ ಕುಳಿತಳು.

ಎಧುರಿಗೆ ಅಪರಂಜಿ ಬರತ್ತಿದ್ದುದನ್ನು ಕಂಡು ಮುತ್ತಮ್ಮನ ಮುಖ ಗೆಲುವಾಯಿತು. ' ಬಂದಳಪ್ಪಾ ' ಎಂದಳು.

ಅಪರಂಜಿ ಬಂದು ಎದುರಿಗೆ ನಿಂತಳು. ಯಾರೋ ಕುಳಿತಿರುವುದನ್ನು ಕಂಡು ಕತ್ತು ತಗ್ಗಿಸಿದಳು. ಮುತ್ತಮ್ಮ ಅವಳನ್ನು ಹತ್ತಿರ ಕರೆದು ಪಕ್ಕದಲ್ಲಿ ಕೂಡಿಸಿಕೊಂಡಳು. ಅಪರಂಜಿ ರೂಪಕ್ಕೆ ರಾಮುರಾಜಪ್ಪ ಅರೆಕ್ಷಣ ಚಕಿತನಾದ. ಮುತ್ತಮ್ಮ ನಸುನಗುತ್ತಾ

" ಇಗೋಳಪ್ಪಾ – ನಿನ್ನ ಅಪರಂಜಿ."

" ನಿನ್ನ ಹೆಸರು ಒಳ್ಳೆಯ ಚೆನ್ನಾಗಿದೆ ಅಪರಂಜಿ."

ಎಂದು ರಾಮುರಾಜಪ್ಪನಂದ.

" ಅದು ನನ್ನ ನಿಜವಾದ ಹೆಸರಲ್ರೀ."

" ನಿನ್ನ ನಿಜವಾದ ಹೆಸರೇನು ?"

" ಚೌಡಮ್ಮ. ಆ ಹೆಸರು ಚಂದಾಕಿಲ್ಲಾಂತ ನಮ್ಮಪ್ಪ ಅಪರಂಜೀಂತ ಹೆಸರಿಟ್ಟರು. "

" ನಿಮ್ಮಪ್ಪ ತುಂಬ ವಿವೇಕಶಾಲಿ ಅಪರಂಜಿ."

"ಅಪರಂಜಿ ಸಂತೋಷಗೊಂಡು ನಕ್ಕಳು. ಮುತ್ತಿನ ಸಾಲಿನಂತೆ ಅವಳ ಹಲ್ಲುಗಳು ಕಂಗೊಳಿಸಿದವು."

ಮುತ್ತಮ್ಮ ಕಣ್ಸನ್ನೆಮಾಡಲು ರಾಮುರಾಜಪ್ಪ ಮಹಡಿಯಮೇಲಕ್ಕೆ ಹೋದ.

" ಯಾಕಮ್ಮ ಇಷ್ಟೊತ್ತು, ಆಯಪ್ಪ ಬಂದು ಎಲ್ಡು ಗಂಟೆಯಾಯ್ತು ?"

" ನೀರಾಕ್ಕೊಂಡ್ಬರಾಣಾಂತ ಕುಂತೆ. ಒಲೇನೆ ಉರಿ ಒಲ್ದವ್ವ – ಅಸಿ ಸೌದೆ. "

" ಊಟ ಆಯ್ತಾ ? "

" ಊಟ ಮಾಡ್ಕೊಂಡೇ ಬಂದೆ. ಈಯಪ್ಪ ಯಾರಮ್ಮ."

" ರಾಮುರಾಜಪ್ಪ. ಬಲೊಳ್ಳೆ ಮನಸ. ಕಷ್ಟಾಂದ್ರೆ ಪ್ರಾಣ ಕೊಡ್ತಾನೆ. ಚೆಂದಾಕಿದ್ದು ಬಾ. ಓಗು ಹೊತ್ತಾಯ್ತದೆ."

ಅಪರಂಜಿ ಮಹಡಿಹತ್ತಿ ಹೋದಳು.

ರಾಮುರಾಜಪ್ಪ ಮಹಡಿ ಇಳಿದು ಬರುವ ವೇಳೆಗೆ ಸಂಜೆ ಐದು ಗಂಟೆ ಯಾಗಿತ್ತು. ಮುತ್ತಮ್ಮ ಪರಿತಾಪಗೊಂಡು

" ನಿಂಗೆ ಊಟಕೂಡ ಇಲ್ವಲ್ವಪ್ಪಾ, ಕಾಫಿ ಮಾಡಿ ಕೊಡಿಸ್ಲಾ ?"

" ಈಗೇಕೆ ಕಾಫಿ ಮನೇಗೇ ಹೋಗುತ್ತೇನಲ್ಲಾ."

ಅಪರಂಜಿ ಸ್ನಾನಗೃಹಕ್ಕೆ ಹೋದ ಮೇಲೆ ಮುತ್ತಮ್ಮ

" ನಾಳೆ ಬತ್ತೀಯೇನಪ್ಪ ? "

" ಯಾಕೆ ? "

" ಅಪರಂಜಿಯನ್ನು ಬಾ ಅಂತೀನಿ."

" ಅವಳು ಬೇಡಮ್ಮ."

" ಇದೇನಪ್ಪಾ ಇಂಗೆ ಅಂತೀ - ಎಷ್ಟು ಚೆಂದಾಕವ್ಳೆ."

" ಚೆನ್ನಾಗಿಯೇನೋ ಇದ್ದಾಳೆ. ಆದರೆ ನನಗೆ ಬೇಡ."

" ಗಲಾಟೆ ಮಾಡಿದ್ಲಾ ? "

" ಛೆ ! ಪಾಪ ! "

" ಇನ್ನೇನಾಯ್ತು."

" ಇನ್ನೊಂದು ಸಲ ಬಂದಾಗ ಹೇಳ್ತೀನಿ ಸುಮ್ಮನಿರು."

ಮುತ್ತಮ್ಮನಿಗೆ ಪರಮಾಶ್ಚರ್ಯವಾಯಿತು.

ಅಪರಂಜಿ ಸ್ನಾನಗೃಹದಿಂದ ಬರಲು ರಾಮುರಾಜಪ್ಪ ಹೊರಟು ಹೋದ.

ರಾಮುರಾಜಪ್ಪನಿಗೆ ಅಸಮಾಧಾನವಾದುದರ ವಿಷಯ ಅಪರಂಜಿಯನ್ನು ಕೇಳಬೇಕೆಂದು ಮುತ್ತಮ್ಮನ ಮನಸ್ಸು ತವಕ ಪಟ್ಟಿತು. ಮಾತು ಅಲೌಕಿಕವಾಗಿ ಅಪರಂಜಿ ತನ್ನ ಮನೆಗೆ ಬರುವುದನ್ನೇ ನಿಲ್ಲಿಸಬಹುದೆಂದು ಮುತ್ತಮ್ಮ ಬಾಯಿ ಬಿಗಿ ಹಿಡಿದಳು.

ಅಪರಂಜಿ ಸೊಂಟದಿಂದ ಕೆಲವು ನೋಟುಗಳನ್ನು ತೆಗೆದು ಮುತ್ತಮ್ಮನ ಕೈಯಲ್ಲಿಟ್ಟು

" ಅಪ್ಪಾವ್ರು ಇಪ್ಪತ್ತು ರೂಪಾಯಿ ಕೊಟ್ಟವ್ರೆ. ನಿಂಗೇನು ಬೇಕೋ ತೊಗೊಂಡು ಉಳಿದದ್ದು ನಂಗೆ ಕೊಡವ್ವ " ಎಂದಳು.

" ನಂಗೇನು ಬೇಡ ನೀನೇ ತಗೋ ಅಪರಂಜಿ."

" ನೀನು ಅಂಗೆ ಏಳಿದರೆ ನಾನು ಅಣಾಮುಟ್ಟಾಕೇ ಇಲ್ಲ - ಏನಾರಾ ನೀನು ತಗೊಳ್ಳೇ ಬೇಕು"

ಮುತ್ತಮ್ಮ ಐದು ರೂಪಾಯಿ ತೆಗೆದುಕೊಂಡು ಉಳಿದುದನ್ನು ಅಪರಂಜಿಯ ಕೈಗೆ ಕೊಟ್ಟಳು.

" ಯಾವಾಗ ಬತ್ತೀ ? "

" ನಾಳೀಕೆ ಬರ್‍ತ್ಲಾ."

" ನಾಳೀಕೆ ಬ್ಯಾಡ. ನಾಳಿದ್ದು ಬಾ."

" ಯಾರು ಬತ್ತಾರೆ – ಈಯಪ್ಪ ಬತ್ತಾರಾ ? "

" ಗೊತ್ತಿಲ್ಲ ಯಾರಾದರು ಬರಬೋದು."

ಅಪರಂಜಿ ಮುತ್ತಮ್ಮ, ಭಾಗ್ಯಮ್ಮ ಇವರ ಅಪ್ಪಣೆ ಪಡೆದು ಮನೆಗೆ ಹೊರಟಳು.

ರಾಮುರಾಜಪ್ಪ ಅಸಮಾಧಾನ ಪಟ್ಟುಕೊಂಡು ಹೋದುದನ್ನು ಕಂಡು ಮುತ್ತಮ್ಮನಿಗೆ ವಿಷಾದವಾಗಿತ್ತು. ಆದರೆ ಅಪರಂಜಿಯ ಸತ್ಯಾಚರಣೆ ಕಂಡು ಅವಳಿಗೆ ಆನಂದವಾಗಿತ್ತು. ಭಾಗ್ಯಮ್ಮನನ್ನು ಕೂಗಿ.

" ಅಪರಂಜಿ ಒಳ್ಳೇ ನೀಯತ್ತುವಂತೆ ಕಣಮ್ಮಾ"

ಎಂದು ರಾಮರಾಜಪ್ಪ ವ್ಯಕ್ತಪಡಿಸಿದ್ದ ಅಭಿಪ್ರಾಯವನ್ನು ಭಾಗ್ಯಮ್ಮ ನಿಗೆ ಸೂಕ್ಷ್ಮವಾಗಿ ತಿಳಿಸಿದಳು. ಭಾಗ್ಯಮ್ಮನು ಬೆಕ್ಕಸ ಬೆರಗಾದಳು.

೧೮

ರಾಮಾಶಾಸ್ತ್ರಿ ಕಡು ಬಡತನದಲ್ಲಿ ಜೀವನ ಆರಂಭಿಸಿದ್ದ. ಮೆಟ್ರಿಕ್ ವರೆಗೆ ಓದಿದ ಮೇಲೆ ಮುಂದೆ ವಿದ್ಯಾಭ್ಯಾಸ ಸಾಗಿಸುವುದು ಅವನಿಗೆ ದುಸ್ಸಾಧ್ಯ ವಾಯಿತು. ಆಗಲೇ ಅವನು ವೃತ್ತಪತ್ರಿಕೆಗಳನ್ನು ಹಂಚುವ, ಮಾರುವ ಉದ್ಯೋಗ ಕೈಗೊಂಡುದು. ಕಾಲ ಕ್ರಮೇಣ ಎರಡು ಪತ್ರಿಕೆಗಳ ಏಜನ್ಸಿಯೂ ಸಿಕ್ಕಿತು. ಅದನ್ನೇ ಆಧಾರವಾಗಿಟ್ಟುಕೊಂಡು ತನ್ನ ಕಾರ್ಯಕ್ಷೇತ್ರ ವಿಸ್ತರಿಸಿ ಕೊಂಡು ಬಂದು ವೃತ್ತಪತ್ರಿಕೆಗಳು, ಮಾಸ ಪತ್ರಿಕೆಗಳನ್ನು ಮಾರುವ ಸಣ್ಣ ಅಂಗಡಿ ತೆಗೆದ. ಅಂಗಡಿ ವ್ಯಾಪಾರ ಸ್ವಲ್ಪ ಕುದುರಲು ಶಾಲಾ ಪುಸ್ತಕಗಳು, ವಿಹಾರ - ವಿಕಾಸ ಗ್ರಂಥಗಳನ್ನು ತರಿಸಿ ಮಾರುತ್ತ ಬಂದ.

ಸುಮಾರು ಹತ್ತು ವರ್ಷದಲ್ಲಿ ರಾಮಾಶಾಸ್ತ್ರಿಯ 'ವಿದ್ಯಾಸರಸ್ವತಿ ಪುಸ್ತ ಕಾಲಯ' ಜಿಲ್ಲೆಯಲ್ಲಿಯೇ ಹೆಸರು ಪಡೆಯಿತು. ಶಾಸ್ತ್ರಿಯ ನಡತೆ, ಶೀಲವೇ ದೊಡ್ಡ ಬಂಡವಾಳವಾಗಿತ್ತು. 'ರಾಮಾಶಾಸ್ತ್ರಿ ಲೆಕ್ಕಚಾರಸ್ಥ – ಮೋಸ ಮಾಡುವುದಿಲ್ಲ' ಎನ್ನುವ ನಂಬಿಕೆ ಪತ್ರಿಕಾ ಕರ್ತರಲ್ಲಿಯೂ ಪುಸ್ತಕ ವ್ಯಾಪಾರಿ ಗಳಲ್ಲಿಯೂ ಹಬ್ಬಿದುದು ಮಾತ್ರವಲ್ಲದೆ ಊರಿನಲ್ಲಿಯೂ ಹಬ್ಬಿತು. ಸಣ್ಣಪ್ಪ ಗೌಡ, ಸಿದ್ದವೀರಪ್ಪ ಎಷ್ಟೋ ಸಲ 'ನಿನಗೆ ಬೇಕಾದಷ್ಟು ಬಂಡವಾಳ ಕೊಡು ತ್ತೇವೆ. ಅಂಗಡಿ ಬಡಾಯಿಸು ಶಾಸ್ತ್ರಿ' ಎಂದು ಹೇಳಿದ್ದರು. ಅದಕ್ಕೆ ಶಾಸ್ತ್ರಿ ಯದು ಒಂದೇ ಉತ್ತರ 'ಹಾಸಿಗೆ ಇದ್ದಷ್ಟು ಕಾಲು ಚಾಚಿಕೊಳ್ಳಬೇಕಪ್ಪ. ನಿಮ್ಮ ಬಂಡವಾಳ ನಾನು ತೆಗೆದುಕೊಂಡು ಜೂಜಾಡುವುದು ನ್ಯಾಯವಲ್ಲ, ಹೊಟ್ಟೆ ಬಟ್ಟೆಗೆ ಭಗವಂತ ಕೊಡುತ್ತಿದ್ದಾನೆ - ಸಾಕು. ಮನುಷ್ಯನ ಆಸೆಗೆ ಮಿತಿಯೆಲ್ಲಿದೆ' ಎನ್ನುತ್ತಿದ್ದ. 'ಈಗಂತೂ ನೀನು ಒಬ್ಬಂಟಿಗ ಯಾವಾಗಲೂ ಹೀಗೇ ಇರುವುದಕ್ಕಾಗುತ್ತದೆಯೇ ಶಾಸ್ತ್ರಿ. ನಾಳೆ ಮದುವೆಯಾಗಿ ನಿನಗೂ ಸಂಸಾರ ಬೆಳೆದರೆ ಕೈಯಲ್ಲಿ ನಾಲ್ಕು ಕಾಸು ಇರಬೇಡವೇ' ಎಂದು ಗೌಡ

ಕೇಳಿದರೆ 'ಆ ಕಾಲ ಬಂದಾಗ ಯೋಚನೆ ಮಾಡಿದರಾಯಿತು' ಎಂದು ಮಾತು ಹಾರಿಸುತ್ತಿದ್ದ.

ಶಾಸ್ತ್ರಿಯ ಬೈಸಿಕಲ್ಲಿಗೆ ಊರಿನ ಹುಡುಗರು 'ಏರೋಪ್ಲೇನ್' ಎಂದು ಹೆಸರಿಟ್ಟಿದ್ದರು. ಬೆಳಿಗ್ಗೆ ಆರು ಗಂಟೆಗೆ ರೈಲ್ವೆ ಸ್ಟೇಷನ್ನಿಗೆ ಹೋಗಿ ರೈಲಿನಲ್ಲಿ ಬಂದ ಪತ್ರಿಕೆಗಳ ಕಟ್ಟುಗಳನ್ನು ತೆಗೆದುಕೊಂಡು ಏಳೂವರೆಯ ವೇಳೆಗೆ ಊರಿನಲ್ಲೆಲ್ಲಾ ಪತ್ರಿಕೆಯನ್ನು ತಾನೇ ಹಂಚಿ, ಎಂಟು ಗಂಟೆಗೆ ಅಂಗಡಿಗೆ ಬಂದು ಕೂಡುತ್ತಿದ್ದ. ಆ ವೇಳೆಯಲ್ಲಿ ಅವನ ಬೈಸಿಕಲ್ ಏರೋಪ್ಲೇನಿನ ವೇಗ ಪಡೆಯುತ್ತಿತ್ತು.

ಊರಿನಲ್ಲಿ ಯಾವ ಸಾರ್ವಜನಿಕ ಸಮಾರಂಭವಾಗಬೇಕಾದರೂ ಶಾಸ್ತ್ರಿಯ ನೆರವು ಅತ್ಯಗತ್ಯವಾಗಿತ್ತು. ಡಿಸ್ಟ್ರಿಕ್ಟ್ ಕಾನ್‌ಫರೆನ್ಸ್, ಸ್ಕೌಟ್ ರ್‍ಯಾಲಿ, ಕಾಂಗ್ರೆಸ್ ಅಧಿವೇಶನ, ಸಾಹಿತ್ಯ ಸಮ್ಮೇಳನ, ಶ್ರೀರಾಮನವಮಿ, ಬಸವಜಯಂತಿ ಮೊದಲಾದ ಉತ್ಸವಗಳ ವ್ಯವಸ್ಥಾಪಕರೆಲ್ಲರೂ ಶಾಸ್ತ್ರಿಯ ಸಹಾಯ ಕೋರುತ್ತಿದ್ದರು. ಶಾಸ್ತ್ರಿ ಯಾರಿಗೂ ಇಲ್ಲವೆನ್ನುತ್ತಿರಲಿಲ್ಲ.

ಒಂದು ದಿನ ಶಾಸ್ತ್ರಿ ಸ್ಟೇಷನ್ ಡ್ಯೂಟಿ, ಪತ್ರಿಕೆ ಹಂಚುವ ಕೆಲಸ ಮುಗಿಸಿಕೊಂಡು ಬಂದು ಕಾಗದಗಳನ್ನು ಬರೆಯುತ್ತ ಕುಳಿತಿದ್ದ. ಅವನ ಅಂಗಡಿಗೆ ಬಂದ ಮೊದಲನೆಯ ಗಿರಾಕಿಯೆಂದರೆ ಗುಂಡೂರಾಯ.

"ಬನ್ನೀ ಗುಂಡೂರಾಯರೇ" ಎಂದು ಶಾಸ್ತ್ರಿ ಒಂದು ಸ್ಟೂಲ್ ಎಳೆದು ಗುಂಡೂರಾಯರನ್ನು ಕೂಡಿಸಿದ. ಗುಂಡೂರಾಯ ಆಶ್ಚರ್ಯದಿಂದ

"ನನ್ನ ಹೆಸರು ನಿಮಗೆ ಹೇಗೆ ಗೊತ್ತು ಶಾಸ್ತ್ರಿಗಳೇ?" ಎಂದು ಕೇಳಿದ.

"ಅಣ್ಣಯ್ಯ ಎಲ್ಲಾ ಹೇಳಿದ್ದಾರೆ ಸ್ವಾಮಿ. ಈ ಕಂಪೆನಿಗೆ ಅವರನ್ನು ಕರೆದುಕೊಂಡು ಬಂದವರೇ ನೀವಂತೆ. ಅಣ್ಣಯ್ಯ ನಿಮ್ಮನ್ನು ತುಂಬ ಕೊಂಡಾಡುತ್ತಿರುತ್ತಾರೆ."

ಗುಂಡೂರಾಯನಿಗೆ ಶಾಸ್ತ್ರಿಯಮೇಲೆ ಅಭಿಮಾನ ಹೆಚ್ಚಾದುದಲ್ಲದೆ ಅಣ್ಣಯ್ಯನ ಮೇಲೆ ವಿಶ್ವಾಸವೂ ಅಧಿಕವಾಯಿತು.

"ನಾನೇನು ಮಾಡಿದೆ ಹೇಳಿ ಯೋಗ್ಯತೆ ಇದೆ - ಅದರ ಬಲದಮೇಲೆ ಅವನು ಮುಂದಕ್ಕೆ ಬಂದಿದ್ದಾನೆ."

" ವಜ್ರದ ಕಾಂತಿ ಪ್ರಕಾಶವಾಗಬೇಕಾದರೆ ಅದಕ್ಕೆ ಕಟ್ಟಡ ಬೇಕು ಸ್ವಾಮಿ. ಅಣ್ಣಯ್ಯನವರಿಗೆ ಆ ಕಟ್ಟಡ ನೀವು ಕಟ್ಟಿಕೊಟ್ಟಿರಿ. ಇದೇನು ಇಷ್ಟು ಬೇಗ ದಯಮಾಡಿಸಿದಿರಲ್ಲಾ. ಕಾಫಿ ತರಿಸುತ್ತೇನೆ ತಡೆಯಿರಿ."

" ಬೇಡಿಯಪ್ಪಾ. ಕಾಫಿ ತಿಂಡಿ ಎಲ್ಲಾ ಆಗಿದೆ."

" ಆಗಲಿ ಸ್ವಾಮಿ ಬಡವರ ಆತಿಥ್ಯ ಸ್ವಲ್ಪ ಸ್ವೀಕರಿಸಿ"

ಎಂದು ಶಾಸ್ತ್ರಿಯೇ ಹೋಗಿ ಕಾಫಿಗೆ ಹೇಳಿಬಂದ.

" ನಮ್ಮ ಯಜಮಾನರಿಗೆ ಇದ್ದಕ್ಕಿದ್ದಂತೆ ಓದುವ ಹುಚ್ಚು ಹಿಡಿದು ಬಿಟ್ಟಿದೆ. ಒಳ್ಳೆಯ ಕೆಲವು ಕನ್ನಡ ಪುಸ್ತಕಗಳನ್ನು ಆರಿಸಿಕೊಡಿ.

ಶಾಸ್ತ್ರಿ ಐವತ್ತು ಅರವತ್ತು, ಕನ್ನಡ ಪುಸ್ತಕಗಳನ್ನು ಆರಿಸಿ ಗುಂಡೂರಾಯನ ಮುಂದಿಟ್ಟ. ಗುಂಡೂರಾಯ ಅವುಗಳನ್ನು ನೋಡುತ್ತಿದ್ದಂತೆ ಹೋಟೆಲ್ ಮಾಣಿ ಕಾಫಿ ತಂದಿಟ್ಟ. ಇಬ್ಬರೂ ಕಾಫಿ ಕುಡಿದು ಮುಗಿಸಿದರು.

ಗುಂಡು ಪುಸ್ತಕಗಳನ್ನು ನೋಡುತ್ತಾ

" ಕಥೆ ಕಾದಂಬರಿ ನಾಟಕ ಕೊಡಿಯಪ್ಪ. ಪದ್ಯದ ಪುಸ್ತಕಗಳು ಬೇಡ."

ಶಾಸ್ತ್ರಿ ಬೀರುವಿನಲ್ಲಿದ್ದ ಕಥೆ ಕಾದಂಬರಿ ನಾಟಕದ ಪುಸ್ತಕಗಳನ್ನೇ ತೆಗೆದು ಗುಂಡೂರಾಯನ ಮುಂದಿಟ್ಟ. ಗುಂಡೂರಾಯ

" ಇವುಗಳಲ್ಲಿ ಚೆನ್ನಾಗಿರುವುದನ್ನು ನೀವೇ ಆರಿಸಿ." ಎಂದ

ಶಾಸ್ತ್ರಿ ಪುಸ್ತಕಗಳನ್ನಾರಿಸಿ ಮೂವತ್ತು ಕಾದಂಬರಿ, ಹತ್ತು ಕಥಾ ಸಂಗ್ರಹ, ಹತ್ತು ನಾಟಕದ ಗ್ರಂಥಗಳನ್ನು ಗುಂಡೂರಾಯನ ಕೈಯಲ್ಲಿತ್ತ. ಗುಂಡೂರಾಯ ಅವುಗಳನ್ನು ಸೂಕ್ಷ್ಮವಾಗಿ ನೋಡಿ

" ಎಷ್ಟಾಗುತ್ತದೆ " ಎಂದ

ಶಾಸ್ತ್ರಿ ಒಂದು ಕಾಗದದ ಮೇಲೆ ಲೆಕ್ಕಹಾಕಿ

" ಒಟ್ಟು ನೂರ ಏಳು ರೂಪಾಯಿ ಆಗತ್ತೆ ಸ್ವಾಮಿ."

" ಅಷ್ಟಾಗುತ್ತದೆಯೆ ? ಕಮಿಷನ್ ಕೊಡುವುದಿಲ್ಲವೋ ?"

" ನಮಗೆ ಬರುವುದೇ ಸ್ವಲ್ಪ ಸ್ವಾಮಿ - ನೀವು ಕೇಳಿದ ಮೇಲೆ ಇಲ್ಲ ವೆಂದು ಹೇಗೆ ಹೇಳಲಿ. ಶೇಕಡ ಆರೂಕಾಲು ಕಮಿಷನ್ ಕೊಡುತ್ತೇನೆ."

" ಹೋಗಲಿ ಬಿಡಿಯಪ್ಪ - ನಿಮ್ಮ ಹತ್ತಿರ ಕಮಿಷನ್ ಏಕೆ ಕಿತ್ತು ಕೊಳ್ಳಲಿ "

ಎಂದು ಗುಂಡೂರಾಯ ಹಣ ತೆಗೆದು ಎಣಿಸಿ ಮೇಜಿನ ಮೇಲಿಟ್ಟ. ಶಾಸ್ತ್ರಿ ಬಿಲ್ ಬರೆದು ಗುಂಡೂರಾಯನ ಕೈಗೆ ಕೊಟ್ಟ.

"ಕಂಪೆನಿ ಮನೆಗೆ ನಾನೇ ಬರಬೇಕೆಂದಿದ್ದೆ. ನೀವೇ ಬಂದದ್ದು ತುಂಬ ಸಂತೋಷ."

"ಏನು ಸಮಾಚಾರ ಶಾಸ್ತ್ರಿಗಳೇ."

"ನನ್ನ ಸ್ನೇಹಿತರೆಲ್ಲಾ ಸೇರಿ ಅಣ್ಣಯ್ಯನವರಿಗೆ ಮರ್ಯಾದೆ ಮಾಡಬೇಕೂಂತಿದ್ದಾರೆ – ನಿಮಗೆ ಯಾವಾಗ ಅನುಕೂಲ."

"ಅಣ್ಣಯ್ಯ ಒಬ್ಬನಿಗೇನೋ - ಇನ್ನೂ ಯಾರಿಗಾದರೂ ಉಂಟೋ ?"

"ಅವರೊಬ್ಬರಿಗೇ."

"ಹಾಗಾದರೆ ಅದನ್ನು ಖಾಸಗಿಯಾಗಿ ವ್ಯವಸ್ಥೆ ಮಾಡಿಕೊಳ್ಳಿ. ಯಜಮಾನರಿಗೆ ತಿಳಿದರೆ ಪ್ರಾಣ ಬಿಟ್ಟು ಬಿಟ್ಟಾರು."

"ಅಣ್ಣಯ್ಯನವರಿಗೆ ಮರ್ಯಾದೆ ಮಾಡಿದರೆ ಕಂಪೆನೀಗೇ ಗೌರವವಲ್ಲವೇ ಸ್ವಾಮಿ."

"ಹೌದಪ್ಪಾ ಒಪ್ಪಿದೆ. ಆನೆಯ ಮೇಲೆ ಅಂಬಾರಿ ಹಾಕಿ ನೀವು ಅಣ್ಣಯ್ಯನಿಗೆ ಮೆರವಣಿಗೆ ಮಾಡಿಸಿದರೂ ನನಗೆ ಸಂತೋಷವೇ. ಆದರೆ ನಾಟಕದ ಕಂಪೆನಿಗಳ ವಿಷಯ ನಿಮಗೆ ಗೊತ್ತಿಲ್ಲ. ಮರ್ಯಾದೆಯ ಅಗ್ರಪೂಜೆ ಯಾವಾಗಲೂ ಕಂಪೆನಿ ಯಜಮಾನರಿಗೆ ಮೀಸಲು."

ಅವರು ಮಾತನಾಡುತ್ತಿದ್ದಂತೆ ಅಣ್ಣಯ್ಯ ಒಳಕ್ಕೆ ಬಂದ. ಮೇಜಿನಾಚೆ ಕುಳಿತ್ತಿದ್ದ ಗುಂಡೂ ಅವನ ಕಣ್ಣಿಗೆ ಬೀಳಲಿಲ್ಲ. ಗುಂಡೂ ಕತ್ತೆತ್ತಿ ನೋಡಿ.

"ಬಾ ಅಣ್ಣಯ್ಯ – ಎಂದ."

"ಇದೇನೋ ಗುಂಡೂ – ನೀನು ಬಂದು ಬಿಟ್ಟದ್ದೀ."

"ಗುಂಡೂರಾಯರು ಇವತ್ತು ನೂರೇಳು ರೂಪಾಯಿ ಖರೀದಿ ಮಾಡಿದರು ಅಣ್ಣಯ್ಯನವರೇ."

ಎಂದು ಶಾಸ್ತ್ರಿ ಸಂತೋಷ ವ್ಯಕ್ತಗೊಳಿಸುತ್ತ ನುಡಿದ.

"ಪಂಡಿತನಾಗುವುದಕ್ಕೆ ಹೊರಟದ್ದೀಯೇನೋ ಗುಂಡೂ."

"ಇಲ್ಲಪ್ಪ. ಪುಸ್ತಕಗಳು ನನಗಲ್ಲ – ಯಜಮಾನರಿಗೆ."

" ಪುಸ್ತಕ ಓದುವ ಹುಚ್ಚು ಅವರಿಗೆ ಯಾವಾಗ ಹಿಡಿಯಿತು."

" ನಾನು ಕಾಣೆನಪ್ಪ. ಬೆಳಗಾಗ ಎದ್ದಕೂಡಲೆ ' ಒಳ್ಳೆಯ ಕನ್ನಡ ಪುಸ್ತಕಗಳನ್ನು ಕೊಂಡುಕೊಂಡು ಬಾ ಗುಂಡೂ ' ಎಂದರು ಬಂದೆ"

" ನಮ್ಮ ಶಾಸ್ತ್ರಿಗಳ ಅಂಗಡಿಗೇ ಬಂದೆಯಲ್ಲಾ. ಸಂತೋಷ."

ಗುಂಡೂ ಹೊರಡಲೇಳಲು ಶಾಸ್ತ್ರಿ ಪುಸ್ತಕಗಳನ್ನು ಕಟ್ಟಿ ಅವನ ಕೈಗಿತ್ತ-ಅಣ್ಣಯ್ಯ

" ಕೂತುಕೊಳ್ಳಿ ಗುಂಡೂ - ನಾನೂ ಬರುತ್ತೇನೆ " ಎಂದ.

" ನಾನು ಹೋಗಬೇಕಪ್ಪಾ. ಬೇಗ ಬಾ ಎಂದು ಯಜಮಾನರು ಹೇಳಿದ್ದಾರೆ. ನೀನು ನಿಧಾನವಾಗಿ ಬಾ."

ಎಂದು ಹೇಳಿ ಅಂಗಡಿಯಿಂದ ಹೊರಬಿದ್ದ.

ಗುಂಡೂ ಕಟ್ಟು ಬಿಚ್ಚಿ ಪುಸ್ತಕಗಳನ್ನು ಶ್ರೀಕಂಠಮೂರ್ತಿಯ ಮುಂದಿಟ್ಟ. ಅವನು ಅವುಗಳನ್ನು ನೋಡುತ್ತಾ

" ಎಷ್ಟಾಯಿತೋ ಗುಂಡೂ."

" ನೂರೇಳು ರೂಪಾಯಿಯಾಯಿತು ಸ್ವಾಮಿ"

ಎಂದು ಬಿಲ್ ತೆಗೆದು ಯಜಮಾನರ ಮೇಜಿನ ಮೇಲಿಟ್ಟ.

" ಆಗಲಿ ಬಿಡು. ಪುಸ್ತಕಗಳು ಚೆನ್ನಾಗಿವೆಯೋ ?"

" ಶಾಸ್ತ್ರಿಗಳೇ ಆರಿಸಿ ಕೊಟ್ಟರು ಚೆನ್ನಾಗಿರಬೇಕು. ಇವೆಲ್ಲಾ ಯಾರಿಗೆ ಸ್ವಾಮಿ."

" ಒಂದು ಕೆಲಸಕ್ಕೆ ಬೇಕಯ್ಯ. ಸುಧನ್ನ ಸ್ವಲ್ಪ ಇಲ್ಲಿಗೆ ಕಳಿಸು."

ಗುಂಡೂ ಗಡ್ಡ ಕೆರೆದುಕೊಳುತ್ತಾ

" ಇನ್ನೆರಡು ಪೀತಾಂಬರಗಳು ಮೇಲೆ ಹಾಕಿರಲೋ ?"

" ಹೋಗೋ ಹುಚ್ಚುಮುಂಡೆ."

ಎಂದು ಶ್ರೀಕಂಠಮೂರ್ತಿ ಗದರಿಕೊಂಡ.

' ಯಜಮಾನರು ನನಗೇಕೆ ಹೇಳಿ ಕಳಿಸಿದ್ದಾರೆ ' ಎಂದು ಯೋಚಿಸಿಕೊಂಡೇ ಸುಧಾ ಬಂದಳು.

" ಬಾ ಸುಧಾ – ಕುಳಿತುಕೊ."

" ಹೇಳಿ ಕಳಿಸಿದರಂತೆ !"

" ಹೊ – ನಿನ್ನ ಹತ್ತಿರ ಮಾತನಾಡುವುದಿತ್ತು. ಭಕ್ತೆ ಮೀರಾಬಾಯಿಯ ಕಥೆ ನಿನಗೆ ಗೊತ್ತೋ ?"

" ಗೊತ್ತು ಸ್ವಾಮಿ. ಸಿನಿಮಾನು ನೋಡಿದ್ದೀನಿ ಏಕೆ ?"

" ದೀಕ್ಷಿತ ಅವಳ ಮೇಲೆ ಒಂದು ನಾಟಕ ಬರೆದಿದ್ದಾನೆ. ಆಡಿದರೆ ಚೆನ್ನಾಗಿರುತ್ತೆ ಎಂದು ಹೇಳುತ್ತಿದ್ದಾನೆ. ನೀನೇನು ಹೇಳುತ್ತೀ ?"

" ನನಗೇನು ಗೊತ್ತಾಗತ್ತೆ ಸ್ವಾಮಿ."

" ಹಾಗಲ್ಲ – ಹೇಳು."

" ಚೆನ್ನಾಗತ್ತೆ ಸ್ವಾಮಿ, ಒಳ್ಳೆಯ ಕಥೆ. ತುಂಬ ಹಾಡು ಹಾಕುವುದಕ್ಕೆ ಅವಕಾಶವಿದೆ."

" ಅದಕ್ಕೇ ನಿನ್ನ ಕೇಳಿದ್ದು. ಕಂಪೆನಿ ನಾಟಕಗಳ ವಿಷಯದಲ್ಲಿ ನಾನೊಂದು ಕ್ರಮ ಇಟ್ಟುಕೊಂಡಿದ್ದೇನೆ. ಏನೂಂತೀಯೋ – ಒಂದೊಂದು ನಾಟಕದಲ್ಲಿ ಒಬೊಬ್ಬರಿಗೆ ಪ್ರಾಧಾನ್ಯ ಕೊಡಬೇಕು. ಜಯಪಾಲ ಚರಿತ್ರೆಯಲ್ಲಿ ಮಂಜುಳ – ಅಣ್ಣಯ್ಯ ; ಸದಾರಮೆಯಲ್ಲಿ ದೊರೆಸ್ವಾಮಿ, ಸುಂದರಿ. ಹೀಗೆ ಮಾಡುವುದರಿಂದ ಎಲ್ಲರಿಗೂ ಅವಕಾಶ ಸಿಕ್ಕುತ್ತದೆ . . . ವಿಶ್ರಾಂತಿಗೂ ಅನುಕೂಲವಾಗುತ್ತದೆ. ಅಲ್ಲವೇ ?

" ಇದು ಬಹಳ ಒಳ್ಳೆಯ ಕ್ರಮ ಸ್ವಾಮಿ. ಒಬ್ಬರ ಮೇಲೆ ಒಬ್ಬರು ಕರುಬುವುದಕ್ಕೂ ಅವಕಾಶವಿರುವುದಿಲ್ಲ."

" ಮೀರಾ ನಾಟಕದಲ್ಲಿ ನಿನಗೆ ರಾಜಶೇಖರನಿಗೆ ಅವಕಾಶ ಕೊಡಬೇಕೊಂತ ಮಾಡಿದ್ದೀನಿ – ಏನು ಹೇಳುತ್ತೀ. ಹಾಡೋ ಪಾರ್ಟು ಆದ್ದರಿಂದ ನೀನು ಚೆನ್ನಾಗಿ ಮಾಡಬಲ್ಲೆ ಎಂದು ನನಗೆ ನಂಬಿಕೆಯಿದೆ."

ಸುಧಳಿಗಾದ ಆನಂದ ಅವಳ ಮುಖದಲ್ಲಿ ಚಿಮ್ಮಿತು. ಅದನ್ನೆಷ್ಟು ಹೊಟ್ಟೆಯಲ್ಲಿಟ್ಟುಕೊಳ್ಳಬೇಕೆಂದರೂ ಅವಳಿಗೆ ಸಾಧ್ಯವಾಗಲಿಲ್ಲ.

" ಖಂಡಿತವಾಗಿ ಮೀರಾ ಪಾರ್ಟು ನನ್ನ ಕೈಯಲ್ಲಿ ಮಾಡಿಸುತ್ತೀರಾ ಸ್ವಾಮಿ-"

ಶ್ರೀಕಂಠಮೂರ್ತಿ ಅವಳ ಕೈಗೆ ಒಂದು ದಪ್ಪ ಸ್ಟೂಡೆಂಟ್ಸ್ ನೋಟ್ ಬುಕ್ ಕೊಟ್ಟು

" ನಿನ್ನ ಪಾರ್ಟು ಬರೆದುಕೋ. ನಿನ್ನದಾದ ಮೇಲೆ ರಾಜಶೇಖರನಿಗೆ ಕೊಡು" ಎಂದ.

ಸುಧಾ ತನ್ನ ಕಿವಿಯನ್ನೇ ತಾನು ನಂಬದಾದಳು. ಕಂಪೆನಿಯಲ್ಲಿ ನನಗೆ ಇಂಥ ಅವಕಾಶ ಸಿಕ್ಕುತ್ತದೆಂದು ಅವಳು ಕನಸು ಮನಸ್ಸಿನಲ್ಲಿಯೂ ಭಾವಿಸಿ ಕೊಂಡಿರಲಿಲ್ಲ.

" ಜಯಪಾಲ ಚರಿತ್ರೆಯಲ್ಲಿ ನಿನ್ನ ಕೌಮುದಿ ಪಾತ್ರ ಬಹಳ ಜನರಿಗೆ ಹಿಡಿದಿದೆ ಸುಧಾ."

ಸುಧಾ ವಿನಯದಿಂದ ತಲೆ ತಗ್ಗಿಸಿದಳು. ಅವಳ ಮೇಲಾಗುತ್ತಿದ್ದ ಪ್ರತಿಕ್ರಿಯೆಯನ್ನು ಶ್ರೀಕಂಠಮೂರ್ತಿ ಕಣ್ಣಂಚಿನಲ್ಲಿಯೇ ಗಮನಿಸುತ್ತಿದ್ದ.

" ನೀನು ತುಂಬ ಓದುತ್ತೀಯಂತೆ ಸುಧಾ."

" ಹೌದು - ನನಗೆ ಓದುವ ಹುಚ್ಚು ಬಹಳ."

" ತುಂಬ ಸಂತೋಷ. ಮಿಕ್ಕವರಿಗೂ ನಾನು ಹೇಳುತ್ತೇನೆ - ಕಾಲ ನಿರರ್ಥಕವಾಗಿ ಕಳೆಯ ಬೇಡಿರೋ, ಏನಾದರೂ ಓದಿ - ಕಳೆದು ಹೋದ ಕಾಲ ಮರಳಿ ಬರುವುದಿಲ್ಲ ಎಂದು. ನನ್ನ ಮಾತೆಲ್ಲಿ ಕೇಳುತ್ತಾರೆ. ಕಂಪೆನಿ ಮನೆಯಲ್ಲಿ ನಿನಗೊಬ್ಬಳಿಗಾದರೂ ಓದುವ ಅಭಿರುಚಿ ಇದೆಯಲ್ಲಾ ಅಷ್ಟೇ ಸಂತೋಷ. ಇಗೋ - ನಿನಗೋಸ್ಕರವೇ ಈ ಪುಸ್ತಕಗಳನ್ನು ತರಿಸಿದ್ದೇನೆ"

ಎಂದು ಪುಸ್ತಕಗಳನ್ನು ಸುಧೆಯ ಬಳಿಗೆ ದೂಡಿದ. ಸುಧೆಗೆ ಚಿನ್ನದ ಗಣಿ ಸಿಕ್ಕಿದಂತಾಯಿತು. ತನ್ನ ಕೃತಜ್ಞತೆಯನ್ನು ಹೇಗೆ ಅರ್ಪಿಸಬೇಕೋ ಅವಳಿಗೆ ತಿಳಿಯದಾಯಿತು.

ಸುಧಾ ಪುಸ್ತಕಗಳನ್ನು ತೆಗೆದುಕೊಂಡು ಎದ್ದು ನಿಂತು ಯಜಮಾನರಿಗೆ ಕೈಮುಗಿದು ತನ್ನ ರೂಮಿಗೆ ಬಂದಳು. ಸುಂದರಿ, ಸುಬ್ಬುಲಕ್ಷ್ಮಿ, ನಾಗರತ್ನ ಅವಳನ್ನು ಮುತ್ತಿಕೊಂಡರು. ಸುಧಾ ತಾನು ಮೀರಾ ಪಾತ್ರ ಮಾಡುವ ವಿಷಯವನ್ನೂ, ಪುಸ್ತಕಗಳನ್ನು ಬಹುಮಾನವಾಗಿ ಪಡೆದ ವಿಷಯವನ್ನೂ ವರ್ಣಿಸಿದಳು.

ಸುಂದರಿ, ನಾಗರತ್ನ, ಸುಬ್ಬುಲಕ್ಷ್ಮಿ ಒಬ್ಬರ ಮುಖ ಒಬ್ಬರು ನೋಡಿ ಕೊಂಡು ಕಿಸಿ ಕಿಸಿ ನಕ್ಕರು.

ಅವರ ವ್ಯಂಗ್ಯ ನಗೆ ಸುಧೆಯ ಮನಸ್ಸಿನಲ್ಲಿ ಅನುಮಾನ ಮೂಡಿಸಿ ಭಯ ಹುಟ್ಟಿಸಿತು.

ಸುಧೆಗಾಗಿಯೇ 'ಭಕ್ತ ಮೀರಾ' ನಾಟಕ ತೆಗೆದುಕೊಳ್ಳುವ ಸುದ್ದಿ ಕಂಪೆನಿಮನೆಯಲ್ಲಿ ಕೂಡಲೆ ಪ್ರಸಾರವಾಯಿತು. ಅದರಲ್ಲಿ ನಾಯಕನ ಪಾತ್ರ ರಾಜಶೇಖರನಿಗೆ ಎಂದು ತಿಳಿದ ಮೇಲೆ ದೊರೆಸ್ವಾಮಿ ಕಟಕಟನೆ ಹಲ್ಲುಕಡಿದ.

ಮನಃಪೂರ್ವಕವಾಗಿ ಸುಧೆಯನ್ನು ಅಭಿನಂದಿಸಿದವನು ಪರಮೇಶ್ವರಯ್ಯ ಒಬ್ಬನೇ.

"ಒಳ್ಳೆಯ ಪಾರ್ಟು - ಭಕ್ತಿಯಿಂದ ಮಾಡು ತಾಯಿ." ಎಂದ.

"ಅಷ್ಟು ದೊಡ್ಡ ಪಾರ್ಟು ನನ್ನಿಂದ ಸಾಧ್ಯವೇ ಪರಮೇಶ್ವರಯ್ಯನವರೇ."

"ಮಂಜುಳಮ್ಮ ಪದ್ಮಿನಿ ಪಾರ್ಟು ಅಷ್ಟು ಚೆನ್ನಾಗಿ ಮಾಡುತ್ತಾಳೆ ಎಂದು ಯಾರು ನಿರೀಕ್ಷಿಸಿದ್ದರಮ್ಮ- ವಾಗ್ದೇವಿ ಯಾರು ಯಾರಿಗೆ ಅನುಗ್ರಹಿಸಿದ್ದಾಳೆಯೋ ಬಲ್ಲವರು ಯಾರು ?"

ಪರಮೇಶ್ವರಯ್ಯನ ಸವಿನುಡಿಯನ್ನು 'ಹಿರಿಯರ ಆಶೀರ್ವಾದ'ವೆಂದು ಸುಧಾ ಭಕ್ತಿ ಪೂರ್ವಕವಾಗಿ ಸ್ವೀಕರಿಸಿದಳು.

ಸುಧೆಯನ್ನು ಸಮೀಪದಲ್ಲಿ ನೋಡಿದ ಮೇಲಂತೂ ಶ್ರೀಕಂಠಮೂರ್ತಿಯ ಬುದ್ಧಿಯೇ ಕೆಟ್ಟು ಹೋಯಿತು. ಮಂಜುಳನೂ ಅವನಿಗೆ ಬೇಡವಾದಳು. ಈ ವಿಷಯದಲ್ಲಿ ಕೈ ಹಾಕುವುದಕ್ಕೆ ಗಂಡೂರಾಯ ಸ್ಪಷ್ಟವಾಗಿ ನಿರಾಕರಿಸಿದ್ದ.

ಇನ್ನೊಂದು ದಿನ ಶ್ರೀಕಂಠಮೂರ್ತಿ ಸುಧೆಯನ್ನು ತನ್ನ ರೂಮಿಗೆ ಬರಮಾಡಿಕೊಂಡು

"ಪಾರ್ಟು ಬರೆದುಕೊಂಡೆಯಾ ಸುಧಾ" ಎಂದು ಕೇಳಿದ.

"ನನ್ನದಾಯಿತು. ರಾಜಶೇಖರ ಬರೆದುಕೊಳ್ಳುತ್ತಿದ್ದಾರೆ."

"ಪುಸ್ತಕಗಳು ಎಷ್ಟು ಓದಿದೆ."

"ಎರಡು ಓದಿದೆ."

"ಚೆನ್ನಾಗಿವೆಯೇ ?"

"ತುಂಬಾ ಚೆನ್ನಾಗಿವೆ."

"ನಿನಗೆ ಯಾವುದಾದರೂ ಪುಸ್ತಕ ಬೇಕಾದರೆ ಆರ್ಡರ್ ಮಾಡಿ ತರಿಸಿಕೋ- ನಾನು ಹಣ ಕೊಡುತ್ತೇನೆ."

"ಹಾಗೇ ಆಗಲಿ."

"ನಿನ್ನ ರೂಮು ತುಂಬ ಗಲಾಟೆಯಲ್ಲವೇ ಸುಧಾ."

"ಏನಿಲ್ಲವಲ್ಲ."

"ನಾಲ್ಕು ಜನಕ್ಕೆ ಆ ರೂಮು ಸಾಲದು."

"ಸರಿಮಾಡಿಕೊಂಡಿದ್ದೇವೆ."

"ಎದುರು ರೂಮು ಖಾಲಿಯೇ ಇದೆ - ನೀನು ಬೇಕಾದರೆ ಇಲ್ಲಿಗೆ ಬಂದು ಬಿಡು. ಓದಿಕೊಳ್ಳುವುದಕ್ಕೂ ನಿನಗೆ ಅನುಕೂಲವಾಗುತ್ತದೆ."

ಸುಂದರಿ, ನಾಗರತ್ನ, ಸುಬ್ಬುಲಕ್ಷ್ಮಿ, ಕಿಸಿಕಿಸಿಯೆಂದು ನಕ್ಕದ್ದರಲ್ಲಿ ಏನೂ ತಪ್ಪಿಲ್ಲವೆಂದು ಸುಧಾ ಭಾವಿಸಿದಳು.

"ಏನೂ ಬೇಡಿ ಸ್ವಾಮಿ – ಇರುವಲ್ಲಿಯೇ ನನಗೆ ಅನುಕೂಲವಾಗಿದೆ."

ಎಂದು ಹೇಳಿ ಎದ್ದು ಹೋದಳು. ಯಾವ ಬಗೆಯ ಹಿಡಿತಕ್ಕೂ ಸಿಕ್ಕದೆ ಸುಧಾ ಜಾರಿಕೊಳ್ಳುತ್ತಿದ್ದುದನ್ನು ಕಂಡು ಶ್ರೀಕಂಠಮೂರ್ತಿಯ ಮನಃಕ್ಲೇಶ ಮತ್ತಷ್ಟು ಹೆಚ್ಚಿತು.

ಮಂಜುಳಾ, ಅಣ್ಣಯ್ಯನ ಸ್ನೇಹ ಸಂಬಂಧ ಹೆಚ್ಚು ದಿನ ಗೋಪ್ಯವಾಗಿರಲು ಸಾಧ್ಯವಾಗಲಿಲ್ಲ. ದೊರೆಸ್ವಾಮಿಯೇ ಅದನ್ನು ಯಜಮಾನರ ಗಮನಕ್ಕೆ ತಂದ.

ಶ್ರೀಕಂಠಮೂರ್ತಿಗೆ ಅಣ್ಣಯ್ಯನ ನಡತೆ ನುಂಗಲಾರದ ತುತ್ತಾಯಿತು. ನಟವರ್ಗವೆಲ್ಲಾ ಯಜಮಾನರ ಹಣೆಯ ಬರಹ ನೋಡಿ ನಗುತ್ತಿದ್ದರು. ಅಣ್ಣಯ್ಯನನ್ನು ಕಂಪೆನಿ ಬಿಟ್ಟು ಓಡಿಸುವಂತೆಯೂ ಇರಲಿಲ್ಲ. ಜಯಪಾಲ ಚರಿತ್ರೆ ಅದ್ಧೂರಿಯಾಗಿ ನಡೆಯುತ್ತಿತ್ತು.

ಯಜಮಾನರು ರೂಮಿನ ವಿಷಯ ಪ್ರಸ್ತಾಪಿಸಿದುದನ್ನು ಸುಧಾ ರಾಜಶೇಖರನಿಗೆ ತಿಳಿಸಿದಳು.

"ಇದು ಇಲ್ಲಿಗೆ ಬರುತ್ತೇಂತ ನನಗೆ ಗೊತ್ತಿತ್ತು ಸುಧಾ."

"ನಿಮಗೂ ಅನುಮಾನ ಬಂದಿತ್ತೇ ?"

"ಅನುಮಾನ ಮೊದಲಿನಿಂದಲೂ ಇತ್ತು. ಈಗ ದೃಢಪಟ್ಟಿತು."

"ಕಂಪೆನಿಯ ಋಣ ನಮಗೆ ತೀರಿತೆಂದು ಕಾಣುತ್ತದೆ."

"ಇಲ್ಲ - ಇನ್ನೂ ಸ್ವಲ್ಪ ಉಳಿದಿದೆ. ಈ ವಿಷಯ ಖಚಿತವಾಗಿ ಇತ್ಯರ್ಥವಾಗುವವರೆಗೆ ನಾವು ಕಂಪೆನಿ ಬಿಡುವ ಹಾಗಿಲ್ಲ. ಯಜಮಾನರು ತಮ್ಮ ವರ್ತನೆಗೆಲ್ಲಾ ಸದುದ್ದೇಶ ಕಲ್ಪಿಸಲು ಸಾಧ್ಯವಿದೆ."

"ನಾನೇನು ಮಾಡಲಿ ಹೇಳಿ."

"ಯಜಮಾನರು ಹೇಳಿದ ರೂಮಿಗೆ ಹೋಗು."

"ಹಾ ನನ್ನ ಗತಿ !"

"ಯೋಚನೆ ಮಾಡಬೇಡ. ಕಂಪೆನಿ ಮನೆಯಲ್ಲಿಯೇ ಇಂದಿನಿಂದ ನಾನು ಮಲಗುತ್ತೇನೆ."

"ನನಗೇಕೋ ಭಯವಾಗುತ್ತದೆ

"ಭಯಪಟ್ಟರೆ ಪ್ರಯೋಜನವಿಲ್ಲ. ಕಂಪೆನಿಯವರಿಗಾದರೂ ಈ ಯಜಮಾನರ ಯೋಗ್ಯತೆ ಗೊತ್ತಾಗಬೇಕು."

ರಾಜಶೇಖರ ಎಷ್ಟು ಧೈರ್ಯವಿತ್ತರೂ ಹೊಸರೂಮಿಗೆ ಹೋಗಲು ಸುಧೆಗೆ ಧೈರ್ಯವಾಗಲಿಲ್ಲ. ಯಜಮಾನರು ಅದನ್ನೇ ಎರಡು ಮೂರು ಬಾರಿ ಪ್ರಸ್ತಾಪಿಸಿದ್ದರು. ತನ್ನ ಕುತ್ತಿಗೆಯ ಮೇಲೆ ತೂಗಾಡುತ್ತಿದ್ದ ಕತ್ತಿ ಯಾವಾಗ ಜಾರಿ ಕೆಳಗೆ ಬೀಳುವುದೋ ಎಂದು ಹೆದರಿ ಸುಧ ಕಾಲ ತಳ್ಳುತ್ತಿದ್ದಳು.

ಸುಧೆಯ ಅಸ್ಥಿರತೆ ಕಂಡು ರಾಜಶೇಖರನಿಗೆ ಬೇಸರವಾಯಿತು.

"ನಾನಿರುವಾಗ ನಿನಗೇನು ಭಯ ಸುಧಾ. ರಾತ್ರಿ ಕಣ್ಣು ಮುಚ್ಚದೆ ಕಾವಲು ಕಾಯುತ್ತೇನೆ. ನೀನು ಹೆದರ ಬೇಡ."

ಎಂದು ಅವಳಿಗೆ ಮತ್ತಷ್ಟು ಧೈರ್ಯನೀಡಿದ.

ಸುಧಾ ಯಜಮಾನರ ಸಲಹೆಯನ್ನಂಗೀಕರಿಸಿ ಅಂದೇ ತನ್ನ ಹೊಸ ರೂಮಿಗೆ ಹೋದಳು. ಶ್ರೀಕಂಠಮೂರ್ತಿಯ ಆನಂದಕ್ಕೆ ಮಿತಿಯೇ ಇರಲಿಲ್ಲ. ರೂಮಿಗೆ ಸುಧಾ ಬಂದುದೇ ಅವಳ ಅಂಗೀಕಾರದ ಚಿಹ್ನೆಯೆಂದು ಅವನು ಭಾವಿಸಿದ.

ಅಂದಿನ ರಾತ್ರಿ ನಾಟಕ ಮುಗಿದ ಮೇಲೆ ಎಲ್ಲರಿಗಿಂತ ಮುಂಚೆ ಥಿಯೇಟರ್ ಬಿಟ್ಟವನು ಶ್ರೀಕಂಠಮೂರ್ತಿ. ನಟನಟಿಯರು ಇನ್ನೂ ಮೇಕಪ್

ಅಳಿಸಿಕೊಳ್ಳುತ್ತ ಕುಳಿತಿದ್ದರು. ಯಜಮಾನರ ಬದಲು ಗುಂಡೂರಾಯ ಉಸ್ತುವಾರಿ ನೋಡಿಕೊಳ್ಳುತ್ತಿದ್ದ. ಯಜಮಾನರು ಕಂಪೆನಿ ಮನೆಗೆ ಹೋದುದನ್ನು ರಾಜಶೇಖರ ಗಮನಿಸಿದ.

ನಟನಟಿಯರು ಕಂಪೆನಿ ಮನೆ ಸೇರಿ ಮಲಗಿದರು. ಸುಧಾ ತನ್ನ ರೂಮಿಗೆ ಬಂದು ಬಾಗಿಲು ಹಾಕಿಕೊಂಡಳು. ರಾಜಶೇಖರ ಮಾತ್ರ ಮಲಗಲಿಲ್ಲ.

ಎಲ್ಲರೂ ಮಲಗಿ ಅರ್ಧ ಗಂಟೆಯಾಗಿರಬಹುದು. ಸುಧೆಯ ರೂಮಿನ ಬಾಗಿಲನ್ನು ಯಾರೋ ಮೆಲ್ಲನೆ ತಟ್ಟಿದರು.

ಒಳಗಿನಿಂದ ಸುಧಾ ' ಯಾರು ' ಎಂದಳು.

" ನಾನು ಬಾಗಿಲು ತೆಗೆ ಸುಧಾ " ಎಂದು ಶ್ರೀಕಂಠಮೂರ್ತಿ ಕ್ಷೀಣ ಸ್ವರದಲ್ಲಿ ಉತ್ತರವಿತ್ತ.

ಸುಧಾ ಸ್ವಲ್ಪ ಹೊತ್ತು ಅನುಮಾನಿಸಿದಳು.

ಶ್ರೀಕಂಠಮೂರ್ತಿ ಮತ್ತೆ ಬಾಗಿಲು ಬಡಿದು, ಬಾಗಿಲು ತೆಗೆಯಲು ಹೇಳಿದ.

ಸುಧಾ ಬಾಗಿಲು ತೆಗೆದಳು

ಶ್ರೀಕಂಠಮೂರ್ತಿ ಸುಧೆಯ ರೂಮು ಪ್ರವೇಶಿಸುವಷ್ಟರಲ್ಲಿ ರಾಜಶೇಖರ, ಭುವನೇಶ್ವರಯ್ಯ, ದೀಕ್ಷಿತ, ಪರಮೇಶ್ವರಯ್ಯ, ಸಂಪಂಗಿ ಶ್ರೀಕಂಠಮೂರ್ತಿಯ ರೂಮಿನ ಬಳಿಗೆ ಬಂದು ಶಬ್ದ ಮಾಡದೆ ಅಡಗಿಕೊಂಡಿದ್ದರು.

ಶ್ರೀಕಂಠಮೂರ್ತಿ ಸುಧೆಯ ರೂಮು ಪ್ರವೇಶಿಸಿದೊಡನೆಯೇ ಅವಳು ಬಾಗಿಲಿಗೆ ಬೆನ್ನುಕೊಟ್ಟು ನಿಂತಳು. ಶ್ರೀಕಂಠಮೂರ್ತಿ ಅಕ್ಕರೆಯಿಂದ 'ಬಾ ಸುಧಾ ' ಎಂದು ಕರೆದ.

ಆ ವೇಳೆಗೆ ರಾಜಶೇಖರ, ಪರಮೇಶ್ವರಯ್ಯ, ಸಂಪಂಗಿ, ಭುವನೇಶ್ವರಯ್ಯ, ದೀಕ್ಷಿತ ಸುಧೆಯ ರೂಮಿನ ಎರಡು ಪಕ್ಕಗಳಲ್ಲಿ ಒಳಗೆ ನಡೆಯುತ್ತಿದ್ದ ಸಂಭಾಷಣೆಯನ್ನಾಲಿಸುತ್ತ ನಿಂತರು.

" ಹತ್ತಿರ ಬಾ – ಸುಧಾ."

" ಏಕೆ ?"

" ಏಕೆಯೆಂದು ಕೇಳುವೆಯಲ್ಲಾ."

"ಇದು ನಿಮಗೆ ತರವೇ ?"

"ಯಾವದು ?"

"ನನ್ನ ಬಯಸುವುದು."

"ನನ್ನಲ್ಲಿ ಬಯಕೆ ಹುಟ್ಟಿಸಿದ್ದು ನಿನ್ನ ತಪ್ಪು."

"ನೀವು ಹಿರಿಯರು ಕಂಪೆನಿ ಯಜಮಾನರು."

"ಹೌದು – ಹಾಗೇ ನಾನು ಮನುಷ್ಯ."

"ನನ್ನ ತಾಯಿಯಾಯಿತು – ಅಕ್ಕನಾಯಿತು–ಈಗ ನಾನು ಬೇಕೇ ?"

"ನೀನು ಅನಾಘ್ರಾತ ಕುಸುಮ ಸುಧಾ. ನಾನು ಆಣೆ ಮಾಡಿ ಹೇಳುತ್ತೇನೆ – ಇನ್ನು ಮೇಲೆ ನಿನ್ನನ್ನಲ್ಲದೆ ನಾನು ಯಾರನ್ನೂ ಕಣ್ಣೆತ್ತಿಯೂ ನೋಡುವುದಿಲ್ಲ."

"ನಾನು ನಿಮ್ಮ ಮಗಳಲ್ಲವೇ ?"

"ಬ್ರಹ್ಮನೇ ಮಗಳನ್ನು ಮೋಹಿಸಿದ."

"ವಯಸ್ಸಾದರೂ ನಿಮಗೆ ಬುದ್ಧಿ ಯೇಕೆ ಬರಲಿಲ್ಲ."

"ಕೆಲವರ ತಾರುಣ್ಯಕ್ಕೆ ವಯಸ್ಸಿನ ಕಿಲುಬು ಹತ್ತುವುದಿಲ್ಲ ಸುಧಾ. ನೀನು ಕೇಳಿದ್ದು ಕೊಡಲು ಸಿದ್ಧನಾಗಿದ್ದೇನೆ - ನೀನು ಹೇಳಿದ್ದು ಮಾಡಲು ಸಿದ್ಧನಾಗಿದ್ದೇನೆ."

"ನಾನು ನಿಮ್ಮ ಸೂಳೆಯಾದರೆ . . ."

"ಅಲ್ಲ – ನನ್ನ ಪ್ರೇಯಸಿಯಾದರೆ . . ."

"ಮಗಳನ್ನು ಪ್ರೇಯಸಿ ಎನ್ನಲು ನಾಚಿಕೆಯಾಗುವುದಿಲ್ಲವೇ ? ನಿಮ್ಮ ಪಾಪದಲ್ಲಿ ನೀವು ಬೇಯುವುದಿಲ್ಲವೆಂದು ಭಾವಿಸಿರುವಿರಾ ?"

"ನನ್ನ ಪಾಪ ಪುಣ್ಯದ ಲೆಕ್ಕ ಇಡುವ ಕೆಲಸ ಚಿತ್ರಗುಪ್ತರು ಮಾಡುತ್ತಿದ್ದಾರೆ."

"ನಿಮಗೆ ರೌರವನರಕ ಕಾದಿದೆ."

"ಸದ್ಯಕ್ಕೆ ನಿನ್ನ ವಿಶ್ವಾಸ ದೊರಕಿದರೆ ಯಾವ ನರಕಕ್ಕೆ ಬೇಕಾದರೂ ಹೋಗಲು ನಾನು ಸಿದ್ಧ."

"ನರಕಕ್ಕಾದರೂ ಹೋಗಿ ಸ್ವರ್ಗಕ್ಕಾದರೂ ಹೋಗಿ ನನಗಾಗಬೇಕಾದುದೇನು. ಸದ್ಯಕ್ಕೆ ರೂಮಿನಿಂದಾಚೆ ಹೋಗಿ."

"ಒಳ್ಳೆಯ ಮಾತಿಗೆ ನೀನು ಒಪ್ಪದಿದ್ದರೆ ನಾನು ಬಲಾತ್ಕಾರ ಮಾಡ ಬೇಕಾಗುತ್ತದೆ."

"ಮಾಡಿ ನೋಡೋಣ."

ಶ್ರೀಕಂಠಮೂರ್ತಿಗೆ ಕೋಪ ನೆತ್ತಿಗೇರಿತು. ಸುಧೆಯ ಸೆರಗು ಹಿಡಿ ದೆಳೆದ. ಅವಳು ಬಂದು ಅವನ ಮೇಲೆ ದೊಪ್ಪನೆ ಬಿದ್ದಳು. ಶ್ರೀಕಂಠ ಮೂರ್ತಿ ಅವಳನ್ನು ಗಟ್ಟಿಯಾಗಿ ತನ್ನ ಬಾಹುಗಳಲ್ಲಿ ಬಂಧಿಸಿ ಮುತ್ತಿಡಲು ಪ್ರಯತ್ನಿಸಿದ.

ಸುಧಾ ಚಿಟ್ಟನೆ ಚೀರಿದಳು.

ರಾಜಶೇಖರ, ಮತ್ತಿತರು ಧಡಧಡನೆ ರೂಮಿನೊಳಗೆ ನುಗ್ಗಿದರು. ಶ್ರೀಕಂಠಮೂರ್ತಿ ಸುಧೆಯ ಮೇಲಿನ ಹಿಡಿತ ಸಡಲಿಸಿದ. ಅವಳು ಎದ್ದು ಒಂದು ಮೂಲೆಯಲ್ಲಿ ಅಳುತ್ತ ನಿಂತಳು.

ಸುಧಾ ಚೀರಿಧ ಧ್ವನಿ ಕೇಳಿ ನಾಗರತ್ನ, ಸುಂದರಿ, ಸುಬ್ಬುಲಕ್ಷ್ಮಿ ಓಡಿ ಬಂದರು. ಮಂಜುಳನೂ ಬಂದಳು. ಕೆಳಗೆ ಮಲಗಿದ್ದ ಇತರ ನಟರೂ ಎದ್ದು ಬಂದರು.

ಶ್ರೀಕಂಠಮೂರ್ತಿಗೆ ಸಿಡಿಲು ಬಡಿದಂತಾಗಿತ್ತು. ರಾಜಶೇಖರನ ಕಣ್ಣು ಗಳು ಕೆಂಡ ಕಾರುತ್ತಿದ್ದವು.

"ನೋಡಿ - ನಿಮ್ಮ ಯಜಮಾನರ ಯೋಗ್ಯತೆ. ಈ ಹಾಳು ಕಂಪೆನಿ ಯಲ್ಲಿ ಯಾರೂ ಮರ್ಯಾದೆಯಾಗಿ ಬಾಳುವ ಹಾಗಿಲ್ಲ" ಎಂದ.

ಅಳುತ್ತ ನಿಂತಿದ್ದ ಸುಧೆಯಲ್ಲಿಗೆ ಸುಂದರಿ ಬಂದು ಅವಳನ್ನಪ್ಪಿ ತನ್ನ ರೂಮಿಗೆ ಕರೆದುಕೊಂಡು ಹೋದಳು.

ರಾಜಶೇಖರ ಹೆಚ್ಚು ಮಾತನಾಡಲೆತ್ನಿಸಲಿಲ್ಲ. 'ಹೊರಡಿ' ಎಂದು ಎಲ್ಲರಿಗೂ ಸಂಜ್ಞೆ ಮಾಡಿದ. ಎಲ್ಲರೂ ಹೊರಡಲು ಅವರ ಹಿಂದೆ ತಾನೂ ಹೊರಟುಬಿಟ್ಟ.

ಶ್ರೀಕಂಠಮೂರ್ತಿ ಒಬ್ಬನೇ ರೂಮಿನಲ್ಲಿ ಕುಳಿತ. ಗುಂಡೂ ಮೆಲ್ಲನೆ ಬಂದು ಅವನನ್ನೆಬ್ಬಿಸಿ ರೂಮಿಗೆ ಕರೆದೊಯ್ದು ಮಲಗಿಸಿದ.

—ಬೆಳಿಗ್ಗೆ ಕಾಫಿ ತೆಗೆಸಿಕೊಂಡು ಗುಂಡೂರಾಯ ಬಂದಾಗ ಶ್ರೀಕಂಠ

ಮೂರ್ತಿ ಎದ್ದು ಹಾಸಿಗೆಯ ಮೇಲೆ ಕುಳಿತಿದ್ದ. ರಾತ್ರಿಯಾದ ತೇಜೋ ವಧೆಯಿಂದ ಅವನ ಮುಖದ ರಕ್ತ ಬತ್ತಿ ಹೋಗಿತ್ತು.

ಮಾತು ಆರಂಭಿಸಲು ಗುಂಡೂರಾಯನಿಗೆ ಧೈರ್ಯವಾಗಲಿಲ್ಲ. ಶ್ರೀಕಂಠಮೂರ್ತಿಗೂ ಮಾತು ಬೇಕಾಗಿರಲಿಲ್ಲ. ಇಬ್ಬರೂ ಸುಮ್ಮನೆ ಕುಳಿತರು. ಎಷ್ಟು ಹೊತ್ತು ಹೀಗೆ ಕಳೆಯಿತೋ ಗೊತ್ತಿಲ್ಲ. ಕಂಪೆನಿಯಾಳು ಟಪಾಲು ತಂದು ಕೊಟ್ಟಾಗಲೇ ಗುಂಡೂರಾಯನಿಗೆ ಗಂಟೆಯ ಪರಿಜ್ಞಾನ ಬಂದುದು.

"ಏಳೀ ಸ್ವಾಮಿ. ಸ್ನಾನ ಮಾಡಿ – ಥಿಯೇಟರಿಗೆ ಹೋಗೋಣ"

ಎಂದು ಗುಂಡೂರಾಯ ಹೇಳಿದ. ಏಳಬೇಕೆಂದು ಶ್ರೀಕಂಠಮೂರ್ತಿ ಯೋಚಿಸುತ್ತಿರುವಷ್ಟರಲ್ಲಿ ರಾಜಶೇಖರ, ಪರಮೇಶ್ವರಯ್ಯ ಬಂದು ಶ್ರೀಕಂಠ ಮೂರ್ತಿಯ ಎದುರು ಕುಳಿತರು. ಅವರ ಹಿಂದೆಯೇ ಸುಧಾ ಬಂದು ಗುಂಡೂ ರಾಯನ ಸಾಲಿನಲ್ಲಿ ಕುಳಿತಳು. ಅವಳ ಕೈಯಲ್ಲಿ ಪುಸ್ತಕದ ಗಂಟು ಇತ್ತು.

ಶ್ರೀಕಂಠಮೂರ್ತಿ ಅವರು ಯಾರನ್ನೂ ಮಾತನಾಡಿಸಲಿಲ್ಲ. ಗುಂಡೂ ರಾಯನೇ ಯಾಜಮಾನ್ಯ ವಹಿಸಿ

"ಏನು ಬಂದಿರಿ ರಾಜಶೇಖರಯ್ಯ – ಪರಮೇಶ್ವರಪ್ಪನವರೇ."

"ನಾನೂ ಸುಧಮ್ಮ ಕಂಪೆನಿ ಬಿಟ್ಟು ಹೋಗಲು ನಿಶ್ಚಯಿಸಿದ್ದೇನೆ. ದಯವಿಟ್ಟು ನಮ್ಮ ಅಕೌಂಟ್ ನೋಡಿ ಲೆಕ್ಕ ಹರಿಸಿಬಿಡಿ."

ಎಂದು ರಾಜಶೇಖರ ಹೇಳಿದ.

"ನನಗೂ ವಯಸ್ಸಾಯಿತು ಸ್ವಾಮಿ. ಪಾರ್ಟು ಮಾಡೋದು ಸಾಧ್ಯವಿಲ್ಲ. ಉಳಿದಿರೋ ಆಯುಸ್ಸನ್ನು ರಾಮಕೃಷ್ಣಾ ಎಂದುಕೊಂಡು ಕಳೆಯ ಬೇಕೆಂದಿದ್ದೇನೆ. ನನ್ನ ಲೆಕ್ಕವನ್ನು ಹರಿಸಿಬಿಟ್ಟರೆ ರಾತ್ರಿಗೆ ಪ್ರಯಾಣ ಮಾಡುತ್ತೇನೆ."

ಎಂದು ಪರಮೇಶ್ವರಯ್ಯ ಹೇಳಿದ. ಪರಿಸ್ಥಿತಿಯ ಸಮಗ್ರ ಚಿತ್ರ ಶ್ರೀಕಂಠಮೂರ್ತಿಯ ಕಣ್ಣಿಗೆ ಕಟ್ಟಿದಂತಾಯಿತು.

"ದಯವಿಟ್ಟು ಹೋಗಬೇಡಿ. ರಾತ್ರಿ ನಾನು ಮಾಡಿದ ಅಪರಾಧಕ್ಕೆ ಸುಧಮ್ಮನ ಕ್ಷಮೆ ಬೇಡಲು ಸಿದ್ಧನಾಗಿದ್ದೇನೆ."

"ನಾನೂ ಸುಧಮ್ಮ ಕಂಪೆನಿ ಬಿಡಬೇಕೆಂದು ಬಹಳ ಹಿಂದೆಯೇ ನಿಶ್ಚ ಯಿಸಿದ್ದೆವು. ಶಿವಮೊಗ್ಗೆ ಸೀಸನ್ ಚೆನ್ನಾಗಿ ನಡೆಯುತ್ತಿರುವಾಗ ಮಧ್ಯೆ

ಬಿಟ್ಟು ಹೋಗುವುದು ನ್ಯಾಯವಲ್ಲವೆಂದು ಉಳಿದುಕೊಂಡೆವು. ಇನ್ನು ನಾವು ಕಂಪೆನಿಯಲ್ಲಿರುವುದು ನಮಗೂ ಮರ್ಯಾದೆಯಲ್ಲ. ನಮ್ಮನ್ನುಳಿಸಿ ಕೊಳ್ಳುವುದು ನಿಮಗೂ ಮರ್ಯಾದೆಯಲ್ಲ."

"ನಿನ್ನಮೇಲೆ ನಾನು ತುಂಬ ಆಸೆಯಿಟ್ಟುಕೊಂಡಿದ್ದೆ ರಾಜಶೇಖರ್. ಸುಧಾ ನೀನು ಇರುವಿರೆಂದೇ 'ಭಕ್ತ ಮೀರಾ' ತೆಗೆದುಕೊಳ್ಳಲು ನಿಶ್ಚಯಿ ಸಿದ್ದೆ."

"ನಿಮ್ಮ ನಂಬಿಕೆಗೆ ನಾನು ಎಂದಾದರೂ ದ್ರೋಹ ಬಗೆದಿದ್ದೇನೆಯೇ ಸ್ವಾಮಿ."

"ಛೆ ! ಇಲ್ಲಪ್ಪಾ ! ನಿನ್ನ ನಡತೆಯಲ್ಲಿ ನಾನು ಯಾವ ಕುಂದನ್ನೂ ಎಣಿಸಲಾರೆ."

"ನಿಮ್ಮ ಕಂಪೆನಿ ಬಿಟ್ಟು ಹೋದರೂ ನಿಮ್ಮ ಉಪಕಾರ ಮರೆಯು ವುದಿಲ್ಲ ಸ್ವಾಮಿ. ನೀವಿಟ್ಟ ಅನ್ನದಿಂದ ಬೆಳೆದ ದೇಹ ಇದು. ನಿರ್ಗತಿಕನಾಗಿ ನಾನು ನಿಮ್ಮಲ್ಲಿ ಬಂದೆ - ನೀವು ಆಶ್ರಯಕೊಟ್ಟಿರಿ. ನಾಟಕ ಕಲೆಯನ್ನು ಅಭ್ಯಾಸಮಾಡಿಕೊಳ್ಳುವುದಕ್ಕೆ ನನಗೆ ಅವಕಾಶವಾಯಿತು. ನೀವು ನನಗೆ ಅನುಗ್ರಹಿಸಿರುವ ವಿದ್ಯೆಯನ್ನೇ ರೂಢಿಸಿಕೊಳ್ಳಲು ಅವಕಾಶಕೊಡಿ. ನಾನು ಎಲ್ಲಿದ್ದರೂ ನಿಮಗೆ ಕೀರ್ತಿ ತರುತ್ತೇನಲ್ಲದೆ ಅಪಕೀರ್ತಿ ತರುವುದಿಲ್ಲ"

ಎಂದು ಹೇಳಿದ. ಶ್ರೀಕಂಠಮೂರ್ತಿಯ ಕಣ್ಣುಗಳು ತೇವಗೊಂಡಿ ದ್ದವು. ಅವನ ಬಾಯಲ್ಲಿ ಮಾತೇ ಹೊರಡದಾಯಿತು. ಸುಧಾ ತನ್ನ ಕೈಯಲ್ಲಿದ್ದ ಪುಸ್ತಕದ ಗಂಟನ್ನು ಗುಂಡೂರಾಯನ ಕೈಗೆ ಸರಿಸಿದಳು. ಅವನು ಅದನ್ನು ಮೇಜಿನ ಮೇಲಿಟ್ಟು.

"ಯಜಮಾನರ ಮಾತು ತೆಗೆದು ಹಾಕಬೇಡ ರಾಜಶೇಖರೂ."

"ಕ್ಷಮಿಸಿ ಗುಂಡೂರಾಯರೇ. ಈ ವಿಷಯದಲ್ಲಿ ನನ್ನ ನಿರ್ಧಾರ ಬದ ಲಾಯಿಸಲು ಸಾಧ್ಯವಿಲ್ಲ."

"ನೀವು ಪರಮೇಶ್ವರಪ್ಪನವರೇ !"

"ಹೇಳಿದೆನಲ್ಲಾ ಸ್ವಾಮಿ – ವಯಸ್ಸಾಯಿತ್ತು, ನನಗೆ ವಿಶ್ರಾಂತಿ ಬೇಕು."

ಶ್ರೀಕಂಠಮೂರ್ತಿ ಕ್ಷಣಕಾಲ ಸುಮ್ಮನಿದ್ದು

" ಸೂರಪ್ಪನಿಗೆ ಹೇಳಿ ಲೆಕ್ಕ ನೋಡಿ ಹಣ ಕೊಟ್ಟು ಬಿಡು ಎಂದು ಹೇಳು ಗುಂಡೂ " ಎಂದ.

ಪರಮೇಶ್ವರಯ್ಯ ಯಜಮಾನರಿಗೆ ಕೈಮುಗಿದು ಹೊರಕ್ಕೆ ಬಂದ.

ರಾಜಶೇಖರ ಯಜಮಾನರ ಎರಡು ಪಾದಗಳನ್ನು ಹಿಡಿದು ದೀರ್ಘ ದಂಡ ನಮಸ್ಕಾರಮಾಡಿದ. ಸುಧೆಯೂ ಯಜಮಾನರ ಪಾದಗಳನ್ನು ಮುಟ್ಟಿ ನಮಸ್ಕರಿಸಿದಳು.

ಶ್ರೀಕಂಠಮೂರ್ತಿ ಕೈಗೆ ಪುಸ್ತಕದ ಕಟ್ಟು ತೆಗೆದುಕೊಂಡು

" ಪುಸ್ತಕಗಳು ತೊಗೋ ಸುಧಮ್ಮಾ . . . ನನ್ನ ತಪ್ಪು ಕ್ಷಮಿಸಿಬಿಡು"

ಎಂದು ಹೇಳಿದ. ಸುಧಾ ಪುಸ್ತಕದ ಕಟ್ಟನ್ನು ತೆಗೆದುಗೂಂಡು ತನ್ನ ರೂಮಿಗೆ ಹೋದಳು. ರಾಜಶೇಖರನೂ ಹೊರಗೆ ಹೋದಮೇಲೆ ಶ್ರೀಕಂಠ ಮೂರ್ತಿ

" ಮೂವರಿಗೂ ನೂರು ನೂರು ರೂಪಾಯಿ ಸೇರಿಸಿ ಕೊಡುವಂತೆ ಸೂರಪ್ಪನಿಗೆ ಹೇಳು ಗುಂಡೂ – ಬಾಗಿಲು ಹಾಗೆಕೊಂಡು ಹೋಗು"

ಎಂದು ಹೇಳಿದವನೇ ಮಲಗಿ ಮೈತುಂಬ ಹೊದಿಕೆ ಎಳೆದುಕೊಂಡ.

## ೧೯

ಅತ್ತು ಅತ್ತು ಸುಧೆಯ ಕಣ್ಣುಗಳೆರಡೂ ಬೆಂಕಿಯ ಉಂಡೆಗಳಾಗಿದ್ದವು. ಉಕ್ಕಿ ಬರುತ್ತಿದ್ದ ದುಃಖವನ್ನು ಉಪಶಮನ ಮಾಡಿಕೊಳ್ಳಲೆತ್ನಿಸಿದಷ್ಟೂ ಅದು ತಡಸಲಿನಂತೆ ಧುಮುಕುತ್ತಿತ್ತು. ಆ ಸ್ಥಿತಿಯಲ್ಲಿಯೇ ಅವಳು ಮಂಜು ಳನ ರೂಮಿಗೆ ಬಂದಳು.

" ರಾತ್ರಿಗೆ ಹೊರಡುವುದು ನಿಜವೇ ಸುಧಾ " ಎಂದು ಮಂಜುಳಾ ಕೇಳಿದಳು.

ಪ್ರಯತ್ನ ಪೂರ್ವಕವಾಗಿ ಕಣ್ಣೀರನ್ನು ತಡೆಗಟ್ಟಿ

" ಹೊರಡುತ್ತೇನಕ್ಕ."

ಮಂಜುಳ ತಂಗಿಯನ್ನಪ್ಪಿಕೊಂಡು

" ಮುಂದೇನು ಮಾಡುತ್ತೀ ಸುಧಾ" ಎಂದು ಕೇಳಿದಳು.

" ರಾಜಶೇಖರವರು ಏನು ಹೇಳಿದರೂ ಮಾಡುತ್ತೇನೆ."

" ಅವರನ್ನಷ್ಟು ಪ್ರೀತಿಸುತ್ತಿಯಾ ?"

" ತುಂಬ ಪ್ರೀತಿಸುತ್ತೇನೆ. ಆದರೆ . . ."

" ಏನು ಆದರೆ . . ."

" ಹೆಂಡತಿ ಗಂಡನನ್ನು ಪ್ರೀತಿಸುವ ಹಾಗಲ್ಲ."

" ಇನ್ನು ಹೇಗೆ ?"

" ತಂಗಿ ಅಣ್ಣನನ್ನು ಪ್ರೀತಿಸುವ ಹಾಗೆ."

" ಹೆಣ್ಣಿಗೊಂದು ಗಂಡು ಬೇಕು ಸುಧಾ."

" ಹೆಣ್ಣಿಗೆ ಬೇಕು ನಿಜ. ಆದರೆ ನಾನು ಹೆಣ್ಣೇ ಅಲ್ಲ."

" ಇನ್ನೇನು "

" ಗುಂಡು ಕಲ್ಲು."

" ಹಾಗೆ ಹೇಳಿದರಾಗುತ್ತದೆಯೇ ? ಪ್ರಕೃತಿಯ ಎದುರುನಿಂತು ಹೋರಾಡಲು ಸಾಧ್ಯವೇ ?"

" ನೋಡೋಣ. ಪ್ರಯತ್ನ ಮಾಡುವುದರಲ್ಲಿ ಏನು ತಪ್ಪು ?-ಮುಂದೆ ನೀನೇನು ಮಾಡುತ್ತೀ ?"

" ನನ್ನ ಬಾಳು ಏನಾಗಿದೆಯೆಂಬುದು ನಿನಗೇ ಗೊತ್ತಿದೆಯಲ್ಲ !"

" ಅಣ್ಣಯ್ಯ ವಿಶ್ವಾಸವಾಗಿದ್ದಾರೆಯೇ ?"

" ಇದ್ದಾರೆ."

" ನಾನು ನಿನಗಿಂತ ಚಿಕ್ಕವಳು – ನಿನಗೆ ಉಪದೇಶ ಮಾಡುತ್ತಿದ್ದೀನೆಂದು ಕೋಪಮಾಡಿಕೊಳ್ಳಬೇಡ. ಇವತ್ತು ನಮ್ಮ ಬಾಳು ಕವಲೊಡೆಯುತ್ತಿದೆ. ಮುಂದಕ್ಕೆ ಒಬ್ಬರನ್ನೊಬ್ಬರು ಕಾಣುತ್ತೇವೆಯೋ ಇಲ್ಲವೋ – ನನಗೆ ತಿಳಿದ ಒಂದು ಮಾತು ಈಗಲೇ ಹೇಳಿಬಿಡುತ್ತೇನೆ."

" ಹೇಳು ಸುಧಾ."

" ಯಾರದೋ ಅವಿವೇಕದಿಂದ ನಿನ್ನ ಜೀವನ ಕೆಟ್ಟುಹೋಯಿತು. ಅದನ್ನು ನೇರ ಮಾಡಿಕೊಳ್ಳುವುದು ಸಾಧ್ಯವಾಗಿದ್ದರೂ ನೀನು ಪ್ರಯತ್ನಿಸಲಿಲ್ಲ. ಹುಚ್ಚು ಹೊಳೆಯಲ್ಲಿ ಸೋರೆಬುರುಡೆ ತೇಲಿ ಹೋಗುವಂತೆ ಹೋದೆ. ಉಕ್ಕಿ

ಹೋದ ಹಾಲು ಕಟ್ಟಿಕೊಂಡು ಅತ್ತರೆ ಪ್ರಯೋಜನವಿಲ್ಲ. ಆದರೆ ಈಗಲೂ ಕೈಮಿಂಚಿ ಹೋಗಿಲ್ಲ. ಅಣ್ಣಯ್ಯನವರನ್ನು ನೀನು ನಿಜವಾಗಿ ಪ್ರೀತಿಸುತ್ತಿದ್ದರೆ ಅವರ ಜತೆಯಲ್ಲೇ – ಕಷ್ಟವಾಗಲಿ ಸುಖವಾಗಲಿ – ಬಾಳು ನಡೆಸಲು ನೀನು ನಿಶ್ಚಯಿಸಬೇಕು. ಕೀಳು ಸುಖದ ಬೆನ್ನು ಹತ್ತಿ ಹೋದರೆ ಮನಸ್ಸಿಗೆ ಶಾಂತಿ ಸಿಕ್ಕುವುದಿಲ್ಲ ಮಂಜೂ. ಸುಖಬೇಕು ಎಂದು ಎಲ್ಲರೂ ಬಯಸುತ್ತೇವೆ - ಅದು ತಪ್ಪು ಎಂದು ನಾನು ಅನ್ನುವುದಿಲ್ಲ. ಆದರೆ ಸುಖವನ್ನು ದೊರಕಿಸಲು ಕೀಳು ದಾರಿಯಲ್ಲದೆ ಬೇರೆ ದಾರಿಯೇ ಇಲ್ಲವೆ ? ಎಂಬುದನ್ನು ನೀನು ಆಲೋಚಿಸ ಬೇಕು . . . ಆಲೋಚಿಸುತ್ತೇನೆಂದು ನನಗೆ ಮಾತು ಕೊಡುವೆಯಾ ?"

"ಖಂಡಿತವಾಗಿ ಆಲೋಚಿಸುತ್ತೇನೆ ಸುಧಾ . . . ಅಮ್ಮನನ್ನು ನೋಡಿ ದ್ದೆಯಾ ?"

"ಅವಳನ್ನು ನೋಡಿಕೊಂಡೇ ಇಲ್ಲಿಗೆ ಬರುತ್ತಿದ್ದೇನೆ."

"ಏನು ಹೇಳಿದಳು."

"ನಾನು ಹೊರಡುವ ವಿಷಯ ತಿಳಿಸಿದೆ. ಹಾಳಾಗಿ ಹೋಗು ಎಂದಳು. ಆಶೀರ್ವಾದ ಮಾಡಮ್ಮ ಎಂದು ನಮಸ್ಕಾರಮಾಡಿದೆ. 'ಯಾವೋ ನ್ನೋ ಕಟ್ಟಿಕೊಂಡು ನೀನು ಓಡಿ ಹೋಗುತ್ತಿರುವಾಗ ನನ್ನ ಆಶೀರ್ವಾದವೇಕೆ ಅವನ ಆಶೀರ್ವಾದ ಕೇಳು' ಎಂದಳು. ನಾವು ಮಕ್ಕಳು, ಅವಳು ತಾಯಿ ಎನ್ನುವ ಭಾವನೆ ಅವಳಿಗೆ ಸಂಪೂರ್ಣವಾಗಿ ಹೋಗಿಬಿಟ್ಟಿದೆ ಮಂಜೂ."

"ಹುಚ್ಚುಹುಡುಗಿ ಅದನ್ನಿವತ್ತು ಕಂಡುಕೊಂಡೆಯಾ ! ಆ ವಿಷಯ ನನಗೆ ಬೆಂಗಳೂರಿನಲ್ಲಿಯೇ ಗೊತ್ತಾಗಿತ್ತು."

"ನೋಡಿದ್ದು ಮುಗಿಯಿತಲ್ಲ ಎಂದು ನಾನು ಹೊರಟೆ – ಸ್ವಲ್ಪ ಇರು ಸುಧಾ ಎಂದು ತನ್ನ ಟ್ರಂಕ್ ತೆಗೆದು ಲೆಕ್ಕನೋಡಿ ಇದುವರೆಗೆ ಕಂಪೆನಿ ಯಜ ಮಾನರಿಂದ ನನಗೆ ಬಂದಿರುವುದು ಮೂರು ಸಾವಿರದ ಮೂನ್ನೂರು ರೂಪಾಯಿ. ಅವರು ಕೊಟ್ಟಿದ್ದ ಅಡ್ವಾನ್ಸ್ ಪಣದಲ್ಲಿ ಸಾಲ ತೀರಿಸಿದ್ದು ನಿನಗೆ ಗೊತ್ತೇ ಇದೆ. ಈ ಹಣದಲ್ಲಿ ಒಂದು ಭಾಗ ನಿನ್ನದು – ಒಂದು ಭಾಗ ನಿಮ್ಮಕ್ಕನದು - ಒಂದು ಭಾಗ ನನ್ನದು. ಹಿಡಿ ಎಂದು ಹೇಳಿ ನನ್ನ ಕೈಯಲ್ಲಿ ಸಾವಿರದ ನೂರು ರೂಪಾಯಿ ಕೊಟ್ಟಳು. ಮತ್ತೆ ಸಾವಿರದ ನೂರು ತೆಗೆದು ಅದನ್ನು ನಿಮ್ಮಕ್ಕ

ನಿಗೆ ಕೊಟ್ಟು ಬಿಡು ಎಂದಳು. ಹಣವನ್ನು ಅವಳಿಗೆ ಹಿಂದಕ್ಕೆ ಕೊಡ ಹೋದೆ – ಅವಳು ಸ್ವೀಕರಿಸಲಿಲ್ಲ."

ಎಂದು ಮಂಜುಳನ ಕೈಗೆ ಸಾವಿರದನೂರು ರೂಪಾಯಿ ಕೊಟ್ಟಳು.

ಮಂಜುಳಾ ಒಂದು ನೂರು ರೂಪಾಯಿಯ ನೋಟು ತೆಗೆದುಕೊಂಡು ತಂಗಿಯ ಕೈಯಲ್ಲಿಟ್ಟು.

" ಅಕ್ಕಂದಿರು ತಮ್ಮ ತಂಗಿಯರಿಗೆ ಎಷ್ಟೋ ಮಾಡುತ್ತಾರೆ. ನಾನು ನಿನಗೆ ಏನೂ ಮಾಡಿಲ್ಲ ಸುಧಾ. ನನ್ನ ಹೆಸರಿನಲ್ಲಿ ಒಂದು ಸೀರೆ ತೆಗೆದು ಕೊಂಡು ಉಟ್ಟುಕೋ."

ಎಂದಳು. ಸುಧಾ ಅಕ್ಕನ ಪಾದಮುಟ್ಟಿ ನಮಸ್ಕರಿಸಿದಳು. ಅಕ್ಕತಂಗಿ ತಬ್ಬಿಕೊಂಡು ಕಣ್ಣೀರು ಸುರಿಸಿದರು.

ರಾತ್ರಿ ನಾಟಕದ ಪೂರ್ಣ ಜವಾಬ್ದಾರಿ ಗುಂಡೂರಾಯನ ಮೇಲೆ ಬಿತ್ತು. ಪರಮೇಶ್ವರಯ್ಯ, ಸುಧಾ, ರಾಜಶೇಖರ ಮೂವರ ಪಾತ್ರಗಳಿಗೂ ಬೇರೆಯವ ರನ್ನು ಅವನು ಹೊಂದಿಸಬೇಕಾಗಿತ್ತು. ಪರಮೇಶ್ವರಯ್ಯನ ಪಾತ್ರ ಸಂಪಂಗಿಗೂ, ಸುಧೆಯ ಪಾತ್ರ ನಾಗರತ್ನನಿಗೂ, ರಾಜಶೇಖರನ ಪಾತ್ರ ಭುವನೇಶ್ವರಯ್ಯ ನಿಗೂ ವಹಿಸಿ ಅವನು ಕೆಲಸ ತೂಗಿಸಲು ನಿಶ್ಚಯಿಸಿದ.

ರೈಲಿಗೆ ಹೊರಡುವ ಮುನ್ನ ಸುಧಾ ಕಂಪೆನಿಯ ನಟನಟಿಯರಿಗೆಲ್ಲಾ ಹೇಳಿ ಎಲ್ಲರ ಅಪ್ಪಣೆ ಪಡೆದುಕೊಂಡಳು. ಎಲ್ಲರ ಮುಖವೂ ಕಳಾಹೀನವಾ ಗಿತ್ತು. ಸ್ಟೇಷನ್ನಿಗೆ ಬರಲಾಗದಿದ್ದಕ್ಕೆ ಗುಂಡೂರಾಯ ವ್ಯಸನ ಸೂಚಿಸಿದ.

ಶಿವಮೊಗ್ಗ ಬಿಟ್ಟು ಹೊರಟ ರೈಲಿನಲ್ಲಿ ಸುಧಾ ಪರಮೇಶ್ವರಯ್ಯ, ರಾಜಶೇಖರ ಪ್ರಯಾಣ ಮಾಡಿದರು.

ಸುಧಾ ಅಳುತ್ತಲೇ ಇದ್ದಳು. ಬೀರೂರು ಸ್ಟೇಷನ್ ಬಂದಾಗ ರಾಜ ಶೇಖರ, ಪರಮೇಶ್ವರಯ್ಯ ತಮ್ಮ ಸ್ಥಳ ಬಿಟ್ಟಿದ್ದು ಸುಧಾ ಮಲಗಲು ಅನುಕೂಲ ಮಾಡಿಕೊಟ್ಟರು.

ರೈಲು ಬೀರೂರು ಬಿಟ್ಟು ಹೊರಡಲು ಪರಮೇಶ್ವರಯ್ಯ

" ಮುಂದೆ ಏನು ಮಾಡಬೇಕೆಂದಿರುವೆ ರಾಜಶೇಖರಪ್ಪ."

" ಅದನ್ನು ಸಾವಕಾಶವಾಗಿ ಹೇಳುತ್ತೇನೆ. ನೀವು ಹಳ್ಳಿಗೆ ಹೋಗಲು ನಿರ್ಧರಿಸಿರುವಿರೇನು ?"

" ಬೆಂಗಳೂರಿನಲ್ಲಿ ಕುಳಿತುಕೊಂಡೇನುಮಾಡಲಿ. ಹಳ್ಳಿಗೆ ಹೋಗಿ ಭೂಮಿ ನೋಡಿಕೊಂಡರೆ ನಾಲ್ಕು ಕಾಳು ಹೆಚ್ಚಾಗಿ ಭತ್ತ ರಾಗಿ ಸಿಕ್ಕುತ್ತದೆ."

" ನಿಮ್ಮ ಜಮೀನು ಎಲ್ಲಿದೆ ?"

" ಬನ್ನೇರು ಘಟ್ಟದ ಬಳಿ."

" ಬೆಂಗಳೂರಿಗೆ ತುಂಬ ಹತ್ತಿರವಾಗಿದೆ. ಬೆಂಗಳೂರಿನಲ್ಲೇ ಇದ್ದು ಕೊಂಡು ನೀವು ಜಮೀನು ನೋಡಿಕೊಳ್ಳುವುದಕ್ಕಾಗುವುದಿಲ್ಲವೇ ?"

" ನಾನಿದ್ದು ಏನು ಮಾಡಬೇಕು ?"

" ಹೇಳುತ್ತೇನೆ. ನನಗೆ ನಿಮ್ಮ ಸಹಾಯ ಬೇಕಾಗಿದೆ."

" ನಾಳೆ ನೀನೂ ಸುಧಾ ಎಲ್ಲಿಗೆ ಹೋಗುತ್ತೀರಿ ? "

" ಹೊಟೇಲಿಗೋ ಛತ್ರಕ್ಕೋ ಹೋಗಿ ಮುಂದಿನ ವಿಚಾರ ಮಾಡು ತ್ತೇವೆ."

" ಹೊಟೇಲೂ ಬೇಡ - ಛತ್ರವೂ ಬೇಡ. ನನ್ನ ಜತೆ ಬನ್ನಿ-ಬೆಂಗಳೂರಿನಲ್ಲಿ ನನ್ನ ಮಗಳ ಮನೆ ಇದೆ."

" ಅವರಿಗೇಕೆ ತೊಂದರೆ ? "

" ತೊಂದರೆಯೇನು ಇಲ್ಲ. ನನ್ನ ಅಳಿಯಂದಿರು ಅನುಕೂಲವಾಗಿ ದ್ದಾರೆ. ನಾಲ್ಕು ದಿವಸ ನಮ್ಮಿಬ್ಬರಿಗೆ ಅನ್ನ ಹಾಕಿದರೆ ಅವರಿಗೇನೂ ಬಡತನ ಬರುವುದಿಲ್ಲ."

" ಅವರಿಗೇನು ಕೆಲಸ."

" ಕಂಟೋನ್ಮೆಂಟಿನ ಒಂದು ರೇಡಿಯೋ ಕಂಪೆನಿಯಲ್ಲಿ ಎಂಜನಿಯರಾಗಿ ದ್ದಾರೆ."

" ಅವರಿಗೆ ಮಕ್ಕಳೆಷ್ಟು."

" ನಾಲ್ಕು ಜನ. ದೊಡ್ಡ ಮಗ ಚಂದ್ರ – ಹೈಸ್ಕೂಲಿನಲ್ಲಿದ್ದಾನೆ. ಎರಡನೆಯವನೇ ಶಂಕರ – ಅವನು ಮಿಡ್ಲ್‌ಸ್ಕೂಲಿನಲ್ಲಿ ಓದುತ್ತಿದ್ದಾನೆ. ಮೂರನೆಯದು ಹೆಣ್ಣು ಸ್ವರ್ಣ – ಅವಳು ಪ್ರೈಮರಿ ಸ್ಕೂಲಿನಲ್ಲಿದ್ದಾಳೆ. ನಾಲ್ಕನೆಯದೇ ವಿಮಲಾ – ಕೈ ಮಗು . . . ನನ್ನ ಜತೆ ಬರುವಿರಷ್ಟೆ !"

" ಬರುವುದಕ್ಕೇನೂ ಅಡ್ಡಿಯಿಲ್ಲ. ಬೆಂಗಳೂರಿನಲ್ಲಿ ಸಂಸಾರ ಕಷ್ಟ. ಅವರಿಗೆ ತೊಂದರೆಯಾಗುವುದೇನೋ ಎಂದು ಯೋಚನೆ ಮಾಡುತ್ತಿದ್ದೇನೆ."

" ರಾಜಶೇಖರಪ್ಪ- ನನಗಿರುವವಳು ಸೌಭಾಗ್ಯ ಒಬ್ಬಳೇ ಮಗಳು. ನಾನು ಸಂಪಾದಿಸುವುದೆಲ್ಲಾ ಅವಳಿಗೇ ಕೊಡುತ್ತಿದ್ದೇನೆ – ಹಳ್ಳಿಯಿಂದ ಬರುವ ಭತ್ತ ರಾಗಿಯನ್ನು ಅವರಿಗೇ ಕೊಡುತ್ತಿದ್ದೇನೆ."

" ಮಗಳ ಮನೆಯಿದ್ದುಕೊಂಡೂ ನೀವೇಕೆ ಕಂಪೆನಿಯಲ್ಲಿ ದುಡಿಯುತ್ತಿದ್ದಿರಿ ಪರಮೇಶ್ವರಯ್ಯನವರೇ."

" ಹೇಳಿದೆನಲ್ಲಾ - ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲವಾಗಲಿ ಎಂದು ಕಂಪೆನಿಯಲ್ಲಿದ್ದೆ."

" ಈಗ ನಮ್ಮಿಂದ ನಿಮಗೆ ತೊಂದರೆಯಾಯಿತು."

" ಏನು ಇಲ್ಲ ರಾಜಶೇಖರ್. ಸುಧಾ ನಡತೆ ಕಂಡು ನನಗೆ ತುಂಬ ಸಂತೋಷವಾಯಿತು. ಸೌಭಾಗ್ಯ ಒಬ್ಬಳೇ ಮಗಳು ಎಂದುಕೊಂಡಿದ್ದೆ ಇನ್ನು ಮೇಲೆ ಸೌಭಾಗ್ಯ, ಸುಧಾ ಇಬ್ಬರು ಮಕ್ಕಳು ಎಂದುಕೊಳ್ಳುತ್ತೇನೆ."

" ಹಾಗೇ ಒಬ್ಬ ಗಂಡು ಮಗನೂ ಇದ್ದಾನೆ ಎಂದುಕೊಳ್ಳಿ"

ಪರಮೇಶ್ವರಯ್ಯನ ಕಣ್ಣುಗಳಿಂದ ಆನಂದ ಬಾಷ್ಪಗಳುದುರಿದವು.

ಬೆಳಿಗ್ಗೆ ರೈಲು ಇಳಿದೊಡನೆಯೇ ಪರಮೇಶ್ವರಯ್ಯ ಬಿಡದೆ ರಾಜಶೇಖರ ಸುಧೆಯನ್ನು ತನ್ನ ಮಗಳ ಮನೆಗೆ ಕರೆದುಕೊಂಡು ಹೋದ.

ಜಟಕಾಗಾಡಿ ಕಬ್ಬನ್‌ಪೇಟೆಯಲ್ಲಿ ರಂಗಸ್ವಾಮಿಯ ಮನೆಮುಂದೆ ಬಂದು ನಿಂತಿತು. ಕ್ಷೌರ ಮಾಡಿಕೊಳ್ಳುತ್ತಿದ್ದ ರಂಗಸ್ವಾಮಿ ಮಾವನವರು ಗಾಡಿಯಿಂದಿಳಿದುದನ್ನು ಕಂಡು ಹೆಂಡತಿಯನ್ನು ಕೂಗಿದ. ಸೌಭಾಗ್ಯಮ್ಮ ತಂದೆಗೂ ತಂದೆಯಜತೆಯಲ್ಲಿ ಬಂದಿದ್ದವರಿಗೂ ಸ್ವಾಗತ ಬಯಸಿದಳು. ರಂಗಸ್ವಾಮಿಯೂ ಕ್ಷೌರ ಮುಗಿಸಿಕೊಂಡು ಬಂದ. ಅವನ ಮಗ ಚಂದ್ರ ಸಾಮಾನುಗಳನ್ನು ಒಳಗೆ ತರಿಸಿಡುವ ವ್ಯವಸ್ಥೆ ನೋಡಿಕೊಂಡ.

" ನೀವು ಬರುವ ವಿಷಯ ಒಂದು ಕಾರ್ಡು ಬರೆಯಬಾರದಾಗಿತ್ತೇ. ಸ್ಟೇಷನ್ ಹತ್ತಿರ ಬರುತ್ತಿದ್ದೆ."

" ಇದ್ದಕ್ಕಿದ್ದಂತೆ ಹೊರಡಬೇಕಾಯಿತು. ಬರೆಯುವುದಕ್ಕಾಗಲಿಲ್ಲಪ್ಪ."

ಎಂದು ರಾಜಶೇಖರನ ಪರಿಚಯ ರಂಗಸ್ವಾಮಿಗೆ ಮಾಡಿಸಿಕೊಟ್ಟು ಸೌಭಾಗ್ಯನ ಕಡೆ ತಿರುಗಿ

" ನಿನಗೊಬ್ಬಳು ತಂಗಿಯನ್ನು ಕರೆದುಕೊಂಡು ಬಂದಿದ್ದೇನೆ ಅಮ್ಮಯ್ಯ."

ಎಂದ. ಸೌಭಾಗ್ಯಮ್ಮ ಪ್ರೀತಿಯಿಂದ ಸುಧೆಯನನ್ನು ಒಳಕ್ಕೆ ಕರೆದು ಕೊಂಡು ಹೋದಳು.

ಒಳಗೆ ಯಾರೋ ರೇಡಿಯೋ ತಿರುಗಿಸಿದ್ದರು. ಎ. ಐ. ಆರ್. ಸಿಗ್ನಲ್ ಆಗಿ, ಮದರಾಸಿನಿಂದ ವಾದ್ಯಗೋಷ್ಠಿ ಕೇಳಿಬಂತು.

" ರೇಡಿಯೋ ಹಾಕುತ್ತಿರುವವರು ಯಾರು ?" ಎಂದು ಪರಮೇಶ್ವ ರಯ್ಯ ಕೇಳಿದ

" ಸ್ವರ್ಣ."

" ತುಂಟಿ ಇಷ್ಟು ಬೇಗ ಎದ್ದಳೇನು ?"

" ರೇಡಿಯೋ ಕೇಳೋಕೆ ಏಳುಗಂಟೆಗೇ ಎದ್ದು ಕುಳಿತುಬಿಡುತ್ತಾಳೆ. ರೇಡಿಯೋ ಸಿಲಾನ್ ಎಲ್ಲಾ ಅವಳ ಬಾಯಲ್ಲೇ ಇದೆ."

ಪರಮೇಶ್ವರಯ್ಯ ಒಳಗೆ ಹೋಗಿ ಸ್ವರ್ಣನನ್ನು ಕರೆದುಕೊಂಡು ಬಂದು

" ಇವರ ಪರಿಚಯ ಮಾಡಿಕೊಳ್ಳೇ ಸ್ವರ್ಣ. ಇವರು ಯಾರು ಗೊತ್ತೇ !"

" ಯಾರು ತಾತ."

" ನನ್ನ ಜತೆ ಪಾರ್ಟುಮಾಡುತ್ತಿದ್ದರು."

ತಾತನ ಮಾತು ನಂಬದೆ ಸ್ವರ್ಣ ರಾಜಶೇಖರನನ್ನು ದಿಟ್ಟಿಸಿ ನೋಡಿ

" ಅವರಿನ್ನೂ ಹುಡುಗರ ಹಾಗಿದ್ದಾರೆ."

" ನಾಟಕದಲ್ಲಿ ' ಮುದುಕರೇ ಪಾರ್ಟುಮಾಡೋದು ಎಂದು ತಿಳಿದು ಕೊಂಡಿದ್ದೀಯೇನು ?"

ರಾಜಶೇಖರ ಅವಳನ್ನು ಹತ್ತಿರ ಕರೆದ. ಸ್ವರ್ಣ ನಾಚಿಕೊಂಡು ತಾತನ ಬಳಿಯಲ್ಲೇ ಇದ್ದಳು.

" ಹೋಗು – ನಾಚಿಕೊಬಾರದು. ಅವರೂ ನಮ್ಮೋರೇ."

ಎಂದು ಪರಮೇಶ್ವರಯ್ಯ ಸ್ವರ್ಣನನ್ನು ರಾಜಶೇಖರನ ಹತ್ತಿರ ಕಳಿಸಿ ಕೊಟ್ಟ. ರಾಜಶೇಖರ ಅವಳ ಕೈ ಹಿಡಿದು

" ನೀನು ತುಂಬ ಹಾಡುತ್ತೀಯಂತಲ್ಲಮ್ಮ."

" ನೀವು ಹಾಡ್ತೀರೇನ್ರಿ ?"

" ನನಗೇನೂ ಬರಲ್ಲಮ್ಮ. ನಿಮ್ಮ ತಾತ ಅವರು ಘನವಾಗಿ ಹಾಡುತ್ತಾರೆ."

" ತಾತ ಬರೀ ಸರಿಗಮ ಹಾಡ್ತಾನೆ."

" ಒಳಗೆ ಒಬ್ಬರು ಅಕ್ಕ ಬಂದಿದ್ದಾರೆ ನೋಡು ಅವರು ಚೆನ್ನಾಗಿ ಹಾಡುತ್ತಾರೆ."

ಎಂದು ಪರಮೇಶ್ವರಯ್ಯ ಹೇಳಲು ಸ್ವರ್ಣ ಚಂಗನೆ ಒಳಕ್ಕೆ ಹಾರಿದಳು.

ಚಂದ್ರ ಎಲ್ಲರಿಗೂ ಕಾಫಿ ತಂದುಕೊಟ್ಟ.

" ಇವನೇ ನನ್ನ ದೊಡ್ಡ ಮಗ ಸರ್. ಹೈಸ್ಕೂಲಿನಲ್ಲಿದ್ದಾನೆ."

ಚಂದ್ರ ರಾಜಶೇಖರನಿಗೆ ಕೈ ಮುಗಿದ.

" ಶಂಕರ, ವಿಮ್ಮಿ ಎದ್ದಿಲ್ಲವೇ ಚಂದ್ರೂ."

" ಇನ್ನೂ ಇಲ್ಲ ತಾತ."

" ಸ್ನಾನಕ್ಕೆ ನೀರು ಕಾದಿದೆಯೇ ಚಂದ್ರೂ."

ಎಂದು ರಂಗಸ್ವಾಮಿ ಕೇಳಿದ. ' ಕಾದಿದೆ ' ಎಂದು ಚಂದ್ರ ಉತ್ತರ ಕೊಡಲು ರಂಗಸ್ವಾಮಿ ರಾಜಶೇಖರನ ಕಡೆ ತಿರುಗಿ

" ನಾನು ಎಂಟೂವರೆಗೆಲ್ಲಾ ಅಂಗಡಿಯಲ್ಲಿರಬೇಕು. ಕ್ಷಮಿಸಿ. ಸಂಕೋಚಮಾಡಿಕೊಳ್ಳಬೇಡಿ. ಯಜಮಾನರು ಇರುತ್ತಾರೆ. ನಿಮ್ಮ ಮನೆ ಎಂದು ತಿಳಿದುಕೊಳ್ಳಿ."

ಎಂದು ಉಪಚಾರ ಹೇಳಿ

" ಚಂದ್ರಾ, ಮುಂದಿನ ರೂಮಿನಲ್ಲಿ ರಾಜಶೇಖರಯ್ಯನವರ ಸಾಮಾನಿಟ್ಟು, ಅವರ ಯೋಗಕ್ಷೇಮ ನೋಡಿಕೊಳ್ಳಪ್ಪಾ."

ಎಂದು ಹೇಳಿ ಸ್ನಾನಕ್ಕೆ ಹೋದ.

" ನೋಡಿ – ಈಗ ಸ್ನಾನಮಾಡಿ ಸ್ವಲ್ಪ ತಿಂಡಿ ತಿಂದು ಹೋಗುತ್ತಾನೆ– ರಾತ್ರಿ ಮನೆಗೆ ಬರುವುದು ಒಂಭತ್ತು ಗಂಟೆಗೇ. ಹನ್ನೆರಡು ಗಂಟೆ ದುಡೀತಾನೆ."

" ಅಷ್ಟು ಕೆಲಸವೇ ?"

" ಅಂಗಡಿ ಸಾವಕಾರನಿಗೆ ರಂಗಸ್ವಾಮಿ ಎಂದರೆ ಪಂಚಪ್ರಾಣ. ರಂಗಸ್ವಾಮಿಯನ್ನು ಕೇಳದೆ ಯಾವ ಕೆಲಸವನ್ನೂ ಮಾಡುವುದಿಲ್ಲ."

" ಊಟಕ್ಕೆ ಎಷ್ಟು ಹೊತ್ತಿಗೆ ಬರುತ್ತಾರೆ."

" ಬೆಳಿಗ್ಗೆ ಅಲ್ಲೇ ಹೋಟಲಿನಲ್ಲೇ ಊಟಮಾಡುತ್ತಾನೆ. ರಾತ್ರಿ ಒಪ್ಪತ್ತೇ ಮನೆಯಲ್ಲಿ ಊಟ."

ಸುಧಾ ಒಳಗೆ ಹಾಡುತ್ತಿದ್ದುದು ಕೇಳಿ ಬಂತು. ಪರಮೇಶ್ವರಯ್ಯ ನಗುತ್ತಾ

" ಸ್ವರ್ಣ ಸುಧೆಯನ್ನು ಹಾಡಲಿಕ್ಕೆ ಹಚ್ಚಿದ್ದಾಳೆ. ಆ ಹುಡುಗೀಗೆ ಹಾಡೂಂದ್ರೆ ಏನು ಹುಚ್ಚೋ !"

ಎಂದು ಅಭಿಮಾನದಿಂದ ನುಡಿದ.

ಅದೇ ಹಾಸಿಗೆ ಬಿಟ್ಟು ಎದ್ದಿದ್ದ ಶಂಕರ ಮುಖ ಕೂಡ ತೊಳೆಯದೆ ಬಂದು ತಾತನ ಕುತ್ತಿಗೆಗೆ ಜೋತು ಬಿದ್ದ. ಪರಮೇಶ್ವರಯ್ಯ ಮೊಮ್ಮಗನನ್ನು ಅಪ್ಪಿದ.

" ಯಾವಾಗ ಬಂದೆ ತಾತ.

ಈಗ ತಾನೇ ಬಂದೆನಪ್ಪಾ."

" ನನಗೆ ಚೆಂಡು ತಂದೆಯಾ ?"

" ಇಲ್ಲಪ್ಪಾ – ಮರೆತು ಬಿಟ್ಟೆ.

" ಹೋಗು ತಾತ – ನೀನು ಬಲೆ ಸುಳ್ಳು ಹೇಳುತ್ತೀ"

" ನಿನಗೆ ಎಂಥಾ ಚೆಂಡು ಬೇಕಪ್ಪ" ಎಂದು ರಾಜಶೇಖರ ಕೇಳಿದ.

" ಬ್ಲೋ ಮಾಡೋದು ದೊಡ್ಡ ಚೆಂಡು ತಂದು ಕೊಡ್ತೀನೀಂತ ತಾತ ಹೇಳಿದ್ದ."

" ಇವನ ಜ್ಞಾಪಕ ನೋಡಿ – ನಾನು ಹೇಳಿ ಮೂರು ತಿಂಗಳಾಯಿತು. ಇನ್ನೂ ಅದನ್ನು ಮರೆತಿಲ್ಲ. ಹೋಗು ಶಂಕರ, ಮುಖ ತೊಳೆದುಕೊಂಡು ಬಾ."

ಎಂದು ಮೊಮ್ಮಗನನ್ನು ಒಳಕ್ಕೆ ಕಳಿಸಿಕೊಟ್ಟ.

ರಂಗಸ್ವಾಮಿ ಸ್ನಾನ ಮುಗಿಸಿ, ಬಟ್ಟೆ ಹಾಕಿಕೊಂಡು ತೊಟ್ಟಿಯಲ್ಲೇ

ಬಂದು ಕುಳಿತು ಷೂಸ್ ಹಾಕಿಕೊಳ್ಳಲಾರಂಭಿಸಿದ. ಚಂದ್ರ ಅವನಿಗೆ ಒಂದು ತಟ್ಟೆಯಲ್ಲಿ ಚಪ್ಪಾತಿ, ಪಲ್ಯ, ಚಟ್ಣಿ ತಂದುಕೊಟ್ಟ.

" ಅವರಿಗೂ ತಂದುಕೊಡು." ಎಂದು ರಂಗಸ್ವಾಮಿ ಹೇಳಿದ."

" ಈಗಲೇ ಬೇಡ. ಸ್ನಾನಮಾಡಿ ತೆಗೆದುಕೊಳ್ಳುತ್ತೇವೆ."

" ಹಾಗಾದರೆ ಕಾಫಿ ತಂದು ಕೊಡು ಚಂದ್ರಾ " ಎಂದು ಹೇಳಿದ.

ಚಂದ್ರ ಎಲ್ಲರಿಗೂ ಕಾಫಿ ತಂದುಕೊಟ್ಟ.

ರಂಗಸ್ವಾಮಿ ತಿಂಡಿ ತಿನ್ನುತ್ತಾ

" ನೀವು ಬಂದ ಕೂಡಲೆ ನಾನು ಹೊರಟು ಬಿಡಬೇಕಾಗಿದೆ. ಏನೂ ತಿಳಿದುಕೊಳ್ಳಬೇಡಿ. ಸಾಧ್ಯವಾದರೆ ಮಧ್ಯಾಹ್ನ ರಜಾ ತೆಗೆದುಕೊಂಡು ಊಟಕ್ಕೆ ನಿಮ್ಮ ಜತೆಗೆ ಬರುತ್ತೇನೆ. ನನಗೆ ಕಾಯಬೇಡಿ – ಊಟ ಮಾಡಿರಿ."

" ನಿಧಾನವಾಗಿ ಬನ್ನಿ ರಂಗಸ್ವಾಮಿಗಳೇ. ಏನೂ ತೊಂದರೆ ಪಟ್ಟು ಕೊಳ್ಳಬೇಡಿ " ಎಂದು ರಾಜಶೇಖರ ಹೇಳಿದ.

ರಂಗಸ್ವಾಮಿ ಕಾಫಿ ಕುಡಿದವನೇ ಬೈಸಿಕಲ್ ತೆಗೆದುಕೊಂಡು ಹೊರಟು ಬಿಟ್ಟ.

" ಇದು ನಿಮ್ಮ ಅಳಿಯಂದಿರ ಸ್ವಂತ ಮನೆಯೇ ?"

" ಇಲ್ಲಪ್ಪ – ಬಾಡಿಗೆ ಮನೆ. ನಲವತ್ತು ರೂಪಾಯಿ ಬಾಡಿಗೆ ಕೊಡುತ್ತಾರೆ. ದೀಪ ನೀರು ಎಲ್ಲಾ ಸೇರಿ ಐವತ್ತಾಗುತ್ತದೆ . . . ನಿನ್ನ ಮುಂದಿನ ಯೋಚನೆಯೇನು, ನಾನು ಬೆಂಗಳೂರಿನಲ್ಲಿ ನಿಂತು ಏನು ಮಾಡ ಬೇಕು ಹೇಳು."

" ಈಗ ಬೇಡಿ. ಸಂಜೆಗೆ ಮಾತನಾಡೋಣ. ನಿಮ್ಮ ಅಳಿಯಂದಿರೂ ಮನೆಗೆ ಬರಲಿ. ನಾನು ಒಂದು ನಾಟಕ ಓದುತ್ತೇನೆ – ಅದನ್ನು ನೀವೆಲ್ಲಾ ಕೇಳಿ ಅಭಿಪ್ರಾಯ ತಿಳಿಸಿ. ಮುಂದೆ ಮಾತನಾಡೋಣ."

ಚಂದ್ರ ಬಂದು ಇಬ್ಬರನ್ನೂ ಸ್ನಾನಕ್ಕೆಬ್ಬಿಸಿದ.

ಪರಮೇಶ್ವರಯ್ಯ, ರಾಜಶೇಖರ ಸ್ನಾನ ಮುಗಿಸಿ ಬರುವಷ್ಟರಲ್ಲಿ ಎಲ್ಲ ರಿಗೂ ಸೌಭಾಗ್ಯ ಊಟದ ಮನೆಯಲ್ಲಿ ಎಲೆಹಾಕಿ ತಿಂಡಿ ಬಡಿಸಿದ್ದಳು.

ಪರಮೇಶ್ವರಯ್ಯ ಸುಧೆಯನ್ನು ನೋಡಿ

" ನೀನೂ ಕುಳಿತುಕೊಳ್ಳಮ್ಮ" ಎಂದ.

" ನಾನು ಅಕ್ಕಾವರ ಜತೆ ಕುಳಿತುಕೊಳ್ಳುತ್ತೇನೆ " ಎಂದಳು.

ಸ್ವರ್ಣ ಸುಧೆಗೆ ಗಂಟೇ ಬಿದ್ದಿದ್ದಳು. ಸುಧಕ್ಕನ ಜತೆಯಲ್ಲೇ ತಾನೂ ತಿಂಡಿ ತಿನ್ನುವುದಾಗಿ ಹಟಮಾಡಿದಳು.

ಪರಮೇಶ್ವರಯ್ಯ, ರಾಜಶೇಖರನ ಜತೆಯಲ್ಲಿ ಚಂದ್ರ, ಶಂಕರ ಕುಳಿತು ಕೊಂಡರು.

ಉಪಾಹಾರ ಮುಗಿದ ಮೇಲೆ ರಾಜಶೇಖರ ಬಟ್ಟೆ ಹಾಕಿಕೊಂಡು

" ನಾನು ಸ್ವಲ್ಪ ಪೇಟೆ ಕಡೆ ಹೋಗಿಬರುತ್ತೇನೆ. ಊಟಕ್ಕೆ ಕಾಯ ಬೇಡಿ."

" ಊಟಕ್ಕೆ ಇನ್ನೆಲ್ಲಿಯೂ ಹೋಗಿ ಬಿಡಬೇಡಪ್ಪ."

" ಈ ಊರಿನಲ್ಲಿ ನನಗೆ ಅನ್ನ ಹಾಕುವವರು ಯಾರು ? ಖಂಡಿತ ಇಲ್ಲಿಗೇ ಬರುತ್ತೇನೆ ಪರಮೇಶ್ವರಯ್ಯನವರೇ" ಎಂದು ಹೇಳಿ ಹೋದ.

ಪರಮೇಶ್ವರಯ್ಯ ಲಕ್ಷಣವಾಗಿ ಹಾಸಿಗೆ ಹಾಸಿ ಮಲಗಿಬಿಟ್ಟ.

ಹತ್ತೂವರೆ ವೇಳೆಗೆ ಊಟ ಮುಗಿಸಿ ಚಂದ್ರ, ಶಂಕರ ಸ್ಕೂಲಿಗೆ ಹೋದರು. ಅಕ್ಕಯ್ಯನ್ನ ಬಿಟ್ಟು ನಾನು ಹೋಗುವುದಿಲ್ಲ ಎಂದು ಹಟ ಹಿಡಿದು ಸ್ವರ್ಣ ಸ್ಕೂಲಿಗೆ ಚಕ್ಕರ್ ಹೊಡೆದು ಬಿಟ್ಟಳು.

ರಾಜಶೇಖರ ಪೇಟೆಯಿಂದ ಹಿಂದಿರುಗುವ ವೇಳೆಗೆ ಹನ್ನೆರಡೂವರೆ ಯಾಗಿತ್ತು. ಬಲೂನು, ಬೊಂಬೆ, ಗಾಳಿತುಂಬುವ ಎರಡನೆಯ ನಂಬರು ಚೆಂಡು, ಚಾಕಲೇಟ್, ಪಪ್ಪರ್‌ಮೆಂಟ್, ತೆಗೆದುಕೊಂಡು ಬಂದಿದ್ದ. ಸ್ವರ್ಣ ಓಡಿಬಂದು ರಾಜಶೇಖರನ ತೊಡೆಯನ್ನೇರಿ ಸವಿಮಾತಾಡಿ ಬಲೂನ್ ಬೊಂಬೆ ಗಿಟ್ಟಿಸಿಕೊಂಡಳು. ತೊಟ್ಟಿಯಲ್ಲಿ ಆಡುತ್ತಾ ಕುಳಿತಿದ್ದ ವಿಮಲೆ ಯನ್ನೆತ್ತಿಕೊಂಡು ಅವಳ ಕೈಗೆ ಒಂದು ಬೊಂಬೆಯನ್ನಿತ್ತ. ಸ್ವರ್ಣ ಚಾಕ ಲೇಟ್ ಪಪ್ಪರ್‌ಮೆಂಟ್ ಡಬ್ಬಗಳನ್ನೆತ್ತಿಕೊಂಡು ಹೋಗಿ ತಾಯಿಗೆ ತೋರಿಸಿ ದಳು.

ಸ್ವರ್ಣಳ ಕೇಕೆ ಕೇಳಿ ಪರಮೇಶ್ವರಯ್ಯ ಎದ್ದು ಕುಳಿತ. ಸ್ವರ್ಣ ಹೆಮ್ಮೆಯಿಂದ ತಾತನಿಗೆ ಬೊಂಬೆ ತೋರಿಸಿದಳು. ಪರಮೇಶ್ವರಯ್ಯ ನಗುತ್ತಾ

" ನಿನ್ನ ಗತಿ ಆಯಿತಪ್ಪಾ ರಾಜಶೇಖರ. ಈ ತುಂಟಿ ಇನ್ನು ನಿನಗೇ ಗಂಟು ಬಿದ್ದು ಬಿಡುತ್ತಾಳೆ. ರಾಜಶೇಖರನನ್ನು ಮದುವೆಮಾಡಿಕೊಳ್ಳುತ್ತೀ ಯೇನೇ ಸ್ವರ್ಣ."

" ಹೋಗು ತಾತ."

ಸೌಭಾಗ್ಯಮ್ಮ ಬಾಗಿಲು ಬಳಿ ನಿಂತುಕೊಂಡು

" ಅಪ್ಪಾಜಿ, ಎಲೆ ಹಾಕಿದ್ದೇನೆ. ಊಟಕ್ಕೆ ಏಳಿ " ಎಂದಳು.

" ನಿಮ್ಮ ಯಜಮಾನರೂ ಬರಲಮ್ಮ " ಎಂದು ರಾಜಶೇಖರ ಹೇಳಿದ.

" ಅವರು ಎಷ್ಟು ಹೊತ್ತಿಗೆ ಬರುತ್ತಾರೋ ಏನೋ – ನೀವು ಏಳಿ. ನಿನ್ನೆಯೂ ನಿಮಗೆ ಊಟ ನಿದ್ರೆಯಿಲ್ಲ ಎಂದು ಉಪಚರಿಸಿದಳು."

ಪರಮೇಶ್ವರಯ್ಯ, ರಾಜಶೇಖರ ಊಟಕ್ಕೆ ಕೂಡಲೇ ಜೇಕಾಯಿತು. ಸೌಭಾಗ್ಯಮ್ಮ ಉಪಚರಿಸಿ, ಹೆಚ್ಚು ಬಡಿಸಿ, ರಾಜಶೇಖರ ಚೆನ್ನಾಗಿ ಊಟ ಮಾಡುವಂತೆ ಮಾಡಿದಳು. ಊಟಮಾಡುತ್ತ ಮಾಡುತ್ತ ರಾಜಶೇಖರನ ಕಣ್ಣಲ್ಲಿ ನೀರೂರಿತು.

" ಯಾಕಪ್ಪಾ" ಎಂದು ಪರಮೇಶ್ವರಯ್ಯ ಕೇಳಿದ.

ರಾಜಶೇಖರ ಉತ್ತರ ಕೊಡಲಿಲ್ಲ.

" ಅಡಿಗೆ ಖಾರವೇ ?"

" ನನ್ನ ತಾಯಿ ಅಮೃತ ಬಡಿಸಿದ್ದಾರೆ ಪರಮೇಶ್ವರಯ್ಯನವರೇ."

ಎಂದು ಸುಧೆಯ ಕಡೆ ತಿರುಗಿ

" ಸುಧಾ ಜೀವನದಲ್ಲಿ ಏನಿದೆಯೆಂದು ಕೇಳಿದ್ದೆಯಲ್ಲಾ – ನೋಡಿದೆಯಾ ಏನಿದೆ ? ಭಗವಂತ ಎಲ್ಲರಿಗೂ ತಾಯಿಯ ಪ್ರೇಮದ ಭಾಗ್ಯ ಕರುಣಿಸಿರುತ್ತಾನೆ. ಕೆಲವು ಸಲ ಹೆತ್ತವಳೇ ತಾಯಿಯಾಗಬಹುದು – ಕೆಲವು ಸಲ ಬೇರೆ ಯವರು ತಾಯಿಯಾಗಬಹುದು."

ಸುಧೆಯ ಕಣ್ತುಂಬ ನೀರು ತುಂಬಿಕೊಂಡಿತು. ಸುಧೆಯ ಜೀವನ ರಹಸ್ಯ ತಿಳಿದಿದ್ದ ಪರಮೇಶ್ವರಯ್ಯನಿಗೆ ರಾಜಶೇಖರನ ಮಾತಿನ ಮರ್ಮ ಅರ್ಥವಾಯಿತು. ಸೌಭಾಗ್ಯಮ್ಮನಿಗೆ ಎಲ್ಲವೂ ಸಮಸ್ಯೆಯಾಯಿತು.

ಊಟ ಮುಗಿದ ಮೇಲೆ ರಾಜಶೇಖರ, ಪರಮೇಶ್ವರಯ್ಯನೊಂದಿಗೆ

ಸ್ವಲ್ಪ ಹೊತ್ತು ಮಾತನಾಡುತ್ತ ಕುಳಿತಿದ್ದು, ತನಗೆ ನಿರ್ದಿಷ್ಟವಾಗಿದ್ದ ರೂಮಿಗೆ ಹೋಗಿ ಹಾಸಿಗೆ ಹಾಸಿ ಮಲಗಿದ.

ಅವನಿಗೆ ಎಚ್ಚರವಾದಾಗ ಒಳಗೆ ನಡೆಯುತ್ತಿದ್ದ ಸಂಭಾಷಣೆಯ ತುಣುಕುಗಳು ಯಾರೋ ಎಲ್ಲೋ ಮಾತನಾಡಿದಂತೆ ಕೇಳಿ ಬರುತ್ತಿದ್ದವು. ನಿದ್ರೆಯ ಮಬ್ಬು ಇನ್ನೂ ಹರಿದಿರಲಿಲ್ಲ.

' ರಾಜಶೇಖರನನ್ನು ಎಬ್ಬಿಸುತ್ತೇನೆ.'

' ಯಾಕೆ ಎಬ್ಬಿಸುತ್ತೀರಿ. ರಾತ್ರಿಯೆಲ್ಲಾ ನಿದ್ರೆಯಿಲ್ಲ - ಮಲಗಿರಲಿ.'

' ಹೊರಗೆ ಹೋಗಿ ಆಡಿಕೊಳ್ಳಪ್ಪಾ ಶಂಕರ - ನನಗೆ ಹಾಡೇ ಕೇಳಿಸಲ್ಲ.'

' ಹೋಗೇ – ನೀನೋ ನಿನ್ನ ಹಾಡೋ – ಇಪ್ಪತ್ತುನಾಲ್ಕು ಗಂಟೆಯೂ ನಿನ್ನ ಹಾಡೇ ಆಗಿ ಆಯ್ತು.'

' ಹೊರಗೆ ಹೋಗಿ ಆಡಿಕೊಳ್ಳೋ ಶಂಕರ, ನಿನ್ನ ಚೆಂಡಿನ ಅವಾಂತರ ದಲ್ಲಿ ಬಲ್ಬು ಒಡೆದು ಹೋದೀತು.'

ರಾಜಶೇಖರ ಕಣ್ಣುಜ್ಜಿಕೊಂಡು ಮೇಲಕ್ಕೆದ್ದು ಹೊರಗೆ ಬಂದ. ಅವನನ್ನು ನೋಡಿದ ಕೂಡಲೆ ರಂಗಸ್ವಾಮಿ

" ಮಕ್ಕಳ ಗಲಾಟೆ. ನಿಮಗೆ ನಿದ್ರೆ ಕೆಟ್ಟುಹೋಯಿತು " ಎಂದ.

" ಏನೂ ಇಲ್ಲ ಸರ್. ಚೆನ್ನಾಗಿ ನಿದ್ರೆಯಾಯಿತು. ನಾನೂ ಏಳ ಬೇಕೆಂದೇ ಇದ್ದೆ. ಈಗ ಬಂದಿರಾ ? "

" ಸ್ವಲ್ಪ ಹೊತ್ತಾಯಿತು."

" ಮಧ್ಯಾನ್ಹ ಬರಲಿಲ್ಲ."

" ಬರಬೇಕೆಂದಿದ್ದೆ. ಅರ್ಜೆಂಟ್ ಸರ್ವೀಸಿಂಗಿ (urgent servicing)ಗೆ ಒಂದು ರೇಡಿಯೋ ಬಂತು. ಯಾವದೋ ಮುನಿಸಿಪಾಲಿಟಿಯದಂತೆ - ಸಂಜೆ ಮಿನಿಸ್ಟರ್ ಬರುವವರಿದ್ದಾರಂತೆ. ಅದನ್ನು ಮುಗಿಸಿ ಕೊಟ್ಟು ಹೊರಟು ಬಂದೆ."

ಒಳಗಿನಿಂದ ಎಲ್ಲರಿಗೂ ಕಾಫಿ ತಿಂಡಿಯನ್ನು ಶಂಕರನ ಕೈಯಲ್ಲಿ ಸೌಭಾಗ್ಯಮ್ಮ ಕಳಿಸಿಕೊಟ್ಟಳು. ಉಪಹಾರ ಮುಗಿದ ಮೇಲೆ

" ಚೆಂಡು, ಬೆಲೂನು, ಸ್ವೀಟ್ಸ್ ಏಕೆ ತರಹೋದಿರಿ ರಾಜಶೇಖರ್."

ಎಂದು ರಂಗಸ್ವಾಮಿ ಕೇಳಿದ.

" ಅದೇನು ದೊಡ್ಡ ವಿಷಯ ಬಿಡಿ ರಂಗಸ್ವಾಮಿಗಳೇ."

" ನಿಮ್ಮ ನಾಟಕ ಯಾವಾಗ ಓದುತ್ತೀರಿ."

" ರಂಗಸ್ವಾಮಿ ಬರೀ ರೇಡಿಯೋ ಇಂಜನಿಯರು ಎಂದುಕೊಳ್ಳಬೇಡ ರಾಜಶೇಖರ್. ಅವನು ತುಂಬ ಸಾಹಿತ್ಯಾಭಿಮಾನಿ – ಅಸಾಧ್ಯವಾಗಿ ಓದುತ್ತಾನೆ."

ಎಂದು ಪರಮೇಶ್ವರಯ್ಯ ಅಳಿಯನ ಗುಣಗಾನ ಮಾಡಿದ.

" ನನ್ನ ಹೊಗಳದಿದ್ದರೆ ಮಾವನವರಿಗೆ ತೃಪ್ತಿಯೇ ಇಲ್ಲ ನೋಡಿ. ನಾಟಕ ಈಗಲೇ ಓದುತ್ತೀರಾ?"

" ಅಕ್ಕಾವರಿಗೂ ಪುರಸತ್ತಾಗಲಿ. ರಾತ್ರಿ ಮಕ್ಕಳು ಮಲಗಿದ ಮೇಲೆ ಕುಳಿತುಕೊಳ್ಳೋಣ – ನಿಮಗೆ ನಿದ್ರೆ ಹೋಗುತ್ತದೆಯೋ ಏನೋ?"

" ಚಿಂತೆಯಿಲ್ಲ. ನಾಳೆ ಹೇಗೂ ಭಾನುವಾರ. ಒಂದು ಗಳಿಗೆ ತಡವಾಗಿ ಏಳಬಹುದು."

" ನನಗೊಂದು ಉಪಕಾರ ಮಾಡಬೇಕು ನೀವು ರಂಗಸ್ವಾಮಿಗಳೇ."

" ಹೇಳಿಯಪ್ಪ. ಅವಶ್ಯಕವಾಗಿ ಆಗಲಿ."

" ಒಂದು ಮನೆ ನೋಡಿಕೊಡಿ. ನಿಮ್ಮ ಮನೆಯ ಹತ್ತಿರವಿದ್ದರೆ ಒಳ್ಳೆಯದು."

" ಈಗಲೇ ಮನೆ ಮಾಡಿಕೊಂಡು ಹೋಗಲು ಆತುರವೇ?"

"ನಿಮಗೆ ತೊಂದರೆಕೊಡುವುದಕ್ಕೇ ನಾವು ಬೆಂಗಳೂರಿಗೆ ಬಂದಿರುವುದು."

" ನೀವೂ ಮಾವನವರೂ ಬೆಂಗಳೂರಿನಲ್ಲಿ ನಿಂತರೆ ನಾನು ಏನು ಬೇಕಾದರೂ ಮಾಡಲು ಸಿದ್ಧ. ಕಂಪೆನಿ ಸಹವಾಸ ಬೇಡ, ಇಲ್ಲಿ ಬಂದಿದ್ದು ಬಿಡಿ ಎಂದು ನಾನು ಹೇಳಿ ಹೇಳಿ ಬೇಸತ್ತೆ."

"ಇನ್ನೇನು ಅವರು ಕಂಪೆನೀಗೆ ಹೋಗುವುದಿಲ್ಲ ಬಿಡಿ. ಹಳ್ಳಿಗೆ ಹೊರಟು ಹೋಗುತ್ತೇನೆಂದು ಹೇಳಿದರು – ನಾನು ಅದಕ್ಕೆ ಅಡ್ಡಿ ಬಂದೆ."

" ಒಳ್ಳೆಯ ಕೆಲಸ ಮಾಡಿದಿರಪ್ಪಾ . . . ಎಂಥ ಮನೆಬೇಕು?"

" ಸಣ್ಣದಾದರೂ ಸಾಕು. ಆದರೆ ಅದರಲ್ಲಿ ದೊಡ್ಡ ಹಾಲ್ ಮಾತ್ರ ಇರಬೇಕು."

" ಈ ಮನೆಯ ಮಾಲೀಕನೇ ಪಕ್ಕದ ರಸ್ತೆಯಲ್ಲಿ ಕೆಲವು ಮನೆಗಳು

ಕಟ್ಟಿಸಿದ್ದಾನೆ. ಎಲೆಕ್ಟ್ರಿಕ್ ಇನ್‌ಸ್ಟಲೇಷನ್ ಆಗುತ್ತಿದೆ. ಮನೆ ನೋಡಿ – ನಿಮಗೆ ಒಪ್ಪಿಗೆಯಾದರೆ ಗೊತ್ತು ಮಾಡೋಣ."

"ಬಾಡಿಗೆಯೆಷ್ಟು ?"

"ಐವತ್ತೋ ಅರವತ್ತೋ ಆಗಬಹುದು."

"ಆಗಲಿ ಚಿಂತೆಯಿಲ್ಲ. ಮನೆ ನಾಳೆ ನಾಡಿದ್ದರಲ್ಲಿ ಸಿಕ್ಕಬಹುದೋ ?"

"ಒಂದು ವಾರದಲ್ಲಿ ಸಿಕ್ಕಬಹುದು."

ಎಲ್ಲವನ್ನೂ ಕೇಳುತ್ತಿದ್ದ ಪರಮೇಶ್ವರಯ್ಯ

"ನಿನ್ನ ಅಂದಾಜೇ ನನಗೆ ಅರ್ಥವಾಗಲ್ಲ ರಾಜಶೇಖರೂ" ಎಂದ.

"ನನ್ನ ಗುಟ್ಟು ರಾತ್ರೀಗೆ ರಟ್ಟು ಮಾಡುತ್ತೇನೆ – ಪರಮೇಶ್ವರಯ್ಯನವರೇ."

ಎಂದು ರಾಜಶೇಖರ ಸಮಾಧಾನ ಹೇಳಿ

"ಮನೆ ನೋಡಿಕೊಂಡು ಬರೋಣವೇ. ನಾಳೆ ನಿಮಗೆ ರಜವೆಂದಿರಿ– ಮಾಲೀಕನನ್ನು ನೋಡಿ ಗೊತ್ತು ಮಾಡಿಬಿಡಬಹುದು."

"ಬನ್ನಿ – ಹೋಗಿ ಬರೋಣ"

ಎಂದು ರಂಗಸ್ವಾಮಿ ರಾಜಶೇಖರನನ್ನೂ ಪರಮೇಶ್ವರಯ್ಯನನ್ನೂ ಕರೆದುಕೊಂಡು ಹೊರಟ.

ಮಾಲೀಕ ಕಟ್ಟಿಸುತ್ತಿದ್ದ ನಾಲ್ಕು ಮನೆಗಳು ಪಕ್ಕದ ರಸ್ತೆಯಲ್ಲಿಯೇ ಇದ್ದವು. ರಂಗಸ್ವಾಮಿ ಮನೆಗೂ ಹೊಸ ಮನೆಗಳಿಗೂ ಸಾವಿರ ಗಜಗಳಷ್ಟೇ ದೂರ. ರಂಗಸ್ವಾಮಿ ಮೇಸ್ತ್ರಿಯನ್ನು ಕರೆದು ಒಂದು ಮನೆಯ ಬಾಗಿಲು ತೆಗೆಸಿದ. ಅದರಲ್ಲಿ ಇನ್‌ಸ್ಟಲೇಷನ್ ಕೆಲಸ ಮುಗಿದಿತ್ತು. ಆದರೆ ಇನ್ನೂ ಲೈಟ್ ಕನೆಕ್ಷನ್ ಕೊಟ್ಟಿರಲಿಲ್ಲ.

ಮನೆಗಳು ಕಾನ್‌ಕ್ರೀಟ್‌ನಲ್ಲಿಯೇ ಕಟ್ಟಲ್ಪಟ್ಟಿದ್ದವು. ಮನೆಗೆ ಪ್ರವೇಶ ಮಾಡಿದೊಡನೆಯೇ ದೊಡ್ಡ ತೊಟ್ಟಿ, ತೊಟ್ಟಿಯ ಬಲಕ್ಕೆ ಎರಡು ರೂಮುಗಳು ; ತೊಟ್ಟಿಯ ಎದುರಿಗೆ ಊಟದ ಮನೆ – ಅದರ ಎಡಗಡೆ ಅಡಿಗೆಯ ಮನೆ, ಬಲಗಡೆ ಸ್ನಾನಗೃಹ. ಊಟದ ಮನೆಯಿಂದ ಹೊರಗೆ ಹೋಗಲು ಬಾಗಿಲಿತ್ತು.

"ಆ ಮನೆಗಳು ಹೇಗಿವೆ ಮೇಸ್ತ್ರಿಗಳೇ" ಎಂದು ರಂಗಸ್ವಾಮಿ ಕೇಳಿದ.

" ಇದರ ಪಕ್ಕದ್ದು ಹೀಗೇ ಇದೆ – ಇನ್ನೆರಡು ನಿಮ್ಮನೆ ಇದ್ದ ಹಾಗೇ ಇದೆ, ಸ್ವಾಮಿ."

" ಆಯೆರಡು ಮನೆಗಳಲ್ಲಿ ಇಷ್ಟು ದೊಡ್ಡ ತೊಟ್ಟಿಯಿಲ್ಲವೆಂದು ಕಾಣುತ್ತದೆ " ಎಂದು ರಾಜಶೇಖರ ಕೇಳಿದ.

" ಇಲ್ಲ ತೊಟ್ಟಿ ಚಿಕ್ಕದು. ಹೆಚ್ಚಿಗೆ ರೂಮುಗಳಿವೆ - ವೆರಾಂಡಾ ಇದೆ."

" ನನಗಿದೇ ಅನುಕೂಲವಾಗಿದೆ ರಂಗಸ್ವಾಮಿಗಳೇ."

" ಸಾವಕಾರರು ಯಾವಾಗ ಬರುತ್ತಾರೆ ಮೇಸ್ತ್ರಿಗಳೇ."

" ಇದೇ ಹೋದರು ಸ್ವಾಮಿ. ಬೆಳಿಗ್ಗೆ ಬರುತ್ತಾರೆ."

" ಬೆಳಿಗ್ಗೆ ಸ್ವಲ್ಪ ಮನೆ ಕಡೆ ಬರಲು ಹೇಳುವಿರಾ? ಅವರು ಬಂದಿರುವುದನ್ನು ತಿಳಿಸಿದರೆ ನಾವೇ ಬರುತ್ತೇವೆ."

" ತಿಳಿಸುತ್ತೇನೆ ಸ್ವಾಮಿ."

" ಇವುಗಳಲ್ಲಿ ಈಗಾಗಲೇ ಕೊಟ್ಟಿರುವುದು ಯಾವುದು?"

" ಆಚೆಕಡೆಯ ಎರಡು ಮನೆಗಳನ್ನು ಯಾರೋ ಮಾತಾಡಿಕೊಂಡು ಅಡ್ವಾನ್ಸ್ ಕೊಟ್ಟು ಹೋಗಿದ್ದಾರೆ. ಈ ಎರಡು ಮನೆಗಳು ಖಾಲಿ ಇವೆ."

ಎಂದು ಮೇಸ್ತ್ರಿ ಹೇಳಿದ. ತನ್ನ ಕೆಲಸ ಇಷ್ಟು ಸುಸೂತ್ರವಾಗಿ ಆಗುತ್ತದೆಯೆಂದು ರಾಜಶೇಖರ ತಿಳಿದಿರಲಿಲ್ಲ. ಕೆಲಸ ಆರಂಭಮಾಡಿದ ಹೊತ್ತು ಒಳ್ಳೆಯದೆಂದುಕೊಂಡು ಅವನು ಸಂತೋಷಭರಿತನಾಗಿ

" ಅಕ್ಕಾವರು, ಸುಧಾ ಮನೆ ನೋಡಿದ್ದರೆ ಚೆನ್ನಾಗಿತ್ತು" ಎಂದ.

" ಬನ್ನೀ – ಮನೆಗೆ ಹೋಗಿ ಅವರನ್ನು ಕಳಿಸಿಕೊಡೋಣ – ಮೇಸ್ತ್ರಿಗಳೇ ನಮ್ಮನೆ ಹೆಂಗಸರು ಬರುತ್ತಾರೆ. ಎಲ್ಲಾ ಮನೆಗಳೂ ಅವರಿಗೆ ತೋರಿಸಿ. – ನೀವು ಇಲ್ಲೇ ಇರುತ್ತೀರಿ ತಾನೆ!"

" ಇಲ್ಲೇ ಇರುತ್ತೇನೆ ಸ್ವಾಮಿ – ಕಳಿಸಿಕೊಡಿ."

ಮನೆಗೆ ಹಿಂದುರುಗಿದ ಕೂಡಲೆ ರಂಗಸ್ವಾಮಿ ಹೆಂಡತಿಯನ್ನು ಕರೆದು ಸುಧೆಯೊಂದಿಗೆ ಹೋಗಿ ಮನೆಗಳನ್ನು ನೋಡಿಕೊಂಡು ಬರಲು ತಿಳಿಸಿದ.

ಸೌಭಾಗ್ಯಮ್ಮ ಸಣ್ಣ ಮಗುವನ್ನೆತ್ತಿಕೊಂಡಳು. ಸುಧಾ ಸ್ವರ್ಣನ ಕೈ ಹಿಡಿದುಕೊಂಡು ಮನೆ ನೋಡಿಕೊಂಡು ಬರುವುದಕ್ಕೆ ಹೊರಟಳು.

ರಾಜಶೇಖರ ಪರಮೇಶ್ವರಯ್ಯ ವೆರಾಂಡಾದಲ್ಲಿ ಕುಳಿತಿರಲು ರಂಗಸ್ವಾಮಿಯೂ ಅಲ್ಲಿಯೇ ಕುಳಿತುಕೊಂಡ.

" ರಂಗಸ್ವಾಮಿಗಳೇ ಮನೆಗೆ ನಾವು ಹೋದಮೇಲೆ ಒಂದು ಒಳ್ಳೆಯ ರೇಡಿಯೋ ಕೊಡಿಸಿಬಿಡಿ. ಸುಧಾ ಸಂಗೀತ ಪ್ರೇಮಿ."

" ಸೊಗಸಾದ್ದು ಕೊಡಿಸುತ್ತೇನೆ."

ಎಂದು ರಂಗಸ್ವಾಮಿ ಲೋಕಾಭಿರಾಮವಾಗಿ

" ನಿಮ್ಮ – ಸುಧಮ್ಮನ ಲಗ್ನ ಯಾವಾಗ ರಾಜಶೇಖರ್."

ರಾಜಶೇಖರನ ಮುಖ ಗಂಭೀರವಾಯಿತು. ಸ್ವಲ್ಪಕಾಲ ನೀರವನಾಗಿದ್ದು

" ನನಗೆ ಲಗ್ನವಾಗಿತ್ತು ರಂಗಸ್ವಾಮಿಗಳೇ. ನನ್ನ ಹೆಂಡತಿ ಓಡಿ ಹೋಗಿ ಬೀದಿಸೂಳೆಯಾದಳು. ಸುಧೆಯ ಜೀವನದಲ್ಲಿಯೂ ಇಂಥದೇ ದುರಂತ ನಡೆದಿದೆ – ನಿಮ್ಮ ಮಾವನವರನ್ನು ಕೇಳಿ, ಎಲ್ಲಾ ವಿಶದವಾಗಿ ಹೇಳುತ್ತಾರೆ. ದಾಂಪತ್ಯ ಜೀವನಕ್ಕೆ ನಾನೂ, ಸುಧಾ ಇಬ್ಬರೂ ತಿಲತರ್ಪಣ ಕೊಟ್ಟದ್ದೇವೆ. ಎರಡು ನಿರ್ಭಾಗ್ಯ ಜೀವಗಳು ಅಣ್ಣ - ತಂಗಿಯರಂತೆ ಬಾಳ್ವೆ ಮಾಡಲು ನಿರ್ಧರಿಸಿವೆ. ' ಸಾಧ್ಯವೇ ' ಎಂದು ನೀವು ಕೇಳಬಹುದು. ಸಾಧ್ಯ ಮಾಡಬೇಕೆಂದು ನಾನು ದೇವೀಯುಪಾಸನೆ ಕೈಗೊಂಡು ಬ್ರಹ್ಮಚರ್ಯ ವ್ರತ ಸ್ವೀಕರಿಸಿದ್ದೇನೆ."

" ನಿಮ್ಮ ಮಾತಾಯಿತು - ಸುಧೆಯ ವಿಷಯ."

" ಮಾನವ್ಯವನ್ನೇ ದ್ವೇಷಿಸುವ ಸ್ಥಿತಿಗೆ ಅವಳು ಬಂದಿದ್ದಾಳೆ. ನಾನು ಅನುಭವಿಸಿರುವುದಕ್ಕಿಂತಲೂ ಹತ್ತರಷ್ಟು ದುಃಖ, ಕಷ್ಟ ಅವಳು ಅನುಭವಿಸಿದ್ದಾಳೆ."

" ನಿಮ್ಮ ಮಾತು ಕೇಳಿ ನನಗೆ ಆಶ್ಚರ್ಯ, ವ್ಯಸನ ಎರಡೂ ಆಗುತ್ತಿದೆ ರಾಜಶೇಖರ್."

" ಆಶ್ಚರ್ಯವಾಗಬಹುದು – ವ್ಯಸನ ಪಡಬೇಡಿ. ನೀವು, ನಿಮ್ಮ ಕುಟುಂಬ, ನಿಮ್ಮ ಮಕ್ಕಳು ನಿರ್ಭಾಗ್ಯರಾದ ನಮ್ಮಿಬ್ಬರನ್ನೂ ಭಾಗ್ಯವಂತರನ್ನಾಗಿ ಮಾಡಿದ್ದೀರಿ. ಜಗತ್ತಿನಲ್ಲಿನ್ನೂ ನಿರ್ಹೇತುಕ ಪ್ರೇಮ, ಕರುಣೆ, ಅಂತಃಕರಣ ಇದೆಯೆಂದು ತೋರಿಸಿಕೊಟ್ಟದ್ದೀರಿ. ಇದನ್ನು ನಾನು ಜನ್ಮಜನ್ಮಕ್ಕೂ ಮರೆಯಲಾರೆ."

"ಸರಿ ಬಿಡಿ ಸಾರ್ – ನಾವೇನು ನಿಮಗೆ ಮಾಡಿರುವುದು ರಾಜೋಪಚಾರ."

"ಆ ಉಪಚಾರ ವರ್ಣಿಸುವ ಶಕ್ತಿ ತಾಯಿ ನನಗೆ ಕೊಟ್ಟಿಲ್ಲ ರಂಗಸ್ವಾಮಿಗಳೇ"

ಮನೆ ನೋಡುವುದಕ್ಕೆ ಹೋಗಿದ್ದವರು ಹಿಂದಿರುಗಿದರು. ರಂಗಸ್ವಾಮಿ ಹೆಂಡತಿಯನ್ನುದ್ದೇಶಿಸಿ

"ನಿನ್ನ ತಂಗಿ ಮನೆ ಒಪ್ಪಿದರೋ ?"

"ಒಪ್ಪಿದರು – ಆದರೆ ಈ ಮನೆಗಿಂತ ಮೂರನೆಯದೋ, ನಾಲ್ಕನೆಯದೋ ಆಗಿದ್ದರೆ ಚೆನ್ನಾಗಿತ್ತು ಎಂದು ಹೇಳಿದರು.

ರಾಜಶೇಖರ ಸುಧೆಯ ಕಡೆ ತಿರುಗಿ

"ನಮಗೆ ದೊಡ್ಡ ಹಾಲು ಬೇಕಾಗಿದೆ ಸುಧಾ."

"ಆ ಮನೆಗಳಲ್ಲಿಯೂ ಹಾಲ್ ಇದೆ - ಸ್ವಲ್ಪ ಚಿಕ್ಕದು ಅಷ್ಟೇ. ಈ ಮನೆಯ ಹಾಲಿನಷ್ಟಿದೆ."

"ಆಯೆರಡು ಮನೆಗಳನ್ನು ಕೊಟ್ಟಾಗಿದೆಯಂತೆ !"

"ಅದಿರಲಿ – ಹೇಗಾದರೂ ಮಾಡೋಣ"

ಎಂದು ರಂಗಸ್ವಾಮಿ ಭರವಸೆಯಿತ್ತ.

"ಸಿಕ್ಕುವ ಹಾಗಿದ್ದರೆ ಮೂರನೆಯ ನಾಲ್ಕನೆಯ ಮನೆಗಳಲ್ಲಿ ಒಂದನ್ನು ಗೊತ್ತು ಮಾಡಿ ಅಣ್ಣಾ."

ಎಂದು ಸುಧಾ ಹೇಳಿದಳು.

"ನೀವೇನು ಹೇಳುತ್ತೀರಿ ರಾಜಶೇಖರ್."

ಎಂದು ರಂಗಸ್ವಾಮಿ ಕೇಳಿದ.

"ಸುಧಮ್ಮ ಹೇಳಿದ ಹಾಗೆಯೇ ಮಾಡಿ."

ಎಂದು ರಾಜಶೇಖರ್ ಸೂಚಿಸಿದ.

"ಅಡಿಗೆ ಬೇಗ ಮುಗಿಸಿ, ಮಕ್ಕಳಿಗೆ ಬಡಿಸಿ ಅವರನ್ನ ಮಲಗಿಸಿ ಬಿಡು. ನಾವೂ ಬೇಗ ಊಟ ಮಾಡಿ ಬಿಡುತ್ತೇವೆ."

"ಇದೇನು ಇಷ್ಟು ಅವಸರ."

"ನಿಮ್ಮಣ್ಣ ನಾಟಕ ಓದುತ್ತಾರಂತೆ–ನೀನೂ ಕೇಳಬೇಕೆಂದು ಅವರಆಸೆ."

" ಹಾಗೇ ಆಗಲಿ."

ಎಂದು ಸೌಭಾಗ್ಯಮ್ಮ ಸುಧೆಯೊಂದಿಗೆ ಒಳಕ್ಕೆ ಹೋದಳು.

ಸ್ವರ್ಣ ಜೋರಾಗಿ ರೇಡಿಯೋ ತಿರುಗಿಸಿದ್ದಳು. ಶಂಕರ ಲೊಟಗುಟ್ಟು ತ್ತಿದ್ದ. ರಂಗಸ್ವಾಮಿ ನಕ್ಕು

" ಶಂಕರನ್ನ ರೇಗಿಸಬೇಕೂಂತ ರೇಡಿಯೋ ಜೋರಾಗಿ ತಿರುಗಿಸುತ್ತಾಳೆ ನೋಡಿ ತುಂಟಿ."

ಎಂದೆದ್ದು ಹೋಗಿ ರೇಡಿಯೋ ಧ್ವನಿ ಇಳಿಸಿ ಬಂದು ಕುಳಿತ.

ಒಂಭತ್ತು ಗಂಟೆಯ ಒಳಗೇ ಎಲ್ಲರ ಊಟವೂ ಮುಗಿಯಿತು. ಮಕ್ಕಳೂ ಮಲಗಿ ಕೊಂಡರು. ನಾಟಕ ಕೇಳುವ ಆಸೆಯಿಂದ ಚಂದ್ರ ಎಚ್ಚರ ವಾಗಿ ಕುಳಿತಿದ್ದ. ಸ್ವರ್ಣಮ್ಮ, ಸುಧಾ ಒಂದು ಪಕ್ಕದಲ್ಲಿ ಕುಳಿತರು.

ರಾಜಶೇಖರ ತನ್ನ **" ಪತಿತ ಪರಿವರ್ತನ "** ನಾಟಕ ಓದಲಾ ರಂಭಿಸಿದ.

ನಾಟಕ ಓದಿ ಮುಗಿಸುವ ವೇಳೆಗೆ ಹನ್ನೊಂದು ಗಂಟೆಯಾಗಿತ್ತು. ಎಲ್ಲರ ಕಣ್ಣೂ ತೇವಗೊಂಡಿದ್ದವು. ಸ್ವಲ್ಪ ಹೊತ್ತು ಯಾರೂ ಮಾತನಾಡ ಲಿಲ್ಲ.

" ಇಷ್ಟು ದಿವಸ ಜತೆಯಲ್ಲಿದ್ದರೂ ನಾಟಕದ ವಿಷಯ ನನಗೆ ಹೇಳಲೇ ಇಲ್ಲವಲ್ಲ ರಾಜಶೇಖರ."

" ಕಂಪೆನಿ ವಾತಾವರಣ ಹೇಗಿತ್ತು ನೋಡಿದ್ದಿರಲ್ಲ."

" ಇದನ್ನು ಆಡಿಸಬೇಕೆಂದಿರುವಿರಾ ?"

ಎಂದು ರಂಗಸ್ವಾಮಿ ಹೇಳಿದ.

" ಆಡಿಸಬಹುದೇ ಹೇಳಿ. ಅಕ್ಕಾವರ ಅಭಿಪ್ರಾಯ ತಿಳಿಯಲು ನಾನು ತುಂಬ ಆತುರನಾಗಿದ್ದೇನೆ."

" ನನಗೇನು ತಿಳಿಯುತ್ತಪ್ಪಾ " ಎಂದಳು ಸೌಭಾಗ್ಯಮ್ಮ.

" ಹಾಗಲ್ಲಮ್ಮ – ಸಮಾಜ ನೀತಿಗೂ ವೇಶ್ಯಾ ಸಮಸ್ಯೆಗೂ ಇರುವ ಸಂಬಂಧ ನಾಟಕದಲ್ಲಿ ಚಿತ್ರಿಸಿದ್ದೇನೆ. ಸಮಾಜದ ಕಣ್ಣು ತೆರೆಸಬೇಕೆಂಬುದೇ ನನ್ನ ಉದ್ದೇಶವಲ್ಲದೆ ಅನೀತಿಪ್ರಸಾರ ಮಾಡಬೇಕೆಂಬುದಲ್ಲ."

" ಇದರಲ್ಲಿ ಅನೀತಿಪ್ರಸಾರವೇನಿದೆ ?"

"ವೇಶ್ಯೆಯ ವಿಷಯ ಬಂದಿದೆಯೋ ಇಲ್ಲವೋ, ಅಷ್ಟಕ್ಕೇ ಕೆಲವರು ಇದು ಅನೀತಿ ಸಾರುವ ಕಥೆ ಎಂದು ಬೊಬ್ಬೆ ಹಾಕುತ್ತಾರೆ."

ಎಂದು ರಂಗಸ್ವಾಮಿ ಹೇಳಿದ.

"ಇಂಥಾದ್ದು ಅನೀತಿ, ತಪ್ಪು ಎಂದು ತೋರಿಸದಿದ್ದರೆ ಜನಕ್ಕೆ ನೀತಿ, ಸರಿ ಎಂದು ತಿಳಿಯುವುದು ಹೇಗೆ?"

ಎಂದು ಸೌಭಾಗ್ಯಮ್ಮ ಹೇಳಿದಳು. ರಾಜಶೇಖರನ ಮುಖ ಪ್ರಫುಲ್ಲ ವಾಯಿತು. ವಿಚಾರದ ಗುಂಗಿನಲ್ಲಿ ಸಿಕ್ಕಿದ್ದ ರಂಗಸ್ವಾಮಿ ತಟಕ್ಕನೆ

"ಈ ನಾಟಕ ಆಡಿಸಲೇ ಬೇಕು ಸರ್. ವೇಶ್ಯೆಯ ವೈಯ್ಯಾರ, ಬೆಡಗು, ಶೃಂಗಾರ ತೋರಿಸುವ ನಾಟಕಗಳು ನಮ್ಮ ರಂಗಭೂಮಿಯ ಮೇಲೆ ಸಾಕಷ್ಟು ಬಂದಿವೆ. ಆದರೆ ಆ ಸಮಸ್ಯೆಯ ಘೋರ ಸ್ವರೂಪದ ಕಡೆಗೆ ಯಾರೂ ಲಕ್ಷ್ಯವೆಳೆದಿಲ್ಲ."

"ಅದೇ ನನ್ನ ಉದ್ದೇಶವಾಗಿದೆ. ಉದ್ದೇಶ ಎಷ್ಟರ ಮಟ್ಟಿಗೆ ಸಫಲ ವಾಗಿದೆಯೆನ್ನುವುದನ್ನು ನೀವು ಹೇಳಬೇಕು."

"ವಸ್ತು, ತಂತ್ರ ಎರಡು ದೃಷ್ಟಿಯಿಂದಲೂ ನಿಮ್ಮ ನಾಟಕ ಕ್ರಾಂತಿ ಕಾರಿ ನಾಟಕವೆನ್ನುವುದರಲ್ಲಿ ಸಂದೇಹವಿಲ್ಲ. ಇಬ್ಸನ್ನನ 'ವೈಲ್ಡ್ ಡಕ್' (Wild Duck) ಬರ್ನಾರ್ಡ್ ಷಾನ 'ಮಿಸಸ್ ವಾರೆನ್ಸ್ ಪ್ರೊಫೆಷನ್' (Mrs. Warren's Profession), ಬ್ರ್ಯೂನ 'ಡ್ಯಾಮೇಜಡ್ ಗೂಡ್ಸ್' (Damaged Goods) ಪ್ರಕಟವಾದಾಗ, ರಂಗದ ಮೇಲೆ ಬಂದಾಗ ಯಾವ ಹುಯಿಲೆದ್ದಿತೋ ಅದೇ ಹುಯಿಲು ನಿಮ್ಮ ನಾಟಕದ ಬಗ್ಗೆಯೂ ಏಳುತ್ತದೆ. ಹೂ ಮಳೆಗಲ್ಲ – ಕಲ್ಲು ಮಳೆಗೆ ನೀವು ಸಿದ್ಧವಾಗಿರಬೇಕು ರಾಜಶೇಖರ್."

"ನಾನು ಸಿದ್ಧನಾಗಿದ್ದೇನೆ. ಈ ಸಮಸ್ಯೆ ನಿವಾರಣೆಯಾಗಬೇಕಾದರೆ ಇದರ ಬಗ್ಗೆ ಸರಿಯಾದ ಕಲ್ಪನೆ ಜನಗಳಿಗೆ ಮಾಡಿಕೊಡಬೇಕೆನ್ನುವುದು ನನ್ನ ಅಭಿಪ್ರಾಯ. ಸಮಸ್ಯೆಯ ಸ್ವರೂಪದ ಆವಿಷ್ಕಾರವಾದರೆ ಅದರ ಪರಿಹಾರ ಕಠಿಣವಲ್ಲ. ಪರಿಹಾರ ವೈಯಕ್ತಿಕವಾಗಿಯೂ ಆಗಬೇಕು, ಸಾಂಘಿಕ ವಾಗಿಯೂ ಆಗಬೇಕು."

"ನಿಮ್ಮ ಅಭಿಪ್ರಾಯ ನನಗೆ ಸ್ಪಷ್ಟವಾಗಲಿಲ್ಲ."

"ವೈಯಕ್ತಿಕ ಪರಿಹಾರವೆಂದುದು ಇದಕ್ಕೆ – ಮಾನವ ದೇಹವನ್ನು

ಬಾಡಿಗೆಗೆ ಪಡೆದು ಅದನ್ನು ತನ್ನ ಉಪಭೋಗಕ್ಕೆ ಉಪಯೋಗಿಸಿಕೊಳ್ಳುವುದು ನೀಚತನ ಎನ್ನುವ ಪರಿಜ್ಞಾನ ವ್ಯಕ್ತಿಯಲ್ಲಿ ಬೆಳೆಯಬೇಕು. ಈ ಪ್ರಸ್ಥಾನದ ಬುಡದಿಂದ ಎರಡು ರೆಂಬೆಗಳು ಹೊರಡುತ್ತವೆ – ದಾಂಪತ್ಯ ಜೀವನ ನಡೆಸಲು ಅನುಕೂಲವಿಲ್ಲದವರು, ದಾಂಪತ್ಯ ಜೀವನದಲ್ಲಿದ್ದರೂ ಅದರಿಂದ ವಂಚಿತ ರಾದವರು ತಮ್ಮ ಸಹಜ ಪ್ರವೃತ್ತಿಯನ್ನು ಹೇಗೆ ತೃಪ್ತಿಗೊಳಿಸಿಕೊಳ್ಳಬೇಕು ? ದೇಹವನ್ನು ಬಾಡಿಗೆಗೆ ಒಪ್ಪಿಸಿಕೊಂಡು ಹೋಗುವ ಸ್ಥಿತಿ ಹೆಣ್ಣಿಗೆ ಏಕೆ ಬರುತ್ತದೆ? ಮೊದಲನೆಯ ಎರಡನೆಯ ಪ್ರಶ್ನೆಗಳು ವೈಯುಕ್ತಿಕವಾದರೂ ಅವು ಸಂಘಕ್ಕೆ ಸಂಬಂಧಪಟ್ಟುದು. ಸಂಘ ಜೀವಿ ಯಾವನೂ ಉಪವಾಸವಿರಲು ಸಂಘ ಅವಕಾಶಕೊಡಬಾರದು. ಪಸಿವನ್ನು ತೊಡೆದು ಹಾಕಿದರೆ ವೇಶ್ಯಾ ಸಮಸ್ಯೆ ಅರ್ಧ ಪರಿಹಾರವಾಗುತ್ತದೆ. ದಾಂಪತ್ಯ ಜೀವನದಲ್ಲಿದ್ದು ಅದರಿಂದ ವಂಚಿತರಾದವರಿಗೆ ಕಾನೂನು ಕಾಯಿದೆ ಪರಿಹಾರ ಒದಗಿಸಬೇಕು. ವಿಶ್ವಾಸ ವಿಲ್ಲದ ದಾಂಪತ್ಯ ಜೀವನಕ್ಕೆ ಸಿಕ್ಕಿಕೊಂಡು ಗಂಡೂ ಹೆಣ್ಣೂ ಪರಸ್ಪರ ಶತ್ರು ಗಳಾಗಿ ಬಾಳುವುದಕ್ಕಿಂತಲೂ ಅವರು ಸ್ವತಂತ್ರರಾಗುವುದು ಲೇಸು. ಎರಡ ನೆಯದು ಹೆಣ್ಣಿನ ಸ್ಥಿತಿ. ಹಳೆಯ ಧರ್ಮ ಶಾಸ್ತ್ರಕಾರರಿಂದ ನಿರ್ಮಿತವಾಗಿ ರುವ ನಮ್ಮ ಕಾಯಿದೆ ಕಾನೂನುಗಳಿಂದ ಹೆಣ್ಣಿಗೆ ನ್ಯಾಯ ದೊರಕಿಲ್ಲವೆನ್ನು ವುದು ನಿರ್ವಿವಾದ. ಹೆಣ್ಣಿನ ಪರಿಸ್ಥಿತಿಯನ್ನು ಸುಧಾರಿಸಿದರೆ ಸಮಸ್ಯೆಯ ಪರಿಹಾರಕ್ಕೆ ಮುಂದಡಿ ಇಟ್ಟಂತಾಗುತ್ತದೆ."

"ಹೆಣ್ಣಿನ ಪ್ರಾಪಂಚಿಕ ಸ್ಥಿತಿ ಸುಧಾರಿಸಿದರೆ ವೇಶ್ಯಾಸಮಸ್ಯೆ ನೀಗು ವುದೆಂದು ನೀವು ನಂಬುವಿರಾ ! "

" ಖಂಡಿತವಾಗಿಯೂ ಇಲ್ಲ. ಅನ್ನದ ಸಲುವಾಗಿ ವೇಶ್ಯಾವೃತ್ತಿಯನ್ನು ಅವಲಂಬಿಸುವುದು ನಿಲ್ಲಬಹುದು."

"ಆಧುನಿಕ ರಷ್ಯಾ ಮಾಡಿರುವ ಪ್ರಯೋಗಕ್ಕೆ ಏನು ಹೇಳುವಿರಿ ?"

"ರಷ್ಯಾ ಕೇವಲ ಆಹಾರ ಪ್ರಶ್ನೆಯನ್ನು ಎದುರಿಸಲಿಲ್ಲ. ಹೆಣ್ಣಿನ ಮನೋಭಾವವನ್ನೇ ರೂಪಿಸುವ ಕೆಲಸ ಕೈಗೊಂಡಿತು. ತನ್ನ ದೈಹಿಕ ಮಾನ ಸಿಕ ಪತನದಿಂದ ರಾಷ್ಟ್ರಕ್ಕೇ ಹಾನಿಯಾಗುತ್ತದೆಯೆಂಬ ಭಾವನೆಯನ್ನು ರಷ್ಯಾ ಸ್ತ್ರೀಯರಲ್ಲಿ ಬೆಳಸಿತು. ರಾಷ್ಟ್ರೋನ್ನತಿಗೆ ನೆರವಾಗುವ ಸೌಲಭ್ಯ ಪುರು ಷನಿಗಿಂತಲೂ ಸ್ತ್ರೀಗೆ ಹೆಚ್ಚಾಗಿದೆ ಎನ್ನುವ ಭಾವನೆ ರಷ್ಯಾ ಸ್ತ್ರೀಯರಲ್ಲಿ ಬೆಳೆ

ಯಿತು. ಸ್ತ್ರೀಯಿಂದಲೇ ಸಂತಾನಾಭಿವೃದ್ಧಿ. ತಾನು ಲೋಕಕ್ಕೆ ನೀಡುವ ಸಂತಾನ ಶುದ್ಧವಾಗಿರಬೇಕು ಎಂಬ ಆಕಾಂಕ್ಷೆ ರಷ್ಯಾ ಸ್ತ್ರೀಯರಲ್ಲಿ ಬೆಳೆಯು ವಂತೆ ಮಾಡಿತು. ಈ ಸಮಸ್ಯೆಯ ಪರಿಹಾರದ ರಹಸ್ಯ ರಷ್ಯಾ ಅರ್ಥಮಾಡಿ ಕೊಂಡಷ್ಟು ಚೆನ್ನಾಗಿ ಉಳಿದ ರಾಷ್ಟ್ರಗಳು ಮಾಡಿಕೊಳ್ಳಲಿಲ್ಲ. ವೇಶ್ಯೆಯರನ್ನು ಸಂಸಾರಿಗಳಿಂದ ದೂರವಿಟ್ಟು, ಅವರ ದೇಹಾರೋಗ್ಯದ ಕಡೆಗೆ ಲಕ್ಷ್ಯವಿಟ್ಟರೆ ಈ ಸಮಸ್ಯೆ ಹತೋಟಿಗೆ ಬರುತ್ತದೆ ಎಂದು ಅಮೇರಿಕಾ ಭಾವಿಸಿತು. ಸಮಸ್ಯೆ ಹತೋಟಿಗೆ ಬರುವುದರಲ್ಲಿ ಸಂದೇಹವಿಲ್ಲ – ಆದರೆ ಸಮಾಜದೇಹವನ್ನು ಒಳಗೇ ಕೊರೆಯುತ್ತಿರುವ ವ್ಯಾಧಿ ನಿವಾರಣೆಯಾಯಿತೇ ? ದೇಹ ಮಾರಿ ಕೊಳ್ಳುವ ಸ್ತ್ರೀಯರಿಗಾಗಿಯೆ ಪ್ರತ್ಯೇಕ ಸ್ಥಾನಗಳನ್ನು ಮೀಸಲಿಡಬೇಕೆಂಬ ಭಾವನೆ ಅಂಥ ಸ್ತ್ರೀಯರು ಇರಲೇಬೇಕೆಂಬ ಸಿದ್ಧಾಂತದ ಶಿಶುವಲ್ಲವೇ ? ನಾವು ಅಪೇಕ್ಷಿಸುವುದು ಸಮಸ್ಯೆಯನ್ನು ಹತೋಟಿಗೆ ತರುವ ಮಾರ್ಗವನ್ನಲ್ಲ : ಅದನ್ನು ಬುಡಮುಟ್ಟ ತೊಡೆದು ಹಾಕುವ ಮಾರ್ಗವನ್ನು."

"ಸಾವಿರಾರು ವರ್ಷಗಳಿಂದ ಬೆಳೆದು ಬಂದಿರುವ ಈ ಸಮಸ್ಯೆಯನ್ನು ಪೂರ್ಣವಾಗಿ ತೆಗೆದು ಹಾಕಲು ಸಾಧ್ಯವೇ ?"

"ಅನೇಕ ರೋಗಗಳು ಅಪರಿಹಾರ್ಯವೆಂಬ ಭಾವನೆ ನನ್ನಲ್ಲಿತ್ತು – ಈಗವುಗಳನ್ನು ಆಧುನಿಕ ವಿಜ್ಞಾನ ತೊಡೆದುಹಾಕಿಲ್ಲವೇ ? ಜಾಗ್ರತ ಜನ ತೆಯ ಮನೋಬಲದಿಂದ ಎಂಥ ಸಮಸ್ಯೆಯನ್ನು ಬೇಕಾದರೂ ತೆಗೆದು ಹಾಕ ಬಹುದು – ಜನತೆಯನ್ನು ಜಾಗ್ರತರನ್ನಾಗಿ ಮಾಡುವುದು ಹೇಗೆ ಎನ್ನುವುದರ ಕಡೆಗೆ ನಾವು ಲಕ್ಷ್ಯ ಕೊಡಬೇಕು."

"ಜನಜಾಗೃತಿಗೆ ನಾಟಕ ಪರಮಸಾಧನವೆನ್ನುವುದನ್ನು ನಾನು ಒಪ್ಪಿ ಕೊಳ್ಳುತ್ತೇನೆ."

"ಅದಕ್ಕೇ ನಾನು ನಾಟಕದ ರೂಪವಾಗಿ ಈ ಪ್ರಶ್ನೆಯನ್ನು ಜನಗಳ ಮುಂದೆ ಇಡಬೇಕೆಂದು ಬಯಸುತ್ತೇನೆ."

"ನಿಮ್ಮ ಪ್ರಯತ್ನಕ್ಕೆ ನಾನು ಮನಃಪೂರ್ವಕವಾಗಿ ಯಶಸ್ಸು ಕೋರು ತ್ತೇನೆ ರಾಜಶೇಖರ್. ನನ್ನಿಂದೇನು ಸಹಾಯವಾಗಬೇಕು ಹೇಳಿ. ಅದನ್ನು ನೀಡಲು ಸಿದ್ಧವಾಗಿದ್ದೇನೆ."

"ನೀವು ನಿಮ್ಮ ಮಾವಂದಿರ ನೆರವೇ ನನ್ನ ಆಧಾರ. ನಾನು ಕೂಡಿ

ಟ್ಟಿರುವ ನನ್ನ ಸಂಪಾದನೆಯೆಲ್ಲಾ ಐದು ಸಾವಿರ ರೂಪಾಯಿ. ಅದನ್ನು ನಿಮ್ಮ ಕೈಗೆ ಹಾಕಿಬಿಡುತ್ತೇನೆ. ನಷ್ಟಕ್ಕೆ ಮಾತ್ರ ನಿಮ್ಮನ್ನೆಳೆಯುವ ಇಚ್ಛೆಯಿಲ್ಲ.

"ನಾನೂ ಸ್ವಲ್ಪ ಹಣ ಹಾಕಬಲ್ಲೆ ರಾಜಶೇಖರ್."

ಎಂದು ಪರಮೇಶ್ವರಯ್ಯ ಹೇಳಿದ.

"ಸದ್ಯಕ್ಕೆ ಅದರ ಅಗತ್ಯವಿಲ್ಲ ಪರಮೇಶ್ವರಯ್ಯನವರೇ ಮುಂದೆ ಸಂದರ್ಭ ಒದಗಿದರೆ ನಿಮ್ಮ ಹಣದ ಸಹಾಯ ತೆಗೆದುಕೊಳ್ಳುತ್ತೇನೆ."

"ನೀವು ಯೋಚನೆ ಮಾಡ ಬೇಡಿ ಸರ್. ಹಣದ ಸಹಾಯ ನಾನು ಒದಗಿಸಿಕೊಡುತ್ತೇನೆ. ನಾಟಕದ ವ್ಯವಸ್ಥೆ ನೋಡಿಕೊಳ್ಳಿ."

ಎಂದು ರಂಗಸ್ವಾಮಿ ಧೈರ್ಯ ಹೇಳಿದ.

ಮಾರನೆಯ ಬೆಳಿಗ್ಗೆ ಮನೆಯ ಮಾಲಿಕ ಬಂದು ರಂಗಸ್ವಾಮಿಯನ್ನು ಕಂಡ. ಸುಧಾ ಆರಿಸಿದ್ದ ಮನೆಯನ್ನೇ ಕೊಡುವಂತೆ ರಂಗಸ್ವಾಮಿ ಅವನ ನ್ನೊಪ್ಪಿಸಿದ.

ಗುರುವಾರ ಒಳ್ಳೆಯ ಮುಹೂರ್ತದಲ್ಲಿ ಮನೆಯಲ್ಲಿ ಪೂಜೆ ಪುನಸ್ಕಾರ ಮಾಡಿಸಿ ರಾಜಶೇಖರ್, ಸುಧಾ ಪ್ರವೇಶಿಸಿದರು. ಸೌಭಾಗ್ಯಮ್ಮ ಎಲ್ಲ ವ್ಯವಸ್ಥೆ ನೋಡಿಕೊಂಡು ಸಂಸಾರಕ್ಕೆ ಬೇಕಾಗುವ ಪಾತ್ರೆ ಪದಾರ್ಥಗಳನ್ನು ಅಣಿ ಮಾಡಿಕೊಟ್ಟಳು.

## ೨೦

ಪರಮೇಶ್ವರಯ್ಯ, ರಾಜಶೇಖರ, ಸುಧಾ ಕಂಪೆನಿಬಿಟ್ಟು ಹೋದುದ ರಿಂದ ಕಂಪೆನಿಗೆ ತೊಂದರೆಯೇನೋ ಆಯಿತು. ಆದರೂ ಶ್ರೀಕಂಠಮೂರ್ತಿ ಗುಂಡೂ ಪ್ರಯತ್ನಪೂರ್ವಕವಾಗಿ ಪರಿಸ್ಥಿತಿಯನ್ನು ಹತೋಟಿಗೆ ತಂದರು. ಆದರೆ ಅವರ ನಿಷ್ಕ್ರಮಣದಿಂದ ಅನಿರೀಕ್ಷಿತವಾಗಿ ದೊರೆಸ್ವಾಮಿಯ ಪ್ರಾಶಸ್ತ್ಯ ಹೆಚ್ಚಿತು. ಸುಧೆಯ ಪಾತ್ರ ತುಂಬಲು ನಾಗರತ್ನನಿಗೆ ಸಾಧ್ಯವಾಗಲಿಲ್ಲ. ನಾಟಕದ ಓರೆ ಕೋರೆಗಳನ್ನು ತಿದ್ದುಕೊಂಡು ನಾಟಕ ಕಳೆಗಟ್ಟುವಂತೆ ಮಾಡುವ ಜವಾಬ್ದಾರಿ ದೊರೆಸ್ವಾಮಿಯ ಮೇಲೆ ಬಿದ್ದಿತು.

ದೊರೆಸ್ವಾಮಿ ತನ್ನ ಸ್ಥಾನಮಹತ್ವವನ್ನರಿತುಕೊಂಡು ಅದನ್ನು ಚೆನ್ನಾಗಿ ಉಪಯೋಗಿಸಿಕೊಳ್ಳಲಾರಂಭಿಸಿದ. ತನ್ನ ಪಾತ್ರವನ್ನಭಿನಯಿಸುತ್ತ ಮಂಜುಳನನ್ನು ಸೂಕ್ಷ್ಮವಾಗಿ ಅವಹೇಳನ ಮಾಡಲಾರಂಭಿಸಿದ. ಅವನ ಕಟು ಟೀಕೆಗಳಿಗೆ ಮನನೊಂದ ಮಂಜುಳಾ ಪಾತ್ರದಲ್ಲಿ ತಬ್ಬಿಬ್ಬಾಗುತ್ತಿದ್ದಳು. ದೊರೆಸ್ವಾಮಿಯ ಕುಟುಕು ಮುಳ್ಳನ್ನು ಪ್ರತಿಭಟಿಸಲು ಅಣ್ಣಯ್ಯ ಹಿಂದು ಮುಂದೆ ನೋಡಲಿಲ್ಲ. ನಿತ್ಯವೂ ಅವರಿಬ್ಬರಿಗೆ ರಂಗದ ಮೇಲೆ, ನೇಪಥ್ಯದಲ್ಲಿ, ಕಂಪೆನಿ ಮನೆಯಲ್ಲಿ ವ್ಯಾಜ್ಯವಾಗುತ್ತಿತ್ತು. ಈ ವ್ಯಾಜ್ಯ ಪರಿಹರಿಸುವುದಕ್ಕೆ ಶ್ರೀಕಂಠಮೂರ್ತಿಗಿದ್ದುದು ಒಂದೇ ದಾರಿ – ಕಂಪೆನಿಯಿಂದ ಅಣ್ಣಯ್ಯನನ್ನಾಗಲಿ, ದೊರೆಸ್ವಾಮಿಯನ್ನಾಗಲಿ ಹೊರಗೆ ಕಳುಹಿಸುವುದು. ನಾಟಕದ ಯಶಸ್ಸಿನ ದೃಷ್ಟಿಯಿಂದ ಅದೂ ಸಾಧ್ಯವಿರಲಿಲ್ಲವಾಗಿ ಅವನು ಒಳಗೇ ಕುದಿಯುತ್ತಿದ್ದ.

ದೊರೆಸ್ವಾಮಿಯ ಕಿರುಕುಳದಿಂದ ಬೇಸತ್ತಿದ್ದ ಅಣ್ಣಯ್ಯ ಒಂದು ಸಂಜೆ 'ವಿದ್ಯಾಸರಸ್ವತಿ ಪುಸ್ತಕಾಲಯ'ದ ಅಟ್ಟದ ಮೇಲೆ ಗೆಳೆಯರೊಂದಿಗೆ ಹರಟೆ ಹೊಡೆಯುತ್ತಿದ್ದಾಗ ಈ ವಿಷಯ ಪ್ರಸ್ತಾಪಿಸಿದ.

"ಇಷ್ಟಕ್ಕೆ ನೀವೇಕೆ ಯೋಚನೆ ಮಾಡಬೇಕು ಅಣ್ಣಯ್ಯನವರೇ. ಶ್ರೀಕಂಠಮೂರ್ತಿಯ ಕಂಪೆನಿಯೊಂದೇ ನಿನಗೆ ದಿಕ್ಕೇ – ನೀವು ಯಾವ ಕಂಪೆನಿಗೆ ಹೋದರೂ ಸಂತೋಷವಾಗಿ ಸೇರಿಸಿಕೊಳ್ಳುತ್ತಾರೆ."

"ಸೇರಿಸಿಕೊಳ್ಳುತ್ತಾರೆ ಸಿದ್ದವೀರಪ್ಪನವರೇ. ಈ ಹೊತ್ತಿಗೂ ನಾನು ಬಂದರೆ ಸಾಕೆಂದು ಸಾಹುಕಾರ್ ರುದ್ರಪ್ಪನವರು ಆತುರರಾಗಿದ್ದಾರೆ. ಆದರೆ ನಾಟಕದ ಜೀವನವೇ ನನಗೆ ಸಾಕು ಸಾಕಾಗಿ ಹೋಗಿದೆ. ನಾಟಕಕ್ಕೆ, ಜಗಳದ ಬೀಗತನ ತಪ್ಪುವ ಹಾಗೇ ಇಲ್ಲ."

"ಹಾಗಾದರೇನು ಮಾಡಬೇಕೆಂದಿರುವಿರಿ ?"

"ಊರಿಗೆ ಹೋಗಿ ಒಂದು ಚಿಲ್ಲರೆ ಅಂಗಡಿ ಹಾಕಿಕೊಂಡು ಕುಳಿತು ಬಿಡೋಣ ಎಂದು ಯೋಚಿಸುತ್ತಿದ್ದೇನೆ."

"ನಮ್ಮ ದೇಶದ ಕಲಾವಿದರೆಲ್ಲಾ ಅಂಗಡಿ ಮುಗ್ಗಟ್ಟು ಹಾಕಿಕೊಂಡು ಕುಳಿತರೆ ನಾವು ತಮಿಳು ನಾಟಕ, ಹಿಂದೀ ಸಿನಿಮಾ ನೋಡಿಕೊಂಡು ತೃಪ್ತಿಪಟ್ಟುಕೊಳ್ಳಬೇಕು." ಎಂದು ಗೌಡ ಹೇಳಿದ.

“ ಸಿನಿಮಾ ಎನ್ನುತ್ತಲೇ ಜ್ಞಾಪಕಕ್ಕೆ ಬಂತು.”

ಎಂದು ಶಾಸ್ತ್ರಿ ಕೆಳಗಿಳಿದುಹೋಗಿ ಎರಡು ದಿವಸದ ಹಿಂದಿನ ತಾಯಿನಾಡು ಪತ್ರಿಕೆ ತಂದು ಅಣ್ಣಯ್ಯನ ಕೈಯಲ್ಲಿತ್ತು ‘ ಇದನ್ನು ಓದಿ ’ ಎಂದು ಹೇಳಿದ.

ಎಲ್ಲರೂ ಕೇಳಲೆಂದು ಗಟ್ಟಿಯಾಗಿಯೇ ಅಣ್ಣಯ್ಯ ಓದಿದ

“ ಕೂಡಲೆ ಬೇಕಾಗಿದ್ದಾರೆ.

“ ಬೊಂಬಾಯಿನಲ್ಲಿ ನಿರ್ಮಿಸಲ್ಪಡುವ ಕನ್ನಡ ಚಿತ್ರ ಪಟಕ್ಕೆ ದಕ್ಷರೂ, ಸುರೂಪಿಗಳೂ ಆದ ನಟ, ನಟಿಯರು ಬೇಕಾಗಿದ್ದಾರೆ. ಅನುಭವದ ವಿವರ ಕೊಟ್ಟು, ಭಾವಚಿತ್ರದೊಂದಿಗೆ ಅಭ್ಯರ್ಥಿಗಳು ಕೂಡಲೆ ಬರೆಯಬೇಕು.

ಬಿ. ಐ. ಪಾಟೀಲ್ C/o
ಶ್ರೀ ಸೋಮನಾಥ ಸೌಂಡ್ ಸ್ಟುಡಿಯೋ
ತಾರದೇವ್, ಬಾಂಬೆ.”

“ ನೋಡಿ – ಅವಕಾಶ ತಾನಾಗಿಯೇ ಒದಗಿಬಂದಿದೆ.”

ಎಂದು ಗೌಡ ಪ್ರೋತ್ಸಾಹಿಸಿದ.

“ ಅಪ್ಲಿಕೇಷರ್ ಹಾಕಲೇ ?” ಎಂದು ಅಣ್ಣಯ್ಯ ಅನುಮೋದಿಸಿ ಕೊಂಡೇ ಕೇಳಿದ.

“ ಅಪ್ಲಿಕೇಷರ್ ಹಾಕಿ ಫೋಟೋ ಕಳಿಸಿ. ಕೆಲಸ ಸಿಕ್ಕಿತು ಒಳ್ಳೆಯದೇ ಆಯಿತು – ಸಿಕ್ಕದಿದ್ದರೆ ಫೋಟೋ ತಾನೇ ಹೋಗುವುದು.”

ಎಂದು ಗೌಡ ಹೇಳಿದ. ಆತನ ಮಾತನ್ನೇ ಸಿದ್ದವೀರಪ್ಪ ಶಾಸ್ತ್ರಿ ಅನುಮೋದಿಸಿದರು.

ಶಾಸ್ತ್ರಿಯೇ ಅಪ್ಲಿಕೇಷನ್ ಬರೆದು ಟೈಪ್ ಮಾಡಿಡುವುದೆಂದೂ, ಮಾರನೆಯ ದಿನ ಅಣ್ಣಯ್ಯ ತಂದು ಕೊಡುವ ಭಾವ ಚಿತ್ರಗಳೊಂದಿಗೆ ಅವುಗಳನ್ನು ಕಳಿಸುವುದೆಂದೂ ನಿಶ್ಚಯವಾಯಿತು.

ಕನ್ನಡ ಚಿತ್ರ ನಿರ್ಮಾಣದ ಸುದ್ದಿ ಕೇಳಿ ಮಂಜುಳಾ ಸಂತೋಷ ಭರಿತಳಾಗಿ ನೂರೆಂಟು ವಿಚಾರ ಮಾಡತೊಡಗಿದಳು. ಬೆವರ್ಲಿ ಹಿಲ್ಸ್, ಮಲಬಾರ್

ಹಿಲ್ಸ್‌ಗಳ ಮೇಲೆ ವಾಸಮಾಡುತ್ತಿದ್ದ ವಿದೇಶೀ, ದೇಶೀ ನಟ, ನಟಿಯರ ವೈಭವ ಜೀವನದ ಸಮಗ್ರ ಚಿತ್ರ ಅವಳ ಕಣ್ಣುಮುಂದೆ ಸುಳಿದಾಡಿತು.

"ಮಲಬಾರ್ ಹಿಲ್ಸ್ ಮೇಲೆ ಭವ್ಯವಾದ ಮನೆ – ಅದರಲ್ಲಿ ಎರಡು ಟೆನಿಸ್ ಕೋರ್ಟುಗಳು."

'ಒಂದು ಹಿಂಡು ಅಲಸಾಷಿಯನ್ ನಾಯಿಗಳು.

'ಕೈಗೊಬ್ಬ, ಕಾಲಿಗೊಬ್ಬ ಆಳು.

'ತಾರಾಮಣಿ'ಯ ಸಂದರ್ಶನ ಭಾಗ್ಯಕ್ಕೆ ಗೇಟಿನಲ್ಲಿಯೇ ಕಾದು ನಿಂತಿರುವ ಪತ್ರಿಕಾ ಪ್ರತಿನಿಧಿಗಳ ತಂಡ –

'ಮುಂಬಯಿ – ಇಂಗ್ಲೆಂಡ್ – ಕೊನೆಗೆ ಹಾಲಿವುಡ್.

'ಭಾರತದ ಪ್ರಸಿದ್ಧ ಕಲಾವಿದೆ ಮಂಜುಳಾ ಅಭಿನಯಿಸಿರುವ 'ಅಡ್ಡಗೋಡೆಯ ಮೇಲೆ ದೀಪ' ಚಿತ್ರ; ದಿಗ್ದರ್ಶನ–ಹೆನ್ರಿಕಿಂಗ್ ; ನಿರ್ಮಾಪಕರು–ಮೀಟ್ರೋ ಗೋಲ್ಡ್ವಿನ್ ಮೇಯರ್; ಪ್ರಿಮ್ಯೂರ್ ಷೋ – ಹಾಲಿವುಡ್ ಥಿಯೇಟರಿನಲ್ಲಿ; ಮಾನ್ಯ ಅತಿಥಿಗಳು – ಪ್ರೆಸಿಡೆಂಟ್ ಟ್ರುಮನ್, ಅವರ ಧರ್ಮ ಪತ್ನಿ !

'ಅಲ್ಲಿಂದ ಮುಂದೆ ಭಾರತಕ್ಕೆ ಮರಳಿ ಬರುವುದು – ತಾನೇ ದಿಗ್ದರ್ಶಕಳಾಗುವುದು, ನಿರ್ಮಾಪಕಿಯಾಗುವುದು – ಸ್ವಂತ ಸ್ಟುಡಿಯೋ – ಬ್ಯಾಂಕಿನಲ್ಲಿ ಲಕ್ಷಾಂತರ – ಛೆ! ಛೆ! ಕೋಟ್ಯಾಂತರ ರೂಪಾಯಿಗಳು – ಪ್ರಪಂಚ ಪರ್ಯಟನ – ಎಲ್ಲೆಲ್ಲಿಯೂ ವೈಭವದ ಸ್ವಾಗತ."

ಈ ಚಿತ್ರಗಳನ್ನು ಮತ್ತೆ ಮತ್ತೆ ಚಿತ್ತ ಭಿತ್ತಿಯ ಮೇಲೆ ತಂದುಕೊಂಡು ಮಂಜುಳಾ ಸಂತುಷ್ಟಳಾದಳು.

ಮಾರನೆಯ ದಿನ ಶಾಸ್ತ್ರಿ ಅಪ್ಲಿಕೇಷನ್‌ಗಳನ್ನು ಟೈಪ್ ಮಾಡಿ, ಅಣ್ಣಯ್ಯ, ಮಂಜುಳಾ ಇವರ ವಿವಿಧ ಭಂಗಿಗಳ ಹಲವಾರು ಚಿತ್ರಗಳೊಂದಿಗೆ ಮುಂಬಯಿಗೆ ರಿಜಿಸ್ಟರ್ಡ್ ಪಾರ್ಸಲ್ ಮಾಡಿದ.

ಕಾಗದಕ್ಕೆ ಉತ್ತರ ಕಾಯುತ್ತ ಅಣ್ಣಯ್ಯ ಕುಳಿತ.

ಮರು ಟಪಾಲಿಗೇ ದಿಗ್ದರ್ಶಕರ ಕಾಗದವೂ, ಸಾವಿರಾರು ರೂಪಾಯಿಗಳ ಕಂಟ್ರ್ಯಾಕ್ಟೂ ಬರುವುದೆಂದು ಮಂಜುಳಾ ನಿರೀಕ್ಷಿಸಿದಳು. ನಾಟಕದ

ಕಂಪೆನಿಯನ್ನು ಬಿಟ್ಟು ಸಿನೀಮಾ ಕಂಪೆನಿಗೆ ಹೋಗುವ ವಿಚಾರವೇ ಅವಳಲ್ಲಿ ಅದ್ಭುತ ಮಾರ್ಪಾಟನ್ನುಂಟುಮಾಡಿತ್ತು.

ಅವಳಲ್ಲಿ ಆದ ಮಾರ್ಪಾಟನ್ನು ಮೊದಲು ಕಂಡುಕೊಂಡವನು ಗುಂಡೂರಾಯ. ಒಂದು ದಿನ ಗುಂಡೂ ರಿಹರ್ಸಲ್ಲಿಗೆ ಕರೆಯಲು ಮಂಜುಳನ ರೂಮಿಗೆ ಬಂದ. 'ನನಗೆ ರಿಹರ್ಸಲ್ ಅವಶ್ಯಕತೆ ಇಲ್ಲ !' ಎಂದು ಮಂಜುಳಾ ಕುತ್ತಿಗೆ ಸೆಟೆಸಿ ಉತ್ತರವಿತ್ತಳು.

"ಹಾಗಂದರೇನಮ್ಮ ಅರ್ಥ. ನಾಟಕದಲ್ಲಿ ಪರಿಪೂರ್ಣತೆ ಪಡೆಯಲು ಯಾರಿಗೂ ಸಾಧ್ಯವಿಲ್ಲ. ವರದಾಚಾರ್ಯರಂಥವರು ರಿಹರ್ಸಲ್ ಮಾಡಿ ಕೊಳ್ಳುತ್ತಿದ್ದರು."

"ಇರಬಹುದು. ನನಗೆ ಬೇಕಿಲ್ಲ."

"ಕಂಪೆನಿ ರೂಲ್ಸಿಗೇ ವಿರುದ್ಧವಮ್ಮಾ."

"ಅದಕ್ಕೇ ನಾನೇನು ಮಾಡಲಿ."

"ನೀನು ಹೇಳಿದ ಮಾತೇ ಯಜಮಾನರಿಗೆ ತಿಳಿಸಲೇನು ?"

"ಬೇಕಾದವರಿಗೆ ಹೇಳಿಕೊಳ್ಳಿ – ನನಗೇನು"

ಎಂದಳು. ಗುಂಡೂ ಹುಬ್ಬು ಗಂಟು ಹಾಕಿಕೊಂಡು 'ಒಹೋ ! ಇದು ಇಲ್ಲಿಯವರೆಗೆ ಬಂತೋ' ಎಂದುಕೊಂಡು ಎದ್ದು ಹೋದ.

ಒಂದು ವಾರ ಕಳೆದು ಹೋಯಿತು. ಮುಂಬಯಿಯಿಂದ ಸುದ್ದಿ ಸಮಾಚಾರವಿಲ್ಲ.

ಕಂಪೆನಿಯ ನಾಟಕಗಳೂ ಕಳೆಗುಂದುತ್ತ ಬಂದವು. ನಾಟಕದ ವರಮಾನ ಎಂಟನೂರರಿಂದ, ಐದು ನೂರಕ್ಕಿಳಿದು ಕೊನೆಗೆ ನೂರೈವತ್ತಕ್ಕಿಳಿದಿತ್ತು. ಶ್ರೀಕಂಠಮೂರ್ತಿಗೆ ಮೈ ಪರಚಿಕೊಳ್ಳುವಷ್ಟು ತಾಪತ್ರಯ ಆರಂಭವಾಗಿತ್ತು. ಸಾಕಷ್ಟು ವರಮಾನ ಬರದೆ, ಕಂಪೆನಿ ತೂಗಿಸುವ ಕಷ್ಟದ ಜತೆಗೆ, ನಾಟಕಗಳಿಗೆ ದಕ್ಷರಾದ ನಟನಟಿಯರನ್ನು ಹೊಂದಿಸುವ ಕಷ್ಟವೂ ಸೇರಿಕೊಂಡಿತ್ತು. ಇವೆಲ್ಲವುಗಳ ಮೇಲೆ ಕಳಶವಿಟ್ಟಂತೆ ದೊರೆಸ್ವಾಮಿ, ಅಣ್ಣಯ್ಯ ಇವರಿಬ್ಬರನ್ನೂ ಹತೋಟಿಯಲ್ಲಿಟ್ಟುಕೊಳ್ಳುವುದು. ಮಂಜುಳನ ನಡತೆಯ ಬಗ್ಗೆ ಗುಂಡೂರಾಯನೇ ದೂರು ಹೇಳಿದ ಮೇಲೆ ಶ್ರೀಕಂಠಮೂರ್ತಿಗೆ ತಾಳ್ಮೆ ಉಳಿಯಲಿಲ್ಲ.

“ ಬಾಯಿ ಮುಚ್ಚಿಕೊಂಡು ರಿಹರ್ಸಲ್ಲಿಗೆ ಬರುತ್ತಾಳೋ ಇಲ್ಲವೋ ಕೇಳು – ಬರದಿದ್ದರೆ ಈ ತಕ್ಷಣ ಕಂಪೆನಿ ಬಿಟ್ಟು ಹೊರಗೆ ಹೋಗು ಅನ್ನು ” ಎಂದು ಆಜ್ಞಾಪಿಸಿದ.

ಯಜಮಾನರ ಅಪ್ಪಣೆ ಕೇಳಿದ ಮೇಲೆ ಮಂಜುಳಾ ತನ್ನ ಸ್ವರ್ಣಮಂದಿರದಿಂದ ಕೆಳಗಿಳಿದು ರಿಹರ್ಸಲ್ಲಿಗೆ ಬಂದು ಕುಳಿತಳು.

ಯಜಮಾನರು ಉದ್ದೇಶಪೂರ್ವಕವಾಗಿಯೇ ತನಗೆ ಅಪಮಾನ ಮಾಡಿದರೆಂದು ಮಂಜುಳಾ ಭಾವಿಸಿಕೊಂಡು ನಡೆದುದಕ್ಕೆ ಬಣ್ಣಕೊಟ್ಟು ಅಣ್ಣಯ್ಯನಿಗೆ ಹೇಳಿದಳು.

“ ನನಗೂ ಹಾಳು ಕಂಪೆನಿ ಸಹವಾಸ ಸಾಕಾಗಿದೆ. ನಡೀ ನಾಳೆಯೇ ಹೊರಟು ಬಿಡೋಣ.”

“ ಎಲ್ಲಿಗೆ ಹೋಗುವುದು.”

“ ಬೊಂಬಾಯಿಗೆ.”

“ ಫಿಲಂ ಕಂಪೆನಿಯಿಂದ ಉತ್ತರವೇ ಬಂದಿಲ್ಲ.”

“ ಚಿತ್ರ ತಯಾರಿಕೆಯ ಗಡಿಬಿಡಿಯಲ್ಲಿ ಉತ್ತರ ಬರೆಯಲು ಅವರಿಗೆ ಅನುಕೂಲವಾಗದಿರಬಹುದು. ಹೇಗೂ ಅವರಿಗೆ ನಟ ನಟಿಯರು ಬೇಕು–ನಮಗೆ ಕೆಲಸ ಬೇಕು–ನಾವೇ ಹೋಗಿಬಿಟ್ಟರಾಯಿತು. ಪತ್ರವ್ಯವಹಾರದಲ್ಲಿ ಕಾಲಹರಣ ಮಾಡುವುದು ಏಕೆ ?”

“ ನನಗೂ ಅದೇ ಸರಿಯಾಗಿ ತೋರುತ್ತದೆ.”

“ ನಾಳೆ ರಾತ್ರಿ ಹೊರಟುಬಿಡೋಣ. ಬೆಳಿಗ್ಗೆ ನನ್ನ ಸ್ನೇಹಿತರನ್ನು ಕೇಳಿ ಬೊಂಬಾಯಿ ವಿಷಯ ತಿಳಿದುಕೊಳ್ಳುತ್ತೇನೆ. ನಾನು ಕಂಪೆನಿ ಮನೆಗೆ ಬರುವವರೆಗೆ ನೀನು ಈ ಸುದ್ದಿ ಯಾರಿಗೂ ಹೇಳಬೇಡ.”

ಎಂದು ಅಣ್ಣಯ್ಯ ಮಂಜುಳನಿಗೆ ಎಚ್ಚರಿಕೆ ಕೊಟ್ಟ.

ಬೆಳಿಗ್ಗೆ ‘ ವಿದ್ಯಾಸರಸ್ವತಿ ಪುಸ್ತಕಾಲಯ ’ದಲ್ಲಿ ಶಾಸ್ತ್ರಿ ಗೆಳೆಯರ ಅವಸರ ಸಭೆ ಸೇರಿಸಬೇಕಾಯಿತು. ಅಣ್ಣಯ್ಯನ ನಿರ್ಧಾರ ಕೇಳಿ ಗೌಡನಿಗೆ ವ್ಯಸನವಾಯಿತು.

“ ದೂರ ದೇಶ – ಗುರುತಿನವರು ಯಾರೂ ಇಲ್ಲ. ಮಣ್ಣು ದೋಣಿ ನಂಬಿ ಹೊಳೆಗೆ ಇಳಿದ ಹಾಗಾಗಬಾರದು ಅಣ್ಣಯ್ಯ.”

" ಕಂಪೆನಿಯಲ್ಲಿ ಇರುವುದಕ್ಕಂತೂ ಸಾಧ್ಯವಿಲ್ಲ. ಮುಂದೇನು ಮಾಡುವುದು ಗೌಡರೇ ?"

" ಇವತ್ತೇ ಹೊರಡಬೇಕಾದ ಅವಶ್ಯಕತೆಯೇನು ಅಣ್ಣಯ್ಯನವರೇ ?" ಎಂದು ಸಿದ್ಧವೀರಪ್ಪ ಕೇಳಿದ.

" ಕಂಪೆನಿಯವರು ಮಂಜುಳನಿಗೆ ಅಪಮಾನ ಮಾಡಿದ್ದಾರೆ."

" ನೋಡಿಯಪ್ಪ – ಯೋಚನೆ ಮಾಡಿ."

ಎಂದು ಶಾಸ್ತ್ರಿ ಸೇರಿಸಿದ.

" ಇವತ್ತೇ ಹೊರಟು ಬಿಡಲು ನಿಶ್ಚಯಿಸಿದ್ದೇನೆ. ಆಶೀರ್ವಾದ ಮಾಡಿ ಕಳುಹಿಸಿಕೊಡಿ. ರೈಲು ಇಳಿದು ಕೂಡಲೆ ನಾವು ಎಲ್ಲಿಗೆ ಹೋಗಬೇಕು ತಿಳಿಸಿ."

ಬೊಂಬಾಯಿ ನಗರವನ್ನು ಚೆನ್ನಾಗಿ ತಿಳಿದಿದ್ದ ಸಿದ್ದವೀರಪ್ಪ ಅವನಿಗೆ ಅವಶ್ಯಕವಾಗಿದ್ದ ಪರಿಚಯ ಮಾಡಿಕೊಟ್ಟ.

ಕಂಪೆನಿ ಮನೆಗೆ ಹಿಂದಿರುಗಿದ ಕೂಡಲೆ ಅಣ್ಣಯ್ಯ ಮಂಜುಳನಿಗೆ ರಾತ್ರಿ ಹೊರಡುವ ವಿಷಯ ತಿಳಿಸಿ, ಯಜಮಾನರ ದಾರಿ ನೋಡುತ್ತ ಕುಳಿತ.

ಶ್ರೀಕಂಠಮೂರ್ತಿ ಕಂಪೆನಿ ಮನೆಗೆ ಬಂದು ಊಟ ಮುಗಿಸಿ ರೂಮು ಸೇರಿದ ಕೂಡಲೆ ಅಣ್ಣಯ್ಯನೂ ಅವರ ಹಿಂದೆ ಹೋದ. ಯಜಮಾನರನ್ನನುಸರಿಸಿ ಅಣ್ಣಯ್ಯ ಅವರ ರೂಮಿಗೆ ಹೋದ ಸಂಗತಿ ತಿಳಿದ ಕೂಡಲೇ ಗುಂಡೂರಾಯನೂ ಅಲ್ಲಿಗೆ ಬಂದ.

" ಏನು ಅಣ್ಣಯ್ಯ - ಏನು ಸಮಾಚಾರ."

" ನನ್ನ ಲೆಕ್ಕ ಬೇಬಾಕು ಮಾಡಿಬಿಡಿ ಸ್ವಾಮಿ."

" ಯಾಕೆ - ಏನಾಯಿತು ?"

" ಇವತ್ತು ರಾತ್ರಿ ನಾನು ಹೊರಡುತ್ತೇನೆ."

" ರಾತ್ರಿ ನಾಟಕ ಇದೆ ಅಣ್ಣಯ್ಯ."

" ಅದಕ್ಕೆ ನಾನೇನು ಮಾಡಲಿ ಸ್ವಾಮಿ."

" ನೀನು ಹೋದರೆ ಬರುವುದು ಯಾವಾಗ ?"

" ಪುನಃ ನಿಮ್ಮ ಕಂಪೆನಿಗೆ ಕಾಲಿಡುವುದಿಲ್ಲ ಸ್ವಾಮಿ."

ಶ್ರೀಕಂಠಮೂರ್ತಿ, ಗುಂಡೂರಾಯ ಇಬ್ಬರೂ ಒಬ್ಬರ ಮುಖ ಒಬ್ಬರು ನೋಡಿಕೊಂಡರು.

"ಕಂಪೆನಿ ಬಿಡುವಂಥಾದ್ದು ನಿನಗೇನಾಯಿತು ಅಣ್ಣಯ್ಯ."

"ಎಲ್ಲಾ ಕೆದಕಿ ಏನು ಪ್ರಯೋಜನ ಸ್ವಾಮಿ. ಇಲ್ಲಿ ಇರುವುದಕ್ಕೆ ನನಗಿಷ್ಟವಿಲ್ಲ."

"ಶಿವಮೊಗ್ಗೆ ಸೀಸನ್ ಮುಗಿಯುತ್ತಾ ಇದೆ. ಇನ್ನು ಒಂದು ವಾರ ಇದ್ದು ಬೇಕಾದರೆ ಹೋಗು. ಮುಂದಿನ ವ್ಯವಸ್ಥೆ ನಾನು ಹೇಗಾದರೂ ಮಾಡಿ ಕೊಳ್ಳುತ್ತೇನೆ."

"ಸಾಧ್ಯವಿಲ್ಲ ಸ್ವಾಮಿ - ಇವತ್ತು ಹೊರಡಲೇ ಬೇಕು."

"ಹಾಳಾಗಿ ಹೋಗು - ಅದು ಹೇಳೋಕೆ ಇಲ್ಲೀಕೆ ಬಂದೆ."

"ಹಣದ ಬಾಕಿಗಾಗಿ."

"ನಿಮ್ಮಪ್ಪ ಸಂಪಾದಿಸಿ ನನ್ನ ಕೈಯಲ್ಲಿಟ್ಟು ಹೋಗಿದ್ದಾನೆ."

"ಹಲ್ಲು ಹಿಡಿದು ಮಾತನಾಡಿ ಸ್ವಾಮಿ. ನೀವು ಕಂಪೆನಿ ಯಜಮಾನ ರಾದಾಕ್ಷಣ ಉಛಾಯಿಸಿ ಮಾತನಾಡೋ ಅಧಿಕಾರ ನಿಮಗಿಲ್ಲ."

"ಏನೋ - ನನ್ನ ಎದುರು ನಿಂತು ಮಾತನಾಡುವಷ್ಟು ಧೈರ್ಯ ಬಂತೇ ನಿನಗೆ."

"ನಿಮ್ಮ ಪಂಚಾಯಿತಿ ನನಗೆ ಬೇಕಾಗಿಲ್ಲ ಸ್ವಾಮಿ. ನನ್ನ ಲೆಕ್ಕ ನೋಡಿಬಿಡಿ."

ಗುಂಡೂರಾಯ ಮಧ್ಯೆ ಬಾಯಿ ಹಾಕಿ ಯಜಮಾನರಿಗೂ ಅಣ್ಣಯ್ಯ ನಿಗೂ ಒಪ್ಪಂದ ಮಾಡಿಸಲೆತ್ನಿಸಿ ವಿಫಲನಾದ. ಶ್ರೀಕಂಠಮೂರ್ತಿ ವಿಧಿ ಯಿಲ್ಲದೆ ಅಣ್ಣಯ್ಯನ ಲೆಕ್ಕ ಮುಕ್ತಾಯಮಾಡುವುದಕ್ಕೆ ಒಪ್ಪಲೇ ಬೇಕಾ ಯಿತು.

ಮಂಜುಳಾ ಯಜಮಾನರನ್ನು ನೋಡುವುದಕ್ಕೆ ಬಂದು ತಾನೂ ಹೊರಡುವ ವಿಷಯ ತಿಳಿಸಿದಾಗ ಪರಿಸ್ಥಿತಿ ವಿಕೋಪಕ್ಕೆ ಹೋಯಿತು. ಶ್ರೀಕಂಠಮೂರ್ತಿ ತಲೆತಲೆ ಚಚ್ಚಿಕೊಂಡು, ಕಣ್ಣಲ್ಲಿ ನೀರು ಸುರಿಸುತ್ತಾ ನಾಟಕದವರ ಕುಲಕೋಟಿಯನ್ನೆಲ್ಲಾ ತೊಳೆದ ಅವನ ಉದ್ಗಾರ ಚೀತ್ಕಾರ, ಹಾಹಾಕಾರ ಮಂಜುಳನ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡ ಲಿಲ್ಲ. ಅವಳು ಕಂಪೆನಿ ಬಿಟ್ಟು ಹೋಗುವುದಕ್ಕೂ ಶ್ರೀಕಂಠಮೂರ್ತಿ ಒಪ್ಪಲೇ ಬೇಕಾಯಿತು.

ಅಣ್ಣಯ್ಯ, ಮಂಜುಳನ ಮೇಲೆ ಶ್ರೀಕಂಠಮೂರ್ತಿಗೆ ಹುಟ್ಟದ ಕ್ರೋಧ ಸರಸ್ವತಿಯ ಕಡೆ ತಿರುಗಿತು.

"ಅವಳಿಂದಲೇ ಇಷ್ಟು ಅನರ್ಥವಾದದ್ದು. ಆ ಗೂಬೆರಂಡೆಯನ್ನೂ ಕಂಪೆನಿಯಿಂದಾಚೆ ಸಾಗಿಸು ಗುಂಡಾ"

ಎಂದು ಶ್ರೀಕಂಠಮೂರ್ತಿ ಅರಚಿಕೊಂಡ.

ಆಕಸ್ಮಿಕವಾಗಿ ತನಗೊದಗಿದ ಆಪತ್ತು ಕಂಡು ಸರಸ್ವತಿ ವಿಧಿಯನ್ನು ದೂಷಿಸಿದಳು. 'ಹೇಗೂ ಬೆಂಗಳೂರಿಗೆ ಹೋಗಬೇಕೆಂದಿದ್ದೆ – ಇದೂ ಒಳ್ಳೆಯದಕ್ಕೇ ಆಯಿತು' ಎಂದು ಸಮಾಧಾನ ತಂದುಕೊಂಡಳು.

ಸರಸ್ವತಿ ಕಂಪೆನಿ ಬಿಟ್ಟು ಹೋಗುವ ವಿಷಯದಲ್ಲಿ ಯಾರೂ ಅನುತಾಪ ಸೂಚಿಸಲಿಲ್ಲ. ಇಂದಿಗೆ ಕಂಪೆನಿಯ ಗ್ರಹಚಾರ ಪರಿಹಾರವಾಯಿತೆಂದು ಭುವನೇಶ್ವರಯ್ಯ, ಸಂಪಂಗಿ ಸ್ಪಷ್ಟವಾಗಿ ಆಡಿಯೇ ಬಿಟ್ಟರು.

ಅಡಿಗೆ ನಾರಾಯಣ ಮಾತ್ರ ಮನ್ಮುಲ ಮರುಗಿದ. ಹಾಡು ಹಗಲು - ಅವನನ್ನು ಸಮಾಧಾನಪಡಿಸುವುದಕ್ಕೂ ಸರಸ್ವತಿಗೆ ಅವಕಾಶವಿಲ್ಲ. ಮುತ್ತಮ್ಮನ ಮನೆಯ ವಿಳಾಸ ಕೊಟ್ಟು, ಬೆಂಗಳೂರಿಗೆ ಬಂದಾಗ ಅಲ್ಲಿಗೆ ಬಾರೆಂದು ನಾರಾಯಣನಿಗೆ ಹೇಳಿದಳು.

ಥಿಯೇಟರ್ ಮುಂದೆ 'ಇವತ್ತು ನಾಟಕವಿಲ್ಲ' ಎಂದು ಬೋರ್ಡು ಇಡಲೇ ಬೇಕಾಯಿತು.

ಮಂಜುಳಾ, ಅಣ್ಣಯ್ಯ ಸ್ಟೇಷನ್ನಿಗೆ ಬಂದರು ಅವರನ್ನು ಕಳುಹಿಸಲು ಗೌಡ ಸಿದ್ಧವೀರಪ್ಪ, ಶಾಸ್ತ್ರಿ ಬಂದಿದ್ದರು.

ಸರಸ್ವತಿ ತನ್ನ ಟ್ರಂಕ್, ಹಾಸಿಗೆ ಇಟ್ಟುಕೊಂಡು ಸ್ಟೇಷನ್ನಿನ ಒಂದು ಪಕ್ಕದಲ್ಲಿ ರೈಲು ಕಾಯುತ್ತ ಕುಳಿತಿದ್ದಳು.

ತಾಯಿ, ಮಗಳು ಒಬ್ಬರನ್ನೊಬ್ಬರು ಮಾತನಾಡಿಸಲಿಲ್ಲ.

ರೈಲು ಬಂದು ಸ್ಟೇಷನ್ನಿನಲ್ಲಿ ನಿಲ್ಲಲು ಗೌಡ ಬೊಂಬಾಯಿಗೆ ಎರಡು ಇಂಟರ್ ತರಗತಿ ಟಿಕೆಟ್ ಕೊಂಡು ಅಣ್ಣಯ್ಯನ ಕೈಯಲ್ಲಿಟ್ಟು

"ಬೊಂಬಾಯಿಗೆ ಹೋದಕೂಡಲೆ ಬರೆಯಿರಿ"

ಎಂದು ಹೇಳಿದ.

ಸರಸ್ವತಿ ರೈಲು ಹತ್ತಿ ಮೂರನೆಯ ತರಗತಿಯ ಡಬ್ಬಿಯಲ್ಲಿ ಕುಳಿತಳು.

ರೈಲು ಹೊರಡುವಷ್ಟರಲ್ಲಿ ನಾರಾಯಣ ಓಡಿ ಬಂದು ಸರಸ್ವತಿಯ ಕೈಗೆ ತಿಂಡಿ ಪೊಟ್ಟಣವೊಂದನ್ನು ಕೊಟ್ಟ – ಅವನ ಕಣ್ಣಲ್ಲಿ ನೀರು ಕಟ್ಟಿ ಕಟ್ಟಿತು. ಸರಸ್ವತಿಯ ಕಣ್ಣಲ್ಲಿಯೂ ನೀರು ಮಿಡಿಯಿತು. ರೈಲು ಹೊರಟರೂ ನಾರಾಯಣ ಅಲ್ಲಿಂದ ಕಾಲು ಕೀಳಲಾರ. ರೈಲಿನ ಜತೆ ನಡೆದು ಹೊರಟ. ಸರಸ್ವತಿ ಅವನ ಕೆನ್ನೆ ನೇವರಿಸಿದಳು. ರೈಲು ವೇಗವಾಗಿ ಮುಂದಕ್ಕೆ ಹೊರಟಿತು.

ಬೀರೂರು ನಿಲ್ದಾಣಕ್ಕೆ ಪೂನಾ ಮೇಲ್ ಶಿವಮೊಗ್ಗೆಯ ಗಾಡಿ ಹೋದ ಸ್ವಲ್ಪ ಹೊತ್ತಿನೊಳಗಾಗಿ ಬಂದಿತು. ಅದರಲ್ಲಿ ಮಂಜುಳಾ, ಅಣ್ಣಯ್ಯ ಕುಳಿತರು. ಸರಸ್ವತಿ ಅವರನ್ನೇ ನೋಡುತ್ತ ನಿಂತಿದ್ದಳು. ರೈಲು ಹೊರಟಿತು ಸರಸ್ವತಿಯ ಕಣ್ಣಿಂದ ಒಂದೆರಡು ಹನಿಗಳು ಜಾರಿದವು.

## ೨೧

ರೇಷನ್ ಅಂಗಡಿ ಪಿಳ್ಳಣ್ಣ ಫುಡ್ ಇನ್‌ಸ್ಪೆಕ್ಟರ್ ದೇವರಾಜನನ್ನು ಕರೆದುಕೊಂಡು ಬಂದ. ಮುತ್ತಮ್ಮ ಅವರ ಅತಿಥ್ಯಕ್ಕೆ ಬಾಲೂ, ಬಾಯಿಯನ್ನು ಕರೆಸಿದ್ದಳು. ಸಂಜೆಯವರೆಗೆ ಪಿಳ್ಳಣ್ಣ, ದೇವರಾಜ ಮುತ್ತಮ್ಮನ ಮನೆಯಲ್ಲಿದ್ದು ಹೋದರು.

ಮಾರನೆಯ ದಿನ ಬೆಳಿಗ್ಗೆ ಹನ್ನೊಂದು ಗಂಟೆಗೇ ಅಪರಂಜಿ ಬಂದು ಬಿಟ್ಟಳು. ಮುತ್ತಮ್ಮ ಆಶ್ಚರ್ಯದಿಂದ.

"ಇದೇನಮ್ಮ, ಬಂದು ಬಿಟ್ಟೆ !" ಎಂದಳು.

"ಇವತ್ತು ಬಾ ಅಂದಿದ್ರಿ."

"ಬಾ ಅಂದಿದ್ನಲ್ವೇ – ಮರತೇ ಬಟ್ಟೆ – ವಯಸಾಯ್ತಮ್ಮ, ಮೊದಲಿನ್ಹಾಗೆ ಗ್ಯಪ್ತಿ ಎಲ್ಲಿರತ್ತೆತೆ ಹೇಳು."

"ಯಾರಾದ್ರೂ ಬತ್ತಾರಾ?"

"ನಾನು ಯಾರಿಗೂ ಏಳಿಕಳಿಸಲಿಲ್ವೇ ? ಮ್ಯಾಕೋಗಿ ಕುಂತಿರು – ಯಾರಾದ್ರೂ ಬರಬೋದು."

ಪುಟ್ಟ ಅಪರಂಜಿಯನ್ನು ಮಹಡಿ ಮೇಲಕ್ಕೆ ಕರೆದೊಯ್ದು ಅವಳ ಜತೆ ಕವಡೆಯಾಡುತ್ತ ಕುಳಿತಳು.

ಸುಮಾರು ಹನ್ನೆರಡು ಗಂಟೆಯ ವೇಳೆಗೆ ದೇವರಾಜ್ ಹೊರಗೆ ಬೈಸಿಕಲ್ ಇಟ್ಟು ಒಳಕ್ಕೆ ಬಂದ. ಅವನನ್ನು ಕಂಡಕೂಡಲೆ ಗಾಬರಿಯಿಂದ ಮುತ್ತಮ್ಮ

"ಬೈಸ್ಕಲ್ಲು ಒಳ್ಕೇ ತತ್ತಾರಪ್ಪಾ. ಅಲ್ಲಿಡ್ಬೇಡ. ಎಲ್ಲಗೂ ನನ್ನ ತಲೇಗೆ ತತ್ತೀರಿ ಬಿಡಿ."

ಎಂದು ಅಲವತ್ತುಕೊಂಡಳು. ದೇವರಾಜ್ ಬೈಸಿಕಲ್ ತಂದು ಒಳಗಿಟ್ಟು ತಪ್ಪು ಮಾಡಿದ್ದ ವಿದ್ಯಾರ್ಥಿಯಂತೆ ಕುಳಿತ.

"ಇನ್ನು ವ್ಯಾಕೆ ಬೈಸ್ಕಲ್ಲು ತರಬೇಡಪ್ಪಾ."

"ಇಲ್ಲಮ್ಮ ತರುವುದಿಲ್ಲ."

"ಪಿಳ್ಳಪ್ಪ ಬರಲಿಲ್ವಾ?"

"ನಾನು ಇಲ್ಲೇ ಒಂದು ರೇಷನ್ ಡಿಪೋ ಇನ್‌ಸ್ಪೆಕ್ಷನ್ನಿಗೆ ಬಂದಿದ್ದೆ – ಹಾಗೇ ನಿನ್ನ ನೋಡಿಕೊಂಡು ಹೋಗೋಣಾಂತ ಬಂದೆ."

"ನಮುಗಷ್ಟು ರೇಸನ್ ಸಾಮಾನು ಕೊಡಿಸಪ್ಪಾ."

"ಕಾರ್ಡು ಇದೆಯೇನು?"

"ಕಾರ್ಡೇನೋ ಐತೆ – ಕಾರ್ಡಿನಾಗಿರೋದ ತರಾಕೆ ಕೈಲಿ ಕಾಸು ಬೇಕಲ್ಲ."

"ನಾನು ಕಳಿಸಿಕೊಡುತ್ತೀನಿ ಸುಮ್ಮನಿರು. ಏನು ಸಮಾಚಾರ – ಯಾರಾದ್ರೂ ಬರ್ತಾರೇನು?"

"ಇರ್ತಿಯೇನು?"

"ಅದಕ್ಕೇ ಬಂದೆ. ನಿನ್ನೆ ಬಂದಿದ್ದಂಥಾವ್ರು ಬೇಡಮ್ಮ."

"ಯಾಕಪ್ಪಾ – ಏನಾಗಿದ್ದರು?"

"ಚೆನ್ನಾಗಿದ್ದರು. ಅವರು ತೀರಾ ಮಾಮೂಲಿ, ಕಸುಬುದಾರರ ಹಾಗೆ ಕಾಣ್ತಾರೆ. ಸಂಸಾರಿ ಯಾರೂ ಸಿಕ್ಕಲ್ವೇನು?"

"ಅವರ್ಗೆಲ್ಲಾ ದುಡ್ಡು ಎಚ್ಚಪ್ಪ."

"ಎಷ್ಟು ಕೇಳ್ತಾರೆ."

"ಐವತ್ತು ರೂಪಾಯಿ ಕೊಡ್ತೀಯೇನು? ಪರಮಾಯಿಷಿ ಕರಸ್ತೀನಿ."

“ ಈಗಲೇ ! ”

“ ನನ್ನ ಮಾತ್ನಾಗೆ ಅನುಮಾನವಾ ?”

ಮುತ್ತಮ್ಮನ ಸ್ನೇಹ ಬೆಳಸುವುದಕ್ಕೆ ಹಾತೊರೆಯುತ್ತಿದ್ದ ದೇವರಾಜ್ ಹಿಂದೆ ಮುಂದೆ ನೋಡದೆ ಐವತ್ತು ರೂಪಾಯಿ ತೆಗೆದು ಅವಳ ಕೈಯಲ್ಲಿಟ್ಟ. ಮುತ್ತಮ್ಮ ಅವನನ್ನು ಕರೆದೊಯ್ದು ತೊಟ್ಟಿಯ ಪಕ್ಕದಲ್ಲಿ ರೂಮಿನಲ್ಲಿ ಕೂಡಿಸಿ, ಅವನಿಗೆ ಕೇಳಿಸುವಂತೆ ಭಾಗ್ಯಮ್ಮನಿಗೆ ‘ ಆಯಮ್ಮನ್ನ ಈಗಲೇ ಕರ್ಕೊಂಡು ಬಾರಮ್ಮ ’ ಎಂದು ಹೇಳಿದಳು. ಭಾಗ್ಯಮ್ಮ ಹೊರಗೆ ಹೋಗುವಂತೆ ನಟಿಸಿ ದಳು. ಮುತ್ತಮ್ಮ ಮಹಡಿಯ ಮೇಲಕ್ಕೆ ಹೋಗಿ ಅಪರಂಜಿಗೆ ‘ ಆಯಪ್ಪ ಕೇಳಿದರೆ ಈಗಲೇ ಬಂದೆ – ಭಾಗ್ಯಮ್ಮ ಕರ್ಕೊಂಡು ಬಂದ್ಳು ಅಂತ ಏಳು ’ ಎಂದು ಸೂಚಿಸಿದಳು.

ಕಾಲುಗಂಟೆ ತರುವಾಯ ಭಾಗ್ಯಮ್ಮ ಹಿಂದಿರುಗಿ ಬಂದು ‘ ಬತ್ತಾ ಅವಳಮ್ಮ ’ ಎಂದಳು.

ಮುತ್ತಮ್ಮ ರೂಮಿನೊಳಗೆ ಹೋಗಿ ಅಪರಂಜಿಯ ಗುಣ, ಲಾವಣ್ಯ, ರೂಪುಗಳನ್ನು ಚಿತ್ರವತ್ತಾಗಿ ಬಣ್ಣಿಸಿ ದೇವರಾಜನ ಬಾಯಲ್ಲಿ ನೀರೂರುವಂತೆ ಮಾಡಿ

“ ಮ್ಯಾಕೆ ಓಗಪ್ಪಾ. ಅಲ್ಲೇ ಅವಳೆ ” ಎಂದಳು.

ದೇವರಾಜ್ ಮಹಡಿಯ ಮೇಲಕ್ಕೆ ಹೋದ. ಮುಕ್ಕಾಲು ಗಂಟೆ ಕಳೆದಿರಬಹುದು. ದೇವರಾಜ್ ಕೆಳಗಿಳಿದು ಬಂದ. ಅವನ ಹಿಂದೆಯೇ ಬಂದ ಅಪರಂಜಿ ಸ್ನಾನಗೃಹಕ್ಕೆ ಹೋದಳು.

ದೇವರಾಜ್ ಬೇಗ ಕೆಳಗಿಳಿದು ಬಂದುದನ್ನು ಕಂಡ ಮುತ್ತಮ್ಮ ‘ ಏನೋ ಅನಾಹುತವಾಗಿದೆ ’ ಎಂದು ಮನಸ್ಸಿನಲ್ಲಿಯೇ ಭಾವಿಸಿಕೊಂಡು

“ ಯಾಕಪ್ಪಾ. . . .” ಎಂದಳು.

“ ಏನು ?”

“ ಬೇಗ ಬಂದುಬುಟ್ಟೆ !”

“ ಏನೋ ಸರಿಹೋಗಲಿಲ್ಲಮ್ಮ.”

ಮುತ್ತಮ್ಮ ಅರೆ ಮೂಕಳಾಗಿ

“ ರತಿ ಇದ್ದಂಗವಳಲ್ಲಪ್ಪಾ.”

"ಇರಬಹುದು."

"ತಿರುಗಿ ನೀನು ಬರಾದು ?"

"ಬೇರೆ ಯಾರಾದ್ರೂ ಬಂದ್ರೆ ನಾಳೆ ಬರ್ತೀನಿ."

"ನಾಳೆ ಎಲ್ಡು ಮೂರು ಗಂಟೆಗೆ ಬಾ - ಯಾರ್ನಾದ್ರೂ ಕರಿಸಿರ್ತೀನಿ- ಈಯಮ್ಮ ಬ್ಯಾಡ್ವಾ?"

"ಬೇಡ."

"ಸಿಡುಕಿ ಏನಪ್ಪಾ."

"ಏನೂ ಇಲ್ಲಮ್ಮ. ಒಳ್ಳೆಯ ಹೆಂಗಸು."

"ಅಂಗಾದ್ರೆ."

"ಏನೋ ಬೇಡ. ನಾಳೆ ಎರಡು ಗಂಟೆಗೆ ಬರ್ತೀನಿ."

ಎಂದು ಹೇಳಿ ತನ್ನ ಬೈಸಿಕಲ್ ಹೊರಗೆ ತೆಗೆದುಕೊಂಡು ಹೊರಟು ಬಿಟ್ಟ.

ಮುತ್ತಮ್ಮನಿಗೆ ಅವನ ಮಾತು ನಡವಳಿಕೆ ಒಂದೂ ಅರ್ಥವಾಗಲಿಲ್ಲ.

ಅಪರಂಜಿ ಭಾಗ್ಯಮ್ಮನೊಂದಿಗೆ ಅಡಿಗೆ ಮನೆಯಲ್ಲಿ ಹರಟೆ ಹೊಡೆಯುತ್ತ ಕುಳಿತಿದ್ದಳು. ಅಲ್ಲಿಗೇ ಬಂದ ಮುತ್ತಮ್ಮ

"ಯಾಕೆ ಅಪರಂಜೀ."

"ಏನಮ್ಮ ?"

"ಆಯಪ್ಪಂಗೇನು ಮಾಡಿದೆ ?"

"ಏನೂ ಇಲ್ಲವಲ್ಲಮ್ಮ. ನನ್ನ ಮ್ಯಾಕೆ ಕೋಪಮಾಡ್ಕೊಂಡು ಓದ್ರಾ"

"ಅಂಗೇನೂ ಇಲ್ಲ - ಸುಮ್ಕೆ ಕೇಳ್ದೆ."

"ಯಾವಾಗ ಬರ್ತಾರಂತೆ ?"

"ನೀನು ಕೇಳಲಿಲ್ವಾ ?"

"ಕೇಳ್ದೆ – ನಿನ್ನ ತಾವ ಏಳಿ ಓಗ್ತೀನಿ ಅಂದ್ರು."

"ಬಂದು ಏಳ್ತೀನೀಂದ್ರಮ್ಮ."

ಅಪರಂಜಿಯ ಸಮಸ್ಯೆ ಮುತ್ತಮ್ಮನಿಗೆ ಮತ್ತಷ್ಟು ಗಾಢವಾಯಿತು. ಅಪರಂಜಿಗೂ ದೇವರಾಜನಿಗೂ ವ್ಯಾಜ್ಯವಾಗಿದ್ದರೆ ಅದರ ಸ್ಪಷ್ಟ ಚಿಹ್ನೆಗಳು ಇಬ್ಬರ ನಡವಳಿಕೆಯಲ್ಲಿ, ಮಾತಿನಲ್ಲಿ ಕಾಣಬರುತ್ತಿದ್ದವು. ಅಪರಂಜಿ ತೃಪ್ತ

ಳಾಗಿ ಶಾಂತಳಾಗಿದ್ದಳು; ದೇವರಾಜ್ ತೃಪ್ತನಾಗಿರಲಿಲ್ಲ – ಆದರೆ ಅವನಿಗೆ ಕೋಪಬಂದಂತೆ ಕಾಣುತ್ತಿರಲಿಲ್ಲ.

ಅಪರಂಜಿಯನ್ನು ಕೆದಕಿ ಕೇಳಿ, ವಿಷಯದ ನಿಜ ಸ್ಥಿತಿ ಅರಿಯುವ ಹವ್ಯಾಸಕ್ಕೆ ಮುತ್ತಮ್ಮ ಬೀಳಲಿಲ್ಲ. 'ಇರಲಿ - ಗೊತ್ತಾಗೇ ಆಗತ್ತೇ' ಎಂದು ಸಮಾಧಾನ ತಂದುಕೊಂಡಳು.

ಮಾರನೆಯ ದಿನ ಶನಿವಾರ. ಅಂದು ತಲೆಗೆ ಸ್ನಾನಮಾಡಿ, ದೇವರ ತಲೆಯ ಮೇಲೆ ನಾಲ್ಕು ಹೂ ಇಡುವುದು ಮುತ್ತಮ್ಮನ ವಾಡಿಕೆಯಾಗಿತ್ತು. ಬೆಳಿಗ್ಗೆ ಭಾಗ್ಯಮ್ಮ ಬೇಗ ಎದ್ದು ಒಲೆ ಉರಿಮಾಡಿದಳು. ಮುತ್ತಮ್ಮ ಮನೆಯ ಮುಂದೆ ಸಗಣಿ ಹಾಕಿ ಸಾರಿಸುತ್ತಿದ್ದಳು.

ಮನೆಯ ಮುಂದೆ ಒಂದು ಜಟಕಾಗಾಡಿ ಬಂದು ನಿಂತಿತು. ಮುತ್ತಮ್ಮ ಪೊರಕೆ ಕೆಳಗೆ ಹಾಕಿ ನಿಂತುಕೊಳ್ಳುವಷ್ಟರಲ್ಲಿ ಸರಸ್ವತಿ ಗಾಡಿಯಿಂದಿಳಿದಳು. ಮುತ್ತಮ್ಮ ಆನಂದ ವ್ಯಕ್ತ ಮಾಡುತ್ತಾ

"ಈಗ ಬಂದ್ಯೇನಮ್ಮಾ" ಎಂದಳು.

"ಇದೋ ಬರ್‍ತಾ ಇದ್ದೀನಮ್ಮಾ"

ಗಾಡಿಯವನು ಸರಸ್ವತಿಯ ಸಾಮಾನುಗಳನ್ನು ತೆಗೆದುಕೊಂಡು ಹೋಗಿ ಮನೆಯೊಳಗಿಟ್ಟು, ಬಾಡಿಗೆ ತೆಗೆದುಕೊಂಡು ಹೋದ.

ಸಾರಿಸುವ ಕೆಲಸ ಸಾಕುಮಾಡಿ ಮುತ್ತಮ್ಮ ಕೈತೊಳೆದುಕೊಂಡು ಒಳಕ್ಕೆ ಬಂದು

"ನೀನು ಬರ್‍ತೀನೀಂತ ಒಂದು ಕಾಗಜ ಬರೆಯಾಕಿಲ್ವೇನಮ್ಮಾ!"

"ಕಾಗದ ಬರೆಯೋಕೆ ಟೈಮ್ ಇರಲಿಲ್ಲ ಮುತ್ತಮ್ಮ. ಇದ್ದಕ್ಕಿದ್ದ ಹಾಗೇ ಹೊರಡಬೇಕಾಯಿತು."

"ತಿರುಗಿ ಶಿವಮೊಗ್ಗೇಗೆ ಓಗ್ಬೇಕಾ?"

"ನಾಟಕದವರ ಸಾವಾಸ ಸಾಕು ನನ್ನ ತಾಯಿ. ಇನ್ನು ಜನ್ಮ ಜನ್ಮಾಂತರಕ್ಕೂ ನಾಟಕದ ಕಂಪೆನಿ ಒಳಗೆ ಕಾಲಿಡುವುದಿಲ್ಲ."

"ಮಕ್ಕಳು."

"ಏನು ಮಕ್ಕಳು ಹೇಳು. ಹುಟ್ಟುತ್ತಾ ಮಕ್ಕಳು ಬೆಳೆಯುತ್ತಾ ದಾಯಾದಿಗಳು ಅನ್ನೋ ಗಾದೆ ಕೇಳಿದ್ದೀಯೋ ಇಲ್ಲವೋ?"

" ಏನಾಯ್ತಮ್ಮ."

" ಅಣ್ಣಯ್ಯಾಂತ ಒಬ್ಬ ಆಕ್ಟರು – ಅವನನ್ನೆತ್ತಿಕೊಂಡು ಮಂಜುಳಾ ಹಾಳಾಗಿ ಹೋದಳು."

" ಸುಧಾ. –"

" ರಾಜಶೇಖರನ್ನ ಎತ್ತಿಕೊಂಡು ಅವಳು ಓಡಿಹೋದಳು."

" ಕಾಲ ಎಲ್ಲೀಗೆ ಬಂತಮ್ಮ. ತಾಯಿ, ಮಗಳು ಅನ್ನೋ ವಿಶ್ವಾಸ ಕೂಡಾ ಓಗ್ಬಿಡ್ತೆ ?"

" ನಿನಗೇ ಗೊತ್ತಿರುವ ಹಾಗೆ ಈ ಮಕ್ಕಳಿಗೋಸ್ಕರ ಎಷ್ಟು ಕಷ್ಟಪಟ್ಟೆ ಮುತ್ತಮ್ಮ ! ಕೇಳಬಾರದ ಮಾತೆಲ್ಲಾ ಕೇಳಿದೆ - ಅನುಭವಿಸಬಾರದ್ದನ್ನೆಲ್ಲಾ ಅನುಭವಿಸಿದೆ. ಮಕ್ಕಳು ಅನಿಸ್ಕೊಂಡ ಮುಂಡೇವಕ್ಕೆ ಏನಾದ್ರೂ ಕ್ರಿಯಾ ಇದೆಯೇ ?"

" ಓಗ್ಲಿ ಬುಡಮ್ಮ – ಕಾಲವೇ ಅಂಗಾಗೋಯ್ತು. ಏಳು – ಸಾನ ಮಾಡು."

ಭಾಗ್ಯಮ್ಮ ಕಾಫಿ ತಂದುಕೊಟ್ಟು, ಸರಸ್ವತಿಯ ಯೋಗಕ್ಷೇಮ ವಿಚಾರಿಸಿದಳು. ಸರಸ್ವತಿ ನಸುನಗುತ್ತಾ

" ನಾನೂ ಇಲ್ಲೀಗೆ ಬಂದುಬಿಟ್ಟೆ ಭಾಗ್ಯಮ್ಮ" ಎಂದಳು.

ಭಾಗ್ಯಮ್ಮ ತನ್ನ ನಿಜಾಭಿಪ್ರಾಯ ವ್ಯಕ್ತಮಾಡದೆ

" ಮಾರಾಯ್ತಿ ಹಾಗೆ ಬಾಮ್ಮ – ಬೇಡ ಅಂದೋರು ಯಾರು ?"

ಎಂದು ಹೇಳಿದಳು. ಸರಸ್ವತಿ ಕಾಫಿಲೋಟ ಕೆಳಗಿಡುತ್ತಾ

" ನನ್ನ ಗತಿ ಏನು ಮಾತ್ತಿ ಮುತ್ತಮ್ಮ?" ಎಂದು ಕೇಳಿದಳು.

" ನೋಡೋಣ. ದೇವರು ದಾರಿ ತೋರ್ಸೇ ತೋರ್ಸ್ತಾನೆ."

" ಇವತ್ತು ಯಾರಾದರೂ ಬರುತ್ತಾರೋ ?"

" ಎಲ್ಡು ಗಂಟೆಗೆ ಪುಡ್ ಇನಿಸ್‌ಪೇಟರು ಬರ್ತೀನಿಂತ ಏಳವ್ನೆ."

" ಯಾರವರು ?"

" ಇಂಗೇ - ರೇಸನ್ ಅಂಗಡಿ ಪಿಳ್ಳಪ್ಪನ ನ್ಯಾಸ್ತ."

" ರಾಮರಾಜಪ್ಪನವರು ಬರಲೇ ಇಲ್ಲವೋ ?"

" ಅವನ್ಯಾಕೋ ಒಂದು ಥರಾ ಆಗೋಗನ್ನಮ್ಮ."

"ಅವತ್ತು ನಾನು ಏನೂ ಆಡ್ಲಿಲ್ಲ ಮುತ್ತಮ್ಮ . . . ಪಾಪಮ್ಮನ ವಿಷಯ ಕೇಳಿದೆ. ಅಷ್ಟಕ್ಕೇ ರಾಮರಾಜಪ್ಪನವರಿಗೆ ಕೋಪ ಬಂತು."

"ಆ ಮುಂಡೆ ಮಾಟವೋ ಮದ್ದೋ ಮಾಡಿಸವಳಮ್ಮ. ನನಗೆ ಸಿಕ್ಕೋರೆಲ್ಲಾ ಇಂಥೋರೇ !"

ಅದೇ ಎದ್ದು ಬಂದ ಪುಟ್ಟ ಅಕ್ಕಯ್ಯನನ್ನು ಪ್ರೀತಿಯಿಂದ ಮಾತನಾಡಿಸಿದಳು. ಸರಸ್ವತಿಗೆ ಸುಧೆಯ ನೆನಪು ಬಂದು ಕರುಳು ಚುರ್ ಎಂದಿತು. ನಾರಾಯಣ ಕೊಟ್ಟಿದ್ದ ತಿಂಡೀ ಪೊಟ್ಟಣ ತಂದು ಪುಟ್ಟಯ ಕೈಯಲ್ಲಿಟ್ಟಳು. ಪುಟ್ಟ ಹಿಗ್ಗಿನಿಂದ ಕುಣಿದಾಡಿದಳು.

ಸರಸ್ವತಿ ಸ್ನಾನ ಮುಗಿಸಿ, ಭಾಗ್ಯಮ್ಮ ತಂದು ಕೊಟ್ಟ ಹೊಟೇಲ್ ತಿಂಡಿ ತಿಂದು ಮಲಗಿಬಿಟ್ಟಳು.

ಒಂದು ಗಂಟೆಯ ವೇಳೆಗೆ ಮುತ್ತಮ್ಮನೇ ಬಂದೆಬ್ಬಿಸಿದಳು. ಸರಸ್ವತಿ, ಮುತ್ತಮ್ಮ, ಭಾಗ್ಯಮ್ಮ ಜತೆಯಲ್ಲಿ ಕುಳಿತು ಊಟ ಮುಗಿಸಿದರು.

ಮುತ್ತಮ್ಮ ಸರಸ್ವತಿಗೆ

"ತಲೆ ಬಾಚ್ಕೊಂಡು ನೀನು ಮಾಡಿಮ್ಯಾಗೇ ಇರಮ್ಮ. ಆಯಪ್ಪ ಬಂದ್ರೆ ಕಳಿಸ್ತೀನಿ."

"ಯಾರು ?"

"ಏಳ್ಲಿಲ್ವಾ – ರೇಸನ್ ಇನೀಸ್‌ಪೇಟರು."

"ಓ - ಸರಿಸರಿ !"

ಎಂದು ಸರಸ್ವತಿ ತಲೆಬಾಚಿಕೊಂಡು ಬಾಯಿತುಂಬ ತಾಂಬೂಲ ಅಗಿದು, ಒಳ್ಳೆಯ ಸೀರೆಯುಟ್ಟು ಕುಳಿತಳು.

ಎರಡು ಗಂಟೆಗೆ ಸ್ವಲ್ಪ ಮುಂಚೆಯೇ ದೇವರಾಜ್ ಮುತ್ತಮ್ಮನ ಮನೆಗೆ ಬಂದ. ಮುತ್ತಮ್ಮ ನಸುನಗುತ್ತಾ ಅವನಿಗೆ ಸ್ವಾಗತ ಬಯಸಿದಳು. ಮುತ್ತಮ್ಮನ ಸಲಹೆಯನ್ನು ನೆನಪಿನಲ್ಲಿಟ್ಟುಕೊಂಡು ದೇವರಾಜ್ ಬೈಸಿಕಲ್ ತರದೆ ಬಂದಿದ್ದ.

"ನೀನು ತುಂಬ ಅದೃಷ್ಟಶಾಲೀಪ್ಪ" ಎಂದಳು.

"ಏಕಮ್ಮ ಏನಾಯ್ತು."

"ನಿನ್ನೇನಿಂದ ಯೋಚಸ್ತಾ ಇದ್ದೆ. ಎಲ್ಡು ದಿವ್ಸವೂ ಆಯಪ್ಪಂಗೆ

ಸರಿಓಗ್ಲಿಲ್ವೇ - ಯಾರನ್ನು ಕರಸಾಣಾಂತ. ಇವತ್ತು ಬೆಳಿಗ್ಗೆ ಸರಸೋತವ್ನೇ ಗಾಡಿಯಿಂದ ಇಳೀಬೇಕಾ ?"

"ಆಕೆ ಯಾರು."

"ಎಲ್ಲಾ ನಿಂಗೆ ನಿಧಾನವಾಗಿ ತಿಳೀತೈತೆ."

"ಸಂಸಾರಿ ತಾನೇ."

"ಎಲ್ಡು ಮಕ್ಕಳೈತಪ್ಪಾಂದ್ರೆ"

"ಇಲ್ಲೇ ಇರುತ್ತಾಳೆಯೇ ?"

"ಬೆಳಿಗ್ಗೇನೆ ಬಂದವ್ಳೆ. ಇರು ಅಂದ್ರೆ ಇರ್ತ್ತಾಳೆ. ನೀನಿವತ್ತು ಇದ್ದು ನೋಡು - ಆಮ್ಯಾಕೆ ಮಾತಾಡೋಣ."

ದೇವರಾಜನ ಮನಸ್ಸಿಗೆ ಅಮಿತಾನಂದವಾಯಿತು.

"ಮ್ಯಾಕ್ಕೇ ಓಗು - ಅಲ್ಲೇ ಅವಳೆ."

ಎಂದು ಮುತ್ತಮ್ಮ ಹೇಳಿದಳು. ದೇವರಾಜ್ ಮಹಡಿ ಮೇಲೇರಿ ಹೋದ.

ಸರಸ್ವತಿ ಎದ್ದು ನಿಂತು ಅವನಿಗೆ ಸ್ವಾಗತ ಬಯಸಿದಳು. ದೇವರಾಜ್ ಮನಸ್ಸಿನಲ್ಲಿ ತುಲನಾತ್ಮಕ ವಿವೇಚನೆ ಮಾಡಿದ. ಇವಳು ಅಪರಂಜಿಯಷ್ಟೇನೂ ಚೆನ್ನಾಗಿಲ್ಲ. ವಯಸ್ಸು ಆದ ಹಾಗೆ ಕಾಣುತ್ತದೆ ಎಂದುಕೊಂಡ. ಸರಸ್ವತಿ ಅವನ ಸಮೀಪಕ್ಕೆ ಬಂದು ಕೋಟು ತೆಗೆದು ತಾನೇ ಟೈ ಬಿಚ್ಚಿದಳು. ದೇವರಾಜ್ ಕುಳಿತುಕೊಂಡು ಷೂಸ್, ಕಾಲು ಚೀಲ ಬಿಚ್ಚಿದ. ನೆಲದಮೇಲೆ ಬಿದ್ದಿದ್ದ ಅವನ ಪಿತ್ ಹ್ಯಾಟ್ (Pith Hat) ಕೈಗೆ ತೆಗೆದುಕೊಂಡು ಸರಸ್ವತಿ ತಾನು ಧರಿಸಿ

"ನನಗೆ ಹೇಗಿದೆ" ಎಂದಳು.

"ಸೊಗಸಾಗಿದೆ"

ಎನ್ನುತ್ತಾ ಅವಳ ತಲೆಯ ಮೇಲಿಂದ ಹ್ಯಾಟ್ ತೆಗೆದ. ಸರಸ್ವತಿಯ ತಲೆಯಲ್ಲಿ ಹಣಿಕಿ ಹಾಕುತ್ತಿದ್ದ ಬಿಳೀಕೂದಲುಗಳನ್ನು ಕಂಡು 'ನನ್ನ ಊಹೆ ನಿಜ. ಇವಳಿಗೆ ವಯಸ್ಸಾಗಿದೆ' ಎಂದುಕೊಂಡ.

"ನೀವು ದೊಡ್ಡ ಫುಡ್ ಇನ್ಸ್‌ಪೆಕ್ಟರಂತೆ !"

"ದೊಡ್ಡ ಇನ್ಸ್‌ಪೆಕ್ಟರಲ್ಲ - ಸಣ್ಣ ಇನ್ಸ್‌ಪೆಕ್ಟರ್."

" ಮುತ್ತಮ್ಮ ನಿಮ್ಮ ವಿಷಯ ಬಹಳ ಹೇಳಿದಳು."

" ಏನು ಹೇಳಿದಳು."

" ಅವಳ ಹೊಗಳಿಕೆ ಮಾತು ನನ್ನ ಬಾಯಿಂದ ಕೇಳುವುದಕ್ಕೆ ಆಸೆಯೇನು ? "

" ಹೊಗಳಿಕೆ ಯಾರಿಗೆ ಬೇಡ ಹೇಳು."

" ಆಯಪ್ಪಂಗೆ ನಿಂಗೆ ಸರಿ ಓಗ್ತೈತೆ ಕಣಮ್ಮಾ – ಆಯಪ್ಪನೂ ತುಂಬ ಒಳ್ಳೆಯವನು ' ಎಂದಳು."

ಮುತ್ತಮ್ಮನ ಮಾತು, ಧ್ವನಿಯನ್ನು ಸರಸ್ವತಿ ಅನುಕರಿಸಿದುದನ್ನು ಕಂಡು ದೇವರಾಜ್ ನಗುತ್ತಾ

" ನೀನು ಒಳ್ಳೆಯ ನಟಿ."

" ನಾಟಕದ ಕಂಪೆನೀಗೂ ಮಣ್ಣು ಹಾಕಿ ಬಂದಿದ್ದೀನಿ."

" ನಾಟಕದ ಕಂಪೆನಿಯಲ್ಲಿದ್ದೆಯಾ ? "

" ಹೂ."

" ಏಕೆ ಬಿಟ್ಟೆ ? "

" ನಿಮಗೋಸ್ಕರ."

" ನಾನಿರುವುದು ನಿನಗೆ ಹೇಗೆ ಗೊತ್ತು."

" ಕನಸಾಯಿತು."

" ಏನೆಂದು ? "

" ಬೆಂಗಳೂರಿನಲ್ಲಿ ನಿನ್ನ ರಮಣ ಕಾದಿರುವನೆಂದು ಯಾರೋ ಬಂದು ಕನಸಿನಲ್ಲಿ ಹೇಳಿದರು."

" ನಿಜವೇ ? "

" ನಾನು ಇವತ್ತು ಬರುವುದು ನಿಮಗೆ ಗೊತ್ತಿತ್ತೇ."

" ಇಲ್ಲ."

" ಮುತ್ತಮ್ಮನಿಗೂ ಗೊತ್ತಿರಲಿಲ್ಲ."

" ನನ್ನನ್ನು ನೀನು ಇದೇ ನೋಡುತ್ತಿರುವುದು."

" ಹೌದು; ಸ್ಥೂಲವಾದ ಕಣ್ಣುಗಳಿಂದ. ಮನಸ್ಸಿನ ಕಣ್ಣುಗಳಿಂದ ಎಷ್ಟೋ ಸಲ ನೋಡಿದ್ದೇನೆ."

“ ಸರಸಾ. . . .”

“ ದೇವಾ. . . .”

ಇಬ್ಬರೂ ಒಂದು ಗಂಟೆಯ ಕಾಲ ಇಹಲೋಕ ವ್ಯಾಪಾರವನ್ನೇ ಮರೆತರು. ಸರಸ್ವತಿ ಹಾಸಿಗೆಯ ಮೇಲೆ ಮಲಗಿಕೊಂಡೇ

“ ದೇವಾ. . . ನಿಮ್ಮನ್ನು ನಾನು ಹಾಗೇ ಕರೆಯುವುದು.”

“ ನಿನಗೆ ಹೇಗೆ ಬೇಕಾದರೂ ಕರೆ ಸರಸೂ.”

“ ನಿಮಗೆ ಮದುವೆಯಾಗಿದೆಯೋ ?”

“ ಆ ವಿಷಯ ಈಗೇತಕ್ಕೆ ?”

“ ಇಲ್ಲ ಹೇಳಿ.”

“ ಆಗಿದೆ.”

“ ಮಕ್ಕಳಿವೆಯೋ ?”

“ ಐದು ಮಕ್ಕಳಿವೆ. ಮೂರು ಗಂಡು, ಎರಡು ಹೆಣ್ಣು.”

“ ದೊಡ್ಡ ಮಗ ಏನು ಮಾಡುತ್ತಿದ್ದಾನೆ.”

“ ಕಾಲೇಜಿನಲ್ಲಿ ಓದುತ್ತಿದ್ದಾನೆ.”

“ ನಿಮ್ಮ ಹೆಂಡತಿ ಚೆನ್ನಾಗಿದ್ದಾರೆಯೋ ?”

“ ತಕ್ಕಮಟ್ಟಗಿದ್ದಾಳೆ.”

“ ಅವರನ್ನೊಮ್ಮೆ ನನಗೆ ತೋರಿಸಬೇಕು.”

“ ಏಕೆ ?”

“ ನನ್ನ ಸವತಿಯನ್ನು ನಾನು ನೋಡಬೇಡವೇ ?”

“ ಎಂದಾದರೂ ನೋಡಿದರಾಯಿತು.”

ಸರಸ್ವತಿಯನ್ನಪ್ಪಿ ಕುಳಿತ್ತಿದ್ದ ದೇವರಾಜ್ ಅವಳ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿದ್ದ. ಸರಸ್ವತಿ ಕಣ್ಣು ಮುಚ್ಚಿ

“ ನನ್ನೇಕೆ ಹಾಗೆ ನೋಡುವಿರಿ ದೇವ್.”

“ ಕಣ್ಣು ಬಿಡು ಸರಸಾ.”

ಸರಸ್ವತಿ ಕಣ್ಣುಬಿಡಲು ದೇವರಾಜ್ ಅವುಗಳನ್ನು ಪದೇ ಪದೇ ಚುಂಬಿಸಿ

“ ನಿನ್ನ ಕಣ್ಣುಗಳು ಎಷ್ಟು ಚೆನ್ನಾಗಿವೆ.”

ಸರಸ್ವತಿ ದೇವರಾಜನ ಕುತ್ತಿಗೆಯನ್ನಪ್ಪಿ ತನ್ನ ಸಮೀಪಕ್ಕೆಳೆದುಕೊಂಡು ಅವನ ಮೇಲೆ ಮುದ್ದಿನ ಮಳೆಗರೆಯುತ್ತಾ

" ನಾನು ನಿಮ್ಮವಳು ದೇವಾ."

" ಹೌದು ಸರಸಾ – ನಾನು ನಿನ್ನವನು."

" ನಮ್ಮ ಸ್ನೇಹ ಎಂದಿಗೂ ಹೋಗಬಾರದು."

" ಹೋಗುವುದಿಲ್ಲ. ನೀನು ಸ್ತ್ರೀಯಲ್ಲ - ಸ್ತ್ರೀರತ್ನ."

ದೇವರಾಜ ಎಂದೂ ಕಾಣದಿದ್ದ ಕೆಲವು ಶೃಂಗಾರ ಚೇಷ್ಟೆಗಳಿಂದ ಸರಸ್ವತಿ ಅವನನ್ನು ರಮಿಸಿದಳು. ದೇವರಾಜನ ದೇಹದಲ್ಲಿ ವಿದ್ಯುತ್–ಸಂಚಾರ ವಾದಂತಾಯಿತು. ಅವಳ ತೋಳತೆಕ್ಕೆಯಲ್ಲಿ ಮಲಗಿ

" ನನ್ನನ್ನೂ ಯಾವಾಗಲೂ ಹೀಗೇ ಬಂದಿಯಾಗಿಟ್ಟಿರು ಸರಸಾ."

" ನಿಜವಾಗಿ ನನ್ನ ಬಂದಿಯಾಗಿರುವಿರಾ ? "

" ಪ್ರಮಾಣವಾಗಿ."

" ನಾನು ನಿಮ್ಮವಳು ದೇವ್ - ಹತ್ತಿರ ಬನ್ನಿ - ಇನ್ನೂ ಹತ್ತಿರ ಬನ್ನಿ "

ಎಂದು ಅವನನ್ನು ತನ್ನ ಅಪ್ಪುಗೆಯಲ್ಲಿ ಹಿಂಡಿಬಿಟ್ಟಳು. ದೇವ ರಾಜನಿಗೆ ಭೂಮಿಗೇ ಸ್ವರ್ಗ ಇಳಿದು ಬಂದಂತಾಯಿತು.

" ಸರಸಾ - ನಾನು ನಿನ್ನನು ಬಿಡುವುದಿಲ್ಲ."

" ಏಕೆ ? "

" ನಿನ್ನಂಥ ಹೆಣ್ಣು ನಾನು ನೋಡಿಲ್ಲ ಸರಸಾ."

" ಹಾಗೆ ಹೇಳಬೇಡಿ ದೊರೆ."

" ಏಕೆ ರಾಣಿ."

" ನಾನು ಕೆಟ್ಟವಳು."

" ನನಗಲ್ಲ."

" ನನ್ನ ವಿಷಯ ನಿಮಗೆ ಗೊತ್ತಿಲ್ಲ."

" ನೀನೇ ಹೇಳು."

" ನಾನು ವ್ಯಭಿಚಾರಿಣಿ,"

" ನಾನು ವ್ಯಭಿಚಾರಿ."

" ನಾನು ಕುಡಿಯುತ್ತೇನೆ."

" ನಾನೂ ಕುಡಿಯುತ್ತೇನೆ."

" ನಾನು ಮಾಂಸಾಹಾರ ಮಾಡುತ್ತೇನೆ."

" ನಾನು ಹುಟ್ಟು ಮಾಂಸಾಹಾರಿ."

" ನನಗೆ ಪಕ್ಕದಲ್ಲಿ ಸದಾ ಗಂಡುಸಿರಬೇಕು."

" ನನಗೂ ಹೆಂಗಸಿರಬೇಕು - ನಿನ್ನಂಥ ಹೆಂಗಸಿರಬೇಕು - ನೀನಿರಬೇಕು - ನೀನಿರಬೇಕು."

ಎಂದು ಸರಸನಲ್ಲಿ ದೇವರಾಜ್ ಸಂಪೂರ್ಣವಾಗಿ ಬೆರತು ಹೋದ.

ಪ್ರಣಯೋನ್ಮಾದ ಇಳಿದ ಮೇಲೆ ಸರಸಾ ಶಾಂತವಾಗಿ ಕೇಳಿದಳು.

" ನಾನು ಬೇಕೆಂದು ಈಗಲೂ ಅನಿಸುತ್ತದೆಯೇ ?"

" ಇಂಥ ಹಸಿವು - ಇಂಥ ಅತೃಪ್ತಿ ನಾನೆಂದೂ ಅನುಭವಿಸಿರಲಿಲ್ಲ ಸರಸಾ."

" ನನ್ನ ಹಸಿವನ್ನು ತೃಪ್ತಿಮಾಡಿದವರು ನೀವೇ ದೊರೆ."

ದೇವರಾಜ್ ಎದ್ದು ಕುಳಿತ.

" ಏಳು ಸರಸಾ " ಎಂದ.

ಸರಸ್ವತಿ ಎದ್ದು ಕುಳಿತಳು.

" ಬಟ್ಟೆ ಹಾಕಿಕೋ " ಎಂದ.

" ಏಕೆ ?"

" ಏಕೆಂದು ಕೇಳಬೇಡ. ನಾನು ಹೇಳಿದಂತೆ ಮಾಡು."

ಸರಸ್ವತಿ ಬಟ್ಟೆ ಧರಿಸಿದಳು.

" ನನ್ನ ಜೇಬಿನಲ್ಲಿ ದುಡ್ಡಿದೆ. ತೆಗೆದುಕೊಂಡು ಹೋಗಿ ಮುತ್ತಮ್ಮನಿಗೆ ಕೊಟ್ಟು ಊಟ, ತಿಂಡಿ, ಡ್ರಿಂಕ್ಸ್ ತರಿಸು."

ಸರಸ್ವತಿ ಅವನ ಬಳಿ ಬಂದು ಕುಳಿತು, ಗಲ್ಲ ಹಿಡಿದು

" ನೀವು ಮನೆಗೆ ಹೋಗಬೇಡವೇ !"

" ಇವತ್ತು ಹೋಗುವುದಿಲ್ಲ."

" ಇದೇನು ಹುಚ್ಚು !"

" ನಾನು ಹೇಳಿದಂತೆ ಮಾಡು ರಾಣಿ."

ಸರಸ್ವತಿ ಹಣ ತೆಗೆದುಕೊಂಡು ಕೆಳಗಿಳಿದು ಹೋಗುವ ಮುನ್ನ ತನ್ನ ಟವಲು ಸೋಪಿನ ಪೆಟ್ಟಿಗೆ ತೆಗೆದುಕೊಂಡು

" ಸ್ನಾನ ಮಾಡಿ ಬಂದು ಬಿಡುತ್ತೇನೆ " ಎಂದಳು.

" ಬೆಳಿಗ್ಗೆ ಮಾಡಲಿಲ್ಲವೇ ?"

" ಮಾಡಿದೆ. ಈಗ ಮಾಡಿದರೆ ಲವಲವಿಕೆ ಬರುತ್ತದೆ."

" ಹಾಗಾದರೆ ನಾನೂ ಸ್ನಾನ ಮಾಡುತ್ತೇನೆ."

" ನಾನು ಹೋಗಿ ನೀರು ಕಾಸಿ ಕರೆಯುತ್ತೇನೆ."

" ಬೇಡ – ತಣ್ಣೀರೇ ಆಗುತ್ತದೆ."

" ಏಳಿ "

ಎಂದು ಎಬ್ಬಿಸಿ ಬಟ್ಟೆಗಳನ್ನಿತ್ತಳು.

ತಿಂಡಿ, ಪಾನೀಯದ ವಿಷಯ ಹೇಳಿದ ಕೂಡಲೆ ಭಾಗ್ಯಮ್ಮ ಹುರುಪಾಗಿ ಪೇಟೆಯಕಡೆ ಹೋಗಿ ಬರಲು ಸಿದ್ಧಳಾದಳು.

ಸರಸ್ವತಿ ದೇವರಾಜನನ್ನು ಸ್ನಾನಗೃಹಕ್ಕೆ ಕರೆದೊಯ್ದು ಅವನಿಗೆ ಸ್ನಾನಮಾಡಿಸಿದಳು. ಅವಳು ಸ್ನಾನಮುಗಿಸಿಕೊಂಡು ಬರುವವರೆಗೆ ದೇವರಾಜ್ ಮುತ್ತಮ್ಮನ ಜತೆ ಮಾತನಾಡುತ್ತ ಕುಳಿತ.

ದೇವರಾಜನ ಭಾವನಾವಿಲಾಸ ಹೋಗುತ್ತಿದ್ದ ಮಾರ್ಗವನ್ನು ಸೂಕ್ಷ್ಮವಾಗಿ ಗಮನಿಸಿದ್ದ ಮುತ್ತಮ್ಮ

" ಇವತ್ತೂ ಬೇಜಾರಾಯ್ತೇನಪ್ಪಾ."

" ಬೇಜಾರಾಗಿದ್ದರೆ ರಾತ್ರಿಗೆ ಇರುತ್ತಿದ್ದೆನೇ ?"

" ನಾನು ಏಳಿದ್ದು ನಿಜವೋ ?"

" ತುಂಬ ನಿಜ ಮುತ್ತಮ್ಮ. ಇಂಥ ಹೆಂಗಸನ್ನು ನಾನು ನೋಡಿಯೇ ಇಲ್ಲ ಮುತ್ತಮ್ಮ."

" ಸರಸೋತಮ್ಮ ಅಂಥಾ ಚಲುವೆಯೇನಲ್ಲವಲ್ಲಪ್ಪ."

" ಚಲುವೆಯರನ್ನು ಕಟ್ಟಿಕೊಂಡು ಏನು ಮಾಡಬೇಕು ಮುತ್ತಮ್ಮ."

" ನೀನೇನೇ ಅನ್ನು – ಅಪರಂಜಿ ಒಳ್ಳೆ ರೂಪಸ್ಥೆ."

" ತುಂಬ ರೂಪಸ್ಥೆ – ಕಾಗದದ ಹೂವು."

" ಅದ್ಯಾಕಪ್ಪಾ ಅಪರಂಜಿ ಕಂಡರೆ ನಿನಗೆ ಬೇಜಾರು."

ದೇವರಾಜ್ ನಕ್ಕು ಸುಮ್ಮನಾದ.

" ಏನೋ ಐತೆ. ನೀನು ಏಳ್ದೆ ಮುಚ್ಚುಮರೆ ಮಾಡ್ತಿ. ನನ್ನ ತಾವಾಲೂ ಮುಚ್ಚುಮರೇನಾ?"

" ಅವಳೇನೂ ಹೇಳಲಿಲ್ಲವೇ?"

" ಏನೂ ಏಳಿಲ್ಲಪ್ಪ. ಚೆಂದಾಕವಳೆ – ಒಳ್ಳೆಯೋಳು – ವಯಸ್ಸು ಪ್ರಾಯ ಐತೆ. ಅವಳ್ಬೇಡಾಂತ ನೀನಂದೆಯಲ್ಲಾ ಅದೇ ನಂಗೆ ಇಚಿತ್ರ ಆಗೈತೆ."

" ಇರೋ ವಿಷಯ ಸ್ಪಷ್ಟವಾಗಿ ಹೇಳಲೋ ಮುತ್ತಮ್ಮ."

" ಏಳಪ್ಪಾ-"

" ಅವತ್ತು ನಾನು ಮೇಲಕ್ಕೆ ಹೋದೆ. ಅಪರಂಜಿ ದೂರ ನಿಂತಿದ್ದಳು. ಹತ್ತಿರ ಕರೆದೆ ಬಂದಳು – ನಾನು ಏನು ಏನು ಹೇಳಿದೆ ಎಲ್ಲಾ ಮಾಡಿದಳು. ಎದ್ದ ಮೇಲೆ ನನ್ನ ಕಾಲು ಹಿಡಿದು ನಮಸ್ಕಾರ ಮಾಡಿದಳು. ನಾಳೆ ಬರುತ್ತೀಯಾ ಎಂದು ಕೇಳಿದೆ - ಬಾ ಅಂದರೆ ಬರುತ್ತೇನೆ ಎಂದಳು. ಅವಳ ನಡತೆ ಸೌಜನ್ಯದಲ್ಲಿ ಯಾವ ದೋಷವನ್ನೂ ಎಣಿಸುವ ಹಾಗಿರಲಿಲ್ಲ ಮುತ್ತಮ್ಮ. ಆದರೆ ನಮ್ಮ ಮನಸ್ಸಿನಲ್ಲಿ ಆಸೆ ಹುಟ್ಟಿಸಿ, ನಮ್ಮನ್ನು ಹತ್ತಿರ ಎಳೆದುಕೊಳ್ಳುವ ಶಕ್ತಿ ಅವಳಲ್ಲಿಲ್ಲ. ಮನೆಗೆ ಬೇಕಾದಷ್ಟು ದೀಪ ಹಾಕಿದ್ದೂ ಕರೆಂಟ್ ಇಲ್ಲದಿದ್ದರೆ ಹೇಗೋ ಹಾಗೆ!"

" ಸರಸೋತಮ್ಮನಲ್ಲಿ ಕರೆಂಟ್ ಐತೇನಪ್ಪಾ !"

"ಇವಳು ಕರೆಂಟ್ ಮಾತ್ರವೇ ಅಲ್ಲ - ಅದು ಹುಟ್ಟುತ್ತದಲ್ಲ, ಶಿವಸಮುದ್ರದ ಜನರೇಟಿಂಗ್ ಸ್ಟೇಷನ್ (Generating Station) ಆಗಿದ್ದಾಳೆ. ಈಗಲೇ ನೋಡು - ಸ್ವಲ್ಪ ಹೊತ್ತು ಇದ್ದು ಹೋಗುವುದಕ್ಕೆ ನಾನು ಬಂದೆ - ರಾತ್ರಿ ಉಳಿಯುವ ಹಾಗೆ ಮಾಡಿದ್ದಾಳೆ."

" ರಾತ್ರಿ ಇರೂಂತ ಆಯಮ್ಮನೇ ಏಳಿದಳಾ ? "

" ಇಲ್ಲಮ್ಮಾ - ನಾನು ಹೇಳಿದೆ. ಮುತ್ತಮ್ಮ . . . ಇವಳು ಇನ್ನೆಲ್ಲಿಯೂ ಹೋಗುವುದಿಲ್ಲವಷ್ಟೆ ! "

" ಎಲ್ಲೀಗೆ ? "

" ಊರಿಗೆ - ನಾಟಕದ ಕಂಪೆನೀಗೆ."

" ಎಲ್ಲೀಗೂ ಓಗಾಕಿಲ್ಲ - ಇನ್ನುವ್ಯಾಕೆ ಇಲ್ಲೇ ಇರ್ತ್ತಾಳೆ."

" ನಿನ್ನ ಮನೆಯಲ್ಲಿಯೇ ಇರುತ್ತಾಳೆಯೇ ? "

" ಸದ್ಯಕ್ಕಿರುತ್ತಾಳೆ. ಮುಂದೆ ಮನೇಗಿನೇ ನೊಡ್ಕೊಂಡು ಓಗಬೋದು."

" ಯಾರಾದರೂ ಖಾಯಂ ಇದ್ದಾರೆಯೇ ? "

" ಇಲ್ಲ - ನೀನು ಮಡೀಕ್ಕೋತೀಯೇನು ? "

" ಅವಳು ಒಪ್ಪಿದರೆ ಆಗಬಹುದು."

ಸರಸ್ವತಿಯ ಗುಣವರ್ಣನೆ ದೇವರಾಜನ ಬಾಯಿಂದ ಕೇಳಿದ ಮೇಲೆ ಅವಳನ್ನು ಕಳೆದುಕೊಳ್ಳಲು ಮುತ್ತಮ್ಮನಿಗೆ ಮನಸ್ಸಾಗಲಿಲ್ಲ.

" ಅದ್ಕೆಲ್ಲಾ ಆಯಮ್ಮ ಒಪ್ಪೋ ಅಂಗೆ ಕಾಣ್ಲಿಲ್ಲಪ್ಪ. ನೀನು ಬತ್ತಾ ಇರ್‍ತೀಯಲ್ಲ - ಬೇಕಾದ್ರೆ ನಾನು ಏಳಿ ನೋಡ್ತೀನಿ."

" ಅಷ್ಟು ಮಾಡು ಮುತ್ತಮ್ಮ . . . ನನಗೆ ಉಪಕಾರವಾಗುತ್ತದೆ."

ಸರಸ್ವತಿ ಸ್ನಾನ ಮುಗಿಸಿಕೊಂಡು, ಸೀರೆಯನ್ನು ಅರ್ಧ ಸುತ್ತಿಕೊಂಡು, ಉಳಿದುದನ್ನು ಕೈಯಲ್ಲಿ ಹಿಡಿದು ಮೇಲಕ್ಕೆ ಹೋದಳು. ಅಯಸ್ಕಾಂತದ ಬಳಿ ಕಬ್ಬಿಣದ ತುಂಡು ಓಡುವಂತೆ ದೇವರಾಜ್ ಮೇಲಕ್ಕೆ ಓಡಿ ಹೋದ.

ದೇವರಾಜ್ ಬಂದುದನ್ನು ಕಂಡು ಸರಸ್ವತಿ ಸೀರೆಯನ್ನೆತ್ತಿಕೊಂಡು ಮೈಮುಚ್ಚಿಕೊಂಡು

" ಈಗಲೇ ಏಕೆ ಬಂದಿರಿ – ನಾನು ಮೈ ಒರಸಿಕೊಂಡಿಲ್ಲ - ಬಟ್ಟೆ ಹಾಕಿಕೊಂಡಿಲ್ಲ."

ಸರಸ್ವತಿಯ ಟ್ರಂಕಿನ ಮೇಲೆ ಬಿದ್ದಿದ್ದ ಒಂದು ಟವಲು ತೆಗೆದುಕೊಂಡು ದೇವರಾಜ್ ಅವಳ ಸೀರೆಯನ್ನು ಕಿತ್ತೆಸೆದು ಮೈ ಒರಸಿದ.

" ಟವಲು ಕೊಡಿಯಂದ್ರೆ . . . ನಿಮಗೇಕೆ ತೊಂದರೆ ? "

ದೇವಾರಾಜ ಅವಳನ್ನು ಬೆನ್ನಿನ ಕಡೆ ಅಪ್ಪಿಕೊಂಡ. ಸರಸ್ವತಿ ಕತ್ತು ಮೇಲಕ್ಕೆತ್ತಿ ಅವನ ಮುಖದಲ್ಲಿ ಮುಖವಿಟ್ಟಳು. ದೇವರಾಜನ ಕೈಗಳು ಸರಸ್ವತಿಯ ಸ್ತನಗಳನ್ನು ಮುಚ್ಚಿದವು.

" ನಿನ್ನ ಸೇವೆ - ನನಗೆ ತೊಂದರೆಯೇ ?"

" ನನ್ನ ಅಷ್ಟು ಪ್ರೀತಿಸುತ್ತೀರಾ ದೇವ !"

" ಪ್ರೀತಿಸುತ್ತೇನೆಂದು ಬಾಯಲ್ಲಿ ಹೇಳುವುದು ಪ್ರೀತಿಯ ಲಕ್ಷಣವಲ್ಲ."

ಸರಸ್ವತಿ ದೇವರಾಜನ ಕಡೆ ತಿರುಗಿ ಅವನನ್ನು ಗಾಡಾಲಿಂಗನದಲ್ಲಿ ಹಿಡಿದಳು. ದೇವರಾಜನ ಕೈ ಅವಳ ಬೆನ್ನನ್ನು ನೇವರಿಸತೊಡಗಿತು. ಸರಸ್ವತಿ ಮೆಲ್ಲನೆ ಅವನ ಬಟ್ಟೆ ಬಿಚ್ಚಿದಳು. ದೇವರಾಜ್ ಅವಳನ್ನೆತ್ತಿ ಕೊಂಡು ಹಾಸಿಗೆಯ ಮೇಲೆ ಮೃದುವಾಗಿ ಇಳಿಸಿದ.

ಮುತ್ತಮ್ಮ ಮಹಡಿಯ ಮೆಟ್ಟಲು ಕೆಳಗೆ ನಿಂತುಕೊಂಡು ಸರಸ್ವತಿಯ ಹೆಸರು ಹಿಡಿದು ಕೂಗಿದಾಗಲೇ ಎಚ್ಚರ. ತಾನು ಇದ್ದಂತೆಯೇ ಅವಳು ಮೆಟ್ಟಲು ಬಳಿ ಹೋಗಿ ಮರೆಯಲ್ಲಿ ನಿಂತು

" ಏನಮ್ಮ " ಎಂದು ಕೇಳಿದಳು.

" ಅಡಿಗೆ ಆಗೈತೆ ಊಟಕ್ಕೆ ಬತ್ತೀರಾ ?"

" ಭಾಗ್ಯಮ್ಮ ಬಂದಳೇ ?"

" ಯಾವಾಗಲೋ ಬಂದಳು."

" ಅದನ್ನು ತಂದಳೇ ?"

" ಎಲ್ಲಾ ತಂದವಳಮ್ಮ."

"ಈಗ ಗಂಟೆಯೆಷ್ಟು ?"

" ಒಂಬತ್ತು."

" ನಾವೇಕೆ ಬರಬೇಕು. ಭಾಗ್ಯಮ್ಮನ ಕೈಯಲ್ಲಿ ಇಲ್ಲಿಗೇ ಸ್ವಲ್ಪ ಕಳುಹಿಸಿಬಿಡು."

" ಆಗೇ ಆಯ್ತು."

ಸರಸ್ವತಿ ಓಡಿಬಂದು ದೇವರಾಜನಮೇಲೆ ಬಿದ್ದು ಅವನನ್ನು ಮುದ್ದಿ ನಲ್ಲಿ ಮುಳಗಿಸಿ, ಕೆನ್ನೆಗಳನ್ನು ಕಚ್ಚಿದಳು.

" ಊಟಕ್ಕೆ ಹೋಗಬೇಕಲ್ವೇ ?"

" ಬೇಡ ಇಲ್ಲಿಗೇ ಕಳಿಸೂಂತ ಹೇಳಿದ್ದೀನಿ."

ದೇವರಾಜ ಏಳಲು ಪ್ರಯತ್ನಿಸಿದ. ಅವನು ಮೇಲಕ್ಕೇಳದಂತೆ ಅದುಮಿ ಹಿಡಿದಳು.

" ಮೈಮೇಲೆ ಬಟ್ಟೆಯಿಲ್ಲ - ಯಾರಾದರೂ ಬಂದರೆ ?"

" ನೀವು ಹೊದಿಕೆ ಹೊದೆದುಕೊಂಡು ಮಲಗಿಕೊಳ್ಳಿ. ನಾನು ಸೀರೆ ಸುತ್ತಿಕೊಳ್ಳುತ್ತೇನೆ."

ಭಾಗ್ಯಮ್ಮ ತಿಂಡಿಯ ತಟ್ಟೆಗಳನ್ನೊಮ್ಮೆ ತಂದಿಟ್ಟು ಕೆಳಗಿಳಿದು ಹೋಗಿ ಮದ್ಯದ ಶೀಷೆಗಳನ್ನು ಸೋಡಾ ಬಾಟಲಿಯನ್ನು ತಂದಿಟ್ಟಳು. ಸರಸ್ವತಿ ಸೀರೆ ಸುತ್ತಿಕೊಂಡಿದ್ದ ರೀತಿ ನೋಡಿ ಅವಳ ಮುಖದಲ್ಲಿ ಮುಗಳ್ನಗೆ ತೇಲಿತು.

" ಇನ್ನೇನಾದ್ರೂ ಬೇಕೇನಮ್ಮಾ."

" ನೀರು ಇಟ್ಟಿದ್ದೀಯಾ ?"

" ಇಟ್ಟೆನ್ರಿ."

" ಇನ್ನೇನೂ ಬೇಡ – ಭಾಗ್ಯಮ್ಮ, ಯಾರೂ ಮೇಲಕ್ಕೆ ಬರಬೇಡಿ."

" ಇಲ್ಲಾ ಪುಣ್ಯಾತ್ಗಿತ್ತಿ"

ಎಂದು ನಗುತ್ತಾ ಭಾಗ್ಯಮ್ಮ ಹೋದಳು.

ಸರಸ್ವತಿ ಧಾವಿಸಿ ಬಂದು, ದೇವರಾಜನ ಹೊದಿಕೆಯನ್ನು ಹಿಡಿದೆಳೆದಳು. ಅವನು ಎದ್ದು ಕುಳಿತು ಸರಸ್ವತಿಯ ಸೀರೆ ತುದಿಯನ್ನು ಹಿಡಿದೆಳೆದ.

ಇಬ್ಬರೂ ಒಂದೇ ತಟ್ಟೆಯಲ್ಲಿ ಕೋಳೀ ಮೊಟ್ಟೆ ದೋಸೆ, ಹೊಟೇಲು ಖಾರದ ತಿಂಡಿ, ಬಿರಿಯಾನಿ ಹೊಡೆಯುತ್ತಾ ಮಧ್ಯೆ ಮಧ್ಯೆ ಪಾನ ಸ್ವೀಕರಿಸಿದರು.

ಪಾನ ಇಬ್ಬರಿಗೂ ನೆತ್ತಿಗೇರಿತ್ತು. ಮಾತು ಕಡಿಮೆಯಾಗಿ ಕ್ರಿಯೆ ಹೆಚ್ಚಿತು. ಇಬ್ಬರ ಬಾಯಲ್ಲಿಯೂ ಅಸ್ಪಷ್ಟ ಅಸಂಬಂದ್ಧ ಮಾತುಗಳು.

ಸರಸ್ವತಿಗೆ ಆಚಾರ್ಯರ ಪಾಠಶಾಲೆಯಲ್ಲಿ ನೋಡಿದ್ದ ಚಿತ್ರಗಳ ನೆನ ಪಾಯಿತು. ಅವುಗಳ ಪ್ರಯೋಗವನ್ನು ದೇವರಾಜನ ಮೇಲೆ ಮಾಡಿದಳು.

ರಾತ್ರಿ ದೇವರಾಜ್ ಕಣ್ಣು ಮುಚ್ಚಲು ಸರಸ್ವತಿ ಅವಕಾಶಕೊಡಲಿಲ್ಲ. ಅವನಿಗೆ ನಿದ್ರೆ ಹತ್ತುವ ಚಿನ್ಹೆ ಕಂಡ ಕೂಡಲೆ ಅವನ ಕೆನ್ನೆ, ಕಿವಿ, ಮೂಗು ಕಚ್ಚಿ ಎಬ್ಬಿಸಿ

" ನಿದ್ರೆ ಮಾಡಬೇಡಿ – ದೇವ್."

" ಇಲ್ಲ ಸರಸ – ನಿದ್ರೆ ಮಾಡುವುದಿಲ್ಲ."

ರಾತ್ರಿಯೆಲ್ಲಾ ಅವ್ಯಾಹತವಾಗಿ ಇಬ್ಬರ ಪ್ರಣಯ ಕೇಳಿ ಸಾಗಿತು.

ಬೆಳಿಗ್ಗೆ ಎಂಟು ಗಂಟೆಯಾಗಿರಬಹುದು. ದೇವರಾಜ್ ಥಟ್ಟನೆದ್ದು ಕಣ್ಣುಬಿಟ್ಟು ನೋಡಿದ. ಸೂರ್ಯನ ಬೆಳಕು ಕಿಟಕಿಯಿಂದ ಧಾವಿಸಿ ಒಳ ನುಗ್ಗುತ್ತಿತ್ತು. ಸರಸ್ವತಿಯನ್ನೆಬ್ಬಿಸಿದ. ಅವಳು ಮುಲುಕುತ್ತಾ, ಅವನನ್ನು ಎಳೆದುಕೊಳ್ಳಲೆತ್ನಿಸಿದಳು. ದೇವರಾಜ್ ಅವಳನ್ನು ಬಿಡದೆ ಎಬ್ಬಿಸಿದ.

ಸರಸ್ವತಿ ಎದ್ದು ಕುಳಿತು ಆಕಳಿಸುತ್ತಾ

" ಗಂಟೆಯೆಷ್ಟು ?" ಎಂದಳು.

ದೇವರಾಜ್ ತನ್ನ ಕೋಟಿನ ಕಿಸೆಗೆ ಕೈಹಾಕಿ ಗಡಿಯಾರ ತೆಗೆದು ನೋಡಿ

" ಒಂಭತ್ತು" ಎಂದ.

" ಇಷ್ಟು ಬೇಗ ಯಾಕೆ ಎಬ್ಬಿಸಿದಿರಿ."

" ನನಗೆ ಹೊತ್ತಾಯಿತು. ಡ್ಯೂಟಿ ಮೇಲೆ ಹೋಗಬೇಡವೇ ?"

" ರಜಕ್ಕೆ ಬರೆದು ಹಾಕಿ ದೇವಾ,"

" ಇವತ್ತು ಇನ್‌ಸ್ಪೆಕ್ಷನ್ ಇಟ್ಟುಕೊಂಡಿದ್ದೇನೆ. ಬರೆದು ಹಾಕುವಂತಿಲ್ಲ."

ಸರಸ್ವತಿ ಆಲಸ್ಯದಿಂದೆದ್ದು ವಸ್ತ್ರ ಧರಿಸಿದಳು. ದೇವರಾಜ್ ಆತುರ ದಿಂದೆದ್ದು ವಸ್ತ್ರ ಧರಿಸಿ ಹೊರಡಲು ಸಿದ್ಧನಾದ.

ಇಬ್ಬರೂ ಕೆಳಗಿಳಿದು ಬಂದು ಮುಖ ತೊಳೆದರು. ಮುತ್ತಮ್ಮ ಅವರಿಗೆ ಕಾಫಿ ತಂದು ಕೊಟ್ಟಳು.

ದೇವರಾಜ್ ಕಿಸೆಯಿಂದ ಅರವತ್ತು ರೂಪಾಯಿ ತೆಗೆದು ಮುತ್ತಮ್ಮನ ಕೈಯಲ್ಲಿತ್ತ.

" ತಿರುಗಿ ಯಾವಾಗ ಬರುತ್ತೀಯಪ್ಪಾ" ಎಂದು ಮುತ್ತಮ್ಮ ಕೇಳಿದಳು.

" ಸಂಜೆಗೆ ಬರುತ್ತೇನೆ."

" ಇವತ್ತು ಬೇಡ - ನಾಳೆ ಬನ್ನಿ."

ಎಂದು ಸರಸ್ವತಿ ಹೇಳಿದಳು.

" ನಾಳೆ ಎರಡು ಗಂಟೆಗೆ ಬರುತ್ತೇನೆ."

ಎಂದು ಹೇಳಿ ಹೋದ.

ಮುತ್ತಮ್ಮ ಸರಸ್ವತಿಯ ಕಡೆ ತಿರುಗಿ

" ಸಂಜೇಗ್ಯಾಕೆ ಬ್ಯಾಡಾಂದೆಯಮ್ಮ."

"ನನಗೆ ಸ್ವಲ್ಪ ಕೆಲಸ ಇದೆ. ಮಧ್ಯಾನ್ಹ ನಾನು ಹೋದರೆ ಬರುವುದು ನಾಳೆ ಬೆಳಿಗ್ಗೆಯೇ."

"ಅಂಗೇನು! ಇಕೋ ನೋಡಮ್ಮ - ಆಯಪ್ಪ ಅರವತ್ತು ರೂಪಾಯಿ ಕೊಟ್ಟವ್ನೆ. ನಾನೆಷ್ಟು ಮಡಿಕ್ಕೊಳ್ಳಲಿ."

"ನನ್ನೇನು ಕೇಳ್ತೀ ಮುತ್ತಮ್ಮ - ನಿನಗೇನು ಬೇಕೋ ಅದುತೆಗೆದುಕೊ."

"ಇಪತ್ತು ಮಡಿಗ್ಕೊಂಡು ನಲವತ್ತು ಕೊಡ್ತೀನಮ್ಮ. ಇನ್ನುಮ್ಯಾಕೆ ಯಾರು ಬಂದ್ರೂ ಎರಡು ಬಾಗ ನಿಂಗೆ-ಒಂದು ಬಾಗ ನಂಗೇ-ಆಗಬೋದಾ."

"ಹೂ"

ಎಂದಂದು ಮುತ್ತಮ್ಮ ಕೊಟ್ಟ ನೋಟುಗಳನ್ನು ಕೈಯಲ್ಲಿ ತೆಗೆದು ಕೊಂಡು ಮಹಡಿಯ ಮೇಲೆ ಹೋಗಿ ಮಲಗಿದಳು.

ಸರಸ್ವತಿ. ಮಲಗಿದ ಕೂಡಲೆ ಗಾಢವಾದ ನಿದ್ರೆ ಹತ್ತಿತು.

ಸರಸ್ವತಿ ಹಾಸಿಗೆ ಬಿಟ್ಟು ಎದ್ದಾಗ ಎರಡು ಗಂಟೆಯಾಗಿತ್ತು. ನಿದ್ರೆ ಚೆನ್ನಾಗಿ ಆಗಿದ್ದುದರಿಂದ ಮೈ ಹಗುರವಾಗಿತ್ತು. ಹಾಸಿಗೆಯ ಮೇಲೆ ಕುಳಿತು ಕೊಂಡು ಮೈ ಮುರಿದಳು.

ಕೆಳಗಿಳಿದು ಹೋಗಿ ಚೆನ್ನಾಗಿ ಸ್ನಾನಮಾಡಿ, ಊಟ ಮುಗಿಸಿ, ಸಾವ ಕಾಶವಾಗಿ ಅಲಂಕಾರ ಮಾಡಿಕೊಂಡಳು.

ನಾಲ್ಕು ಗಂಟೆಯ ವೇಳೆಗೆ ಮನೆ ಬಿಟ್ಟು ಹೊರಟು ಆಚಾರ್ಯರ ಸಂಗೀತ ಶಾಲೆಗೆ ಬಂದಳು.

"ಯಾವಾಗ ಬಂದ್ರಮ್ಮಾ" ಆಚಾರ್ಯರು ಆಶ್ಚರ್ಯದಿಂದ ಕೇಳಿದರು.

"ಇವತ್ತು ಬೆಳಿಗ್ಗೆ ತಾನೇ ಬಂದೆ ಮೇಷ್ಟ್ರೇ" ಎಂದು ಅವರಿಗೆ ನಿಸ್ಸಂಕೋಚವಾಗಿ ಸುಳ್ಳು ಹೇಳಿದಳು.

ಆಚಾರ್ಯರು ಸಾವಕಾಶವಾಗಿ ಅವಳ ನಿರೂಪಣೆಯನ್ನೆಲ್ಲಾ ಕೇಳಿ ಕೊಂಡು

"ಈಗ ಕಂಪೆನಿ ಗತಿ!" ಎಂದರು.

"ಯಾರನ್ನಾದರೂ ಹಿಡಿದುಕೊಂಡು ಬಂದು ನಾಟಕ ಆಡಿಸ್ತಾರೆ."

"ನೀವೇನು ಮಾಡುತ್ತೀರಿ."

"ಅದನ್ನು ಕೇಳುವುದಕ್ಕೇ ನಿಮ್ಮಲ್ಲಿ ಬಂದೆ."

"ಎಲ್ಲಿ ಇಳಿದುಕೊಂಡಿದ್ದೀರಿ ?"

"ಮುತ್ತಮ್ಮನ ಮನೆಯಲ್ಲಿ. ಜೀವಣ್ಣರಾಯರು ನನ್ನ ವಿಷಯ ಪ್ರಸ್ತಾಪಿಸಿದರೇನು ?"

"ಎಷ್ಟೋ ಸಲ ಪ್ರಸ್ತಾಪಿಸಿದ. ನಂಜಪ್ಪ ಅವನ ಮನಸ್ಸನ್ನು ತುಂಬ ಕೆಡಿಸಿಬಿಟ್ಟಿದ್ದಾನೆ."

"ಒಂದು ಸಲ ಅವರ ಭೆಟ್ಟಿ ಮಾಡಿಸಿ – ನಾನು ಸರಿಮಾಡುತ್ತೇನೆ."

"ಅದು ಅಷ್ಟು ಸುಲಭವಾಗಿಲ್ಲಮ್ಮ. ಜೀವಣ್ಣರಾಯ ಮಹಾ ಅಂಜುಪುರುಕ."

"ನಾನೇನು ಮಾಡಲಿ ಮೇಷ್ಟ್ರೇ ?"

"ನೋಡೋಣ ತಡೀರಿ. ಶ್ರೀಕಂಠಮೂರ್ತಿ ದುಡ್ಡು ಕಾಸು ಸರಿಯಾಗಿ ಕೊಟ್ಟನೋ ?"

"ಕೊಟ್ಟರು. ಅದರಲ್ಲಿ ಮೋಸಮಾಡಲಿಲ್ಲ."

"ಕರಾರುವಾಕ್ ಮನುಷ್ಯ. ನೀವು ತಿರುಗಿ ಯಾವಾಗ ಬರುತ್ತೀರಿ."

"ಯಾವಾಗ ಬರಲಿ ಹೇಳಿ."

"ನಾಳೆ ಬೇಡಿ – ನಾಡಿದ್ದು ಬನ್ನಿ."

"ಆಗಬಹುದು." ಎಂದೆದ್ದಳು.

"ಇದೇನಮ್ಮ ಇಷ್ಟು ಬೇಗ ಹೊರಟುಬಿಟ್ಟರಿ ?"

"ಇನ್ನೂ ಸ್ವಲ್ಪ ಕೆಲಸ ಇದೆ. ನಾಡಿದ್ದು ಪುರಸತ್ತಾಗಿ ಬರುತ್ತೇನೆ." ಎಂದು ಹೊರಟು ಅಂಗಡಿಬೀದಿಯಲ್ಲಿ ಹೂವಿನ ದಂಡೆ ತೆಗೆದು ಮುಡಿದುಕೊಂಡು ಒಂದು ಗಾಡಿ ಗೊತ್ತುಮಾಡಿಕೊಂಡು ಸನ್‌ರೈಸ್ ಹೋಟೆಲ್ ಬಳಿ ಬಂದಳು. ಗಾಡಿಯನ್ನು ಹೋಟಲಿಗೆ ಸ್ವಲ್ಪ ದೂರದಲ್ಲಿ ನಿಲ್ಲಿಸಿ ಗಾಡಿಯವನ ಕೈಯಲ್ಲಿ ಗಣೇಶರಾಯನಿಗೆ ಹೇಳಿ ಕಳಿಸಿದಳು. ಗಣೇಶರಾಯ ಬಂದು ಸರಸ್ವತಿಯನ್ನು ನೋಡಿ

"ಗಾಡಿಯಲ್ಲೇ ಇರಿ – ಬಾಯ್ ಕಳಿಸುತ್ತೇನೆ."

ಎಂದು ಹೇಳಿ ಹೋಗಿ ಬಾಯ್ ಕಳುಹಿಸಿದ. ಸರಸ್ವತಿಯನ್ನು ಬಾಯ್ ಹಿಂದುಗಡೆಯಿಂದ ಕರೆದೊಯ್ದು ಹತ್ತೊಂಭತ್ತನೆಯ ರೂಮಿನಲ್ಲಿ ಕೂಡಿಸಿದ. ಹೋಗಿ ತಿಂಡಿ ಕಾಫಿ ತಂದುಕೊಟ್ಟ.

" ಮ್ಯಾನೇಜರು ಬರಲಿಲ್ಲವೇ ?" ಎಂದು ಸರಸ್ವತಿ ಕೇಳಿದಳು.

" ಈಗ ಬರ್‍ತಾರಮ್ಮ ನಿಮಗೆ ತಿಂಡಿ ಕಾಫಿ ಕೊಡು ಎಂದು ಹೇಳಿದರು."

" ನಿನ್ನ ಹೆಸರೇನಪ್ಪಾ ?"

" ಶ್ರೀನಿವಾಸ ಕಣ್ರಮ್ಮ,"

ಸರಸ್ವತಿ ಹೋಟಲಿನ ಬಾದುಷಾ ಉದ್ದಿನ ವಡೆ ತಿಂದು ಕಾಫಿ ಕುಡಿದು ಮುಗಿಸಲು ಮಾಣಿ ತಟ್ಟೆಯನ್ನೆತ್ತಿಕೊಂಡು ಹೋದ.

ಹತ್ತು ನಿಮಿಷಗಳ ತರುವಾಯ ಗಣೇಶರಾಯ ಬಂದು

" ಯಾವಾಗ ಬಂದೆ " ಎಂದು ಕೇಳಿದ.

" ಇದೇ ಬೆಳಿಗ್ಗೆ."

" ನಿನ್ನ ಕಾಗದವನ್ನೇ ನಾನು ನಿರೀಕ್ಷಿಸುತ್ತಿದ್ದೆ."

" ಅದೇನು ?"

" ಆದಿರಾಜಯ್ಯ ಇಲ್ಲೇ ಇದ್ದ - ನಿನ್ನೆ ಬೆಳಿಗ್ಗೆ ಹೋದ."

" ತಿರುಗಿ ಅವರು ಯಾವಾಗ ಬರುತ್ತಾರೆ."

" ನೀನು ಬಂದ ಕೂಡಲೆ ವೈರ್ ಮಾಡು" ಎಂದು ಹೇಳಿದ್ದಾನೆ.

" ಕಳೆದ ವಾರ ನಾನು ಬರೆದ ಕಾಗದ ಬಂತೇ ?"

" ಬಂತು – ಆದಿರಾಜಯ್ಯನಿಗೂ ತೋರಿಸಿದೆ. ಎಲ್ಲಿ ಇಳಿದು ಕೊಂಡಿದ್ದೀ."

" ಮುತ್ತಮ್ಮನ ಮನೆಯಲ್ಲಿ ! ಆದಿರಾಜಯ್ಯನವರಿಗೆ ವೈರ್ ಮಾಡು ತ್ತೀರಾ ?"

" ಈಗಲೇ ವೈರ್ ಮಾಡುತ್ತೇನೆ."

" ನಾನು ಹೊರಡಲೇ ?"

" ಅಷ್ಟೇನು ಅವಸರ."

" ಅವಸರವೇನೂ ಇಲ್ಲ. ಸುಮ್ಮನೆ ಏಕೆ ಇರಲಿ."

" ಇರಲಿ ಇರು. ಸಂದರ್ಭ ಹೇಗೆ ಬರುತ್ತದೋ ! ರಾತ್ರಿ ರೈಲಿನಲ್ಲಿ ಯಾರಾದರೂ ಬಂದೇ ಬರುತ್ತಾರೆ. ಯಾರೂ ಇಲ್ಲದಿದ್ದರೆ ನಾನಿಲ್ಲವೇ ?"

ಸರಸ್ವತಿ ಮುಗುಳ್ನಗೆ ನಕ್ಕು.

" ನಾನು ಇಲ್ಲಿಗೆ ಹೇಗೆ ಬರುವುದು."

"ಏಕೆ ?"

"ಹೊರಬಾಗಿಲಿನಲ್ಲಿ ತುಂಬ ಜನ ಇರುತ್ತಾರೆ."

"ಯಾವಾಗ ಬಂದರೂ ಹಿಂದುಗಡೆ ಬಾಗಿಲಿನಿಂದ ಮೇಲಕ್ಕೆ ಬಂದು ಬಿಡು. ಶ್ರೀನಿವಾಸನಿಗೆ ಹೇಳಿರುತ್ತೇನೆ – ಅವನು ನಿನ್ನನ್ನು ಕರೆದುಕೊಂಡು ಬಂದು ಕೂಡಿಸುತ್ತಾನೆ."

"ಇವತ್ತೂ ನನಗೆ ಈ ರೂಮೇ ಸಿಕ್ಕಿತಲ್ಲ."

"ಸಾಮಾನ್ಯವಾಗಿ ಈ ರೂಮು ಖಾಲಿ ಇಟ್ಟಿರುತ್ತೇನೆ. . . . ನೀನು ಕೂತಿರು. ನಾನು ಬರುತ್ತೇನೆ. ಏನಾದರೂ ಬೇಕಾದರೆ ಶ್ರೀನಿವಾಸನಿಗೆ ಹೇಳು ತಂದು ಕೊಡುತ್ತಾನೆ."

"ತುಂಬ ಬಾಯಾರಿಕೆ."

"ಶ್ರೀನಿವಾಸ ಕಾಫಿ ತಂದು ಕೊಡಲಿಲ್ಲವೇ ?"

"ಕಾಫಿ ಕುಡಿದರೆ ಬಾಯಾರಿಕೆ ಹೋಗುತ್ತದೆಯೇ ?"

"ಅದೇ – ಈಗ ಬೇಡ. ರೈಲು ಬಂದು ಬಿಡಲಿ. ರಾತ್ರೀಗೆ ಆಗಲಿ, ಜತೇಲಿ ನಾನೂ ಇರುತ್ತೇನೆ."

ಸರಸ್ವತಿ ಸಮ್ಮತಿ ಸೂಚಿಸಿದಳು.

ಮೈಸೂರು, ಮದರಾಸು, ಗುಂತಕಲ್ಲು, ಪೂನಾ·ರೈಲುಗಳು ಬಂದವು.

ಎಂಟು ಗಂಟೆಯ ವೇಳೆಗೆ ಊಟ, ಪಾನಿಯ ಗಣೇಶರಾಯ ಸರಸ್ವತಿಯ ರೂಮಿಗೆ ಕಳಿಸಿ ಕೊಟ್ಟ.

ಸರಸ್ವತಿ ಊಟದ ಶಾಸ್ತ್ರ ಮುಗಿಸಿ, ಪಾನೀಯ ಅರ್ಧ ಸ್ವೀಕರಿಸಿ ಉಳಿದರ್ಧ ಮಿಗಿಸಿಟ್ಟಳು.

ಒಂಭತ್ತು ಗಂಟೆಯ ವೇಳೆಗೆ ಒಳಗೆ ಬಂದ ಗಣೇಶರಾಯ ಉಳಿದರ್ಧ ಪಾನೀಯ ಸರಸ್ವತಿಯೊಂದಿಗೆ ಸ್ವೀಕರಿಸಿದ. ಅವನ ಮನಸ್ಸಿಗೆ ತೃಪ್ತಿಯಾಗ ಲಿಲ್ಲ. ಹೊಸ ಬಾಟಲಿ ತರಿಸಿ

"ಕ್ಯಾಷಿಯರನ ನೋಡಿಕೊಂತ ಹೇಳು ಶ್ರೀನಿವಾಸ" ಎಂದು ಮಾಣಿಗೆ ಆಜ್ಞೆನಿಧಿಸಿ, ಬಾಟಲು ತೆಗೆದು ಮುಂದಿಟ್ಟುಕೊಂಡು ಕುಳಿತ.

೨೨

ಮುಂಬಯಿಯ 'ವಿಕ್ಟೋರಿಯಾ ಟರ್ಮಿನಸ್' ಸ್ಟೇಷನ್ನಿನಲ್ಲಿ ಬೆಳಿಗ್ಗೆ ಹತ್ತೂವರೆ ಗಂಟೆಗಿಳಿದ ಅಣ್ಣಯ್ಯ, ಮಂಜುಳಾ ಜನರಲ್ ಪೋಸ್ಟ್ ಆಫೀಸ್ ಹಿಂದಿದ್ದ ' ನ್ಯೂ ಹಿಂದೂ ಹೊಟೇಲ್ ' ವಿಚಾರಿಸಿಕೊಂಡು ಹೊರಟರು ಹೊಟೇಲ್ ಕಷ್ಟವಿಲ್ಲದೆ ಸಿಕ್ಕಿತು.

'ನ್ಯೂ ಹಿಂದೂ ಹೊಟೇಲ್' ಮಾಲೀಕರು ಉಡುಪಿಯವರಾದುದರಿಂದ ಕನ್ನಡನಾಡಿನವರಿಗೆ ಹೊಟೇಲಿನಲ್ಲಿ ವಿಶೇಷ ಲಕ್ಷ್ಯ ಕೊಡಲ್ಪಡುತ್ತಿತ್ತು. ಸ್ನಾನ ಊಟ ಮುಗಿದಮೇಲೆ ಅಣ್ಣಯ್ಯ ಹೊಟೇಲ್ ಮಾಲೀಕರನ್ನು ಕೇಳಿ ' ತಾರ ದೇವ್' ಮುಟ್ಟುವ ಬಗೆ ತಿಳಿದುಕೊಂಡ.

ಅಣ್ಣಯ್ಯ ಮಂಜುಳಾ ಇಬ್ಬರೂ ತಾರದೇವ್ ಬಸ್ ಟರ್ಮಿನಸ್ಸಿನಲ್ಲಿ ಳಿದು ಶ್ರೀ ಸೋಮನಾಥ ಸೌಂಡ್ ಸ್ಟೂಡಿಯೋ ಎಲ್ಲಿದೆಯೆಂದು ದಾರಿಯಲ್ಲಿ ಹೋಗುತ್ತಿದ್ದವರನ್ನು ಕೇಳಿದರು. ಅವರು ಸ್ಟೂಡಿಯೋಗೆ ಹೋಗುವ ದಾರಿ ತೋರಿಸಿದರು.

ಒಂದೆರಡು ಫರ್ಲಾಂಗ್ ನಡೆದು ಬರುವಷ್ಟರಲ್ಲಿ ಸ್ಟೂಡಿಯೋದ ದೊಡ್ಡ ಬೋರ್ಡು ಕಾಣಿಸಿತು. ಅಣ್ಣಯ್ಯನಿಗೆ ರೋಮಾಂಚವಾಯಿತು.

ಸ್ಟೂಡಿಯೋ ಗೇಟು ಹಾಕಿತ್ತು. ಬಾಗಿಲಿನಲ್ಲಿಯೇ ಯಮಸ್ವರೂಪ ನಾದ ಒಬ್ಬ ಪಠಾಣ ಕೈಯಲ್ಲಿ ದೊಣ್ಣೆ ಹಿಡಿದು ಕಾವಲು ನಿಂತಿದ್ದ.

ಗೇಟಿನ ಪಕ್ಕದಲ್ಲಿದ್ದ ಕಿರುಬಾಗಿಲಿನಲ್ಲಿ ಅಣ್ಣಯ್ಯ ಮಂಜುಳಾ ಒಳಗೆ ಹೋಗಲೆತ್ನಿಸಿದಾಗ ಪಠಾಣ ಬಂದು ಅವರನ್ನು ತಡೆಗಟ್ಟಿದ. ಪಠಾಣ ಆಡುತ್ತಿದ್ದುದು ಅಣ್ಣಯ್ಯನಿಗೆ ಅರ್ಥವಾಗುತ್ತಿರಲಿಲ್ಲ ; ಅಣ್ಣಯ್ಯ ಹೇಳುತ್ತಿದ್ದುದು ಪಠಾಣನಿಗೆ ತಿಳಿಯುತ್ತಿರಲಿಲ್ಲ.

ಒಳಗೆ ಹೋಗುವವರು ಯಾರಾದರೂ ಬಂದರೆ ಅವರ ಸಹಾಯ ಪಡೆಯಬೇಕೆಂದು ಅಣ್ಣಯ್ಯ, ಮಂಜುಳಾ ನಿಂತರು. ಸ್ವಲ್ಪ ಹೊತ್ತಿನಲ್ಲಿಯೇ ಒಳಗಿನಿಂದ ಯಾರೋ ಬರಲು, ಮಂಜುಳಾ ಅವರಿಗೆ ಇಂಗ್ಲಿಷಿನಲ್ಲಿ ತಾವು ಬಂದಿರುವ ಉದ್ದೇಶ ತಿಳಿಸಿದಳು. ಪಠಾಣ ಮುರುಕು ಹಿಂದಿಯಲ್ಲಿ

" ಚಿಟ್ಟಿ ಬರೆದುಕೊಡಿ " ಎಂದ.

ಮಂಜುಳಾ ತಮ್ಮ ಹೆಸರು, ತಾವು ಬಂದಿರುವ ಕೆಲಸದ ವಿವರ ಬರೆದು ಕೊಟ್ಟಳು. ಪಠಾಣ ಒಬ್ಬ ಹುಡುಗನನ್ನು ಒಳಗಿನಿಂದ ಕರೆದು ಅವನ ಕೈಯಲ್ಲಿ ಚೀಟಿ ಕಳಿಸಿದ.

ಒಳಗೆ ಹೋದ ಹುಡುಗ ಹೊರಗೆ ಬರುತ್ತಾನೋ ಇಲ್ಲವೋ ಎಂದು ಅಣ್ಣಯ್ಯ, ಮಂಜುಳಾ ಸಂಶಯ ತಾಳಿದರು. ಅರ್ಧ ಗಂಟೆಯಮೇಲೆ ಅವನು ಬಂದು 'ಒಳಗೆ ಬನ್ನಿ' ಎಂದು ಹೇಳಿ ಕರೆದುಕೊಂಡು ಹೋದ.

ಸ್ಟೂಡಿಯೋ ಆವರಣದಲ್ಲಿ ಯಾವುದೋ ಚಿತ್ರದ 'ಷೂಟಿಂಗ್' ನಡೆದಿತ್ತು. ಅಲ್ಲಲ್ಲಿ ಗುಂಪು ಗುಂಪಾಗಿ ಜನ ನಿಂತೋ ಕುಳಿತೋ ಹರಟೆ ಹೊಡೆಯುತ್ತಿದ್ದರು. ಹಳದಿ ವಸ್ತ್ರಗಳನ್ನು ಧರಿಸಿದ್ದ ನಟರು ಬಗೆಬಗೆಯ ಸಿಂಗಾರ ಮಾಡಿಕೊಂಡಿದ್ದ ನಟಿಯರು ಅಲ್ಲಲ್ಲಿಯೇ ಓಡಾಡುತ್ತಿದ್ದರು. ಆವರಣದ ಒಂದು ಭಾಗದಲ್ಲಿದ್ದ ಸ್ಟೂಡಿಯೋ ಕ್ಯಾನ್‌ಟೀನ್‌ನ ಮುಂದೆ ಕೆಲವರು ನಿಂತು ಚಹಾ ಸೇವಿಸುತ್ತಿದ್ದರು.

ಸ್ಟೂಡಿಯೋ ಒಳಗೆ ಕರೆದೊಯ್ದ ಹುಡುಗ ಸ್ಟೂಡಿಯೋ ಕಛೇರಿಯ ಕಟ್ಟಡದ ವೆರಾಂಡದಲ್ಲಿ ಹಾಕಿದ್ದ ಬೆಂಚು ತೋರಿಸಿ 'ಇಲ್ಲೇ ಕುಳಿತುಕೊಳ್ಳಿ-ಮ್ಯಾನೇಜರ್ ಹೇಳಿ ಕಳಿಸುತ್ತಾರೆ' ಎಂದು ಹೇಳಿ ಹೋದ.

ಅಣ್ಣಯ್ಯ, ಮಂಜುಳಾ ವೆರಾಂಡದಲ್ಲಿ ಕುಳಿತು ಸ್ಟೂಡಿಯೋ ಆವರಣದ ಚಲನವಲನವನ್ನು ನೋಡುತ್ತಿದ್ದರು. ಒಂದು ಗಂಟೆ ಕಳೆದಿರಬಹುದು-ಮ್ಯಾನೇಜರಿಂದ ಕರೆ ಬರಲಿಲ್ಲ. ಇಬ್ಬರೂ ಕ್ಯಾನ್‌ಟೀನ್ ಬಳಿ ಹೋಗಿ ಚಹಾಕುಡಿದು ಬಂದು ಕುಳಿತರು. ಇಬ್ಬರಿಗೂ ತಲೆಬೇಸರ ಬಂದಿತ್ತು.

ಅದೇ ಹುಡುಗ ಹೊರಬರಲು ಅಣ್ಣಯ್ಯ ಅವನನ್ನು ಹಿಡಿದುಕೊಂಡು 'ಎಲ್ಲಿ ಮ್ಯಾನೇಜರ್' ಎಂದು ಕೇಳಿದ. ಹುಡುಗ ಆಶ್ಚರ್ಯದಿಂದ 'ಇನ್ನೂ ನೋಡಲಿಲ್ಲವೇ' ಎಂದು ಒಳಗೆ ಹೋಗಿ ಬಂದು ತನ್ನ ಜತೆಯಲ್ಲಿಯೇ ಅವರಿಬ್ಬರನ್ನೂ ಕರೆದೊಯ್ದ.

ಗ್ಲಾಸಿನ ಅರ್ಧ ಬಾಗಿಲಿದ್ದ ಒಂದು ರೂಮು. ವಿಶಾಲವಾದ ಮೇಜಿನ ಮುಂದೆ, ಮೂಗಿನ ಮೇಲಿನ ಕನ್ನಡಕವನ್ನು ಸ್ವಲ್ಪ ಜಾರಿ ಬಿಟ್ಟು ಮ್ಯಾನೇಜರ್ ಕುಳಿತಿದ್ದ. ಅವನ ಬಾಯಲ್ಲಿ ಬೀಡಿಯೊಂದು ಲಘು ಧೂಮ ಚೆಲ್ಲುತ್ತಿತ್ತು. ಅವನ ತಲೆಯಮೇಲೆ ದೊಡ್ಡ ಫ್ಯಾನ್ ಆಡುತ್ತಿತ್ತು.

ಮ್ಯಾನೇಜರ್ ಕತ್ತೆತ್ತಿನೋಡಿ ಎದುರಿಗಿದ್ದ ಕುರ್ಚಿ ತೋರಿಸಿದ. ಅಣ್ಣಯ್ಯ, ಮಂಜುಳಾ ಕುಳಿತರು. ಸ್ವಲ್ಪ ಹೊತ್ತಾದ ಮೇಲೆ ಮ್ಯಾನೇಜರ್ ಕೇಳಿದ

"ಏನು ಬಂದಿದ್ದಿರಿ ?"

ಮಂಜುಳಾ ಇಂಗ್ಲಿಷಿನಲ್ಲಿ ಉತ್ತರ ಹೇಳಿದಳು.

"ಚೀಟಿ ಕಳಿಸಿದ್ದೆವು."

ಮೇಜಿನ ಮೇಲೆ ಬಿದ್ದಿದ್ದ ಚೀಟಿಯನ್ನೆತ್ತಿಕೊಂಡು ಮ್ಯಾನೇಜರ್ ನೋಡಿ

"ಪಾಟೀಲ್ ಸಾಹೇಬರನ್ನು ನೋಡುವುದಕ್ಕೆ ಬಂದಿದ್ದೀರಾ ?"

"ಹೌದು. ಅವರಿಲ್ಲವೇ ?"

ಮ್ಯಾನೇಜರ್ ಸ್ವಲ್ಪ ಯೋಚಿಸುತ್ತಾ, ಬಾಯಲ್ಲಿದ್ದ ಬೀಡಿ ತುಂಡನ್ನು ಎದುರಿಗಿದ್ದ ಗೋಲ್ಡ್ ಫ್ಲೇಕ್ ಡಬ್ಬದಲ್ಲಿ ಹಾಕಿ, ಮತ್ತೊಂದು ಬೀಡಿ ಹಚ್ಚಿಕೊಂಡು

"ಯಾವ ಊರಿನಿಂದ ಬಂದಿರಿ ?"

"ಮೈಸೂರಿನಿಂದ."

"ಪಾಟೀಲ್ ಸಾಹೇಬರ ಹತ್ತಿರ ನಿಮಗೇನು ಕೆಲಸವಿತ್ತು."

ಅಣ್ಣಯ್ಯ ಕಿಸೆಯಿಂದ ತನ್ನ ಅಪ್ಲಿಕೇಷನ್ನಿನ ಪ್ರತಿಯನ್ನು ತೆಗೆದು ಮ್ಯಾನೇಜರ್ ಕೈಯಲ್ಲಿಟ್ಟ. ಮ್ಯಾನೇಜರ್ ಅದನ್ನು ನೋಡಿಕೊಂಡು

"ಪಾಟೀಲರ ಚಿತ್ರದಲ್ಲಿ ಕೆಲಸಮಾಡುವುದಕ್ಕೆ ಬಂದಿರಾ ?"

"ಹೌದು."

"ಅವರಿಲ್ಲವಲ್ಲ !"

"ಯಾವಾಗ ಬರುತ್ತಾರೆ ?"

"ನನಗೆ ಗೊತ್ತಿಲ್ಲ."

"ಈ ವಿಷಯ ನಾವು ಎಲ್ಲಿ ಕೇಳಿ ತಿಳಿದುಕೊಳ್ಳಬೇಕು.

"ಶೇಠ್‌ಜೀಯವರನ್ನು ಕೇಳಿದರೆ ಗೊತ್ತಾಗುತ್ತದೆ."

"ಶೇಠ್‌ಜೀಯವರಿಲ್ಲವೇ ? "

"ಅವರು ಊರಿನಲ್ಲಿಲ್ಲ - ಶುಕ್ರವಾರ ಬರುತ್ತಾರೆ."

ಶುಕ್ರವಾರವೆಂದರೆ ಇನ್ನೂ ಮೂರುದಿನ - ಅಣ್ಣಯ್ಯನ ಎದೆಗುಂಡಿಗೆ ಹಾರಿತು.

" ಪಾಟೀಲನ ಕಡೆಯವರು ಇಲ್ಲಿ ಯಾರೂ ಇಲ್ಲವೇ"

ಎಂದು ಮಂಜುಳಾ ಕೇಳಿದಳು.

" ಶುಕ್ರವಾರ ಬಂದು ಶೇಠ್‌ಜೀಯವರನ್ನು ಕಂಡರೆ ಎಲ್ಲಾ ಗೊತ್ತಾಗುತ್ತದೆ."

" ನಿಮ್ಮ ಪಠಾಣ ಒಳಕ್ಕೇ ನಮ್ಮನ್ನು ಬಿಡುವುದಿಲ್ಲ."

ಮ್ಯಾನೇಜರ್ ಉತ್ತರಕೊಡದೆ ತನ್ನ ಲೆಟರ್ ಕೇಸಿನಿಂದ ಒಂದು ಕಾರ್ಡು ತೆಗೆದುಕೊಂಡು, ಶುಕ್ರವಾರದ ತಾರೀಖು ಹಾಕಿ 'ಇಬ್ಬರಿಗೆ ಪ್ರವೇಶ' (Admit Two) ಎಂದು ಬರೆದುಕೊಟ್ಟ. ಅದನ್ನು ಕೈಗೆ ತೆಗೆದುಕೊಂಡು ಮಂಜುಳಾ ಅಣ್ಣಯ್ಯ ಹೊರಗೆ ಬಂದರು. ಅವರನ್ನು ಕರೆದುಕೊಂಡು ಬಂದ ಹುಡುಗ ಭಕ್ಷೀಸಿಗೆ ಕಾಯುತ್ತಿದ್ದ. ಅವನ ಕೈಗೆ ಎಂಟಾಣೆ ಕುಕ್ಕಿ ಇಬ್ಬರೂ ಹೊರಗೆ ಬಂದು ಬಸ್ ಹುಡುಕಿಕೊಂಡು ಹೋದರು.

ಹೊಟೇಲಿಗೆ ಬಂದ ಕೂಡಲೆ ಅಣ್ಣಯ್ಯ ತನ್ನ ರೂಮಿನಲ್ಲಿದ್ದ ಕಿರ್ಲೋಸ್ಕರ್ ಪಲ್ಲಂಗದ ಮೇಲೆ ಕುಕ್ಕರಿಸಿದ. ಪಲ್ಲಂಗ ಕಿರೋ ಎಂದಿತು. ಎದುರಿಗಿದ್ದ ಕುರ್ಚಿಯಮೇಲೆ ಮಂಜುಳಾ ಕುಳಿತಳು.

" ಇದೇನು ಹೀಗಾಯಿತಲ್ಲಾ ಮಂಜೂ."

" ನಾವು ಹೊರಟ ಗಳಿಗೆ ಒಳ್ಳೆಯದಲ್ಲ."

" ಇನ್ನೂ ಮೂರು ದಿನ ಇಲ್ಲಿ ಕಳೆಯುವುದು ಹೇಗೆ ?"

" ವೃಥಾ ಖರ್ಚು."

"ಇಲ್ಲಿಂದ ಉತ್ತರ ಬರುವವರೆಗೆ ನಾವು ಹೊರಡಬಾರದಾಗಿತ್ತು."

" ನಿರಾಶೆಗೊಳ್ಳುವುದೇಕೆ ನೋಡೋಣ – ಏನೂ ಆಗದಿದ್ದರೆ ಬೊಂಬಾಯಿ ನೋಡಿದಂತಾಯಿತು."

" ಕೆಲಸವಾಗಲಿ ಆಗದಿರಲಿ ನಾನು ಬೊಂಬಾಯಿ ಬಿಡುವುದಿಲ್ಲ ನಾನು ಫಿಲಂ ಕಂಪೆನಿ ಸೇರುವುದಕ್ಕೆ ಹೋದ ಸುದ್ದಿ ಎಲ್ಲ ಕಡೆಯಲ್ಲಿಯೂ ಪ್ರಸಾರವಾಗಿರುತ್ತದೆ. ಯಾವ ಮುಖ ಹೊತ್ತು ನಾನು ಊರಿಗೆ ಹಿಂದಿರುಗಲಿ."

" ಶುಕ್ರವಾರ ಕಳೆದಮೇಲೆ ತಾನೇ ಮಾತು."

ಮೂರು ದಿನ ಮುಂಬಯಿಯಲ್ಲಿ ಕಳೆಯದೇ ನಿರ್ವಾಹವೇ ಇರಲಿಲ್ಲ. ಮಲಬಾರ್ ಹಿಲ್ಸ್, ಅಲೆಗ್ಸಾಂಡ್ರಾ ಡಾಕ್ಸ್, ವಿಕ್ಟೋರಿಯಾ ಗಾರ್ಡನ್ಸ್,

ಪ್ರಿನ್ಸ್ ಆಫ್ ವೇಲ್ಸ್ ಮ್ಯೂಸಿಯಂ, ಮೆಟ್ರೋ ಥಿಯೇಟರ್, ಜುಹು ಎಲ್ಲ ವನ್ನೂ ನೋಡಿ ಬಂದರು. ಮನಸ್ಸಿಗೆ ಶಾಂತಿ ಇಲ್ಲ - ನೋಟ ಕಾಟವಾಗಿತ್ತು.

ಶುಕ್ರವಾರ ಹನ್ನೆರಡು ಗಂಟೆಯವೇಳೆಗೆ ಇಬ್ಬರೂ ಸ್ಟೂಡಿಯೋ ತಲುಪಿ ಪಠಾಣನಿಗೆ ಕಾರ್ಡು ತೋರಿಸಿದರು. ಅವನು ಮರುಮಾತಾಡದೆ ಅವರನ್ನು ಒಳಕ್ಕೆ ಬಿಟ್ಟ. ಸ್ಟುಡಿಯೋ ಕಛೇರಿಯ ವೆರಂಡಾದಲ್ಲಿ ಹೋಗಿ ಕುಳಿತರು. ಅದೇ ಹುಡುಗ ಕಾಣಿಸಿಕೊಂಡ. ಅವನೊಂದಿಗೆ ಮ್ಯಾನೇಜರಿಗೆ ಸುದ್ದಿ ಕಳಿಸಿದರು.

ಶೇಠ್‌ಜೀಯ ದರ್ಶನದ ವ್ಯವಸ್ಥೆಮಾಡಿ ಮ್ಯಾನೇಜರ್ ಹೇಳಿ ಕಳಿಸಿದ.

"ಮ್ಯಾನೇಜರ್ ರೂಮಿನ ಪಕ್ಕದ ರೂಮೇ ಸೇಠ್‌ಜೀಯ ರೂಮು. ಅದರಲ್ಲಿ ಎರಡು ಫ್ಯಾನ್‌ಗಳು. ಒಂದು ಚಾವಣಿಯಲ್ಲಿ - ಇನ್ನೊಂದು ಮೇಜಿನ ಮೇಲೆ ತಿರುಗುತ್ತಿದ್ದವು.

ಬಿಳೀ ಅಂಗಿ ಹಾಕಿಕೊಂಡು ಶೇಠ್‌ಜೀ ಕುಳಿತಿದ್ದರು. ಅವರ ಕೈಯಲ್ಲಿ ಮೂರು ನಾಲ್ಕು ವಜ್ರದ ಉಂಗುರಗಳು ಥಳ ಥಳಿಸುತ್ತಿದ್ದವು.

ಶೇಠ್‌ಜೀ ಅವರನ್ನು ಕೂಡ ಹೇಳಿ

"ಪಾಟೀಲರನ್ನು ಹುಡುಕಿಕೊಂಡು ಬಂದಿರುವಿರಂತೆ !"

"ಹೌದು. ನಾವು ಬಂದು ಮೂರು ದಿವಸವಾಯಿತು."

"ನಾನು ಊರಿನಲ್ಲಿರಲಿಲ್ಲ. ನಿಮ್ಮನ್ನು ಬರಹೇಳಿ ಪಾಟೀಲರು ಕಾಗದ ಬರೆದಿದ್ದರೇ ?"

"ಇಲ್ಲ - ಜಾಹೀರಾತು ನೋಡಿ ಕಾಗದ ಬರೆದೆ. ಉತ್ತರ ಬರಲಿಲ್ಲ. ನಾನೇ ಹೋಗಿ ಅವರನ್ನು ಕಂಡರಾಯಿತು ಎಂದು ಬಂದೆ."

"ಸರಿಯಾದ ವ್ಯವಸ್ಥೆ ಮಾಡಿಕೊಳ್ಳದೆ ಏಕೆ ಬಂದಿರಿ ?"

"ಪಾಟೀಲರು ಚಿತ್ರ ಮಾಡುವುದಿಲ್ಲವೇ ?"

"ಪಾಟೀಲರ ಪತ್ತೆಯೇ ಇಲ್ಲ."

"ಹಾ ! ಹಾಗಂದರೆ !"

"ಹುಬ್ಬಳ್ಳಿಯಿಂದ ಈ ಪಾಟೀಲರು ಬಂದು ನಮ್ಮ ಜತೆ ಸ್ಟೂಡಿಯೋ ಪಾರ್ಟನರ್‌ಷಿಪ್ (Studio partnership) ಮೇಲೆ ಕಂಟ್ರ್ಯಾಕ್ಟು ಮಾಡಿಕೊಂಡು ನಮಗೆ ಹತ್ತುಸಾವಿರ ರೂಪಾಯಿ ಅಡ್ವಾನ್ಸ್ ಕೊಟ್ಟು ಉಳಿದ ಹಣ

ತರುತ್ತೇನೆಂದು ಊರಿಗೆ ಹೋದರು. ಎಷ್ಟು ದಿನವಾದರೂ ಬರಲೇ ಇಲ್ಲ – ನಾನೇ ಹುಬ್ಬಳ್ಳಿಗೆ ಹೋದೆ. ವಿಚಾರಿಸುವಲ್ಲಿ ಪಾಟೀಲರು ಶುದ್ಧ ಬೋಗಸ್ (Bogus) ಮನುಷ್ಯ ಎಂದು ಗೊತ್ತಾಯಿತು. ಆತ ಒಂದು ಜವಳಿ ಅಂಗಡಿಯಲ್ಲಿ ಕಾರಕೂನ. ಅಂಗಡಿ ಹಣ ಛಪಾಯಿಸಿ ಪರಾರಿಯಾಗಿದ್ದಾನೆ. ಪೋಲೀಸಿನವರು ಅವನನ್ನು ಹುಡುಕುತ್ತಿದ್ದಾರೆ."

ಅಣ್ಣಯ್ಯ, ಮಂಜುಳಾ ಕುಸಿದು ಬಿದ್ದರು. ಅಣ್ಣಯ್ಯ ಆರ್ತನಾಗಿ "ನಮ್ಮ ಗತಿ !" ಎಂದ.

"ನನ್ನ ಮಾತು ಕೇಳಿ – ಸುಮ್ಮನೆ ಊರಿಗೆ ಹಿಂದಿರುಗಿ ಹೋಗಿ."

"ನೀವು ನಮಗೆ ಸಹಾಯಮಾಡಲು ಸಾಧ್ಯವಿಲ್ಲವೇ ? ನಾನೂ ಈಕೆ ರಂಗಭೂಮಿಯಲ್ಲಿ ಒಳ್ಳೆಯ ನಟರೆಂದು ಹೆಸರು ಪಡೆದಿದ್ದೇವೆ. ನಾನು ಹಾಡಬಲ್ಲೆ - ಈಕೆ ವೀಣೆ ನುಡಿಸುತ್ತಾಳೆ."

"ಸ್ಟೇಜ್ ಆಕ್ಟರುಗಳಿಂದ ಸಿನೀಮಾಕ್ಕೆ ಏನೂ ಪ್ರಯೋಜನವಿಲ್ಲ."

"ನಮಗೊಂದು ದಾರಿ ತೋರಿಸಿ."

"ಗುಂಪಿನ ದೃಶ್ಯಗಳಿಗೆ ನಾವು ಕೆಲವು ಎಕ್ಸ್ಟ್ರಾಗಳನ್ನು (Extra) ಆಗಾಗ್ಗೆ ತೆಗೆದುಕೊಳ್ಳುತ್ತೇವೆ. ನೀವು ಬಂದು ವಿಚಾರಿಸುತ್ತಿರಿ ಕೆಲಸವಿದ್ದ ದಿನ ನಿಮಗೂ ಛಾನ್ಸ್ (chance) ಸಿಕ್ಕಬಹುದು. ದಿವಸಕ್ಕೆ ಹತ್ತು ರೂಪಾಯಿ ಕೊಡುತ್ತೇವೆ.

ಎಂದು ಶೇಠ್‌ಜೀ ಮೇಜಿನ ಮೇಲಿದ್ದ ಗಂಟೆ ಬಾರಿಸಿದ. ಹುಡುಗ ಬಂದು ಅವರನ್ನು ಹೊರಗೆ ಕರೆದೊಯ್ದ.

ಅಣ್ಣಯ್ಯ, ಮಂಜುಳಾ ಇಬ್ಬರ ಮೇಲೂ ಆಕಾಶವೇ ಕಳಚಿ ಬಿದ್ದಂತಾಗಿತ್ತು. ಹೊಟೇಲಿನಲ್ಲಿ ಮಂಜುಳಾ ಮತ್ತೆ ಹೇಳಿದಳು.

"ಈಗಲೂ ನಡೆಯಿರಿ. ಊರಿಗೆ ಹೋಗೋಣ."

"ಸೋಲು ಮುಖ ಹಾಕಿಕೊಂಡು ನಾನು ಊರಿಗೆ ಬರುವುದಿಲ್ಲ. ಶೇಠ್ ಅದೇನೋ ಎಕ್ಸ್ಟ್ರಾ ಎಂದರಲ್ಲ - ಅದನ್ನು ನೋಡಿಬಿಡೋಣ."

"ಅದಕ್ಕೆಷ್ಟು ಸಾವಿರ ಜನ ಕಾಯುತ್ತಿರುತ್ತಾರೋ - ದಿವಸಕ್ಕೆ ಹೊಟೇಲಿಗೆ ಹದಿನೈದು ರೂಪಾಯಿ, ಮೇಲೆ ಐದು ಹತ್ತು ರೂಪಾಯಿ ಖರ್ಚು ಮಾಡಿಕೊಂಡು ನಾವು ಪೂರೈಸುತ್ತೇವೆಯೇ ? "

" ನೋಡೋಣ " ಎಂದಷ್ಟೇ ಅಣ್ಣಯ್ಯ ಉತ್ತರವಿತ್ತ.

ಮಾರನೆಯ ದಿನ ಇಬ್ಬರೂ ಸ್ಟೂಡಿಯೋ ಬಳಿ ಹೋಗಿ ನಿರಾಶರಾಗಿ ಹಿಂದಿರುಗಿದರು. ಭಾನುವಾರ ರಜಾ. ಸೋಮವಾರ ಪುನಃ ಸ್ಟುಡಿಯೋ ಬಳಿ ಹೋದರು. ಅಂದು ಇಬ್ಬರಿಗೂ ಎಕ್ಸ್ಟ್ರಾ ಕೆಲಸ ಸಿಕ್ಕಿತು. ಸಂಜೆ ಆರರ ವರೆಗೆ ಮೇಕಪ್ ಮಾಡಿಕೊಂಡು ಬಿಸಿಲಿನಲ್ಲಿ ಒಣಗಿ, ಐದಾರು ಕಪ್ ಚಹಾ ಕುಡಿದು ಇಬ್ಬರೂ ಹೊಟೇಲ್ ಸೇರಿದರು.

" ಇನತ್ತಿಗೆ ನಮ್ಮ ಹೊಟೇಲ್ ಬಿಲ್ ನೂರಿಪ್ಪತ್ತು ರೂಪಾಯಿ– ನಾವು ಸಂಪಾದಿಸಿರುವುದು ಇಪ್ಪತ್ತು ರೂಪಾಯಿ."

" ಇಷ್ಟು ಅವಕಾಶ ಸಿಕ್ಕಿದೆಯಲ್ಲ ನೋಡೋಣ. ಜನಗಳ ಗುರುತಾದರೆ ಒಂದಲ್ಲ ಒಂದು ಕಡೆ ಕೆಲಸ ಸಿಕ್ಕುತ್ತದೆ."

ಮಂಗಳವಾರ ಮಂಜುಳಾ ತಲೆನೋವೆಂದು ಮಲಗಿಬಿಟ್ಟಳು. ಅಣ್ಣಯ್ಯ ಅವಳಿಗೆ ಆಸ್ಪ್ರೊ ಗುಳಿಗೆಗಳನ್ನು ತಂದು ಕೊಟ್ಟು ತಾನೊಬ್ಬನೇ ಹೊರಟ. ಅವತ್ತು ಕೆಲಸ ಸಿಕ್ಕಿ ಸಂಜೆ ಹತ್ತು ರೂಪಾಯಿ ತೆಗೆದುಕೊಂಡು ಹೊಟೇಲಿಗೆ ಬಂದು

" ಇವತ್ತು ಡೈರೆಕ್ಟರು ನನ್ನ ಮಾತನಾಡಿಸಿದರು ಮಂಜೂ."

" ಏನು ಕೇಳಿದರು."

" ಯಾವ ಊರು ಏನು ಎಂದು ಕೇಳಿದರು. ಎಲ್ಲಾ ಹೇಳಿದೆ ತುಂಬಾ ಪರಿತಾಪ ಪಟ್ಟುಕೊಂಡರು. ಮ್ಯೂಸಿಕ್ ಡೈರೆಕ್ಟರ್ ಪರಿಚಯ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದೇನೆ."

" ಏನು ಮಾಡುತ್ತೀರೋ ಮಾಡಿ."

ಬುಧವಾರವೂ ಅಣ್ಣಯ್ಯ ಒಬ್ಬನೇ ಸ್ಟುಡಿಯೋಗೆ ಹೋದ. ರೂಮಿನಲ್ಲೇ ಒಬ್ಬಳೇ ಕುಳಿತು ಮಲಗಿ ಸಾಕಾಗಿ ಮಂಜುಳಾ ರೂಮ್ ಬಾಗಿಲು ಹಾಕಿಕೊಂಡು, ಹಾರನ್‌ಬೀ ರಸ್ತೆಯ ಮಗ್ಗುಲಲ್ಲಿದ್ದ ಅಂಗಡಿಗಳನ್ನು ನೋಡುತ್ತ ಹೊರಟಳು.

ಸ್ವಲ್ಪ ದೂರ ನಡೆಯುವಲ್ಲಿ ಒಂದು ಪುಸ್ತಕದ ಅಂಗಡಿ ಸಿಕ್ಕಿತು. ಅದನ್ನು ಹೊಕ್ಕು ಅಲ್ಲಿದ್ದ ಸಚಿತ್ರ ಪತ್ರಿಕೆಗಳನ್ನೂ ಪುಸ್ತಕಗಳನ್ನೂ ನೋಡುತ್ತ ಸ್ವಲ್ಪ ಕಾಲ ಕಳೆದು ಎರಡು ಕಾದಂಬರಿ ಕೊಂಡು ಮತ್ತೆ ಹೊರಟಳು.

ರಸ್ತೆಯ ಮಗ್ಗುಲಿಗಿದ್ದ ಒಂದು ಅಂಗಡಿ ಅವಳನ್ನು ಆಕರ್ಷಿಸಿತು. ಪ್ಲಾಸ್ಟಿಕ್ ಸಾಮಾನುಗಳು, ಮಣಿ ಸರಗಳು, ಹಿತ್ತಾಳೆಯ ಕರ್ಣಾಭರಣಗಳು ಅಲ್ಲಿ ಪ್ರದರ್ಶಿಸಲ್ಪಟ್ಟಿದ್ದವು. ಮಂಜುಳಾ ಅಂಗಡಿಯ ಮುಂದೆ ನಿಂತು ಕೆಲವು ಸರಗಳು, ಕರ್ಣಾಭರಣಗಳು, ಸಣ್ಣಪುಟ್ಟ ಅಲಂಕಾರದ ಸಾಮಾನು ಗಳು ಹಣೆಗೆ ಹಚ್ಚಿಕೊಳ್ಳುವ ಬಗೆ ಬಗೆಯ ಆಕಾರದ ಕುಂಕುಮಾಂಕಿತಗಳನ್ನು ವ್ಯಾಪಾರಮಾಡುತ್ತಾ ನಿಂತಳು. ಅಂಗಡಿಯ ಬಲ ಮಗ್ಗುಲಿನಲ್ಲಿ ಯಾರೋ ನಿಂತು ತನ್ನನ್ನೇ ನೋಡುತ್ತಿರುವಂತೆ ಭಾಸವಾಯಿತು.

ಕತ್ತೆತ್ತಿ ನೋಡಿದಳು.

ಕುಮಾರ ! ಹೌದು ಅವನೇ ಕುಮಾರ !

ಕುಮಾರನೇ ಮಂಜುಳನ ಸಮೀಪಕ್ಕೆ ಬಂದು

" ಇದೇನಮ್ಮ – ನೀನು ಇಲ್ಲಿ." ಎಂದು ಕೇಳಿದ

ಮಂಜುಳನಿಗೆ ಸಂತೋಷ ಉಕ್ಕಿ ಬಂತು

" ನೀನೇ ಹೌದೋ ಅಲ್ಲವೋ ಎಂದು ನಾನು ಅನುಮಾನಿಸಿದೆ."

ಮಂಜುಳಾ ಕೊಂಡಿದ್ದ ಸಾಮಾನುಗಳನ್ನೆಲ್ಲಾ ಕಟ್ಟಿಕೊಟ್ಟು ಅಂಗಡಿ ಯವನು ಹಣ ಪಡೆದ.

" ಬಾ ಇಲ್ಲೇ ಇಂಡಿಯಾ ಕಾಫೀ ಬಾರ್ ಇದೆ – ಅಲ್ಲಿ ಕುಳಿತು ಕೊಂಡು ಮಾತನಾಡೋಣ."

ಎಂದು ಮಂಜುಳನನ್ನು ಕರೆದುಕೊಂಡು ಕಾಫೀ ಬಾರ್‌ಗೆ ಹೋದ.

" ನೀವು ಇಲ್ಲಿದ್ದೀರಿ ಎಂದು ಗೊತ್ತಿದ್ದರೂ ನಿಮ್ಮ ನೆನಪೇ ಬರಲಿಲ್ಲ ಕುಮಾರರೇ."

" ಬಡವನ ನೆನಪು ಹ್ಯಾಗಮ್ಮ ಬರಬೇಕು· ನೀನು ಬಂದದ್ದೇನು ?"

ಮಂಜುಳಾ ತನ್ನ ಕಥೆಯನ್ನು ಸಂಕ್ಷೇಪವಾಗಿ ಕುಮಾರನಿಗೆ ವರ್ಣಿಸಿ ದಳು.

" ಪಾಟೀಲ ಶುದ್ಧ ದಗಲ್ಬಾಜಿ – ಅವನನ್ನು ನಂಬಿಕೊಂಡು ನೀನು ಬರವುದೇ ? ಅಣ್ಣಯ್ಯ ಈಗೆಲ್ಲಿ "

" ಸೋಮನಾಥ ಸ್ಟುಡಿಯೋಕ್ಕೆ ಹೋಗಿದ್ದಾರೆ. ಎಕ್ಸಾಸ್ಟ್ರ ಕೆಲಸ ಮಾಡುತ್ತಿದ್ದಾರೆ-"

"ಸಾಯುವವರೆಗೆ ಇಲ್ಲಿ ಎಕ್ಸ್ಟ್ರಾ ಆಗಿರೋದೆ. ಗುಜರಾತಿಗಳೂ, ಮರಾಟಿಗರೂ ನಮಗೆ ಅವಕಾಶ ಕೊಡುತ್ತಾರೆಯೇ?"

"ನೀವೇನು ಮಾಡುತ್ತಿರುವಿರಿ ಕುಮಾರರೇ?"

"ನೃತ್ಯಶಾಲೆ ಇಟ್ಟುಕೊಂಡಿದ್ದೀನಮ್ಮ – ಎರಡು ವಾರದ ಹಿಂದಿನ 'ಇಲ್ಲಸ್ಟ್ರೇಟೆಡ್ ವೀಕ್ಲಿ' (Illustrated Weekly) ನೋಡಲಿಲ್ಲವೇನು. ನನ್ನ, ನನ್ನ ಶಿಷ್ಯರ ಶಿಷ್ಯೆಯರ ಚಿತ್ರಗಳು ಬಂದಿವೆ."

"ಯಕ್ಷಿಣಿ ಮಾಡಿದರೇನು?"

"ಏನೂ ಇಲ್ಲ. ಇಲ್ಲಿಂದ ಒಂದು ಫಿಲಂ ಕಂಪೆನಿ ಔಟ್‌ಡೋರ್ ಷೂಟಿಂಗಿಗೆ ಬೆಂಗಳೂರಿಗೆ ಬಂದಿತ್ತು. ಅದರ ಡೈರೆಕ್ಟರು – ಕನ್ನಯ್ಯ ಲಾಲ್ ವೋರಾ ಅವರ ಪರಿಚಯವಾಯಿತು. ನನ್ನ ನೃತ್ಯಶಾಲೆಗೆ ಅವರನ್ನೂ ಅವರ ಬಳಗವನ್ನೂ ಕರೆದುಕೊಂಡು ಹೋಗಿ ಪ್ರದರ್ಶನ ತೋರಿಸಿದೆ. ವೋರಾ ಸಂತೋಷಪಟ್ಟುಕೊಂಡು ತಮ್ಮ ಇಬ್ಬರು ನಟಿಯರಿಗೆ ನಾನು ಶಿಕ್ಷಣ ಕೊಡಲು ಗೊತ್ತು ಮಾಡಿದರು. ಅವರ ಕೆಲಸ ಮುಗಿಯಿತು – ಊರಿಗೆ ಹೊರಡಲು ಸಿದ್ಧರಾದರು. ಜತೆಯಲ್ಲಿ ನನ್ನೂ ಕರೆದುಕೊಂಡು ಬಂದರು. ಅವರ ಸಹಾಯ ತೆಗೆದುಕೊಂಡು ನಾನು ನೃತ್ಯಶಾಲೆ ಆರಂಭಿಸಿದೆ."

"ನಿಮ್ಮ ನೃತ್ಯಶಾಲೆ ಎಲ್ಲಿದೆ?"

"ಮಾತುಂಗಾದಲ್ಲಿ ಮೈಸೂರು ಅಸೋಸಿಯೇಷನ್ನಿನ ಸಮೀಪದಲ್ಲಿಯೇ– ಯಾರನ್ನು ಕೇಳಿದರೂ ಹೇಳುತ್ತಾರೆ."

"ಇದೇನು ಇಲ್ಲಿ ಬಂದಿದ್ದಿರಿ?"

"ಫೋರ್ಟ್‌ನಲ್ಲಿ ಒಂದು ಪಾಠ ಇಟ್ಟುಕೊಂಡಿದ್ದೇನೆ. ತಿಂಗಳಿಗೆ ನೂರೈವತ್ತು ಕೊಡುತ್ತಾರೆ . . . ನೀನು ಬಂದದ್ದು ಒಳ್ಳೆಯದಾಯಿತಮ್ಮ."

"ಏಕೆ?"

"ನನಗೂ ಸಹಾಯ ಬೇಕಾಗಿತ್ತು. ಹಾಗೂ ಹೀಗೂ ಒಬ್ಬ ಮೃದಂಗದವನನ್ನು ದೊರಕಿಸಿದ್ದೇನೆ. ಪಕ್ಕ ವಾದ್ಯಕ್ಕೆ ವೀಣೆ ನುಡಿಸುವವರು ಬೇಕಾಗಿತ್ತು - ನೀನು ಯಾರನ್ನೋ ಗಂಟು ಹಾಕಿಕೊಂಡಿದ್ದೀಯಲ್ಲ!"

"ಇಲ್ಲಿನ ಸಂದರ್ಭ ನನಗೇನು ಗೊತ್ತು."

"ಅದು ಸರಿಯೆನ್ನು."

" ನಿಮ್ಮ ಶಾಲೆಗೆ ನಾನು ಬರುವುದು ಹೇಗೆ ?"

" ಏನೂ ಕಷ್ಟವಿಲ್ಲ. ಬಸ್‌ನಲ್ಲಿ ಕುಳಿತುಕೊಂಡು ' ಕಿಂಗ್ಸ್ ಸರ್ಕಲ್ ' ನಲ್ಲಿ ಇಳಿದು ಬಿಟ್ಟರೆ, ಚೋಟು ದೂರದಲ್ಲಿ ನನ್ನ ಶಾಲೆಯಿದೆ. ನಿಮ್ಮ ಹೊಟೇಲಿನಲ್ಲಿ ಫೋನ್ ಇದೆಯಲ್ಲವೇ ?"

" ಇದೆ."

" ನಾನು ಫೋನ್ ಮಾಡುತ್ತೇನೆ. ನಾನೇ ಬಂದರೆ ನಿನ್ನ ಸ್ನೇಹಿತ ಕೋಪಮಾಡಿಕೊಳ್ಳುತ್ತಾನೇನೋ ?"

" ನೋಡಿ – ಒಂದೂ ಸರಿಯಾಗಿ ತಿಳಿದುಕೊಳ್ಳದೆ ನನ್ನ ಇಲ್ಲೀಗೆ ಕರ್ರ್ಕೊಂಡು ಬಂದು ಗೋಳುಗುಟ್ಟಿಸುತ್ತಿರುವುದು . . . ನನಗೆ ನಿಮ್ಮ ಡೈರೆಕ್ಟರ ಗುರುತು ಮಾಡಿಸಿಕೊಡುವುದಿಲ್ಲವೇನು ?"

" ನೀನೂ ಸಿನೀಮಾ ಸ್ಟಾರ್ ಆಗಬೇಕೇನು ?"

" ಯಾಕಾಗಬಾರದು - ನಾಟಕದಲ್ಲಿ ಪಾರ್ಟು ಮಾಡಿದ್ದಾಯಿತು. ಒಳ್ಳೆಯ ಹೆಸರೂ ಮಾಡಿಕೊಂಡೆ ಕುಮಾರರೇ. ಹಾಗೇ ಸಿನೀಮಾದಲ್ಲಿ ಪಾರ್ಟು ಮಾಡಿ ಹೆಸರೂ ಸಂಪಾದಿಸಬಲ್ಲೆ."

" ಇಲ್ಲಿಯವರು ಹೊರಗಿನವರಿಗೆ ಅವಕಾಶ ಕೊಡುವುದಿಲ್ಲಮ್ಮ."

" ಡೈರೆಕ್ಟರು ನೀವು ಹೇಳಿದ ಮಾತು ಕೇಳುವಾಗಲೂ ಸಾಧ್ಯವಿಲ್ಲವೇ?"

" ಪ್ರಯತ್ನ ಮಾಡಿ ನೋಡುತ್ತೇನೆ. ನಾನು ತಿರುಗಿ ನಿನ್ನ ನೋಡುವುದು ಹೇಗೆ ?"

" ಹೊಟೇಲಿಗೆ ಫೋನ್ ಮಾಡುತ್ತೇನೆಂದು ಹೇಳಿದರಲ್ಲ. ಫೋನ್ ಮಾಡಿ - ಅವರಿಲ್ಲದಿದ್ದರೆ ಅಲ್ಲಿಗೇ ಬನ್ನಿ."

" ಇನ್ನೇನು ಊರಿನ ಸಮಾಚಾರ - ಅಮ್ಮ ಸುಧಾ ಚೆನ್ನಾಗಿದ್ದಾರೆಯೋ ?"

" ಇದ್ದಾರೆ. ಅವರೂ ಕಂಪೆನಿ ಬಿಟ್ಟರು."

" ಎಲ್ಲೀಗೆ ಹೋದರು."

" ಬೆಂಗಳೂರಿಗೇ ಹೋಗಿರಬೇಕು. ನಿಮ್ಮ ಬೆಂಗಳೂರು ನೃತ್ಯಶಾಲೆ ಮುಚ್ಚಿಬಿಟ್ಟರಂತೆ !"

" ಮುಚ್ಚಿದ ಹಾಗೇ ! ನಾನೇ ಇಲ್ಲಿಗೆ ಬಂದುಬಿಟ್ಟೆನಲ್ಲಾ !"

" ಕುಂತಳಾ ನಡೆಸಬಹುದಾಗಿತ್ತು."

" ಬಸುರಿ - ಅವಳೇನು ನಡೆಸುತ್ತಾಳಮ್ಮ . . . ಇನ್ನು ನಾನು ಹೊರಡಬೇಕು. ಪಾತಕ್ಕೆ ಹೊತ್ತಾಗುತ್ತದೆ."

ಎಂದು ಹೇಳಿ ಕುಮಾರ್ ಹೊರಟ. ಮಂಜುಳಾ ತನ್ನ ಹೊಟೇಲಿಗೆ ಬಂದಳು.

ಸಂಜೆಗೆ ಬಂದ ಅಣ್ಣಯ್ಯ ಹತ್ತು ರೂಪಾಯಿ ನೋಟು ಮಂಜುಳನ ಮುಂದೆ ಹಿಡಿದ. ಅನಾದರ ತೋರಿಸುತ್ತಾ ಅವಳು

" ಹೀಗೆ ದಿವಸಕ್ಕೆ ಹತ್ತು ರೂಪಾಯಿ ತಂದರೆ ನಾವು ಪೂರೈಸಿದ ಹಾಗೇ ಆಯ್ತು. ಊರಿನಿಂದ ತಂದ ದುಡ್ಡೆಲ್ಲಾ ಹೊಟೇಲಿಗೆ ಕೊಟ್ಟು ಭಿಕ್ಷೆಯೆತ್ತಿ ರೈಲು ಚಾರ್ಜು ಮಾಡಿಕೊಳ್ಳಬೇಕಾಗುತ್ತದೆ."

" ನನ್ನ ಕಳ್ಳತನ ಮಾಡೂಂತಿಯೇನು ?"

" ಹತ್ತು ಕಡೆ ಹುಡುಕಿ ನೋಡಬೇಕು."

" ನೀನೂ ಬಂದಿದ್ದರೆ ಇನ್ನೂ ಹತ್ತು ರೂಪಾಯಿ ಸಿಕ್ಕುತ್ತಿತ್ತು."

" ಎಕ್ಸ್ಟ್ರಾ ಕೆಲಸ ಮಾಡುವುದಕ್ಕೆ ನನಗಿಷ್ಟವಿಲ್ಲ."

" ನೀನು ಮಹಾರಾಣಿ - ನಾನು ದಿನಗೂಲಿ."

" ಕೂಲಿ ಮಾಡಿ ಎಂದು ನಾನು ಹೇಳಲಿಲ್ಲವಲ್ಲ."

" ಕಳ್ಳತನ ಮಾಡು ಎಂದು ಹೇಳಿದೆಯೇನೋ !"

" ಕಳ್ಳತನವಾದರೂ ಮಾಡಿಕೊಳ್ಳಿ - ಏನಾದರೂ ಮಾಡಿಕೊಳ್ಳಿ - ನನಗೇನು ?"

ಎಂದು ಮುಖ ಮರೆ ಮಾಡಿಕೊಂಡು ಮಲಗಿದಳು.

ಗುರುವಾರ, ಶುಕ್ರವಾರ ಅಣ್ಣಯ್ಯ ಬರಿಗೈಯಲ್ಲಿ ಬಂದ. ಮಂಜುಳಾ ಅವನನ್ನು ಮಾತನಾಡಿಸುವುದಕ್ಕೂ ಹೋಗಲಿಲ್ಲ.

ಶನಿವಾರ ಯಥಾವಿಧಿಯುಂತೆ ಸ್ಟೂಡಿಯೋಕ್ಕೆ ಅಣ್ಣಯ್ಯ ಹೋದ. ಮಧ್ಯಾಹ್ನ ಫೋನ್ ಮಾಡಿ ಕುಮಾರ ಮಂಜುಳನ ರೂಮಿಗೆ ಬಂದ.

" ಇನ್ನು ನನಗೆ ಪೂರೈಸುವುದಕ್ಕಾಗುವುದಿಲ್ಲ ಕುಮಾರರೇ ?"

" ಏನಮ್ಮ - ಏನಾಯಿತು ?"

" ಇವತ್ತಿನವರೆಗೆ ಹೊಟೇಲ್ ಬಿಲ್ಲು ನೂರ ತೊಂಭತ್ತೈದು ರೂಪಾಯಿ ಆಗಿದೆ - ಅವರು ಸಂಪಾದಿಸಿ ತಂದಿರುವುದು ಮೂವತ್ತು ರೂಪಾಯಿ."

" ನೀನು ಬಂದು ನನ್ನ ರೂಮಿನಲ್ಲಿರಬಹುದು. ಮೈಸೂರು ಅಸೋಸಿಯೇಷನ್ನಿನಿಂದ ಊಟ ತರಿಸುತ್ತಾ ಇದ್ದೇನೆ. ಒಂದೂಟ ಇಬ್ಬರಿಗೂ ಆಗುತ್ತದೆ."

" ಇವರನ್ನೇನು ಮಾಡಲಿ ?"

" ಅವನ ಪಾಡು ಅವನು ನೋಡಿಕೊಳ್ಳಲಿ."

" ಈ ವಿಷಯ ಇವತ್ತು ಇತ್ಯರ್ಥ ಮಾಡಿಬಿಡುತ್ತೇನೆ."

" ನಿನ್ನ ವಿಷಯ ಡೈರೆಕ್ಟರ್ ಹತ್ತಿರ ಹೇಳಿದ್ದೀನಮ್ಮ."

" ಏನಂದರು ? "

" ನೋಡಬೇಕೆಂದರು,"

" ನಾಳೆ ಹೋಗೋಣ."

"ನಾಳೆ ಬೇಡ-ನಾಡಿದ್ದು ಅವರನ್ನು ನನ್ನ ರೂಮಿಗೇ ಬರಮಾಡುತ್ತೇನೆ."

ಎಂದು ಹೇಳಿದ.

ಸಂಜೆಗೆ ಅಣ್ಣಯ್ಯ ಬಂದಕೂಡಲೆ ಅವನಿಗೂ ಮಂಜುಳನಿಗೂ ವಿಪರೀತ ಜಗಳವಾಯಿತು.

" ನನ್ನ ದಾರಿ ನಾನು ನೋಡಿಕೊಳ್ಳುತ್ತೇನೆ " ಎಂದು ಹೇಳಿದಳು.

" ಹಾಳಾಗಿ ಹೋಗು " ಎಂದು ಕಟುವಾಗಿ ನುಡಿದ.

ಬೆಳಿಗ್ಗೆ ಮಂಜುಳಾ ಎದ್ದು ನೋಡುವಲ್ಲಿ ಅಣ್ಣಯ್ಯ ಇರಲಿಲ್ಲ. ' ಎಲ್ಲೋ ಹೋಗಿರಬಹುದು - ಬರುತ್ತಾರೆ ' ಎಂದುಕೊಂಡು ಕಾದಳು. ಅವನು ಸುಳಿಯಲಿಲ್ಲ.

ಮಂಜುಳನ ಎದೆ ಧಸಕ್ಕೆಂದಿತು. ಮನಸ್ಸಿಗೇನೋ ಅನುಮಾನವಾಗಿ ಟ್ರಂಕ್ ತೆಗೆದು ನೋಡಿದಳು. ಒಡವೆಗಳು, ನಗದು ಹಣ ಮಾಯವಾಗಿತ್ತು. ಭಯದಿಂದ ಮೈ ಕಂಪಿಸಿತು.

ಎದ್ದವಳೇ ಹುಚ್ಚಳಂತೆ ಬಸ್ ನಿಲ್ದಾಣಕ್ಕೆ ಓಡಿ ' ಕಿಂಗ್ಸ್ ಸರ್ಕಲ್ ' ಬಸ್ ಹತ್ತಿದಳು. ಕಿಂಗ್ಸ್ ಸರ್ಕಲ್ಲಿನಲ್ಲಿಳಿದು ಕುಮಾರನ ನೃತ್ಯಶಾಲೆ ಕೇಳಿಕೊಂಡು ಅಲ್ಲಿಗೆ ಬಂದಳು.

ಮಂಜುಳನ ಅವಸ್ಥೆ ನೋಡಿ ಕುಮಾರನಿಗೆ ಗಾಬರಿಯಾಯಿತು.

" ಏನಮ್ಮ ಏನಾಯಿತು " ಎಂದು ಕೇಳಿದ.

" ಆಗುವುದೇನು ಅನರ್ಥ. ಪಾಪಿ ಮುಂಡೇ ಮಗ ಎಲ್ಲಾ ಹೊತ್ತು ಕೊಂಡು ಓಡಿ ಹೋದ. ನನ್ನ ಜತೆ ಬೇಗ ಬನ್ನಿ ಕುಮಾರರೇ " ಎಂದಳು.

ಕುಮಾರ ತಡಮಾಡದೆ ಅವಳ ಜತೆ ಹೊರಟು ಹೊಟೇಲಿಗೆ ಬಂದ. ಟ್ರಂಕು ತೆಗೆದು ತೋರಿಸಿದಳು.

" ಈಗೇನು ಮಾಡಲಿ ಕುಮಾರರೇ. ಹೊಟೇಲ್ ಬಿಲ್ ನನ್ನ ತಲೆಯ ಮೇಲೆ ಬಿದ್ದಿದೆ."

" ಬೇರೆ ದುಡ್ಡು ಯಾವುದೂ ಇಲ್ಲವೇ ? "

" ಕೈಯಲ್ಲಿ ಎಂಟು, ಒಂಭತ್ತು ರೂಪಾಯಿ ಚಿಲ್ಲರೆ ಹಣವಿದೆ."

" ನೋಡೋಣ - ಸಂಜೆಯ ವೇಳೆಗೆ ಅವನು ಬರಬಹುದು."

" ಬರುವುದಕ್ಕೆ ಇನ್ನು ಮುಖವೆಲ್ಲಿದೆ ಕುಮಾರರೇ - ಕಳ್ಳ ಸೂಳೇಮಗ."

" ಪೋಲೀಸ್ ಕಂಪ್ಲೇಂಟ್ ಕೊಡೋಣ."

" ಸಾರ್ಥಕವೇನು ? ಹಣ ಹೋದರೂ ಚಿಂತಿಯಿಲ್ಲ – ಪೋಲೀಸಿನವರ ಕಾಟ ಬೇಡ."

ಎಂದು ಹೇಳುತ್ತಾ ಕುಳಿತಳು. ಕುಮಾರ ಅವಳನ್ನು ಸಮಾಧಾನ ಮಾಡುತ್ತಾ

ಸಾಮಾನು ಕಟ್ಟಿಕೋ ನನ್ನ ನೃತ್ಯಶಾಲೆಗೇ ಹೋಗೋಣ."

" ಹೊಟೇಲ್ ಬಿಲ್ ?"

" ನಾನು ಕೊಡುತ್ತೇನೆ."

ನೃತ್ಯಶಾಲೆಗೆ ಬಂದಮೇಲೆ ಮಂಜುಳನ ದುಃಖ ಇಮ್ಮಡಿಸಿತು.

" ಏನೇನು ಹೋಯಿತಮ್ಮ " ಎಂದು ಕುಮಾರ ಕೇಳಿದ.

" ಸಾವಿರದ ಏಳುನೂರು ರೂಪಾಯಿ ನಗದು ಹಣ – ನನ್ನ ಮಾವಿನ ಕಾಯಿ ಸರ."

" ಎಂಥ ನೀಚ ನಿನ್ನ ಹಣ ಕದ್ದು ನಿನ್ನ ಹೀಗೆ ಕಾಡುಪಾಲು ಮಾಡಿ ಓಡಿ ಹೋಗುವುದೇ ?"

" ಕೈಯಲ್ಲಿ ಒಂದು ಜತೆ ಬಳೆಯಿದೆ. ತೆಗೆದುಕೊಡುತ್ತೇನೆ. ಮಾರಿ

ನಿಮ್ಮ ದುಡ್ಡು ನೀವು ತೆಗೆದುಕೊಳ್ಳಿ ಕುಮಾರರೇ – ಊರಿಗೆ ಒಂದು ಟಿಕೆಟ್ ತೆಗೆದುಕೊಟ್ಟು ನನ್ನ ಕಳಿಸಿಬಿಡಿ."

"ಹೋಗುವುದಕ್ಕೆ ಏನೂ ಅವಸರವಿಲ್ಲ. ಸಮಾಧಾನ ತಂದುಕೋ ಮಂಜುಳ. ನನ್ನ ಹಣದ ವಿಷಯ ನೀನು ಯೋಚಿಸಬೇಕಾಗಿಲ್ಲ."

ಎಂದು ಕುಮಾರ ಧೈರ್ಯ ಹೇಳಿದ.

ಅಣ್ಣಯ್ಯ ಮಾಡಿ ಹೋದ ಅನ್ಯಾಯ ಮರೆಯಲು ಮಂಜುಳನಿಗೆ ಬಹಳ ದಿನ ಹಿಡಿಯಲಿಲ್ಲ. ಅವಳ ದುಃಖ ಮರೆಸುವುದಕ್ಕೆ ಕುಮಾರ ಶಕ್ತಿಮಿಾರಿ ಪ್ರಯತ್ನಿಸಿದ್ದ.

ಕುಮಾರನ ಶಾಲೆಯಲ್ಲಿ ಮಂಜುಳ ವೀಣಾ ವಿದುಷಿಯಾದಳು. ಕುಮಾರ ಶಿಕ್ಷಣ ಕೊಡುತ್ತಿದ್ದಾಗ ಹಿಮ್ಮೇಳದಲ್ಲಿ ನುಡಿಸುವ ಕೆಲಸವಲ್ಲದೆ ಅವಳಿಗೆ ಒಂದೆರಡು ವೀಣೆಯ ಪಾಠಗಳೂ ದೊರಕಿದವು.

ಕಳೆದುಹೋಗಿದ್ದ ಹಣ, ಮಾವಿನಕಾಯಿ ಸರ ಹಿಂದಕ್ಕೆ ಬಾರದಿದ್ದರೂ ಹಣ ಸರ ದೊರಕಿಸಿಕೊಳ್ಳುವ ಮಾರ್ಗ ಕುಮಾರ ಮಂಜುಳನಿಗೆ ಹೇಳಿಕೊಟ್ಟಿದ್ದ.

ಫಿಲ್ಮ್ ಡೈರೆಕ್ಟರ್ ಕನ್ನಯ್ಯಲಾಲ್ ವೊರಾನ ಗೆಳೆತನದ ಲಾಭ ಮಂಜುಳನಿಗೆ ಸಿಕ್ಕಿದ್ದುದಲ್ಲದೆ, ಕುಮಾರನ ಪ್ರಯತ್ನದಿಂದ ಇತರರ ಗೆಳೆತನವೂ ಮಂಜುಳನಿಗೆ ಸಿಕ್ಕಿ ಮುಂಬಯಿಯ ಶೃಂಗಾರ ಸ್ಥಾನಗಳ ಪರಿಚಯ ಅವಳಿಗೆ ಚೆನ್ನಾಗಿ ಆಯಿತು.

## ೨೩

'ಪತಿತ ಪರಿವರ್ತನ' ನಾಟಕದ ಸಿದ್ಧತೆ ಮುಗಿಯುತ್ತ ಬಂದಿತ್ತು. ರಾಜಶೇಖರ ನಾಟಕದ ದಿಗ್ದರ್ಶಕ ; ಪರಮೇಶ್ವರಯ್ಯ ವ್ಯವಸ್ಥಾಪಕ; ರಂಗಣ್ಣ ಮೇಲ್ವಿಚಾರಣೆ, ದೀಪ - ಶಬ್ದನಿಯೋಜನೆ.

ನಟ, ನಟಿಯರನ್ನು ಶೇಖರಿಸುವ ಕೆಲಸದಲ್ಲಿ ರಾಜಶೇಖರ, ಪರಮೇಶ್ವರಯ್ಯ ಇಬ್ಬರೂ ವಿಶೇಷ ಎಚ್ಚರಿಕೆ ತೆಗೆದು ಕೊಂಡರು. ಬೇಲೂರಯ್ಯ,

ಶೇಷಗಿರಿ, ಚನ್ನಬಸವ, ಅನಂತಾಚಾರಿ ಸಾಕಷ್ಟು ಅನುಭವ ಪಡೆದಿದ್ದ ನಟರಾಗಿದ್ದರು. ಹಲವು ಕಂಪೆನಿಗಳನ್ನು ಹೊಕ್ಕೂ ಬಂದಿದ್ದರು; ಪುಟ್ಟಣ್ಣನಿಗೂ ಕಂಪೆನಿ ಅನುಭವಿದ್ದರೂ ಅವನು 'ಹಳೇಪುಲಿ'ಯಾಗಿರಲಿಲ್ಲ. ಶೇಷಗಿರಿ ಹೆಂಡತಿ ಮಾಲತಿ ಅವನ ಜತೆ ಪಾರ್ಟು ಮಾಡುತ್ತಿದ್ದಳು. ರಂಗನಾಯಕಮ್ಮ ಅವಳ ಮಗಳು ಸುಶೀಲಾ ನಾಟಕದ ಕಂಪೆನಿಗಳ ಅನುಭವವುಳ್ಳವರಾಗಿದ್ದರು. ಸದ್ಯಕ್ಕೆ ಹಾರ್ಮೋನಿಯಂಗೆ ಗಾರ್ಲಯ್ಯ, ಪಿಟೀಲಿಗೆ ಸುಬ್ಬಕೃಷ್ಣ, ಮೃದಂಗಕ್ಕೆ ವೆಂಕಟಸ್ವಾಮಿ ಸಾಕೆಂದು ನಿರ್ಧರಿಸಲಾಯಿತು.

ಕಂಪೆನಿಯ ವ್ಯವಸ್ಥೆಯನ್ನೂ 'ಕರ್ನಾಟಕ ನವೋದಯ ನಾಟ್ಯ ಮಂದಿರ'ವೆನ್ನುವ ಹೆಸರಿಗೆ ತಕ್ಕಂತೆ ನವೀನವಾಗಿಯೇ ರಾಜಶೇಖರ ನಿಯೋಜಿಸಿದ. ನಟ, ನಟಿಯರ ಶೇಖರಣೆಯಾದ ಮೇಲೆ ಒಂದು ದಿನ ರಾಜಶೇಖರ ಅವರಿಗೆ ಹೇಳಿದ.

"ಸದ್ಯಕ್ಕೆ ಎಲ್ಲರೂ ಮನೆಖರ್ಚಿಗೆ ಐವತ್ತು ರೂಪಾಯಿ ತೆಗೆದುಕೊಳ್ಳಬಹುದು. ಇನ್ನು ಎರಡು ತಿಂಗಳೊಳಗಾಗಿ ನಾಟಕ ಪ್ರದರ್ಶನಕ್ಕೆ ಸಿದ್ಧವಾಗುತ್ತದೆ. ನಾಟಕಕ್ಕೆ ಈಗ ಹಾಕಿರುವ ಮೂಲಧನವನ್ನು ಸಾಲವಾಗಿ ಪರಿಗಣಿಸಲಾಗುತ್ತದೆ. ತಿಂಗಳ ಲೆಕ್ಕ ತೆಗೆದಾಗ ಅದನ್ನು ಕಡಿಮೆಮಾಡಿ ಉಳಿದ ಹಣದಲ್ಲಿ ನಾಲ್ಕನೆಯ ಒಂದು ಭಾಗವನ್ನು ಆಪದ್ಧನವೆಂದು ಕಾಯ್ದಿಡಲಾಗುತ್ತದೆ. ಉಳಿದ ಹಣ ಎಲ್ಲರಿಗೂ ಸಮವಾಗಿ ಹಂಚಲ್ಪಡುತ್ತದೆ. ಈ ವ್ಯವಸ್ಥೆ ನಿಮಗೆಲ್ಲಾ ಒಪ್ಪಿಗೆಯೋ ?"

"ಒಪ್ಪಿಗೆ ಸ್ವಾಮಿ" ಎಂದರು.

"ಕಂಪೆನಿ ನಟರು ಕೀಳು ಹವ್ಯಾಸಗಳಿಗೆ ಬೀಳದೆ, ದುಷ್ಟ ಜನಗಳ ಸಹವಾಸ ಮಾಡದೆ ಇರಬೇಕಾದುದೂ, ಸ್ವಚ್ಛ ವಸ್ತ್ರಗಳನ್ನು ಹಾಕಿಕೊಂಡು ಶುಚಿಯಾಗಿರಬೇಕಾದುದೂ ಅವಶ್ಯಕ. ನಟರ ನಡತೆಯಲ್ಲಿ ಏನಾದರೂ ಕುಂದು ಕೊರತೆ ಕಂಡು ಬಂದರೆ ಅವರನ್ನು ಕೂಡಲೇ ಕಂಪೆನಿಯಿಂದ ಕಳಿಸಲಾಗುತ್ತದೆ."

"ಆಗಬಹುದು."

"ದೊಡ್ಡವರು ಸಣ್ಣವರು ಪ್ರಶ್ನೆ ನಮ್ಮ ಕಂಪೆನಿಯಲ್ಲಿ ಹೇಳಬಾರದು. ನಾನೂ ನೀವೂ ಒಂದು. ನಾವಿಬ್ಬರೂ ಒಂದು ದೊಡ್ಡ ಕೆಲಸಮಾಡಲು

ಹೊರಟಿದ್ದೇವೆ. ಪರಸ್ಪರ ವಿಶ್ವಾಸ ಗೌರವ ಮುಖ್ಯ. ಈ ಕಂಪೆನಿ ನಾನು ಮಾಡಿರುವುದು ಹಣ ಸಂಪಾದಿಸುವುದಕ್ಕಲ್ಲ. ಕಲಾದೇವಿಯ ಮಂದಿರವನ್ನು ನಾವೇ ಪಾಪಕೂಪವನ್ನಾಗಿ ಮಾಡಿದ್ದೇವೆ. ನಾಟಕ, ನಾಟಕದವರು ಎಂದರೆ ಜನ ಅಸಹ್ಯಪಟ್ಟುಕೊಳ್ಳುತ್ತಾರೆ. ಈ ಹೊಲಸನ್ನು ತೊಳೆಯಬೇಕಾದುದು ನಮ್ಮ ಧರ್ಮ. ಪ್ರೇಕ್ಷಕರನ್ನು ರಮಿಸಿ ಹಣ ಸೆಳೆಯುವುದಲ್ಲ ನಾಟಕದ ಉದ್ದೇಶ. ಅವರಿಗೆ ಬೇಕಾಗಲಿ, ಬೇಡವಾಗಲಿ ಜೀವನ ವಿಮರ್ಶೆ ಮಾಡ ಬೇಕಾದುದು ನಾಟಕದ ಕೆಲಸ - ನಮ್ಮ ಕಂಪೆನಿಯಲ್ಲಿ ನಿಮಗೆ ಕೀರ್ತಿ ಬರ ಲಾರದು - ಹಣ ಬರಲಾರದು - ಹೂವಿನ ಪೂಜೆ ದೊರೆಯಲಾರದು. ನಾವು ನಾಲ್ಕಾರು ನಾಟಕಗಳಾಡುವಷ್ಟರಲ್ಲಿ ಕಲ್ಲಿನ ಮಳೆ ಬಿದ್ದರೆ ನಾನು ಆಶ್ಚರ್ಯ ಪಡುವುದಿಲ್ಲ. ಈ ಸ್ಥಿತಿಗೆ ಹೊಂದಿಕೊಳ್ಳಲಾಗದವರು ಈಗಲೇ ಹೋಗ ಬಹುದು. ಕಷ್ಟ, ಸುಖ ಎರಡನ್ನೂ ನನ್ನ ಜತೆ ಅನುಭವಿಸಲು ಸಿದ್ಧವಾಗಿರು ವವರು ಮಾತ್ರ ಉಳಿಯಬಹುದು."

ಕಂಪೆನಿ ಬಿಟ್ಟು ಹೋಗುವುದಕ್ಕೆ ಯಾರೂ ಒಪ್ಪಲಿಲ್ಲ.

ಪ್ರತಿ ದಿನವೂ ಹನ್ನೆರಡರಿಂದ ಐದರವರೆಗೆ ರಿಹರ್ಸಲ್ ನಡೆಯುತ್ತಿತ್ತು. ಪರಮೇಶ್ವರಯ್ಯ, ರಾಜಶೇಖರ ಇಬ್ಬರೂ ನಟರಿಗೆ ಶಿಕ್ಷಣ ಕೊಡುತ್ತಿದ್ದರು.

ನಾಲ್ಕು ಗಂಟೆಯ ವೇಳೆಗೆ ಸುಧಾ ತಿಂಡಿ ಕಾಫಿ ಮಾಡಿ ತಂದು ಎಲ್ಲ ರಿಗೂ ಹಂಚುತ್ತಿದ್ದಳು.

ರಿಹರ್ಸಲ್ ಜತೆಯಲ್ಲಿ ನಟನಟಿಯರ ಆತಿಥ್ಯ ಮಾಡುವ ಜವಾಬ್ದಾ ರಿಯೂ ಸುಧೆಯ ಮೇಲೆ ಬಿದ್ದುದನ್ನು ಕಂಡು ಸೌಭಾಗ್ಯಮ್ಮ ಒಬ್ಬ ಅಡಿಗೆ ಯವಳನ್ನು ಗೊತ್ತುಮಾಡಿ ಕಳಿಸಿದಳು. ಅಡಿಗೆ ಕೆಲಸ ಶೇಷಮ್ಮನಿಗೆ ವಹಿಸಿ ಸುಧಾ ಪೂರ್ಣವಾಗಿ ತನ್ನ ಪಾತ್ರದ ಕಡೆ ಲಕ್ಷ್ಯವಿಡಲು ಸಾಧ್ಯವಾಯಿತು.

'ಪತಿತ ಪರಿವರ್ತನ' ನಾಟಕಕ್ಕೆ ರಾಜಶೇಖರ ವಿಶೇಷ ತಂತ್ರವನ್ನು ಅಳವಡಿಸಿದ್ದ. ನಾಟಕದಲ್ಲಿ ನೂರೆಂಟು ದೃಶ್ಯಗಳ ಗಲಭೆಯಿರಲಿಲ್ಲ – ನಾಲ್ಕೇ ಅಂಕಗಳು. ನಾಲ್ಕು ದೃಶ್ಯಗಳಲ್ಲಿ ಇಡಿಯ ಕಥಾಭಾಗ ಅಡಕವಾ ಗಿತ್ತು. ಕಥಾ ನಿಯೋಜನೆಯಲ್ಲಿಯೂ ವೈಶಿಷ್ಟ್ಯವಿತ್ತು. ನಾಯಕ, ನಾಯಕಿ ಇಬ್ಬರ ಆಧಾರದ ಮೇಲೆ ಕಥೆಯನ್ನು ಸಾಗಿಸಿಕೊಂಡು ಹೋಗುವ ಸಂಪ್ರದಾಯ ಮಾರ್ಗವನ್ನು ಬಿಟ್ಟು ಎಲ್ಲ ಪಾತ್ರಗಳಿಗೂ ಸಮವಾದ ಪ್ರಾಧಾನ್ಯ

ಕೊಡಲ್ಪಟ್ಟಿತು. ಸುಧಾ ಅಭಿನಯಿಸುತ್ತಿದ್ದ ಲಕ್ಷ್ಮೀ ಪಾತ್ರದ ಸುತ್ತಲೂ ಕಥೆ ಹೆಣೆಯಲ್ಪಟ್ಟಿದ್ದರೂ ಉಳಿದೆಲ್ಲ ಪಾತ್ರಗಳಿಗೂ ಪ್ರಾಧಾನ್ಯವಿತ್ತು.

ಪ್ರದರ್ಶನ ಆರಂಭಿಸುವುದಕ್ಕೆ ಥಿಯೇಟರ್ ಗೊತ್ತು ಮಾಡಿ, ಪ್ರಚಾರ ಕೆಲಸ (Publicity) ಆರಂಭಿಸುವುದಷ್ಟೇ ಬಾಕಿಯಿತ್ತು.

"ಪ್ರಚಾರ ಕೆಲಸ ಯೋಚನೆಯಿಲ್ಲ ರಾಜಶೇಖರ. ವೆಂಕೋಬರಾಯರಿಗೆ ಒಪ್ಪಿಸಿದರೆ ಅವರು ಎಲ್ಲವನ್ನೂ ಸುಸೂತ್ರವಾಗಿ ನಿರ್ವಹಿಸುತ್ತಾರೆ."

"ಥಿಯೇಟರು !"

"ಶ್ರೀ ಥಿಯೇಟರನ್ನೇ ನಾವು ಗೊತ್ತುಮಾಡಿ ಕೊಳ್ಳಬೇಕು."

"ಹುಬ್ಬಳ್ಳಿಯಲ್ಲಿ ಹಿರಣ್ಣಯ್ಯನವರು ಇದ್ದಾರೆ. ನೀನು ಅಲ್ಲಿಗೇ ಹೋಗಿ ಅವರೊಂದಿಗೆ ಮಾತನಾಡಿಕೊಂಡು ಬಂದರೆ ಒಳ್ಳೆಯದು"

ಎಂದು ಪರಮೇಶ್ವರಯ್ಯ ಸೂಚಿಸಿದ.

ಅವನ ಸಲಹೆಯನ್ನಂಗೀಕರಿಸಿ ಅದೇ ರಾತ್ರಿ ರಾಜಶೇಖರ ಹುಬ್ಬಳ್ಳಿಗೆ ಪ್ರಯಾಣಮಾಡಿದ.

ಹುಬ್ಬಳ್ಳಿಯಲ್ಲಿ ರೈಲು ಇಳಿದು 'ಮಿತ್ರಸಮಾಜ' ಹೊಟೇಲಿಗೆ ಹೋಗಿ ಸ್ನಾನ, ಊಟಮುಗಿಸಿಕೊಂಡು ಹಾಸ್ಯ ಚಕ್ರವರ್ತಿ ಹಿರಣ್ಣಯ್ಯನ ದರ್ಶನಾರ್ಥಿಯಾಗಿ ರಾಜಶೇಖರ ಅವರ ಕಂಪೆನಿಮನೆಗೆ ಬಂದ.

ಕಂಪೆನಿ ಮನೆಯಲ್ಲಿದ್ದವರು ರಾಜಶೇಖರನನ್ನು ಕೂಡಿಸಿ

"ಯಜಮಾನರನ್ನು ಎಬ್ಬಿಸಲೇ" ಎಂದು ಕೇಳಿದರು.

"ರಾತ್ರಿ ನಾಟಕವಿತ್ತೇ ?"

"ಇತ್ತು"

"ಹಾಗಾದರೆ ಎಬ್ಬಿಸಬೇಡಿ. ನಾನು ಕಾಯುತ್ತೇನೆ."

ಹಿರಣ್ಣಯ್ಯನವರು ಐದು ಗಂಟೆಗೆ ಎದ್ದರು. ರಾಜಶೇಖರ ಬಂದು ಕಾದಿರುವ ವಿಷಯ ಕೇಳಿ 'ನನ್ನ ಎಬ್ಬಿಸಬಾರದಾಗಿತ್ತೇ'. ಎಂದು ಕಂಪೆನಿಯವರನ್ನು ಗದರಿಸಿ ರಾಜಶೇಖರನಿಗೆ ಹೇಳಿ ಕಳಿಸಿದರು.

"ಕ್ಷಮಿಸಬೇಕು. ತುಂಬ ಕಾಯಿಸಿಬಿಟ್ಟೆ."

"ಇವತ್ತು ರಾತ್ರಿ ನಾಟಕವಿದೆಯೋನೋ ?'

"ಇದೆ. ಇವತ್ತು ಬಂದಿರಾ ?"

“ ಮಧ್ಯಾಹ್ನ ರೈಲಿನಲ್ಲಿ ಬಂದೆ – ನನ್ನ ಕೆಲಸ ಮುಗಿಸಿದರೆ ನಾಳೆ ಪ್ಯಾಸೆಂಜರ್ ಗಾಡಿಯಲ್ಲಿ ಹೊರಡುತ್ತೇನೆ.”

“ ಎಲ್ಲಿಗೆ ಹೋದಿರಿ ?”

“ ಮಿತ್ರ ಸಮಾಜ ಹೊಟೇಲಿನಲ್ಲಿ ಇಳಿದುಕೊಂಡಿದ್ದೇನೆ.”

“ ಇಲ್ಲೇ ಬರಬಾರದಾಗಿತ್ತೆ ? ರಾತ್ರಿ ನಮ್ಮ ನಾಟಕ ನೋಡದೆ ಊರಿಗೆ ಹೊರಟು ಬಿಡುತ್ತೀರಾ ?”

“ ನಿಮ್ಮ ನಾಟಕ ನೋಡಿ ಪ್ಯಾಸೆಂಜರ್ ಗಾಡಿ ಹತ್ತುತ್ತೇನೆ.”

“ ನನ್ನ ನೋಡುವುದಕ್ಕೇ ಬೆಂಗಳೂರಿನಿಂದ ದಯಮಾಡಿಸಿದಿರಾ ?”

“ ಹೌದು ಸ್ವಾಮಿ.”

ಎಂದು ರಾಜಶೇಖರ ತನ್ನ ಕಂಪೆನಿಯ ಇತಿಹಾಸ, ನಾಟಕದ ವಿಷಯ ಸದ್ಯಕ್ಕೆ ಮಾಡಿಕೊಂಡಿರುವ ವ್ಯವಸ್ಥೆಯನ್ನೆಲ್ಲಾ ಹೇಳಿ

“ ಮೂರು ತಿಂಗಳುಕಾಲ ತಮ್ಮ ಥಿಯೇಟರು ಕೊಡಬೇಕು. ನನ್ನ ಸ್ಥಿತಿಗತಿಯೆಲ್ಲಾ ಅರಿಕೆಮಾಡಿಕೊಂಡಿದ್ದೇನೆ. ತಾವು ಏನು ಬಾಡಿಗೆ ಕೇಳಿದರೂ ಕೊಡಲು ಸಿದ್ಧನಾಗಿದ್ದೇನೆ.”

“ ಮೂರು ತಿಂಗಳು ಬಹಳ ಆಯಿತಲ್ಲಾ ರಾಜಶೇಖರ್ ಅವರೇ . . . ಹುಬ್ಬಳ್ಳಿ ಕ್ಯಾಂಪು ಮುಗಿದೊಡನೆಯೇ ನಾವು ಬೆಳಗಾಂವಿಗೆ ಹೋಗಬೇಕೆಂದಿದ್ದೇವೆ. ಅದು ಅಕಸ್ಮಾತ್ತಾಗಿ ನಿಂತು ಹೋದರೆ ಬೆಂಗಳೂರಿಗೇ ಬರಬೇಕಾಗುತ್ತದೆ.”

“ ತಮಗೆ ಸ್ವಲ್ಪವೂ ಅನಾನುಕೂಲ ಮಾಡಲು ನನಗೆ ಇಷ್ಟವಿಲ್ಲ. ತಮ್ಮ ಕಂಪೆನಿ ಬಂದರೆ ವಾರಕ್ಕೆ ಮೂರು ದಿನ ನನಗೆ ಕೊಡಿ. ನಾಲ್ಕು ದಿವಸ ತಾವು ಆಡಿಕೊಳ್ಳಿ.”

“ ಆಗಬಹುದು. ನಿಮ್ಮ ಪ್ರಯತ್ನ ನೋಡಿ ನನಗೆ ಪರಮ ಸಂತೋಷವಾಗಿದೆ ರಾಜಶೇಖರಯ್ಯನವರೇ. ನಾನೂ ಬಡವ – ದೊಡ್ಡ ಕಂಪೆನಿ ಕಟ್ಟಿಕೊಂಡು ಏಗುತ್ತಾ ಇದ್ದೇನೆ. ನಾಟಕದ ಕಂಪೆನಿಗಳ ವಿಷಯ ನಿಮಗೆ ಗೊತ್ತೇ ಇದೆ. ಒಂದು ಕ್ಯಾಂಪು ಸ್ವಲ್ಪ ಚೆನ್ನಾಯಿತು ಎಂದರೆ ಮುಂದಿನ ಕ್ಯಾಂಪಿನಲ್ಲಿ ಪೂರಾ ಹೊಡೆತ. ನಿಮ್ಮಿಂದ ಹೆಚ್ಚು ಬಾಡಿಗೆ ವಸೂಲ್ಮಾಡಬೇಕೊಂತ ಇದನ್ನೆಲ್ಲಾ ಹೇಳುತ್ತಾ ಇದ್ದೇನೆಂದು ಭಾವಿಸಬೇಡಿ. ನಿಮಗೆ

ಏನು ತೋರುತ್ತೋ ಕೊಡಿ. ನೀವು ಕೊಟ್ಟಿದ್ದು ತೆಗೆದುಕೊಳ್ಳುವಂತೆ ಥಿಯೇಟರ್ ಮ್ಯಾನೇಜರಿಗೆ ಕಾಗದ ಬರೆದು ಕೊಡುತ್ತೇನೆ."

"ನಿಮ್ಮ ಔದಾರ್ಯ ನನ್ನನ್ನು ಮೂಕನನ್ನಾಗಿ ಮಾಡಿದೆ ಸ್ವಾಮಿ. ತಿಂಗಳಿಗೆ ಸಾವಿರ ರೂಪಾಯಿ ತೆಗೆದುಕೊಂಡು ಬಿಡಿ."

"ರಾಜಶೇಖರ್, ನಿಮಗಿನ್ನೂ ಕಂಪೆನಿಗಳ ಅನುಭವ ಸಾಲದು. ಈ ದಿವಸದಲ್ಲಿ ಸಾವಿರ ರೂಪಾಯಿ ಬಾಡಿಗೆ ಕೊಟ್ಟು ಯಾರೂ ಕಂಪೆನಿ ನಡೆಸೋಕೆ ಸಾಧ್ಯವಿಲ್ಲ. ಏಳುನೂರೈವತ್ತು ಕೊಡಿ ಸಾಕು."

ಎಂದರು. ರಾಜಶೇಖರ್ ಆನಂದಪರವಶನಾದ, ಅವನ ಕಣ್ಣುಗಳಲ್ಲಿ ಹನಿ ಕೂಡಿತು.

"ಇಲ್ಲೇ ಇರಿ – ರಾತ್ರಿ ನಮ್ಮ ಜತೆ ಊಟಮಾಡಿ - ದೇವದಾಸಿ ನಾಟಕ ಇದೆ. ಅದನ್ನು ನೋಡಿಕೊಂಡು ರೈಲಿಗೆ ಪ್ರಯಾಣ ಮಾಡಿ. ನಾನು ರೈಲಿಗೆ ನಿಮ್ಮನ್ನು ಕಳಿಸುವ ವ್ಯವಸ್ಥೆಮಾಡುತ್ತೇನೆ."

ಎಂದು ಆಳನ್ನು ಕೂಗಿ

"ಮಿತ್ರಸಮಾಜ ಹೋಟಲಿಗೆ ಹೋಗಿ ರಾಜಶೇಖರಯ್ಯನವರ ಸಾಮಾನು ಯಾವ ರೂಮಿನಲ್ಲಿದೇಂತ ಪ್ರೊಪ್ರೈಟರನ್ನು ಕೇಳಿ, ಅವರ ಬಿಲ್ ಕೊಟ್ಟು ಸಾಮಾನು ತೆಗೆದು ಕೊಂಡು ಬಾ"

ಎಂದು ಆಳಿನ ಕೈಯಲ್ಲಿ ಹತ್ತುರೂಪಾಯಿ ಹಾಕಿದರು. ರಾಜಶೇಖರ ದುಡ್ಡು ಕೊಡಲು ಹೋದ. ಹಿರಣ್ಣಯ್ಯನವರು ಅವನನ್ನು ತಡೆದು

"ನೀವು ನನ್ನ ಅತಿಥಿಗಳು."

ಎಂದು ಹೇಳಿದರು. ಹಿರಣ್ಣಯ್ಯನವರು ಕೂಡಲೆ ತಮ್ಮ ಥಿಯೇಟರ್ ಮ್ಯಾನೇಜರಿಗೆ ಕಾಗದ ಬರೆದು ರಾಜಶೇಖರನ ಕೈಯಲ್ಲಿಟ್ಟು

"ಥಿಯೇಟರಿನಲ್ಲಿ ನಮ್ಮದೇ ಪರದೆಗಳು, ಸೈಡ್ ವಿಂಗ್ಸ್ ಇವೆ. ಉಪಯೋಗಿಸಿಕೊಳ್ಳಿ. ನಿಮ್ಮ ನಾಟಕಗಳು ಚೆನ್ನಾಗಿ ನಡೆಯಲೆಂದು ಹುತ್ಪೂರ್ವಕವಾಗಿ ಹಾರೈಸುತ್ತೇನೆ."

"ವೃತ್ತಿ ವೈಷಮ್ಯವಿಲ್ಲದೆ ನೀವು ನೀಡುತ್ತಿರುವ ಸಹಕಾರ ನನ್ನನ್ನು ಮೂಕನನ್ನಾಗಿಸಿದೆ ಹಿರಣ್ಣಯ್ಯನವರೇ."

"ನಮ್ಮ ಜೀವನ, ಕಲೆ ಎರಡೂ ತುಂಬ ಕಷ್ಟದ್ದಪ್ಪ. ನಾವು ಒಬ್ಬರಿಗೊಬ್ಬರು ನೆರವಾಗದಿದ್ದರೆ ಇನ್ನು ಯಾರು ನೆರವಾಗುತ್ತಾರೆ ಹೇಳಿ."

ರಾತ್ರಿ ಕಂಪೆನಿಮನೆಯಲ್ಲಿ ಊಟ ಮಾಡಿಕೊಂಡು ರಾಜಶೇಖರ ಹಿರಣ್ಣಯ್ಯನವರ ಜತೆಗೆ ಥಿಯೇಟರಿಗೆ ಹೋದ.

ನಾಟಕದ ಕೊನೆಯ ದೃಶ್ಯದ ಮುನ್ನ ಹಿರಣ್ಣಯ್ಯನವರು ರಂಗದ ಮೇಲೆ ಬಂದು

"ಈಗ ನಾನು ನಾಜೂಕಯ್ಯನಂತೆ ಬಂದಿಲ್ಲ – ಹಿರಣ್ಣಯ್ಯನಂತೆ ಬಂದಿದ್ದೇನೆ. ಕನ್ನಡ ರಂಗಭೂಮಿಯ ಸೇವೆ ಮಾಡಲು ಉತ್ಸುಕರಾಗಿ ಇದೇ 'ಕರ್ನಾಟಕ ನವೋದಯ ನಾಟ್ಯಮಂದಿರ' ವೆಂಬ ಸಂಸ್ಥೆಯನ್ನು ಸ್ಥಾಪಿಸಿರುವ ನಮ್ಮ ಮಿತ್ರರು ಶ್ರೀಮಾನ್ ರಾಜಶೇಖರ್ ಅವರು ಇಲ್ಲಿಗೆ ದಯಮಾಡಿಸಿದ್ದಾರೆ. ಸದ್ಯದಲ್ಲೇ ಅವರು ಬೆಂಗಳೂರಿನಲ್ಲಿರುವ ನಮ್ಮ ಶ್ರೀ ಥಿಯೇಟರಿನಲ್ಲಿ ತಮ್ಮ 'ಪತಿತ ಪರಿವರ್ತನ' ಎಂಬ ಕ್ರಾಂತಿಕಾರಿ ನಾಟಕವನ್ನಾರಂಭಿಸುತ್ತಾರೆ. ಅವರಿಗೆ ನಿಮ್ಮ ಪರವಾಗಿ ನನ್ನ ಪರವಾಗಿ, ನನ್ನ ಮಂಡಳಿಯ ಎಲ್ಲ ಕಲಾವಿದರ ಪರವಾಗಿ ಶುಭಾಶಯಗಳನ್ನರ್ಪಿಸಿ, ಅವರು ಕೈಗೊಂಡಿರುವ ಕಲಾಸೇವೆ ನಿಷ್ಕಂಟಕವಾಗಿ ಸಾಗಿ ಇತೋಪ್ಯತಿಶಯವಾದ ಕೀರ್ತಿ ಗಳಿಸಲೆಂದು ಹಾರೈಸುತ್ತೇನೆ"

ಎಂದು ಹೇಳಿ ರಾಜಶೇಖರನನ್ನು ರಂಗದ ಮೇಲೆ ಬರಮಾಡಿಕೊಂಡು ಅವನಿಗೆ ಹೂಮಾಲೆ ಅರ್ಪಿಸಿದರು.

ರಾಜಶೇಖರ ನಾಲ್ಕು ಮಾತು ಹೇಳಲೇ ಬೇಕಾಯಿತು. ಉದ್ವೇಗದಿಂದ ಅವನ ಕಂಠ ಬಿಗಿದಿತ್ತು. ಗಂಟಲು ಸರಿಮಾಡಿಕೊಂಡು, ಕಣ್ಣು ಒರಸಿಕೊಂಡು

"ನಾನು ನಿಯೋಜಿಸಿರುವ ಕಂಪೆನಿ, ಆಡಲಿರುವ ನಾಟಕದ ವಿಷಯ ನಟಶ್ರೇಷ್ಠರಾದ ಶ್ರೀಮಾನ್ ಹಿರಣ್ಣಯ್ಯನವರು ನಿಮಗಾಗಲೆ ತಿಳಿಸಿದ್ದಾರೆ – ನನ್ನ ಉದ್ಯಮಕ್ಕೆ ಅವರ ನೆರವು ಕೇಳಲು ಬಂದೆ. ನಾನು ನಿರೀಕ್ಷಿಸಿದುದಕ್ಕಿಂತಲೂ ಹೆಚ್ಚಿನ ನೆರವು ನೀಡಿದುದಲ್ಲದೆ, ಈ ಗೌರವವನ್ನೂ ನನ್ನ ಕೊರಳಿಗೆ ಕಟ್ಟಿದ್ದಾರೆ. ಅವರು ಆಡಿರುವ ಮಾತುಗಳು ಕಿರಿಯ ಕಲಾಭಿಮಾನಿಗೆ ಹಿರಿಯ ಕಲಾತಪಸ್ವಿಯ ಆಶೀರ್ವಾದವೆಂದು ಭಾವಿಸುತ್ತೇನೆ. ಕಂಪೆನಿಯೊಂದಿಗೆ ನಾನು

ಇಲ್ಲಿಗೆ ಮುಂದೆ ಬರುತ್ತೇನೆ. ಆಗಲೂ ತಾವು ಇದೇ ಅಭಿಮಾನ ತೋರಿಸಿ ನನ್ನ ಪ್ರಯತ್ನವನ್ನು ಪರಸಬೇಕೆಂದು ಪ್ರಾರ್ಥಿಸುತ್ತೇನೆ."

ಎಂದು ಹೇಳಿ ಮುಗಿಸಿದ.

ರಾಜಶೇಖರನ ವಿನಯವನ್ನು ಎಲ್ಲರೂ ಮೆಚ್ಚಿಕೊಂಡರು.

ನಾಟಕ ಮುಗಿಯುವ ವೇಳೆಗೇ ರಾತ್ರಿ ಎರಡು ಗಂಟೆಯಾಗಿತ್ತು, ರೈಲು ವೇಳೆಯವರೆಗೆ ಎಲ್ಲರೂ ಮಾತನಾಡುತ್ತ ಕುಳಿತಿದ್ದರು. ಐದೂವರೆಗೆ, ಹಿರಣ್ಣಯ್ಯನವರು ಕಾರಿನಲ್ಲಿ ರಾಜಶೇಖರನನ್ನು ಸ್ಟೇಷನ್ನಿಗೆ ತಾವೇ ಕರೆದುಕೊಂಡು ಹೋಗಿ ರೈಲು ಹತ್ತಿಸಿದರು.

ರಾಜಶೇಖರ ಇಷ್ಟು ಬೇಗ ಹಿಂದಿರುಗಿ ಬಂದುದನ್ನು ಕಂಡು ಕಂಪೆನಿಯಲ್ಲಿ ಎಲ್ಲರೂ ಆಶ್ಚರ್ಯಪಟ್ಟರು. ಹುಬ್ಬಳ್ಳಿಯಲ್ಲಿ ತನಗಾದ ಸನ್ಮಾನ, ಹಿರಣ್ಣಯ್ಯನವರ ಸಹಕಾರದ ವಿಷಯ ರಾಜಶೇಖರ ವಿವರವಾಗಿ ನಿರೂಪಿಸಿದ.

ಥಿಯೇಟರ್ ಗೊತ್ತಾದ ಕೂಡಲೆ ಪ್ರಚಾರ ಕಾರ್ಯ ಭರದಿಂದ ಸಾಗಿತು– ಥಿಯೇಟರ್ ಚಿತ್ರಗಾರನ ಸಹಾಯದಿಂದ 'ಪತಿತ ಪರಿವರ್ತನ' ನಾಟಕಕ್ಕೆ ಬೇಕಾಗುವ ಕೆಲವು ಸಾಮಾಜಿಕ ದೃಶ್ಯಗಳನ್ನೂ ಅಳವಡಿಸಲಾಯಿತು. ರಂಗದ ವಿದ್ಯುತ್ ನಿಯೋಜನೆ, ಧ್ವನಿವಾಹಕ ಯಂತ್ರದ ವ್ಯವಸ್ಥೆಯನ್ನು ರಂಗಸ್ವಾಮಿ ನೋಡಿಕೊಂಡ.

ಶನಿವಾರ ಸಂಜೆ ನಾಟಕದ ಮೊದಲನೆಯ ಪ್ರಯೋಗವೆಂದು ನಿಶ್ಚಯಿಸಲಾಯಿತು. ನಗರದ ಮೇಯರ್ ಅವರನ್ನು ಅಧ್ಯಕ್ಷ ಸ್ಥಾನಕ್ಕೆ ಆಹ್ವಾನಿಸಲಾಗಿತ್ತು. ಊರಿನ ಕೆಲವು ಗಣ್ಯ ಮಹನೀಯರಿಗೂ, ಸಾಹಿತಿಗಳು ಕಲಾವಿದರಿಗೂ, ಪತ್ರಿಕಾ ಪ್ರತಿನಿಧಿಗಳಿಗೂ ಕರೆಯೋಲೆ ಹೋಗಿತ್ತು.

ಶನಿವಾರ ಸಂಜೆ ಆರೂವರೆಗೆ ಆರಂಭವಾದ ನಾಟಕ ಸರಿಯಾಗಿ ಮೂರು ಗಂಟೆಗಳ ಕಾಲ ನಡೆಯಿತು. ಅಧ್ಯಕ್ಷರು ನಾಟಕದ ಘನೋದ್ದೇಶವನ್ನು ಪ್ರಶಂಸಿದರು. ಅಂದಿನ ಉತ್ಪನ್ನ ಎಂಟುನೂರು ರೂಪಾಯಿಯಾಗಿದ್ದುದನ್ನು ಕಂಡು ಮಂಡಳಿಯ ಜನ ಸಂತೋಷಪಟ್ಟರು.

ದಿನವೂ ನಾಟಕ ನಡೆಯಲಾರಂಭಿಸಿತು. ಎರಡನೆಯ ದಿನ ಭಾನುವಾರ, ಅಂದಿನ ಉತ್ಪನ್ನ ಸಾವಿರಕ್ಕೇರಿತು; ಅಲ್ಲಿಂದ ಮುಂದೆ ನಾಲ್ಕು ದಿನ ಉತ್ಪನ್ನ ಇನ್ನೂರು ಮುನ್ನೂರಕ್ಕೆ ಇಳಿಯಿತು. ಶುಕ್ರವಾರದಿಂದ ಮತ್ತೆ ಉತ್ಪನ್ನ ಏರ

ಲಾರಂಭಿಸಿತು. ಭಾನುವಾರದ ಉತ್ಪನ್ನ ಸಾವಿರದ ಮುನ್ನೂರಕ್ಕೇರಿತು. ಶನಿವಾರದಿಂದ ಸೋಮವಾರದ ವರೆಗೆ ಒಂಭತ್ತು ದಿನಗಳ ಉತ್ಪನ್ನ ನಾಲ್ಕು ಸಾವಿರದ ಎಂಟುನೂರೈವತ್ತಾಗಿತ್ತು. ಕಂಪೆನಿ ದಡಮುಟ್ಟಿತೆಂದು ಎಲ್ಲರೂ ಸಂತೋಷಭರಿತರಾದರು.

ಪತ್ರಿಕೆಗಳಲ್ಲಿ ನಾಟಕದ ವಿಮರ್ಶೆಗಳು ಬರುತ್ತಿದ್ದವು. ಕೆಲವು ನಾಟಕದ ಪರವಾಗಿ ಕೆಲವು ನಾಟಕದ ವಿರುದ್ಧವಾಗಿದ್ದವು. ಸೋಮವಾರ ಸಂಜೆ ಪ್ರಕಟವಾದ "ಯುಗವಾಣಿ" ಪತ್ರಿಕೆಯಲ್ಲಿ 'ಪತಿತ ಪರಿವರ್ತನ' ನಾಟಕದ ಬಗ್ಗೆ ದೀರ್ಘವಿಮರ್ಶೆ ಬಂದಿದ್ದುದಲ್ಲದೆ ಸಂಪಾದಕರು ಶ್ರೀ ರಾಘವಯ್ಯನವರು ತಮ್ಮ ಸಂಪಾದಕೀಯ ಲೇಖನದಲ್ಲಿ

"ಪತಿತ ಪರಿವರ್ತನದಂಥ ನಾಟಕವು ನಮ್ಮ ನಾಡಿಗೆ, ಸಂಸ್ಕೃತಿಗೆ, ಧರ್ಮಕ್ಕೆ ಅಪಮಾನಕರವಾದುದು. ವೇಶ್ಯಾವೃತ್ತಿಯು ಪ್ರಸಾರಕ್ಕೆ ಈ ನಾಟಕ ಬರೆದು ಶ್ರೀ ರಾಜಶೇಖರರವರು ಆಡಿಸುತ್ತಿರುವಂತಿದೆ – ಹಣ ಸೆಳೆಯುವುದಕ್ಕೆ ಜನತೆಯ ಕೀಳು ಅಭಿರುಚಿಗೆ ಸೊಪ್ಪು ಹಾಕುವ ಉದ್ದೇಶವೊಂದೇ ಈ ನಾಟಕದಲ್ಲಿ ನಮಗೆ ಕಾಣುತ್ತಿರುವುದು. ಸರ್ಕಾರ ಈ ನಾಟಕವನ್ನು ನಿಲ್ಲಿಸಿ, ಜನತೆಯ ಅಭಿರುಚಿಯನ್ನು ಕಾಪಾಡಬೇಕೆಂದು ನಾವು ಸೂಚಿಸಲಿಚ್ಛಿಸುತ್ತೇವೆ."

ಎಂದು ಬರೆದಿದ್ದರು. ಪತ್ರಿಕೆಯಲ್ಲಿ ಸುಮಾರು ಒಂದು ಪುಟದವರೆಗೆ ವಿಸ್ತರಿಸಿದ್ದ ಹುನಗುಂದ ಈಶ್ವರರಾಯರ ವಿಮರ್ಶೆಯೂ ಇದೇ ಧಾಟಿಯಲ್ಲಿತ್ತು.

ರಾಘವಯ್ಯ, ಈಶ್ವರರಾಯನ ಈ ಕ್ರೋಧಕ್ಕೆ ಕಾರಣವೇನೆಂಬುದು ರಾಜಶೇಖರನಿಗೆ ಮೊದಲು ಅರ್ಥವಾಗಲಿಲ್ಲ. ಪರಮೇಶ್ವರಯ್ಯ ಕಾರಣ ವಿವರಿಸಿದ

"ಭಾನುವಾರ ಇವರಿಬ್ಬರೂ ಎಂಟುಹತ್ತು ಜನಗಳ ಗುಂಪು ಕಟ್ಟಿಕೊಂಡು ಬಂದು, ನಾಟಕಕ್ಕೆ ಬಿಡಿ ಎಂದರು. ಪತ್ರಿಕಾ ಪ್ರತಿನಿಧಿಗಳು ಎಂದು ತಿಳಿದು ಕೂಡಲೆ ನಾನು 'ಸ್ವಾಮಿ ಭಾನುವಾರ, ಇವತ್ತು ತುಂಬ ಗಲಾಟೆಯಿದೆ, ಎಲ್ಲಾರಿಗೂ ಒಂದೇ ಕಡೆ ಸೀಟ್ ಕೊಡುವುದಕ್ಕಾಗುವುದಿಲ್ಲ. ಸ್ಟೇಜ್ ಒಳಗೆ ಕುರ್ಚಿಗಳನ್ನು ಹಾಕಿಸಿಕೊಡುತ್ತೇನೆ. ಕುಳಿತುಕೊಳ್ಳಿ' ಎಂದೆ. ಅವರಲ್ಲಿ ಒಬ್ಬ ತೆಳ್ಳಗೆ ಉದ್ದಕ್ಕಿದ್ದ. ಅವನ ಬಾಯಿ ದುರ್ವಾಸನೆ ನಾರುತ್ತಿತ್ತು. ಎರಡು ಭುಜವನ್ನೂ ಕುಣಿಸಿಕೊಂಡು ಸೋಫಾ ಸೀಟುಗಳೇ

ಣೇಕೆಂದು ಹಟ ಹಿಡಿದ. ಸಾಧ್ಯವಿಲ್ಲವೆಂದು ನಾನು ಹೇಳಲೇ ಬೇಕಾಯಿತು. ಕೋಪಮಾಡಿಕೊಂಡು ಹೊರಟು ಹೋದರು. ಆ ಕೋಪದ ಸ್ವರೂಪವೇ ಸೋಮವಾರದ 'ಯುಗವಾಣಿ'."

ಪತ್ರಿಕೆ ನೋಡುತ್ತಾ ರಾಜಶೇಖರ

"ಇದು ನೋಡಿ ಪರಮೇಶ್ವರಯ್ಯ. ಇವರು ಕ್ರಮವಾಗಿ ನಮ್ಮ ಮೇಲೆ ಅಪಪ್ರಚಾರವನ್ನು ಆರಂಭಿಸುವರಿದ್ದಾರೆ. ಈಶ್ವರರಾಯನ ಲೇಖನದ ಕೆಳಗೆ ಸಂಪಾದಕರು ಬರೆದಿರುವುದನ್ನು ನೋಡಿ : 'ಪತಿತ ಪರಿವರ್ತನದ ಬಗ್ಗೆ ನಾಟಕ ನೋಡಿರುವ ನಮ್ಮ ಓದುಗರು ಬರೆಯುವ ಅಭಿಪ್ರಾಯವನ್ನು ಪ್ರಕಟಿಸ ಬೇಕೆಂದಿದ್ದೇವೆ. ಓದುಗರು ತಮ್ಮ ಅಭಿಪ್ರಾಯಗಳನ್ನು ಬರೆದು ತಿಳಿಸ ಬೇಕಾಗಿ ಪ್ರಾರ್ಥನೆ'."

"ಏನು ಮಾಡುವುದು ರಾಜಶೇಖರ್ - ಈ ಮನುಷ್ಯ ಮೃತ್ಯುವಾಗು ತ್ತಿದ್ದಾನಲ್ಲಾ"

ಎಂದು ಪರಮೇಶ್ವರಯ್ಯ ಪರಿತಪಿಸಿದ. ರಾಜಶೇಖರ್ ನಿಶ್ಚಲತೆಯಿಂದ

"ಅದಕ್ಕೇನು ಮಾಡಬೇಕೆಂದಿರುವಿರಿ ?"

"ಅವನನ್ನು ಕರೆದುಕೊಂಡು ಬಂದು ಉಪಚಾರ ಮಾಡಿ ಕಳಿಸುವುದು ಒಳ್ಳೆಯದಲ್ಲವೇ ?"

"ಅಲ್ಲ – ಇಂಥ ಪತ್ರಿಕಾಕರ್ತರು ವೃತ್ತ ಪತ್ರಿಕಾ ಪ್ರಪಂಚಕ್ಕೆ ಅಪ ಮಾನ ಮಾಡುತ್ತಿದ್ದಾರೆ ! ಅವರು ಏನು ಬೇಕಾದರೂ ಬರೆದುಕೊಳ್ಳಲಿ. ನನ್ನ ನಾಟಕದಲ್ಲಿ ಸತ್ಯವಿದ್ದು, ಉಳಿಯುವ ಯೋಗ್ಯತೆ ಇದ್ದರೆ ಅದು ಉಳಿದೇ ಉಳಿಯುತ್ತದೆ. ಸಾವಿರಾರು ರಾಘವಯ್ಯಗಳೂ, ಈಶ್ವರರಾಯರೂ ಅದ ಕ್ಕೇನು ಮಾಡಲಾರರು. ಯೋಗ್ಯತೆ ಇಲ್ಲದಿದ್ದರೆ ತಾನೇ ನಾಶವಾಗುತ್ತದೆ. ಆಗ ನಾವು ದುಃಖಪಡಬೇಕಾದ ಕಾರಣವೂ ಇಲ್ಲ – ನೀವು ಮಾತ್ರ ಅವರನ್ನು ಒಲಿಸಿಕೊಳ್ಳುವ ಪ್ರಯತ್ನ ಮಾಡಬೇಡಿ."

"ನೀನು ಬಹಳ ಹಟವಾದಿಯಪ್ಪ ರಾಜಶೇಖರ. ನಾಲ್ಕು ಬಾಟಲು ಕೊಟ್ಟರೆ ರಾಘವಯ್ಯ ಹೇಳಿದ ಹಾಗೆ ಕೇಳುತ್ತಾನಂತೆ. ವಿಲಾಯಿತಿ ಯದು ಕೂಡಾ ಅಲ್ಲ, ಮುಂಡ್ಯದ್ದು ಆದರೆ ಸಾಕಂತೆ ! ಇಷ್ಟು ಸುಲಭವಾಗಿ ಆಗುವ ಕೆಲಸಕ್ಕೆ ನೀನು ಅಡ್ಡಿ ಮಾಡುತ್ತೀ."

" ನೀವೂ ಈ ದಾರಿಗೆ ಇಳಿಯುವ ಹಾಗಿದ್ದರೆ ನಾನಾಗಲಿ, ನೀವಾಗಲಿ ಯಾರಾದರೂ ಒಬ್ಬರು ಈ ಕಂಪೆನಿ ಬಿಡಬೇಕಾಗುತ್ತದೆ ಪರಮೇಶ್ವರಯ್ಯನವರೇ."

ಎಂದು ಖಚಿತವಾಗಿ ಹೇಳಿದ. ರಾಜಶೇಖರನ ಅಭಿಪ್ರಾಯವನ್ನು ರಂಗಸ್ವಾಮಿ ಸಂಪೂರ್ಣವಾಗಿ ಅನುಮೋದಿಸಿದ.

ಗುರುವಾರದ ' ಯುಗವಾಣಿ ' ಪತ್ರಿಕಯಲ್ಲಿ ವಾಚಕರ ಪತ್ರಗಳು ಒಂದು ಪುಟದಷ್ಟು ಪ್ರಕಟವಾದವು.

ಭಾನುವಾರದ ' ಯುಗವಾಣಿ ' ಮತ್ತೆ ಒಂದು ಪುಟದಷ್ಟು ಪತ್ರಗಳನ್ನು ಪ್ರಕಟಿಸಿತು.

ನಾಟಕವನ್ನು ಪ್ರಶಂಶಿಸಿ ಬಂದಿದ್ದ ಪತ್ರಗಳನ್ನು ಸಂಪಾದಕರು ಕಸದ ಬುಟ್ಟಿಗೆ ತಳ್ಳಿದ್ದರು. ಏಕ ಪಕ್ಷ ವಾದ ಮಾಡುತ್ತಿಲ್ಲವೆಂದು ತೋರಿಸಿಕೆ ೂಳ್ಳಲು ಒಂದೊಂದು ಪ್ರಶಂಸನಾತ್ಮಕ ಪತ್ರವನ್ನು ಕೈಕಾಲು ಕತ್ತರಿಸಿ ಪ್ರಕಟಿಸುತ್ತಿದ್ದರು.

ಯುಗವಾಣಿ ಆರಂಭಿಸಿದ ಕೆಲಸವನ್ನು ' ಕಾಲದೂತ ' ವಾರಪತ್ರಿಕೆ ಸಂಪಾದಕರು ವಶಿಷ್ಟರು ಮುಂದುವರಿಸಿದರು. ಪ್ರತಿವಾರ ಎರಡು ಮೂರು ಪುಟ ಪತಿತ ಪರಿವರ್ತನದ ಅವಹೇಳನಕ್ಕೆ ಮಿಸಲಾಗುತ್ತಿತ್ತು.

ಎರಡು ವಾರ ಸತತ ಅಪಪ್ರಚಾರದ ಸುರಿಮಳೆಯಾಯಿತು. ಈಶ್ವರರಾಯ ಕೈಚೀಲದಲ್ಲಿ ಪತ್ರಿಕೆಗಳನ್ನಿಟ್ಟುಕೊಂಡು ಊರೂರಿಗೆ ಮನೆಮನೆಗೆ ಹೋಗಿ ಪ್ರಸಾರಮಾಡಲಾರಂಭಿಸಿದ. ರಾಜಶೇಖರನಿಗೆ ' ವೇಶ್ಯಾವೃತ್ತಿ ಪ್ರವರ್ತಕ – ವ್ಯಭಿಚಾರ ಪ್ರಸಾರ ಪ್ರವೀಣ – ಕುಲಹೀನ ಕಲಾಕಾರ ' ಮೊದಲಾದ ಬಿರುದುಗಳನ್ನು ಯುಗವಾಣಿ – ಕಾಲದೂತ ಪತ್ರಿಕೆಗಳು ಧಾರಾಳವಾಗಿ ಕೊಟ್ಟವು.

ಬೆಂಗಳೂರಿನ ಉಳಿದ ಪತ್ರಿಕಾಕರ್ತರಿಗೆ 'ಯುಗವಾಣಿ'–'ಕಾಲದೂತ' ಪತ್ರಿಕೆಗಳ ವರ್ತನೆ ಹೇಸಿಗೆಯನ್ನುಂಟುಮಾಡಿದರೂ ಅವರು ನಿರುಪಾಯರಾಗಿದ್ದರು. ತಮ್ಮ ವೃತ್ತಿ ಬಾಂಧವರ ವಿರುದ್ಧ ಹೋಗುವುದು ತರವಲ್ಲವೆಂದು ಅವರು ಮೌನ ವ್ರತ ತಾಳಿದರು.

ಪ್ರಸಿದ್ಧಿಗಾಗಿ ಹಾತೊರೆಯುತ್ತಿದ್ದ ಕೆಲವು ಅನಾಮಧೇಯ ಸಾಹಿತಿಗಳ

ನ್ನೊಲಿಸಿಕೊಂಡು ಅವರಿಂದಲೂ ರಾಘವಯ್ಯ, ಈಶ್ವರರಾಯ ಲೇಖನಗಳನ್ನು ಬರೆಸಿದರು.

ಊರಿನಲ್ಲಿ ಎಲ್ಲಿ ಹೋದರೂ 'ಪತಿತ ಪರಿವರ್ತನ'ದ ಮಾತೇ ಮಾತು–ಯಾರ ಬಾಯಲ್ಲಿ ನೋಡಿದರೂ ನಾಟಕದ ವಿಮರ್ಶೆಯೇ.

ರಾಘವಯ್ಯ, ಈಶ್ವರರಾಯನ ಅಪಪ್ರಚಾರ ಆರಂಭವಾಗುವುದಕ್ಕೆ ಮುನ್ನ ಇದ್ದುದಕ್ಕಿಂತ ಉತ್ಪನ್ನ ಹೆಚ್ಚಲಾರಂಭಿಸಿತು. ಪ್ರತಿ ದಿನವೂ ನೂರಾರು ಜನ ಟಿಕೇಟ್ ದೊರೆಯದೆ ನಿರಾಶೆಗೊಳ್ಳುತ್ತಿದ್ದರು. ನಾಟಕ ನೋಡಿ ಮೆಚ್ಚಿಕೊಂಡಿದ್ದವರು ಅದನ್ನೇ ಪದೇ ಪದೇ ನೋಡಲಾರಂಭಿಸಿದರು. ನೋಡದಿದ್ದವರು ಕುತೂಹಲದಿಂದ ಒಮ್ಮೆ ನೋಡಿ ನಿತ್ಯ ನೋಡಲಾರಂಭಿಸಿದರು. ಊರೂರುಗಳಿಂದ ಜನ ಬಂದು ನಾಟಕ ನೋಡಲಾರಂಭಿಸಿದರು. ಮೂರನೆಯ, ನಾಲ್ಕನೆಯ ವಾರಗಳಲ್ಲಿ ಉತ್ಪನ್ನ ಎಂಟು ಸಾವಿರ ಮುಟ್ಟಿತು. ತಮ್ಮ ಪ್ರಯತ್ನ ನಿಷ್ಫಲವಾದುದನ್ನು ಕಂಡು ರಾಘವಯ್ಯ ಈಶ್ವರರಾಯ ಕರಟಕ, ದಮನಕರಂತೆ ಹೊಸ ಹೊಸ ಪ್ರಚಾರ ಸಾಧನಗಳನ್ನು ಹುಡುಕಲಾರಂಭಿಸಿದರು.

ಒಂದು ತಿಂಗಳು ಕಳೆಯಿತು.

ಎರಡನೆಯ ತಿಂಗಳ ಮೊದಲನೆಯ ದಿನವೇ ರಾಜಶೇಖರ ಕಂಪೆನಿಯ ನಟರನ್ನೆಲ್ಲಾ ಸೇರಿಸಿ, ಕಂಪೆನಿಯ ಲೆಕ್ಕಪತ್ರಗಳನ್ನು ಅವರ ಮುಂದಿಟ್ಟ.

| | | |
|---|---|---|
| **ಆಯ :** | | |
| ನಾಲ್ಕು ವಾರಗಳ ಉತ್ಪನ್ನ | ರೂ. ೨೭,೫೫೦ | |
| **ವ್ಯಯ :** | | |
| ನಾಟಕ ಪ್ರದರ್ಶನದ ಖರ್ಚು | ರೂ. ೨,೫೦೦ | |
| | ——— | ೨೫,೦೫೦ |
| ನಾಟಕಕ್ಕೆ ಹಾಕಿದ ಬಂಡವಾಳ | ರೂ. ೭,೫೫೦ | |
| ಮೂಲ ಧನಕ್ಕೆ ಇಡುಗಂಟು | ರೂ. ೫,೦೦೦ | |
| | ——— | ೧೨,೫೫೦ |
| ಜಾತಾ ನಿವ್ವಳ ನಫೆ | | ರೂ. ೧೨,೫೦೦ |

"ಕಂಪೆನಿಯಲ್ಲಿ ಒಟ್ಟು ಎಷ್ಟು ಜನ ಇದ್ದೇವೆ ಪರಮೇಶ್ವರಯ್ಯನವರೇ."

"ಹದಿನೆಂಟು ಜನ – ಆಳನ್ನೂ ಸೇರಿಸಿಕೊಂಡು."

"ಹದಿನೆಂಟು ಜನಕ್ಕೂ ಉಳಿತಾಯದ ಹಣ ಹಂಚಿಬಿಡಿ. ಎಷ್ಟು ಬರುತ್ತದೆ ನೋಡಿ."

"ಒಬ್ಬೊಬ್ಬರಿಗೆ ರೂ. ೬೯೪–೮–೦ ಬರುತ್ತದೆ."

"ಇವತ್ತೇ ಎಲ್ಲರಿಗೂ ಹಂಚಿಬಿಡಿ."

ನಟನಟಿಯರೆಲ್ಲಾ ಅವಾಕ್ಕಾಗಿ ರಾಜಶೇಖರನ ಮುಖ ನೋಡಿದರು.

"ನಾಟಕಕ್ಕೆ ಹಾಕಿರುವ ಬಂಡವಾಳದಲ್ಲಿ ಐದು ಸಾವಿರ ನನ್ನದು, ಉಳಿದದ್ದು ಪರಮೇಶ್ವರಯ್ಯನವರು, ರಂಗಸ್ವಾಮಿಗಳು ಕೊಟ್ಟಿದ್ದಾರೆ. ನನ್ನ ಐದು ಸಾವಿರ, ಮತ್ತೆ ಇಡುಗಂಟಿನ ಐದು ಸಾವಿರ ಸೇರಿಸಿ ಕಂಪೆನಿ ಮೂಲಧನ ವಾಗಿಡುತ್ತೇನೆ. ನಾಳೆ ಕಂಪೆನಿ ಕಷ್ಟಕ್ಕೆ ಸಿಕ್ಕಿದರೆ ನಮ್ಮ ತಲೆಗಾಯುವುದಕ್ಕೆ ಈ ಹಣ ಬೇಕಾಗುತ್ತದೆ. ದೇವಿ ಅನುಗ್ರಹದಿಂದ ಒಂದು ತಿಂಗಳು ಕಂಪೆನಿ ಚೆನ್ನಾಗಿ ನಡೆದಿದೆ - ಕೈತುಂಬ ನಿಮಗೆ ಹಣ ಕೊಡಲು ಸಾಧ್ಯವಾದುದಕ್ಕೆ ನಾನು ತುಂಬ ಸಂತೋಷಪಡುತ್ತೇನೆ. ಇದರ ಸಮಸ್ತ ಕೀರ್ತಿ ಪರಮೇಶ್ವ ರಯ್ಯನವರು, ರಂಗಸ್ವಾಮಿಗಳು, ಅವರ ಕುಟುಂಬ ಮಾ॥ಶ್ರೀ॥ಸೌಭಾಗ್ಯಮ್ಮ ನವರು, ಶ್ರೀಮರ್ಾ ಹಿರಣ್ಣಯ್ಯನವರು ಇವರಿಗೆ ಸೇರಬೇಕು. ಪ್ರತಿ ತಿಂಗಳೂ ನಾನು ನಿಮಗೆ ಹೀಗೆ ಹಣ ಕೊಡಲು ಸಾಧ್ಯವಾಗುತ್ತದೆ ಎಂದು ಹೇಳಲಾರೆ. ಈ ಹಣದಲ್ಲಿ ಸ್ವಲ್ಪ ಮಿಗಿಸಿಕೊಳ್ಳಿ – ಮಿತವಾಗಿ ಖರ್ಚುಮಾಡಿ ಕಂಪೆನಿಗೆ ಕಷ್ಟ ಬಂದರೆ ಅದನ್ನು ಕೈಬಿಡದೆ ನಡೆಸಿಕೊಂಡು ಹೋಗಿ. ನಾನೇನೂ ಮಹ ತ್ಕಾರ್ಯ ಮಾಡಿಲ್ಲ - ಕೆರೆಯ ನೀರನು ಕೆರೆಗೆ ಚೆಲ್ಲಿ ಎಂದು ದಾಸರಾಯರು ಹೇಳಿದ ಹಾಗೆ ನೀವು ಸಂಪಾದಿಸಿದ ಹಣ ನಿಮಗೇ ಕೊಟ್ಟಿದ್ದೇನೆ"

ಎಂದು ಹೇಳಿದ. ನಟನಟಿಯರ ಹೃದಯ ಕೃತಜ್ಞತೆಯಿಂದ ತುಂಬಿ ಹೋಯಿತು.

ಅದೇ ಭಾನುವಾರದ 'ಯುಗವಾಣಿ' ಪತ್ರಿಕೆಯಲ್ಲಿ ಒಬ್ಬ ವೇಶ್ಯೆಯ ಪತ್ರ ಪ್ರಕಟವಾಗಿತ್ತು. ಅದನ್ನೋದಿ ಎಲ್ಲರೂ ಚಕಿತರಾದರು

"ನಾನೊಬ್ಬಳು ಸೂಳೆ, ಸಾಮಾನ್ಯ ಸೂಳೆ; ಸೂಳೆಯರ ಜೀವನಕ್ಕೆ ಸಂಬಂಧಿಸಿದ 'ಪತಿತ ಪರಿವರ್ತನ' ನಾಟಕದ ಬಗ್ಗೆ ನಿಮ್ಮ ಪತ್ರಿಕೆಯಲ್ಲಿ

ನಡೆಯುತ್ತಿರುವ ಬಿರುಸಿನ ಚರ್ಚೆ ಗಮನಿಸಿದ್ದೇನೆ. ಈ ಸಂದರ್ಭದಲ್ಲಿ ನನ್ನಂಥವಳ ಪಾತ್ರ ನಿಮಗೆ ಗೊತ್ತು. ಕಾಮಪ್ರಚೋದಕ ಸಾಹಿತ್ಯದಲ್ಲಿ ಬರುವ ಅಂಗಾಂಗಗಳ ನಗ್ನ ವರ್ಣನೆ, ಕಾಮ ಚೇಷ್ಟೆ, ಇನ್ನು ಕಾಮಕ್ರಿಯೆ ಎಲ್ಲಾ ನನ್ನಂಥವಳಿಗೆ ಸಂಬಂಧಿಸಿದುದೇ. ಇದು ಪ್ರಗತಿಶೀಲರ - ಜನಪ್ರಿಯರ ಕಾಲ. ಇಂಥ ವಾದದಲ್ಲಿ ನನ್ನಂಥ ಸೂಳೆಗೂ ಒಂದು ಅಭಿಪ್ರಾಯ ಸ್ವಾತಂತ್ರ್ಯ ಉಂಟು ಅಲ್ಲವೇ ? ಇಂಥ ಅಭಿಪ್ರಾಯವನ್ನು ನೀವು ಪ್ರಕಟಿಸುವಿರಲ್ಲವೇ ? ನನ್ನ ಜೀವನದ ಬಗ್ಗೆ ನಾನು ಹೇಳ ಬೇಕಾದುದೇನಿದೆ ? ವಿರಾಮವಿಲ್ಲದೆ ವಿಟರೊಡನೆ ಕ್ರೀಡೆ ನಡೆಸುವ ಜೀವನದ ಪರಿಚಯವನ್ನು ಹಲವು ಕನ್ನಡ ಕಾದಂಬರಿಗಳು ಮಾಡಿಕೊಟ್ಟಿವೆ. 'ಪತಿತ ಪರಿವರ್ತನ' ಅದನ್ನೇ ರಂಗಭೂಮಿಯ ಮೇಲೆ ಪ್ರದರ್ಶಿಸುತ್ತಿದೆ. ಹಗಲೂ ರಾತ್ರಿಯೆನ್ನದೆ 'ಷಿಫ್ಟ್' ಪ್ರಕಾರ ಯಂತ್ರದಂತೆ ಕೆಲಸಮಾಡುವ ನನ್ನಂಥ ನಿರ್ಭಾಗ್ಯರ ನಗ್ನ ಚಿತ್ರಗಳು ಈಗ ಎಲ್ಲರ ಸ್ವತ್ತಾಗಿದೆ. ನಾವು ಸೂಳೆಯರು, ಊರ ಹೊಲಗೇರಿಗೆ ಸೇರಿದವರು . . . ಸಭ್ಯರ ಕಣ್ಣಿಂದ ಉಳಿದವರು. ಈಗಲೂ ನಮ್ಮ ಜೀವನ ತೆರೆದ ಗುಟ್ಟಾಗಿ ಉಳಿದಿದೆ. ಇದೆಲ್ಲ ದಿಟ. ಇಂಥ ವರ್ಣನೆಯ ಬಗ್ಗೆ ನಮ್ಮಂಥವರ ವಿಚಾರ ಏನು ಎಂಬುದನ್ನು ಹೇಳಿಬಿಡಲೇ ? ನೀವು ಊಹಿಸಿದಿರೇನೋ . . . ಕಾಮ ಪ್ರಚೋದನೆ ಹೆಚ್ಚಲಿ. ಈ ಸೂಳೆಯರ 'ಬಿಸಿನೆಸ್' ಹೆಚ್ಚುತ್ತದೆ . . . ಎಂದು ನಾವು ಸಂತೋಷ ಪಡುತ್ತಿರುವೆವಲ್ಲವೇ ? ಇದ್ದರೂ ಇದ್ದೀತು ! !

"ಯಾವದೋ ದೂರದ ನಾಡಂತೆ ; ಹೆಸರು ಕೇಳಿದ್ದೇನೆ ಮಾತ್ರ. ಅಲ್ಲಿನ ಜನಕ್ಕೆ ಹೊಟ್ಟೆಯ ಬಟ್ಟೆಯ ಚಿಂತೆ ಇಲ್ಲವಂತೆ. ಅಲ್ಲಿನ ಸ್ತ್ರೀಯರು ನನ್ನಂತೆ ದೇಹ ತೋರಿ ಮಾರಿ ಜೀವನ ನಡೆಸಬೇಕಾಗಿಲ್ಲವಂತೆ. ಅದು ಒಳ್ಳೆಯ ನಾಡಂತೆ. ಆದರೂ . . . ಅಲ್ಲಿನ ಜನರ ಬಾಳಿನಲ್ಲಿ ಏನೋ ಕೊರತೆಯುಂಟಂತೆ. ಬರೀ ಹೊಟ್ಟೆ ತುಂಬಿದರಾಯಿತೇ, ಆತ್ಮದ ಹಸಿವು ಹಿಂಗಬೇಡವೇ.... ಎಲ್ಲಿದೆ ಅಲ್ಲಿ ಧರ್ಮಬೋಧೆ, ತಾತ್ವಿಕ ಬೆಳಕು . . . ಎಂದೆಲ್ಲ ಬಾಯಿ ಮುಚ್ಚಿಸುವ ಸವಾಲು ಹಾಕುವರಂತೆ . . . ಹಲವರು.

" 'ಪತಿತ ಪರಿವರ್ತನ 'ದಂಥ ನಾಟಕಗಳು ಹೆಚ್ಚು ಹೆಚ್ಚಾಗಿ ರಂಗದ ಮೇಲೆ ಬರಬೇಕೆಂದು ನನ್ನ ಆಸೆ. ಹಣದ ಮುಗ್ಗಟ್ಟಿನಿಂದ ನಮ್ಮ ವ್ಯಾಪಾ

ರಕ್ಕೆ ಏಟು ಬಿದ್ದಿದೆ. 'ಪತಿತ ಪರಿವರ್ತನ' ನಮ್ಮ ವ್ಯಾಪಾರ ಕುದುರಿಸಲು ತುಂಬ ಸಹಾಯ ಮಾಡುತ್ತದೆ.

— ಜಾನಕಿ."

ಈ ರೀತಿ ಬರೆಯಬಲ್ಲ ವೇಶ್ಯೆಯಾರು ? ಎನ್ನುವ ಪ್ರಶ್ನೆ ಎಲ್ಲರ ಮನದಲ್ಲಿಯೂ ಎದ್ದಿತು.

ಬುಧುವಾರ ಪ್ರಕಟವಾದ 'ವಿಶ್ವಕರ್ಣಾಟಕ' ಪತ್ರಿಕೆಯನ್ನು ತೆಗೆದುಕೊಂಡು ಪುಟ್ಟಣ್ಣ ಕಂಪೆನಿ ಮನೆಗೆ ಓಡಿಬಂದು, ರಾಜಶೇಖರನ ಕೈಯಲ್ಲಿ ಕೊಟ್ಟ. ಸುದರ್ಶನರು ಪತಿತ ಪರಿವರ್ತನದ ಬಗ್ಗೆ ಬಂದಿದ್ದ ಎಲ್ಲ ಕಟು ಟೀಕೆಗಳನ್ನೂ ಎದುರಿಸಿ ಉತ್ತರ ಬರೆದಿದ್ದರು.

" ಯುಗವಾಣಿ – ಕಾಲದೂತ ಪತ್ರಿಕೆಗಳಲ್ಲಿ ಶ್ರೀಗಳಾದ ರಾಘವಯ್ಯನವರು, ಈಶ್ವರರಾಯರು, ವಶಿಷ್ಟರು 'ಪತಿತ ಪರಿವರ್ತನ' ನಾಟಕದ ಬಗೆ ಬರೆದಿರುವ ಲೇಖನಗಳು, ವಿಮರ್ಶೆಗಳು, ಹಾಗೂ ಅವರು ಪ್ರೇರೇಪಿಸಿ ಇತರರ ಕೈಯಲ್ಲಿ ಬರೆಸಿರುವ ಲೇಖನಗಳು ನೋಡಿದೆ. ಮಾನಸಿಕ ಸಮತೋಲನೆಯನ್ನು ಉಳಿಸಿಕೊಂಡಿರುವ ಇತರ ಪತ್ರಿಕೆಗಳು ಈ ಲೇಖನಗಳಿಗೆ ಉತ್ತರ ಕೊಡುತ್ತಾರೆಂದು ಈವರೆಗೆ ನಿರೀಕ್ಷಿಸಿದೆ. ವೃತ್ತಿ ಬಾಂಧವ್ಯವನ್ನು ಲಕ್ಷ್ಯದಲ್ಲಿಟ್ಟುಕೊಂಡು ಇತರ ಪತ್ರಿಕೆಗಳು ಮೌನ ಧರಿಸಿರುವುದು ವಿಷಾದಕರ.

"ಯುಗವಾಣಿ – ಕಾಲದೂತ ಪತ್ರಿಕೆಗಳು 'ಪತಿತ ಪರಿವರ್ತನ' ನಾಟಕವನ್ನು ಎಷ್ಟೇ ತೀಕ್ಷ್ಣವಾಗಿ ವಿಮರ್ಶಿಸಿದರೂ ನಾವು ಬೇಡವೆನ್ನುವಂತಿಲ್ಲ. ಆದರೆ ಆ ಪತ್ರಿಕೆಗಳು ವಿಮರ್ಶೆಮಾಡಿಲ್ಲ – ಅಪಪ್ರಚಾರ ಕೈಗೊಂಡಿವೆ. ಕಲಾವಿದನೊಬ್ಬನಮೇಲೆ ಜನರನ್ನು ಕೆರಳಿಸಿ, ಆತನ ಹಾಗೂ ಅತನ ಕಲಾಸೃಷ್ಟಿಯ ನಾಶಕ್ಕೆ ಹೊರಟಿವೆ. ಈ ರಾಕ್ಷಸ ಪ್ರವರ್ತನೆ ಸಹಿಸಿಕೊಳ್ಳುವುದು ನಮ್ಮ ದುರ್ಬಲತೆಯ ಚಿನ್ಹೆಯಾಗುತ್ತದೆ. ನಾಡಿನ ಭವಿಷ್ಯ ದೃಷ್ಟಿಯಿಂದ, ನಾಡಿನ ಕಲಾ ಪ್ರಗತಿಯ ದೃಷ್ಟಿಯಿಂದ ಇಂಥ ಹೀನ ಪ್ರವೃತ್ತಿಯನ್ನು ಎದುರಿಸಬೇಕಾದುದು ನಮ್ಮ ಕರ್ತವ್ಯ. 'ಪತಿತ ಪರಿವರ್ತನ' ನಾಟಕ ಬರೆದಿರುವ ಶ್ರೀ ರಾಜಶೇಖರ್ ಅವರನ್ನು ಈ ಪತ್ರಿಕೆಗಳು ಕುಲಹೀನ ಕಲಾಕಾರ – ವೇಶ್ಯಾವೃತ್ತಿ ಪ್ರವರ್ತಕ - ವ್ಯಭಿಚಾರ ಪ್ರಸಾರ ಪ್ರವೀಣ ಎಂದು ಕರೆದಿವೆ.

" 'ಪತಿತ ಪರಿವರ್ತನ' ಮಾಡಿದ ಅಪರಾಧವೇನು ? ಸಮಾಜ ಯಾವ

ವ್ಯಾಧಿಯನ್ನು ಮುಚ್ಚಿಟ್ಟುಕೊಂಡು, ಅದರಮೇಲೆ ರೇಷ್ಮೆಯ ತೆರೆ ಹಾಕಿ, ದುರ್ನಾತ ಬಡಿಯದಂತೆ ಪನ್ನೀರು ಚುಮುಕಿಸಿ ರಕ್ಷಣೆ ಮಾಡುತ್ತಿತ್ತೋ ಅದನ್ನು ನಾಟಕಕಾರರು ಬಿಚ್ಚಿಟ್ಟಿದ್ದಾರೆ. ವೇಶ್ಯಾ ಬಳಗ ಬೆಳೆಯುವುದಕ್ಕೆ ಕಾರಣ ರಾಗಿರುವ ಸಮಾಜ ಸತ್ಪುರುಷರ (?) ರೀತಿ ನೀತಿಗಳನ್ನು ಬಯಲಿಗೆಳೆದಿದ್ದಾರೆ. ಅಂಥ ಸತ್ಪುರುಷರ ಮುಖವೀಣೆಯಲ್ಲವೇ ಯುಗವಾಣಿ, ಕಾಲದೂತ ಪತ್ರಿಕೆ ಗಳು. ಅಂಥ ಸತ್ಪುರುಷರ ಕೀಳು ಪಿಪಾಸಿಗಳನ್ನು ಪೂರೈಸಿಯಲ್ಲವೇ ರಾಘ ವಯ್ಯ ಈಶ್ವರರಾಯ, ವಶಿಷ್ಟರು ತಮ್ಮ ಹೊಟ್ಟೆ ಹೊರೆದುಕೊಳ್ಳುತ್ತಿರುವುದು– ವೇಶ್ಯೆಯರ ದುಡಿಮೆಯ ರಕ್ತದ ಹಣವಲ್ಲವೇ ಈ ಮಹನೀಯರ ಟ್ವೀಡ್ ಸೂಟ್ ಫಾಲ್ಕಾನ್ ಬೀರ್, ಆಂಗ್ಲೋ ಇಂಡಿಯನ್ ಹುಡುಗಿಯರ ವಿಲಾಸಕ್ಕೆ ನೆರವಾ ಗಿರುವುದು ? ಕೊಳಚೆಯಲ್ಲಿ ಮೀಯುತ್ತಿರುವ ರಾಘವಯ್ಯ, ಈಶ್ವರರಾಯ, ವಶಿಷ್ಟರು ಒಳಹೊರಗು ರುಚಿಯಾಗಿರುವ ರಾಜಶೇಖರರಂಥ ಕಲಾವಿದರನ್ನು ಹೀಗೆಳೆಯುವ ಎದೆಗಾರಿಕೆ ತೋರುತ್ತಿರುವರಲ್ಲವೇ ? ಇದೇನು ಮಾನವ ಧರ್ಮವೋ – ಪ್ರತಿಕಾಧರ್ಮವೋ ಸಭ್ಯ ಆಚರಣೆಯೋ ?

"ಇವರ ಅಪಪ್ರಚಾರದ ಕೀರ್ತಿ ಕಳಶ 'ವೇಶ್ಯೆ ಜಾನಕಿ'ಯ ಪತ್ರ. ಷಿಫ್ಟ್ ಸಿಸ್ಟಮ್ – ರಷ್ಯಾಗಳ ಬಗ್ಗೆ ತಿಳಿದಿರುವ ವೇಶ್ಯೆ - ಅಷ್ಟು ತಿಳಿವಳಿಕೆ ಯುಳ್ಳ ವೇಶ್ಯೆ ನಮ್ಮ ದೇಶದಲ್ಲಿ ಯಾವಳಿದ್ದಾಳೋ ನಾವು ಅರಿಯೆವು. ಈ ಪತ್ರ ಕಮ್ಯುನಿಸ್ಟ್ ಈಶ್ವರರಾಯರ ಸೃಷ್ಟಿಯೆನ್ನುವುದು ಸ್ವತಃಸಿದ್ಧವಾಗಿದೆ. ರಾಜಶೇಖರರನ್ನು ಅಲ್ಲಗಳೆಯುವ ಅವಸರದಲ್ಲಿ ನಿರ್ಭಾಗ್ಯ ವೇಶ್ಯಾತಂಡವನ್ನೇ ಪ್ರಪಾತಕ್ಕೆ ತುಳಿದಿರುವ ಈ ಸಾಮ್ಯವಾದಿ, ಕಮ್ಯುನಿಸ್ಟರ ಬಣ್ಣ ಇಷ್ಟೇ ತಾನೆ ! 'ಪತಿತ ಪರಿವರ್ತನ' ವೇಶ್ಯೆಯರಿಗೆ ಒಳ್ಳೆಯ ಪ್ರಚಾರ ಕೊಡುವು ದಂತೆ - ಇದರಿಂದ ಅವರ ವ್ಯಾಪಾರ ಹೆಚ್ಚುವುದಂತೆ! ಜಾನಕಿಯಂಥ ವೇಶ್ಯೆಗೆ ಈಶ್ವರರಾಯ, ರಾಘವಯ್ಯ, ವಶಿಷ್ಟರಂಥವರು 'ಬ್ರೋಕರ್ಸ್' ಆಗಿದ್ದರೆ ಮಾತ್ರ ಇಂಥ ಬರವಣಿಗೆ ಸಾಧ್ಯ.

"ಸತ್ಯವನ್ನೆದುರಿಸುವ ಶಕ್ತಿಯಿದ್ದರೆ – ವೇಶ್ಯೆಯರ ಸ್ಥಿತಿಗತಿಯ ಬಗ್ಗೆ ರಾಜಶೇಖರರಿಗಿರುವಂತೆ ನಿಜವಾದ ಸಹಾನುಭೂತಿ ಇದ್ದರೆ ಈ ದುಷ್ಟತ್ರಯ ತಮ್ಮ ಅಪಪ್ರಚಾರ ನಿಲ್ಲಿಸಿ, ನನ್ನೊಂದಿಗೆ ಸಾರ್ವಜನಿಕರ ಸಮ್ಮುಖದಲ್ಲಿ ವಾದ ಮಾಡಲಿ.

"'ಪತಿತ ಪರಿವರ್ತನ' ಈ ಯುಗದ ಅತ್ಯುತ್ತಮ ಕಲಾಕೃತಿ. ಇದನ್ನು ಬರೆದು, ಧೈರ್ಯವಾಗಿ ಪ್ರದರ್ಶಿಸುತ್ತಿರುವ ರಾಜಶೇಖರರವರು ಕಲಾಸೇವೆಯ ಜತೆಗೆ, ಮಹೋನ್ನತ ದೇಶಸೇವೆ ಮಾಡುತ್ತಿದ್ದಾರೆ. ಜನ ಅವರ ಸೇವೆಯನ್ನು ನೋಡಿ ಸಂತೋಷಪಡುತ್ತಿದ್ದಾರೆ. ಅವರ ಸೇವೆಗೆ ರಾಘವಯ್ಯ ಮಂಡಳಿಯಂಥ ಅಲ್ಪರಿಂದ ಪೆಟ್ಟು ತಗಲಿ ನಿಂತರೆ ದೇಶಕ್ಕೆ ತುಂಬ ಅನ್ಯಾಯವಾಗುತ್ತದೆ. ಅದಕ್ಕೆ ಜಾಗೃತ ಜನತೆ ಅವಕಾಶಕೊಡದಿರಲೆಂದೇ ನನ್ನ ಹಾರೈಕೆ."

"ಇವರು ಯಾರು ಪುಟ್ಟಣ್ಣ" ಎಂದು ರಾಜಶೇಖರ್ ಕೇಳಿದ.

"ದೊಡ್ಡ ಲೇಖಕರು, ವಿಮರ್ಶಕರು, ನಾಟಕಕಾರು ಸ್ವಾಮಿ. ರುದ್ರಪ್ಪನವರ 'ರಾಮ ಪಾದುಕಾ ಪಟ್ಟಾಭಿಷೇಕ'ಕ್ಕೆ ಚಿತ್ರ-ನಾಟಕ ಬರೆದು ಕೊಟ್ಟವರು ಇವರೇ."

"ನಮ್ಮ ದೇಶದಲ್ಲಿ ತಲೆತೂಕ ಕಳೆದು ಕೊಳ್ಳದಿರುವ ಇಂಥ ಮಹನೀಯರು ಒಬ್ಬಿಬ್ಬರಾದರೂ ಇದ್ದಾರಲ್ಲಾ – ಅದೇ ಸಂತೋಷ. ಇವರು ನಿನಗೆ ಗೊತ್ತೇ ಪುಟ್ಟಣ್ಣ?"

"ಸ್ವಲ್ಪ ಗೊತ್ತು ಸ್ವಾಮಿ."

"ದಯಮಾಡಿ ಇಲ್ಲಿಗೆ ಬಂದು ನನಗೆ ದರ್ಶನ ಕೊಡಬೇಕೆಂದು ಪ್ರಾರ್ಥಿಸು."

"ಅವರು ಬರಲಾರರು ಸ್ವಾಮಿ."

"ಅವರಿಗೆ ಯಾವಾಗ ಅನುಕೂಲ ಕೇಳಿಕೊಂಡು ಬಾ. ನಾನೇ ಬರುತ್ತೇನೆ."

"ಅದಾಗಬಹುದು."

"ಸಂಜೆಗೆ ನಾಟಕಕ್ಕೆ ಕರೆದುಕೊಂಡು ಬರಲಾರೆಯಾ ?"

"ದುಡ್ಡುಕೊಟ್ಟು ಬಂದು ಎರಡು ಸಾರಿ ನಾಟಕ ನೋಡಿದ್ದಾರೆ ಸ್ವಾಮಿ. ಕಾಂಪ್ಲಿಮೆಂಟರಿ ಪಾಸು ನಾನು ಕೊಡಹೋದರೆ ಅದನ್ನು ನನ್ನ ಕೈಯಿಂದ ತೆಗೆದುಕೊಂಡು ಹರಿದು ಹಾಕಿ 'ಪುಟ್ಟಣ್ಣ' ನಿಮ್ಮ ಯಜಮಾನರು ಲೋಕೋಪಕಾರ ಮಾಡುತ್ತಿದ್ದಾರೆ – ಅವರಿಗೆ ಹಣ ಕೊಡುವಷ್ಟು ಚೈತನ್ಯ ನನಗಿಲ್ಲ – ದುಡ್ಡು ಕೊಟ್ಟು ನಾಟಕ ನೋಡುವಷ್ಟು ದೇವರು ಅನುಕೂಲ ಕೊಟ್ಟಿದ್ದಾ

ನಪ್ಪಾ. ಕಾಂಪ್ಲಿಮೆಂಟರಿ ಪಾಸು ಕೊಡುವ ಅಭ್ಯಾಸ ಒಳ್ಳೆಯದಲ್ಲ - ಅದನ್ನು ನಿಲ್ಲಿಸಿಬಿಡಿ' ಎಂದು ಹೇಳಿದರು."

"ನೀನು ಹೇಳುವುದು ಕೇಳಿದರೆ ಕಟ್ಟುಕಥೆ ಇದ್ದ ಹಾಗಿದೆಯಲ್ಲಾ ಪುಟ್ಟಣ್ಣ. ಲೋಕದಲ್ಲಿ ಇಂಥವರೂ ಇದ್ದಾರೇನೋ ?"

"ಸುದರ್ಶನರು ಇದ್ದಾರೆ ಸ್ವಾಮಿ."

"ದೇವಿ ಅವರನ್ನು ರಕ್ಷಿಸಲಿ."

ಎಂದು ರಾಜಶೇಖರನ ಹೃದಯಾಂತರಾಳದಿಂದ ಪ್ರಾರ್ಥನೆ ಹೊರ ಹೊಮ್ಮಿತು.

ಪುಟ್ಟಣ್ಣನ ಸೇವಾತತ್ಪರತೆ, ಶ್ರದ್ಧೆ, ವಿನಯ ಕಂಡು ರಾಜಶೇಖರನಿಗೆ ಅವನ ವಿಷಯದಲ್ಲಿ ಒಳ್ಳೆಯ ಅಭಿಪ್ರಾಯ ವಿದ್ದುದಲ್ಲದೆ ವಿಶ್ವಾಸವೂ ಹುಟ್ಟಿತ್ತು. ಪುಟ್ಟಣ್ಣನನ್ನು ತನ್ನ ಅಂತರಂಗ ಸಚಿವ ಮಾಡಿಕೊಂಡಿದ್ದ.

"ಸುದರ್ಶನರಿಗೂ ನಿನಗೂ ಸ್ನೇಹವೋ ಪುಟ್ಟಣ್ಣ."

"ದೊಡ್ಡವರು – ಅವರ ಸ್ನೇಹ ಬೆಳೆಸುವ ಯೋಗ್ಯತೆ ನನಗೆಲ್ಲಿದೆ ಸ್ವಾಮಿ. ಆಗಾಗ್ಗೆ ಅವರ ಮನೆಗೆ ಹೋಗುತ್ತಿರುತ್ತೇನೆ. ಒಳ್ಳೆಯ ವಿಷಯ ಗಳು ಹೇಳುತ್ತಿರುತ್ತಾರೆ. ಓದುವುದಕ್ಕೆ ಪುಸ್ತಕಗಳು ಕೊಡುತ್ತಿರುತ್ತಾರೆ."

"ಈ ನಾಟಕ ನಡೆಯುತ್ತಿರುವಾಗಲೇ ನಾವು ಬೇರೆ ನಾಟಕ ತೆಗೆದು ಕೊಳ್ಳಬೇಕಪ್ಪ. ನಾಲ್ಕು ನಾಟಕ ಮಾಡಿಕೊಂಡು, ನಾವು ಪ್ರವಾಸ ಹೊರ ಡಬೇಕು – ಬೆಂಗಳೂರಿನಲ್ಲಿಯೇ ಕುಳಿತಿರುವುದಕ್ಕಾಗುವುದಿಲ್ಲ. ಹಿರಣ್ಣಯ್ಯ ನವರು ಬಂದರೆ ಥಿಯೇಟರ್ ಅವರಿಗೆ ಬಿಟ್ಟುಕೊಡಬೇಕು."

"ಹೌದು ಸ್ವಾಮಿ. ಹೊಸ ನಾಟಕಗಳು ಮಾಡಿಕೊಳ್ಳಬೇಕು."

"ನಮಗೆ ಒಂದು ನಾಟಕ ಬರೆದುಕೊಡಿ ಎಂದು ಸುದರ್ಶನರನ್ನು ಕೇಳ ಬಾರದೇ ?"

"ಕೇಳಿ ನೋಡುತ್ತೇನೆ ಸ್ವಾಮಿ. ಅವರು ಒಪ್ಪುತ್ತಾರೆಯೋ ಇಲ್ಲವೋ ಗೊತ್ತಿಲ್ಲ."

"ಅವರನ್ನು ಒಪ್ಪಿಸುವುದು ನಿನ್ನ ಕೆಲಸವಪ್ಪಾ."

ಎಂದು ರಾಜಶೇಖರ ಹೇಳಿದ.

ತಾವು ನಿರ್ಮಾಣ ಮಾಡಿ ಪ್ರಕಟಿಸಿದ ವೇಶ್ಯೆಯ ಪತ್ರಕ್ಕೆ ಸುದರ್ಶನ

ರಂಥ ಶ್ರೇಷ್ಠ ಸಾಹಿತಿಗಳು ಉತ್ತರ ಬರೆದುದನ್ನು ಕಂಡು ರಾಘವಯ್ಯ, ಈಶ್ವರ ರಾಯ ಗಾಬರಿಯಾದರು. ತಮ್ಮ ಅಪಪ್ರಚಾರ ಯಂತ್ರವನ್ನು ಸುದರ್ಶನರ ಕಡೆ ತಿರುಗಿಸಿ 'ನಾಟಕದ ಕಂಪೆನಿಯವರು ದುಡ್ಡು ಕೊಟ್ಟು ಸುದರ್ಶನರ ಕೈಯಲ್ಲಿ ಲೇಖನಗಳನ್ನು ಬರೆಸುತ್ತಿದ್ದಾರೆ. ಸಾರ್ವಜನಿಕರ ಹಿತಸಂರಕ್ಷಣೆಯ ದೃಷ್ಟಿಯಿಂದ ಇನ್ನಾದರೂ ಸರ್ಕಾರ ಕಾರ್ಯೋನ್ಮುಖರಾಗಿ ಶ್ರೀ ರಾಜಶೇಖರರಂಥ ನಾಟಕಕಾರರನ್ನೂ ಶ್ರೀ ಸುದರ್ಶನರಂಥ ಸಾಹಿತಿಗಳನ್ನೂ ಶಿಕ್ಷಿಸಬೇಕು' ಎಂದು ಬರೆಯ ತೊಡಗಿದರು.

ರಾಘವಯ್ಯ ತನ್ನ ಪ್ರಯತ್ನ ಮುಂದುವರಿಸಿ ಒಬ್ಬ ಪೋಲೀಸ್ ಇನ್ಸ್‌ಪೆಕ್ಟರನ್ನು ಒಳಗೆ ಹಾಕಿಕೊಂಡು, ರಾಜಶೇಖರನ ಕಂಪೆನಿಯ ಜನಗಳಿಗೆ ಕಿರುಕುಳ ಕೊಡತೊಡಗಿದ. ನಟ, ನಟಿಯರನ್ನು ಪೋಲೀಸಿನವರು ಬಂದು ಕಾಣುವುದು, ಅವರನ್ನು ಇಲ್ಲಸಲ್ಲದ ಪ್ರಶ್ನೆ ಕೇಳುವುದು ಆರಂಭವಾಯಿತು.

ಪ್ರತಿ ದಿನವೂ ಯಾರಾದರೊಬ್ಬರಿಗೆ ಇಂಥ ಅನುಭವವಾಗುತ್ತಿತ್ತು. ಪೋಲೀಸಿನವರ ಕಿರುಕುಳಕ್ಕೆ ಕೆಲವು ನಟರು ತಲ್ಲಣಿಸಿ ಹೋಗಿದ್ದರು. ಒಂದೊಂದು ದಿನ ನಾಟಕದಲ್ಲಿ ಗಲಭೆಯೂ ಆಗ ತೊಡಗಿತು. ನಾಲ್ಕಾಣೆಯ ವರ್ಗದಿಂದ ಕಲ್ಲು ಹಾರಿಬಂದು ರಂಗದ ಮೇಲೆ ಬೀಳುತ್ತಿತ್ತು. ಶೋಕ ದೃಶ್ಯ ನಡೆಯುತ್ತಿದ್ದಾಗ ಯಾರಾದರೂ ನಾಯಿ, ಬೆಕ್ಕಿನಂತೆ ಕೂಗುತ್ತಿದ್ದರು. ಕಾವಲಿಗಿದ್ದ ಪೋಲೀಸಿನವರಿಗೂ ಈ ಗಲಭೆಯನ್ನು ತಡೆಗಟ್ಟಲು ಸಾಧ್ಯವಾಗಲಿಲ್ಲ.

ಒಂದು ದಿನ ರಿಹರ್ಸಲ್ ನಿಲ್ಲಿಸಿ ರಾಜಶೇಖರ ತನ್ನ ನಟ ನಟಿಯರ ಸಭೆ ಸೇರಿಸಿದ. ವಿಶೇಷ ಆಮಂತ್ರಣದ ಮೇರೆಗೆ ರಂಗಸ್ವಾಮಿ, ಸೌಭಾಗ್ಯಮ್ಮನೂ ಸಭೆಗೆ ಬಂದಿದ್ದರು. ಮೈಯಲ್ಲಿ ಜ್ವರ ಕಾಯುತ್ತಿದ್ದರೂ ಲೆಕ್ಕಿಸದೆ ಪುಟ್ಟಣ್ಣನೂ ಬಂದಿದ್ದ.

"ಈ ಪರಿಸ್ಥಿತಿ ಎದುರಿಸುವುದು ಹೇಗೆ" ಎನ್ನುವ ಪ್ರಶ್ನೆಯನ್ನು ರಾಜಶೇಖರ ಎಲ್ಲರ ಮುಂದಿಟ್ಟ.

"ಸಂಬಂಧಪಟ್ಟ ಅಧಿಕಾರಿಗಳನ್ನೇ ಕರೆದು ನಾಟಕ ತೋರಿಸಿ ಅವರ ಅಭಿಪ್ರಾಯ ತಿಳಿಯುವುದು ಒಳ್ಳೆಯದು."

ಎಂದು ರಂಗಸ್ವಾಮಿ ಸಲಹೆಯಿತ್ತ.

ಬರುವ ಶನಿವಾರ ಒಂದು ವಿಶೇಷ ಪ್ರದರ್ಶನವನ್ನಿಟ್ಟುಕೊಂಡು,

ಸರ್ಕಾರ, ಸಮಾಜ, ಸಾಹಿತ್ಯ, ಕಲಾ, ಪತ್ರಿಕಾ ವರ್ಗದ ಎಲ್ಲ ಪ್ರಮುಖ ರನ್ನೂ ಕರೆದು ನಾಟಕ ತೋರಿಸುವುದೆಂದು ನಿಶ್ಚಯಿಸಲಾಯಿತು.

ಪುಟ್ಟಣ್ಣನಿಗೆ ಚೆನ್ನಾಗಿ ಇಂಗ್ಲಿಷ್, ಟೈಪ್‌ರೈಟಿಂಗ್ ಬರುತ್ತಿದ್ದುದರಿಂದ, ಆಮಂತ್ರಣ ವಿನಿಯೋಗ ಮಾಡುವ ಕೆಲಸ ಅವನಿಗೆ ವಿಧಿಸಲ್ಪಟ್ಟಿತು.

"ಇಷ್ಟು ಕೆಲಸ ಹೇಗೆ ಮಾಡುತ್ತೀ ಪುಟ್ಟಣ್ಣ – ನಿನಗೆ ಜ್ವರ ಬೇರೆ ಬರುತ್ತಿದೆ."

"ಇರಲಿ ಸ್ವಾಮಿ ನಾನು ಮಾಡುತ್ತೇನೆ. ಇನ್‌ಫ್ಲುಯಂಜಾ ಜ್ವರ– ಹೋಗುತ್ತದೆ."

"ಔಷಧ ತೆಗೆದುಕೊಳ್ಳುತ್ತಿರುವೆಯಾ ?"

"ಡಾಕ್ಟರು ಎರಡು ಪೆನ್ಸಿಲಿನ್ ಇಂಜಕ್ಷನ್ ಕೊಟ್ಟರು ಸ್ವಾಮಿ."

"ಜ್ವರ ನಿಂತೇ ಇಲ್ಲ."

"ಇನ್ನೂ ಮೂರು ನಾಲ್ಕು ಇಂಜಕ್ಷನ್ ಕೊಡಬೇಕೆಂದರು."

"ಇನ್‌ಫ್ಲುಯಂಜಾಗೆ ಔಷಧಕ್ಕಿಂತ ಉಪಚಾರ ಮುಖ್ಯ ಪುಟ್ಟಣ್ಣ – ನೀನು ಇವತ್ತಿನಿಂದ ನನ್ನ ಮನೆಯಲ್ಲಿಯೇ ಇದ್ದುಬಿಡು."

"ನಿಮಗೇಕೆ ಸ್ವಾಮಿ ತೊಂದರೆ."

"ತೊಂದರೆಯೇನು ಬಂತು - ಮನೇ ತುಂಬ ಖಾಲಿ ರೂಮು ಗಳಿವೆ."

ಪುಟ್ಟಣ್ಣ ಆಗಲೆಂದು ಒಪ್ಪಿಕೊಂಡು, ಅಂದೇ ತನ್ನ ಸಾಮಾನು ತೆಗೆಸಿಕೊಂಡು ರಾಜಶೇಖರನ ಮನೆಗೇ ವಾಸಕ್ಕೆ ಬಂದ.

ರಾಜಶೇಖರ ಪುಟ್ಟಣ್ಣನನ್ನು ಮನೆಗೆ ಬರಮಾಡಿಕೊಂಡುದರ ಉದ್ದೇಶ ಏನಿರಬಹುದೆಂದು ಪರಮೇಶ್ವರಯ್ಯ, ರಂಗಸ್ವಾಮಿ, ಸೌಭಾಗ್ಯಮ್ಮ ಚರ್ಚೆ ಮಾಡಿದರು – ಅವರಿಗೆ ಸಮಸ್ಯೆ ಬಗೆ ಹರಿಯಲಿಲ್ಲ.

ಶನಿವಾರದ ವಿಶೇಷ ಪ್ರದರ್ಶನಕ್ಕೆ ಹೆಚ್ಚಿನ ವ್ಯವಸ್ಥೆ ಮಾಡಲಾಯಿತು. ಅಂದು ಆಮಂತ್ರಿತರಿಗಷ್ಟೇ ಪ್ರವೇಶ – ಟಿಕೆಟ್ ಮಾರಾಟಕ್ಕಿರಲಿಲ್ಲ. ಗೃಹ ಮಂತ್ರಿಗಳನ್ನೇ ಅಧ್ಯಕ್ಷತೆಗೆ ಕರೆಯಲಾಗಿತ್ತು. ಹೈ ಕೋರ್ಟ್, ಸೆಷನ್ಸ್ ಕೋರ್ಟು, ಮ್ಯಾಜಿಸ್ಟ್ರೇಟ್ ಕೋರ್ಟಿನ ನ್ಯಾಯಾಧೀಶರು, ಸರ್ಕಾರಿ ಅಧಿ ಕಾರಿಗಳು, ಪೋಲೀಸ್ ಐ. ಜಿ. ಪಿ.ಯವರು, ಡಿ. ಎಸ್. ಪಿ., ಎ. ಎಸ್. ಪಿ.

ಗಳು ಕಾಲೇಜ್ ಪ್ರೊಫೆಸರುಗಳು, ಸಾಹಿತಿಗಳು, ಕಲಾವಿದರು, ಪತ್ರಿಕಾ ಕರ್ತರು ಎಲ್ಲರಿಗೂ ಆಹ್ವಾನ ಪತ್ರಗಳು ಹೋಗಿದ್ದವು.

ಅತಿಥಿಗಳ ಉಪಹಾರ ಮುಗಿಯಿತು.

ಆಮಂತ್ರಿತರು ಯಾರೂ ತಪ್ಪಿಸಿಕೊಂಡಿರಲಿಲ್ಲ. ಮುಖ್ಯಮಂತ್ರಿಗಳು, ಶಿಕ್ಷಣ ಮಂತ್ರಿಗಳು ಪ್ರವಾಸದಲ್ಲಿದ್ದುದರಿಂದ ಅವರಿಬ್ಬರು ಮಾತ್ರ ಬಂದಿರಲಿಲ್ಲ. ರಾಘವಯ್ಯ, ಈಶ್ವರರಾಯ, ವಶಿಷ್ಟ ಬಂದು ಒಂದೆಡೆ ಅಡಗಿ ಕುಳಿತ್ತಿದ್ದರು. ಅವರ ಹಿಂದೆ ಸ್ವಲ್ಪ ದೂರದಲ್ಲಿ ಸುದರ್ಶನರು ಕುಳಿತ್ತಿದ್ದರು.

ಗೃಹಮಂತ್ರಿಗಳು ಬಂದೊಡನೆಯೇ ನಾಟಕ ಆರಂಭವಾಯಿತು.

ಪ್ರೇಕ್ಷಕರು ಸಾಲಭಂಜಿಕೆಗಳಂತೆ ಕುಳಿತು ನಾಟಕ ನೋಡಿದರು.

ಕೆಲವರ ಕಣ್ಣಲ್ಲಿ ನೀರು ಧಾರಾಕಾರವಾಗಿ ಹರಿಯುತ್ತಿತ್ತು – ಕೆಲವರು ಕಣ್ಣು ಮೂಗಿಗೆ ಕರವಸ್ತ್ರ ಕೊಟ್ಟು ಕುಳಿತ್ತಿದ್ದರು.

ನಾಟಕ ಮುಗಿಯುತ್ತ ಬಂದಿರಲು ರಂಗದ ಮೇಲೆ ಕುರ್ಚಿ ಮೇಜು ಹಾಕಿಸಿ, ರಾಜಶೇಖರ ಗೃಹಮಂತ್ರಿಗಳನ್ನು ವೇದಿಕೆಯ ಮೇಲೆ ಕರೆದೊಯ್ದು.

ಗೃಹಮಂತ್ರಿಗಳಿಗೆ ಹಾರ, ತುರಾಯಿ ಅರ್ಪಿಸಿದ ಮೇಲೆ

"ಇಂದು ತಮ್ಮನ್ನು ಬರಮಾಡಿಕೊಂಡಿರುವುದರ ಉದ್ದೇಶ ಸ್ಪಷ್ಟವಾಗಿದೆ. ಆರು ವಾರಗಳಿಂದ ನಾವು ಈ ನಾಟಕ ಆಡುತ್ತಿದ್ದೇವೆ. ಸಹಸ್ರಾರು ಜನ ಬಂದು ನೋಡಿ ಹೋಗಿದ್ದಾರೆ. ಈ ಮಧ್ಯೆ ಕೆಲವು ಪತ್ರಿಕೆಗಳು 'ಪತಿತ ಪರಿವರ್ತನ' ನಾಟಕ ಅಶ್ಲೀಲವೆಂದೂ, ಜನತೆಯನ್ನು ದುರ್ಮಾರ್ಗಕ್ಕೆಳಿಸುವುದಾಗಿಯೂ ವಿಮರ್ಶೆ ಮಾಡಿದವು. ವಿಮರ್ಶೆಗೇ ಅವರ ಬರವಣಿಗೆ ನಿಲ್ಲದೆ, ಅಪಪ್ರಚಾರಕ್ಕೂ ಹೊರಟಿತು. ಅದೇ ಪತ್ರಿಕಾಕರ್ತರು ನಾಟಕ ನಿಲ್ಲಿಸುವ ಪ್ರಯತ್ನ ಮಾಡಿದರು. ಪ್ರೇಕ್ಷಕ ವರ್ಗದಲ್ಲಿದ್ದ ಕೆಲವರು ರಂಗದ ಮೇಲೆ ಕಲ್ಲೆಸೆದರು. ನಾಟಕ ನಡೆಯುತ್ತಿದ್ದಾಗ ಗುಲ್ಲೆಬ್ಬಿಸಿದರು. ಅವರಿಂದ ಪ್ರೇರಿತರಾದ ಕೆಲವು ಪೋಲೀಸಿನವರು ನಮ್ಮ ಕಂಪೆನಿಯ ನಟನಟಿಯರಿಗೆ ಕಿರುಕುಳ ಕೊಡಲಾರಂಭಿಸಿದರು.

"ಜನತೆ ನಾಶವಾದರೂ ಚಿಂತೆಯಿಲ್ಲ, ಹಣಸಂಪಾದನೆಯೇ ಮುಖ್ಯವೆಂಬ ದುರಾಶೆಯಿಂದ ನಾನು ಈ 'ಪತಿತ ಪರಿವರ್ತನ' ನಾಟಕ ಬರೆದು ಆಡಿಸುತ್ತಿರುವೆನೆಂದು ಕೆಲವು ಪತ್ರಿಕೆಗಳು ಆಪಾದನೆ ಮಾಡಿವೆ.

"ತಾವು ನಾಟಕ ನೋಡಿದ್ದೀರಿ - ಅದು ಮಾಡುವ ಪರಿಣಾಮವನ್ನು ಅನುಭವಿಸಿದ್ದೀರಿ. ಈ ನಾಟಕ ಅಶ್ಲೀಲ ಪ್ರತಿಪಾದನೆ ಮಾಡಿ, ಜನತೆಯ ನೀತಿಭಂಗಕ್ಕೆ ಕಾರಣವಾಗುತ್ತದೆಯೋ ಶೀಲವನ್ನು ಹೆಚ್ಚಿಸಿ, ನೀತಿರಕ್ಷಣೆಗೆ ನೆರವಾಗುತ್ತದೆಯೋ ತಾವು ನಿರ್ಧರಿಸಿ ಹೇಳಬೇಕು. ಈ ನಾಟಕದಿಂದ ನಾಡಿನ ಮೇಲೆ ದುಷ್ಪರಿಣಾಮವಾಗುವುದೆಂದು ತಾವು ಅಭಿಪ್ರಾಯಪಟ್ಟರೆ ನಾನು ನಾಳಿನಿಂದಲೇ ನಾಟಕ ನಿಲ್ಲಿಸುವುದಾಗಿ ವಚನ ಕೊಡುತ್ತೇನೆ.

"ನಾಟಕವನ್ನು ನಿಷ್ಪಕ್ಷಪಾತವಾಗಿ ವಿಮರ್ಶಿಸಿ, ಸಮಾಜ ಜೀವನದ ಮೇಲೆ ಅದು ಬೀರುವ ಪ್ರಭಾವವೇನೆಂಬುದನ್ನು ನಾನು ಹೇಳುವುದಕ್ಕಿಂತಲೂ ನಮ್ಮ ನಾಡಿನ ಪ್ರಗತಿಶೀಲ ಸಾಹಿತ್ಯಶ್ರೇಷ್ಠರಾದ ಮಾನ್ಯ ಸುದರ್ಶನರು ಬರೆದಿರುವ ಲೇಖನವನ್ನೇ ಓದಿಬಿಡುತ್ತೇನೆ"

ಎಂದು ಹೇಳಿ ಸುದರ್ಶನರ ಲೇಖನವನ್ನೋದಿ ಕುಳಿತುಕೊಂಡ.

ಪ್ರೇಕ್ಷಕರು ದೀರ್ಘಕಾಲ ಕರತಾಡನ ಮಾಡಿ ತಮ್ಮ ಮೆಚ್ಚುಗೆ ವ್ಯಕ್ತ ಮಾಡಿದರು.

ಗೃಹ ಮಂತ್ರಿಗಳೆದ್ದು ತಮ್ಮ ಭಾಷಣ ಆರಂಭಿಸಿದರು

"ಕರ್ನಾಟಕ ನವೋದಯ ನಾಟಕ ಮಂದಿರದ ಒಡೆಯರಾದ ಶ್ರೀ ರಾಜಶೇಖರ್ ಅವರು ಕಳಕಳಿಯಿಂದ ಮಾತನಾಡಿದ್ದಾರೆ. ನಾನು ಇದುವರೆಗೆ ಕಾರ್ಯಭಾರದಿಂದ ಈ ನಾಟಕ ನೋಡಿರಲಿಲ್ಲ. ಆದರೆ ನಾಟಕದ ಪರ ವಾಗಿಯೂ, ವಿರುದ್ಧವಾಗಿಯೂ ಬಂದಿರುವ ಎಲ್ಲಾ ಅಭಿಪ್ರಾಯಗಳನ್ನೂ ಓದಿನೋಡಿದ್ದೇನೆ. ನಾಟಕ ನೋಡುವ ಅವಕಾಶ ಕಲ್ಪನೆ ಮಾಡಿಕೊಟ್ಟ ಶ್ರೀ ರಾಜಶೇಖರ್ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

"ನಾಟಕ ಅಶ್ಲೀಲವೆಂದೂ, ಸಮಾಜಶೀಲಕ್ಕೆ ಕುಠಾರಪ್ರಾಯವಾಗಿದೆ ಯೆಂದೂ ಸಿದ್ಧವಾದರೆ ತಾವು ಅದನ್ನು ನಿಲ್ಲಿಸುವುದಾಗಿ ಶ್ರೀರಾಜಶೇಖರ್ ಹೇಳಿದರು. ಅವರ ಧೈರ್ಯದ ಮಾತು ಹಾಗೂ ಅದರ ಹಿಂದಿನ ಸತ್ಯಪ್ರೇಮ ವನ್ನು ನಾನು ಬಹಳ ಮೆಚ್ಚಿಕೊಂಡಿದ್ದೇನೆ.

"ಈಗ ನಾವು ನೋಡಿರುವ ನಾಟಕ, ಸಮಾಜದ ಒಂದು ಪ್ರಬಲಸಮಸ್ಯೆ ಯನ್ನು ಕುರಿತಾದುದು. ಈ ಸಮಸ್ಯೆ ನೀಗಬೇಕಾದರೆ ಸರ್ಕಾರ, ಜನತೆ, ಸಮಾಜದ ಮುಂದಾಳುಗಳು ಕೂಡಿ ನಡೆಯಬೇಕೆಂದು ನಾಟಕಕಾರು ವಿವರಿ

ಸಿದ್ದಾರೆ. ಜನತೆಯಲ್ಲಿ ಜಾಗೃತಿ ಅತ್ಯವಶ್ಯಕವೆನ್ನುವುದನ್ನು ಮನಮುಟ್ಟು ವಂತೆ ಮಂಡಿಸಿದ್ದಾರೆ. ಇಂಥ ನಾಟಕಗಳು ಹೆಚ್ಚುಹೆಚ್ಚಾಗಿ ರಂಗದ ಮೇಲೆ ಬಂದು ಜನತೆಯನ್ನು ಜಾಗೃತರನ್ನಾಗಿ ಮಾಡಬೇಕೆಂದು ನನ್ನ ಅಭಿಪ್ರಾಯ.

[ಪ್ರೇಕ್ಷಕರಿಂದ ಪ್ರಚಂಡ ಕರತಾಡನ]

"ಇದೇಮಾತನ್ನು ಕೆಲವು ದಿನಗಳ ಹಿಂದೆ ಕೇಂದ್ರ ಸರ್ಕಾರದ ಆರೋಗ್ಯ ಮಂತ್ರಿಗಳಾದ ರಾಜಕುಮಾರಿ ಅಮೃತ ಕೌರವರು ಹೇಳಿರುವುದು ನಿಮ್ಮ ನೆನಪಿನಲ್ಲಿರಬಹುದು. ಸಮಾಜ ಶುಚಿಯಾಗಬೇಕಾದರೆ ಅದರ ಹೊಲಸು ಹೋಗಬೇಕು – ಹೊಲಸು ಹೋಗಬೇಕಾದರೆ ಅದರ ಮೇಲೆ ಬೆಳಕು ಬೀಳ ಬೇಕು. ಸರ್ಕಾರ ಮಾಡಬೇಕಾಗಿರುವ ಕೆಲಸವನ್ನೇ ಶ್ರೀ ರಾಜಶೇಖರ್ ಅವರು ಮಾಡುತ್ತಿರುವುದು ಅಭಿಮಾನಕ್ಕೆ ಕಾರಣವಾಗಬೇಕೇ ವಿನಾ, ಖಂಡನೆಗೆ ಕಾರಣವಾಗಬಾರದು.

"ಊರೂರುಗಳಲ್ಲಿ, ಹಳ್ಳಿ ಹಳ್ಳಿಗಳಲ್ಲಿ ಈ ನಾಟಕ ಪ್ರದರ್ಶಿತವಾಗ ಬೇಕು. ನಾಟಕದ ಗ್ರಂಥ ಅಚ್ಚಾಗಿ ಎಲ್ಲರ ಕೈ ಸೇರಬೇಕು.

[ಪ್ರೇಕ್ಷಕರಿಂದ ಮತ್ತೆ ಕರತಾಡನ]

ಅಶ್ಲೀಲವಾದುದಾಗಲಿ, ಸಮಾಜ ನೀತಿಗೆ ಭಂಗತರುವಂಥಾದ್ದಾಗಲಿ ನಾಟಕ ದಲ್ಲಿ ನನಗೇನೂ ಕಂಡು ಬಂದಿಲ್ಲ. ನಿರ್ಭಾಗ್ಯ ಜೀವಿಗಳ ಕರುಣಾಜನಕ ಪರಿಸ್ಥಿತಿಯನ್ನು ಬಣ್ಣಿಸುತ್ತಾ ನಾಟಕಕಾರರು ನಮ್ಮ ಅನುಕಂಪದ ಮೇಲೆ ಲಾಸ್ಯವಾಡಿದ್ದಾರೆ. ಅವರು ಮಾಡಿರುವ ಸೇವೆ ಕೇವಲ ಕಲಾಸೇವೆಯಲ್ಲ – ರಾಷ್ಟ್ರಸೇವೆ.

"ಪೋಲೀಸಿನವರಿಂದಾಗಲಿ ಪುಂಡರಿಂದಾಗಲಿ ನಾಟಕಕ್ಕೂ ನಟರಿಗೂ ತೊಂದರೆಯಾಗದಂತೆ ನಾನು ವ್ಯವಸ್ಥೆ ಮಾಡುತ್ತೇನೆ.

"ನಮ್ಮ ನಾಡಿನ ಕಲಾವಿದರಿಗೂ, ಸಾಹಿತಿಗಳಿಗೂ ಸಿಕ್ಕುತ್ತಿರುವ ಪ್ರೋತ್ಸಾಹ ನಮ್ಮ ರಾಷ್ಟ್ರದ ಘನತೆಗೆ ತಕ್ಕುದಾಗಿಲ್ಲ. ರಾಷ್ಟ್ರೋದ್ಧಾರಕ್ಕೆ ನೆರವಾಗುವ 'ಪತಿತ ಪರಿವರ್ತನ'ದಂಥ ಕಲಾಕೃತಿಯನ್ನು ನಿರ್ಮಿಸಿರುವ ಶ್ರೀ ರಾಜಶೇಖರ್ ಅವರ ಪ್ರಯತ್ನವನ್ನು ಆದರಿಸಿ ಗೌರವಿಸುವುದರ ಬದಲು ಅವರ ಮೇಲೆ, ಅವರ ಮಂಡಳಿಯ ಮೇಲೆ ಬೈಗಳ ಮಳೆ ಸುರಿಸುವುದು ನಮ್ಮ ಅವನತಿಯ ಚಿಹ್ನೆ.

"ಶ್ರೀ ರಾಜಶೇಖರ್ ಅವರಿಗೂ, ಅವರ ಮಂಡಳಿಯ ಎಲ್ಲ ಕಲಾವಿದರಿಗೂ ನಾನು ಮತ್ತೊಮ್ಮೆ ಧನ್ಯವಾದಗಳನ್ನರ್ಪಿಸುವುದಲ್ಲದೆ ಅವರ ಕಲಾಸೇವೆ, ರಾಷ್ಟ್ರಸೇವೆಗೆ ನನ್ನಿಂದ ಆಗಬಹುದಾದ ಸಹಾಯ ಮಾಡಲು ಸಿದ್ಧನಾಗಿದ್ದೇನೆಂದು ಆಶ್ವಾಸನ ಕೊಡಲು ಸಂತೋಷಪಡುತ್ತೇನೆ."

[ಸಭಿಕರು ದೀರ್ಘಕಾಲ ಕರತಾಡನ ಮಾಡಿದರು.]

ಯಾವದೋ ಸಂದರ್ಭದಲ್ಲಿ ರಾಘವಯ್ಯ, ಈಶ್ವರರಾಯ, ವಶಿಷ್ಟ ನುಸುಳಿಕೊಂಡು ಹೊರಟು ಹೋಗಿದ್ದರು.

ಮಾನ್ಯ ಮಂತ್ರಿಗಳನ್ನು ಕಳುಹಿಸಿ ಬರಲು ರಾಜಶೇಖರ ಅವರ ಕಾರಿನವರೆಗೆ ಬಂದ. ಮಂತ್ರಿಗಳು ಪ್ರಸನ್ನವದನರಾಗಿ

"ಮಂಡಳಿಯನ್ನು ನೀವು ಸಹಕಾರ ಪದ್ಧತಿಯ ಮೇಲೆ ನಡೆಸುತ್ತಿರುವಿರಂತೆ !"

"ಹೌದು ಸ್ವಾಮಿ."

"ಸಂತೋಷ. ವರದಾಚಾರ್ಯರು, ಪೀರ್ ಸಾಹೇಬರು ಅಪೂರ್ಣವಾಗಿ ಬಿಟ್ಟು ಹೋಗಿರುವ ಕೆಲಸವನ್ನು ನೀವು ಪೂರ್ಣಮಾಡಿ."

"ತಮ್ಮ ಆಶೀರ್ವಾದ"

ಎಂದು ರಾಜಶೇಖರ ಕೈ ಮುಗಿದ. ಮಂತ್ರಿಗಳ ಕಾರು ಹೊರಟಿತು.

ಪ್ರೇಕ್ಷಕರಾಗಿದ್ದವರು ಬಂದು ರಾಜಶೇಖರನ ಕೈ ಕುಲುಕಿಸಿ ಅಭಿನಂದನೆಯನ್ನರ್ಪಿಸಿದರು.

ಎಲ್ಲರೂ ಹೋದ ಮೇಲೆ ಯಾರೋ ರಂಗದ ಒಳಗೆ ಬಂದು ರಾಜಶೇಖರನನ್ನು ನೋಡಿ

"ನನ್ನ ಅಭಿನಂದನೆಯನ್ನೂ ಸ್ವೀಕರಿಸಿ. ಸತ್ಯಕ್ಕೆ ಪರಾಜಯವಿಲ್ಲ."

"ಎಲ್ಲಾ ದೇವಿಯ ಅನುಗ್ರಹ. ತಾವು ಯಾರು ?"

"ನಾನೇ ಸುದರ್ಶನ"

ರಾಜಶೇಖರನ ಬಾಯಲ್ಲಿ ಮಾತು ಹೊರಡಲಿಲ್ಲ. ಸುದರ್ಶನರನ್ನಪ್ಪಿ ಆನಂದಭಾಷ್ಪಗಳನ್ನು ಸುರಿಸಿದ. ಈ ದೃಶ್ಯ ನೋಡಿದ ಪುಟ್ಟಣ್ಣ ಎರಡು ಕುರ್ಚಿಗಳನ್ನು ತಂದು ರಂಗದ ಮೇಲೆ ಹಾಕಿದ.

"ನೀವು ನಾಟಕಕ್ಕೆ ಬಂದಿರಲ್ಲಾ – ನನ್ನ ಸಂತೋಷಕ್ಕೆ ಪಾರವೆಲ್ಲಿ ?"

"ನೀವು ಪ್ರತಿಭಾಶಾಲಿಗಳಾದ ಕಲಾವಿದರು ರಾಜಶೇಖರ್."

ಆ ವೇಳೆಗೆ ಪುಟ್ಟಣ್ಣ ಎಲ್ಲರಿಗೂ ಸುದ್ದಿ ಮುಟ್ಟಿಸಿದ್ದ. ಬಂದು ಸೇರಿದ್ದ ನಟನಟಿಯರ ಪರಿಚಯವನ್ನು ಸುದರ್ಶನರಿಗೆ ರಾಜಶೇಖರ್ ಮಾಡಿ ಕೊಟ್ಟ.

ಸುದರ್ಶನ ಹೊರಡಲು ಎದ್ದು ನಿಂತ.

"ಹೊರಡಬೇಕೇ !"

"ಹೊತ್ತಾಯಿತು. ಮನೆಯಲ್ಲಿ ನನ್ನ ತಂಗಿ ಕಾದಿರುತ್ತಾಳೆ."

"ಮತ್ತೆ ಯಾವಾಗ ದರ್ಶನ."

"ಯಾವಾಗಲಾದರೂ ಬರುತ್ತೇನೆ."

"ಪುಟ್ಟಣ್ಣನ ಕೈಯಲ್ಲಿ ಒಂದು ವಿಷಯ ಹೇಳಿಕಳಿಸಿದ್ದೆ."

"ಹೇಳಿದ – ಆಗಲಿ ಯೋಚನೆ ಮಾಡುತ್ತೇನೆ."

ಸುದರ್ಶನರ ಜತೆ ರಾಜಶೇಖರ, ಪುಟ್ಟಣ್ಣ ಗೇಟಿನವರೆಗೆ ಬಂದು, ಅವರನ್ನು ಕಳುಹಿಸಿ ಹಿಂದಿರುಗಿದರು.

## ೨೪

ಮುತ್ತಮ್ಮನ ಮನೆಯ 'ಖಾಯಂ ಗಿರಾಕಿ'ಗಳ ಲೆಕ್ಕಕ್ಕೆ ಸೇರಲು ವೀರಣ್ಣನಿಗೆ ತಡವಾಗಲಿಲ್ಲ. ಬೆಂಗಳೂರಿಗೆ ಸ್ವಂತ ಕೆಲಸದ ಮೇಲೋ, ಸರ್ಕಾರಿ ಕೆಲಸದ ಮೇಲೋ ಸದಾಶಿವಯ್ಯ ಬಂದಾಗ, ವೀರಣ್ಣ ತಪ್ಪದೆ ಅವನನ್ನು ಜತೆಯಲ್ಲಿ ಕರೆದುಕೊಂಡು ಬರುತ್ತಿದ್ದ. ಪೋಲೀಸಿನವರ 'ಕುಮ್ಮಕ್ಕು' ಇರಲಿ ಎಂದು ಮುತ್ತಮ್ಮ ಸದಾಶಿವಯ್ಯನ ಯೋಗಕ್ಷೇಮ ಚೆನ್ನಾಗಿ ನೋಡಿಕೊಳ್ಳುತ್ತಿದ್ದಳು.

ವೀರಣ್ಣ, ಸದಾಶಿವಯ್ಯ ಇಬ್ಬರಿಗೂ ಸರಸ್ವತಿಯ ಸ್ನೇಹ ಮಾಡಿಸಬೇಕೆಂದು ಮುತ್ತಮ್ಮ ಪ್ರಯತ್ನಿಸಿದಳು. ಆದರೇಕೋ ಋಣಾನುಬಂಧವೇ ಕೂಡಿ ಬರಲಿಲ್ಲ. ಸದಾಶಿವಯ್ಯ ರಜೆ ತೆಗೆದುಕೊಂಡು ಬರುವ ವೇಳೆಗೆ ಸರಸ್ವತಿ, ದೇವರಾಜನ ಜತೆ ಮದರಾಸಿಗೆ ಹೋಗಿ ಬಿಟ್ಟಿದ್ದಳು.

ಸದಾಶಿವಯ್ಯನಿಗೆ ಬೇಸರವಾಗಬಾರದೆಂದು ಮುತ್ತಮ್ಮ ಅಪರಂಜಿಯನ್ನು ಕರೆಸಿದ್ದಳು.

ಮುತ್ತಮ್ಮನ ಮನೆಯಲ್ಲಿ ಪ್ರತಿನಿತ್ಯವೂ ನಾಟಕದ ಮಾತೇ ಆಗಿತ್ತು. ಮನೆಗೆ ಯಾರು ಬಂದರೂ ಕಂಪೆನಿಯ ಸುದ್ದಿಯೇನು ಎಂದು ಮುತ್ತಮ್ಮ ಕೇಳುತ್ತಿದ್ದಳು. ರಾಜಶೇಖರ ನಾಟಕ ಆರಂಭಿಸಿದ್ದು – ಪತ್ರಿಕೆಗಳಲ್ಲಿ ಬಂದ ಟೀಕೆ-ಗೃಹಮಂತ್ರಿಗಳ ಅಧ್ಯಕ್ಷತೆಯಲ್ಲಿ ನಾಟಕ ಮಾಡಿದ್ದು – ಟೀಕೆಗಳು ಅಡಗಿದ್ದು ಎಲ್ಲವೂ ಮುತ್ತಮ್ಮನಿಗೆ ವರದಿ ಮಾಡಲ್ಪಟ್ಟಿದ್ದವು. ಪ್ರತಿನಿತ್ಯ ನಾಟಕಕ್ಕೆ ಸಾವಿರ, ಸಾವಿರದೈನೂರು ವರಮಾನ ಬರುತ್ತಿದೆಯೆಂದು ಕೇಳಿದ ಮೇಲೆ ಮುತ್ತಮ್ಮನಿಗೆ ಮತ್ತಷ್ಟು ಆಶ್ಚರ್ಯವಾಯಿತು.

ಒಂದು ದಿನ ಮೆಲ್ಲನೆ ಭಾಗ್ಯಮ್ಮ ಯಾರಿಗೂ ಹೇಳದೆ ಹೋಗಿ ನಾಟಕ ನೋಡಿಕೊಂಡು ಬಂದಿದ್ದಳು. ಅವಳು ಕಥೆ, ಪ್ರದರ್ಶನದ ವೈಖರಿ, ಅಭಿನಯವನ್ನು ಮತ್ತಷ್ಟು ಬಣ್ಣಿಸಿದಳು.

"ಸರಸೋತ್ತಮ್ಮನ ಮಗಳು, ಚೋಟುದ್ದದ ಉಡುಗಿ ಏನು ಪಾರ್ಟು ಮಾಡ್ತಾಳಮ್ಮ. ಎಲ್ಲಾರ್ನೂ ಒಂದೇ ಸನ್ನೆ ಅಳಿಸಿಬಿಡ್ತಾಳೆ."

"ಅವರಮ್ಮನೂ ಎಲ್ಲಾರ್ನೂ ಅಳಿಸ್ತಾಲೇ ಅವಳಲ್ಲಮ್ಮ. ತಾಯಿಯಂತೆ ಮಗಳು."

"ಅಂಗಿರಲಾರದು ಮುತ್ತಮ್ಮ. ಆ ಉಡುಗಿ ಭೋ ಗಂಭೀರಸ್ತೆ."

"ಆ ರಾಜಶೇಖರಪ್ಪನ್ನ ಕಟ್ಕೊಂಡವಳಂತೆ!"

"ನಂಗೊತ್ತಿಲ್ಲಮ್ಮ – ಇಲ್ಲದ್ದು ಯಾಕೆ ಏಳಾಣಾ–ಪಿಳ್ಳಪ್ಪ ಬಂದಿದ್ನಾ."

"ಈಟೋತ್ತೂ ಕುಂತ್ಕೊಂಡು ಬಡ್ಕೊಂಡು ಓದ – ಈ ಯಮ್ಮಂಗೆ ಏನ್ಬಂತಮ್ಮ ಬರಬಾರದ ತೆವಲು. ಓದೋಳು ಓಗೇ ಬಿಡಾದಾ. ತಿಂಗಳಾಯಿತೇ?"

"ನಿನ್ಮಗಳ ಪಾಲ್ಟು ನೋಡ್ಕೊಂಡು ಬಾಂತ ಸರಸೋತಮ್ಮಂಗೆ ಏಳ್ಬೇಕು."

"ನಿಂಗದೇ ಚಿಂತೆ. ಪಿಳ್ಳಣ್ಣ ಇವತ್ತು ಏನು ಏಳಿದ ಗೊತ್ತಾ?"

"ಏನು ಏಳಿದಾ?"

"ದೇವರಾಜಪ್ಪ ಸರ್ಕಾರಿ ಅಣ ಒಡ್ಕೊಂಡು ಓಗನ್ನಂತೆ!"

“ ಆ! ನಿಜಾನಾ! !”

“ ಸರಸೋತಮ್ನೇ ಏನಾರಾ ಚಿತಾವಣೆ ಮಾಡಿದಳೋ ಅಂತೀನಿ.”

“ ಅಂಗಾರೆ ಎಲ್ಲಾರ ತಲೆಗೂ ಬತ್ತೈತಲ್ಲಮ್ಮ.”

“ ಎಲ್ಲವಳೋ – ಎಂದು ಬತ್ತಾಳೋ ಶಿವನೇ ಕಾಪಾಡ್ಬೇಕು.”

“ ಪಿಳ್ಳಣ್ಣ ಇನ್ನೇನು ಏಳ್ದ.”

“ ದೇವರಾಜಪ್ಪನ ವ್ಯಾಕೆ ವಾರೆಂಟು ಒಲ್ಟೈತೆ ಎಂತಾ ಏಳ್ದ.”

“ ಈಯಮ್ಮ ನಮ್ಕೆಲ್ಲಾ ಕೊಟ್ಟಳು ಕೈಯ್ಯಾ !”

ಮುತ್ತಮ್ಮ, ಭಾಗ್ಯಮ್ಮ ಇಬ್ಬರೂ ಯೋಚನಾಕ್ರಾಂತರಾದರು.

ಅದೇ ಸಂಜೆ ಏಳು ಗಂಟೆಯಾಗಿರಬಹುದು. ಕತ್ತಲೆ ಕವಿಯುತ್ತ ಬಂದಿತ್ತು. ಮುತ್ತಮ್ಮನ ಮನೆಯ ಮುಂದೆ ಒಂದು ಟ್ಯಾಕ್ಸಿ ಬಂದು ನಿಂತಿತು.

ಸರಸ್ವತಿ, ದೇವರಾಜ್ ಕೆಳಗಿಳಿದು ಬಂದರು. ಸರಸ್ವತಿಯ ಟ್ರಂಕನ್ನು ದೇವರಾಜ್ ಕೈಯಲ್ಲಿ ಹಿಡಿದುಕೊಂಡು ಒಳಕ್ಕೆ ಬಂದ. ಅವನನ್ನು ನೋಡಿದ ಮೇಲೆ ಮುತ್ತಮ್ಮನ ಎದೆ ಬಡಿದುಕೊಳ್ಳಲಾರಂಭಿಸಿತು.

“ ಎಲ್ಲೀಗೆ ಓಗಿಬಿಟ್ಟಿಯಪ್ಪಾ ಇಷ್ಟು ದಿವ್ಸಾ ”

“ ಏನು ಸಮಾಚಾರ ಮುತ್ತಮ್ಮ.”

ದೇವರಾಜನ ಧ್ವನಿಯಲ್ಲಿ ಭಯಮೂಡಿದ್ದುದು ಸ್ಪಷ್ಟವಾಗಿ ಕಂಡು ಬರುತ್ತಿತ್ತು. ಮುತ್ತಮ್ಮ ಅವನ ಕಿವಿಯ ಬಳಿ ಬಾಯಿಟ್ಟು

“ ಪಿಳ್ಳಣ್ಣ ಬಂದಿದ್ದ – ನಿನ್ನ ವ್ಯಾಕೆ ವಾರೆಂಟು ಒಲ್ಟೈತಂತೆ ! ”

ಎಂದಳು. ದೇವರಾಜನ ಮುಖ ಚಲುವೆಮಾಡಿದ ಬಿಳಿಬಟ್ಟೆಯಂತಾಯಿತು.

“ ನಾನು ಬಂದು ಹೋದ ಸಂಗತಿ ಯಾರಿಗೂ ಹೇಳಬೇಡ ಮುತ್ತಮ್ಮ.”

“ ಇಲ್ಲಪ್ಪಾ.”

“ ಸರಸ್ವತಿ ನಾನೂ ಜತೆಯಲ್ಲಿ ಹೋದುದು ಪಿಳ್ಳಣ್ಣನಿಗೆ ಗೊತ್ತೇ ?

“ ಗೊತ್ತು - ನಾನು ಏಳಿಲ್ಲ. ನೀನೂ ಇರ್ನಿಲ್ಲ – ಈಯಮ್ಮನೂ ಇರ್ನಿಲ್ಲ – ಅವನೇ ಲೆಕ್ಕ ಆಕ್ಕೊಂಡ.”

“ ಚಿಂತೆಯಿಲ್ಲ. ಈಗ ನಾನು ಬಂದಿರೋ ಸುದ್ದಿ ಯಾರಿಗೂ ಹೇಳ

ಬೇಡ – ಸರಸ್ವಾ, ನಿನ್ನ ಯಾರಾದರೂ ಕೇಳಿದರೆ 'ಊರಿಗೆ ಹೋಗಿದ್ದೆ, ಬಂದೆ' ಎಂದು ಹೇಳಿಬಿಡು."

"ಏನಾಯಿತೂಂದ್ರೆ ?"

"ಏನೂ ಆಗಿಲ್ಲ. ಎಲ್ಲಾ ಸರಿ ಹೋಗುತ್ತದೆ. ಕೆಲವು ದಿವಸ ನಾನು ತಲೆಮರಸಿಕೊಂಡಿರಬೇಕಾಗುತ್ತದೆ."

"ತಿರುಗಿ ಯಾವಾಗ ಬರ್‍ತೀಯಪ್ಪಾ ?"

"ಬರ್‍ತೀನಿ – ಸ್ವಲ್ಪ ದಿವಸ ಕಳೆಯಬೇಕು – ಆ ಮೇಲೆ ಯೋಚನೆ ಇಲ್ಲ" ಎಂದು ಸರಸ್ವತಿಯ ಕಡೆ ತಿರುಗಿ – "ಯಾವದಕ್ಕೂ ನೀನು ಯೋಚನೆ ಮಾಡಬೇಡ. ನಿನಗೆ ಕಷ್ಟ ಬರದ ಹಾಗೆ ನಾನು ನೋಡಿಕೊಳ್ಳುತ್ತೇನೆ. ಈ ಒಂದು ತಿಂಗಳು ಸಂತೋಷವಾಗಿದ್ದೆವು – ಅದೇಸಾಕು."

ಎಂದು ಹೇಳಿ ಅವಸರದಲ್ಲಿ ಹೊರಟು ಹೋಗಿ ಟ್ಯಾಕ್ಸಿ ಹತ್ತಿ ಕುಳಿತ. ಟ್ಯಾಕ್ಸಿ ಹೊರಟು ಬಿಟ್ಟಿತು.

ಮುತ್ತಮ್ಮ ತಲೆಬಾಗಿಲು ಹಾಕಿ, ವೆರಾಂಡಾ ದೀಪ ಆರಿಸಿ

"ಇಲ್ಲಿ ಬ್ಯಾಡ – ಮ್ಯಾಕ್ಕೇ ಬಾಮ್ಮ"

ಎಂದು ಸರಸ್ವತಿಯನ್ನು ಕರೆದುಕೊಂಡು ಮಹಡಿಯ ಮೇಲಕ್ಕೆ ಬಂದಳು. ಸರಸ್ವತಿಯ ಟ್ರಂಕ್ ಹೊತ್ತುಕೊಂಡು ಭಾಗ್ಯಮ್ಮನೂ ಬಂದಳು.

"ರೈಲು ಈಗ ಬಂತಾ ?"

"ಆಗಲೇ ಬಂತು. ನಾವು ಕಂಟೋನ್ಮೆಂಟ್ ಸ್ಟೇಷನ್ನಿನಲ್ಲಿ ಇಳಿದು ಟ್ಯಾಕ್ಸಿ ಮಾಡಿಕೊಂಡು ಸುತ್ತಾಡಿಕೊಂಡು ಬಂದೆವು."

"ಸುತ್ತಾಡಿಕೊಂಡಾ . . ."

"ಹೂ ! ಕತ್ತಲೆಯಾದ ಮೇಲೆ ಹೋಗೋಣ ಎಂದು ಹೇಳಿದರು."

"ನೀನೊಂದು ಕಾಗಜ ಬರೆಯಾಕಿಲ್ವೇನಮ್ಮಾ ?"

"ಬರೆಯಬೇಕೆಂದಿದ್ದೆ ಮುತ್ತಮ್ಮ – ಅವರೇ ಬೇಡವೆಂದರು ?"

"ಓದ್ರೆ ತಿಂಗಳಗಟ್ಟಳೆ ಓಗಾದಾ ?"

"ನನ್ನ ಕೈಯಲ್ಲೇನಿತ್ತು ಮುತ್ತಮ್ಮ. ಈಗಲೂ ಹೊರಡುವುದಕ್ಕೆ ಅವರಿಗೆ ಮನಸ್ಸಿಲ್ಲ – ನಾನೇ ಬಲವಂತಮಾಡಿ ಹೊರಡಿಸಬೇಕಾಯಿತು."

"ಆಯಪ್ಪ ದುಡ್ಡು ಎಷ್ಟು ಕೊಟ್ಟ ?"

ಸರಸ್ವತಿ ಟ್ರಂಕು ತೆಗೆದು ತೋರಿಸಿ,

" ಎರಡು ಸೀರೆ ಕೊಂಡು ಕೊಟ್ಟರು - ಖರ್ಚಿಗೆ ನೂರು ರೂಪಾಯಿ ಕೊಟ್ಟಿದ್ದರು, ಅದನ್ನು ಮಿಗಿಸಿಕೊಂಡು ಬಂದಿದ್ದೇನೆ."

" ಆಯಪ್ಪನ ಹತ್ರ ದುಡ್ಡು ಎಷ್ಟಿತ್ತು ?"

" ನಲವತ್ತು ಐವತ್ತು ರೂಪಾಯಿ ಇರಬಹುದು. ಏನಾಯಿತು ಮುತ್ತಮ್ಮ."

" ಏನೂ ಇಲ್ಲ - ಮನೆ ಆಳಾಯ್ತು. ಆಯಪ್ಪ ಸರ್ಕಾರದ ನಾಲಕ್ಕು ಸಾವಿರ ರೂಪಾಯಿ ತಿಂದನ್ನಂತೆ - ವಾರೆಂಟು ಒರಟೈತೆ !"

ಸರಸ್ವತಿ ಉತ್ತರ ಕೊಡದೆ ಕುಕ್ಕರಿಸಿದಳು.

" ಅಷ್ಟು ದುಡ್ಡು ಎಂಗೋಯ್ತಮ್ಮ – ನಿಂಗೂ ಕೊಟ್ಟಿಲ್ಲಾಂತೀ."

" ಎಲ್ಲಾ ಕುದುರೆ ಜೂಜಿಗೆ ಹಾಕಿಬಿಟ್ಟರು ಮುತ್ತಮ್ಮ."

" ನೋಡ್ಕೊಂಡು ನೀನು ಸುಮ್ನೆ ಇದ್ದೆಯಾ ?"

" ಅವರಿಗೇನೋ ಹುಚ್ಚು ಹಿಡಿದ ಹಾಗಾಗಿತ್ತು ಮುತ್ತಮ್ಮ – ನನ್ನ ಮಾತು ಕಿವಿಯ ಮೇಲೆ ಹಾಕಿಕೊಳ್ಳುತ್ತಲೇ ಇರಲಿಲ್ಲ."

" ಆಯಪ್ಪಂಗೆ ಐದು ಜನ ಮಕ್ಕಳಂತೆ !"

ಎಂದುಕೊಂಡು ಮುತ್ತಮ್ಮ ಕೆಳಗಿಳಿದು ಹೋದಳು. ಭಾಗ್ಯಮ್ಮ ಅವಳನ್ನೇ ಅನುಸರಿಸಿದಳು.

ಸರಸ್ವತಿ ಕೆಳಗಿಳಿದು ಹೋಗಲಿಲ್ಲ. ಹಾಸಿಗೆ ಹಾಸಿಕೊಂಡು ಮಲಗಿ ಬಿಟ್ಟಳು.

ಮಾರನೆಯ ಬೆಳಿಗ್ಗೆಯೆಲ್ಲಾ ಮುತ್ತಮ್ಮ ಸರಸ್ವತಿಯ ಮೇಲೆ 'ಗುರ್' ಎನ್ನುತ್ತಲೇ ಇದ್ದಳು. ಮಧ್ಯಾನ್ಹದ ವೇಳೆಗೆ ಅವಳ ಕೋಪ ಇದ್ದಕ್ಕಿದ್ದಂತೆ ಶಾಂತವಾಯಿತು. ಸರಸ್ವತಿಯನ್ನೆಬ್ಬಿಸಿ ಊಟಕ್ಕೆ ಬಡಿಸಿದಳು.

ಅಂದೇಕೋ ಸರಸ್ವತಿಗೆ ಏನೂ ಬೇಡವಾಯಿತು. ಬೇಸರ ಪರಿಹಾರ ಮಾಡಿಕೊಳ್ಳುವುದಕ್ಕೆ 'ಸನ್‌ರೈಸ್ ಹೊಟೇಲಿ'ಗೆ ಹೋಗಲೆ ಎಂದು ಯೋಚಿಸಿದಳು. ಅದೂ ಬೇಡವಾಯಿತು - ಮನೆಯಲ್ಲಿಯೇ ಕುಳಿತು ಬಿಟ್ಟಳು.

ಸಂಜೆ ಆರು ಗಂಟೆಯ ವೇಳೆಗೆ ಪಿಳ್ಳಣ್ಣ ಬೈಸಿಕಲ್ ಹತ್ತಿ ಬಂದ.

ತೊಟ್ಟಿಯಲ್ಲಿ ಮುತ್ತಮ್ಮ, ಭಾಗ್ಯಮ್ಮ, ಸರಸ್ವತಿ ಮಾತನಾಡುತ್ತ ಕುಳಿತಿರುವುದನ್ನು ಕಂಡು ಅವನೂ ಅಲ್ಲಿಯೇ ಕುಳಿತ.

"ಏನಪ್ಪಾ ಸಮಾಚಾರ" ಎಂದು ಮುತ್ತಮ್ಮ ಕೇಳಿದಳು.

ಮುಖದ ಮೇಲೆ ಇಳಿಯುತ್ತಿದ್ದ ಬೆವರುನೀರು, ಕಣ್ಣಿನಿಂದ ಇಳಿಯುತ್ತಿದ್ದ ಧಾರೆಯನ್ನು ಒರಸಿಕೊಳ್ಳುತ್ತಾ

"ಇವತ್ತಿನ 'ತಾಯಿನಾಡು' ಒಂದು ವಿಶೇಷ ಸಮಾಚಾರ ಪ್ರಕಟಿಸಿದೆ ಮುತ್ತಮ್ಮ. ಓದು" ಎಂದು ಓದಲಾರಂಭಿಸಿದ,

'ಫುಡ್ ಇನ್‌ಸ್ಪೆಕ್ಟರಾಗಿದ್ದ ಶ್ರೀ ದೇವರಾಜ್ ಅವರು ಈಗ್ಗೆ ಒಂದು ತಿಂಗಳ ಹಿಂದೆ ರಜಕ್ಕೆ ಬರೆದು ಹಾಕಿ ಎಲ್ಲಿಗೋ ಹೊರಟು ಹೋದರು. ಕಛೇರಿಯ ತಿಂಗಳ ಲೆಕ್ಕ ತನಿಖೆ (monthly audit) ಆದಾಗ ರೂ. ೪,೦೦೦ ಕಡಿಮೆ ಬಂದಿದೆಯೆಂದು ಗೊತ್ತಾಯಿತು. ಮೂರು ದಿವಸಗಳ ಹಿಂದೆ ದೇವರಾಜರ ದಸ್ತಗಿರೆಗೆ ವಾರೆಂಟ್ ಹೊರಡಿಸಲಾಯಿತು. ಇದೇ ಬೆಳಿಗ್ಗೆ ದೇವರಾಜರ ಧರ್ಮಪತ್ನಿಯವರಿಗೆ ಮದ್ರಾಸಿನಿಂದ ಒಂದು ಪತ್ರ ಬಂದಿತು. ಅದರಲ್ಲಿ ದೇವರಾಜರು ಹಣ ತೆಗೆದುಕೊಂಡಿರುವುದನ್ನು ಒಪ್ಪಿಕೊಂಡು, ತಮ್ಮ ಇನ್‌ಷ್ಯೂರೆನ್ಸ್ ಹಣ ರೂ. ೧೦,೦೦೦ ಬರುವುದಾಗಿಯೂ ಅದರಲ್ಲಿ ರೂ. ೪,೦೦೦ ಸರ್ಕಾರಕ್ಕೆ ಕೊಟ್ಟು, ಉಳಿದ ಹಣ ತೆಗೆದುಕೊಳ್ಳಬೇಕೆಂದು ಬರೆದಿದ್ದಾರೆ. ದೇವರಾಜರ ಪತ್ನಿ ಗಾಬರಿಯಾಗಿ ಪೋಲೀಸಿಗೆ ದೂರು ಕೊಟ್ಟರು. ಪೋಲೀಸಿನವರು ಹುಡುಕಿ ನೋಡುವಲ್ಲಿ ಕೆಂಪಾಂಬುಧಿ ಕೆರೆಯಲ್ಲಿ ಒಂದು ಹೆಣ ಸಿಕ್ಕಿತು. ಅದನ್ನು ದೇವರಾಜರ ಪತ್ನಿ, ತಮ್ಮ ಪತಿಯ ಕಳೇಬರವೆಂದು ಗುರುತಿಸಿದರು. ದೇವರಾಜರಿಗೆ ಐದು ಜನ ಮಕ್ಕಳಿದ್ದಾರೆ. ದೊಡ್ಡ ಮಗ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾನೆ."

ಸರಸ್ವತಿ ಮುಖ ಮುಚ್ಚಿಕೊಂಡು ಎದ್ದು ಹೋದಳು. ಮುತ್ತಮ್ಮ, ಭಾಗ್ಯಮ್ಮ ದುಃಖಪರವಶರಾದರು.

ಪಿಳ್ಳಣ್ಣ ಮಾತು ಬೆಳಸದೆ ಮೇಲಕ್ಕೆದ್ದ.

ಮುತ್ತಮ್ಮ ವಾಡಿಕೆಯಂತೆ 'ಯಾವಾಗ ಬತ್ತೀಯಪ್ಪ' ಎಂದು ಕೇಳಿದಳು.

ಸಿಳ್ಳಣ್ಣ ಅವಳನ್ನು ನುಂಗಿ ಬಿಡುವಂತೆ ನೋಡಿ

" ದೇವರಾಜರಿಗೆ ಐದು ಜನ ಮಕ್ಕಳು – ನನಗೆ ನಾಲ್ಕು ಜನ ಮಕ್ಕಳು"

ಎಂದು ಹೇಳಿ ಹೊರಟು ಹೋದ. ಭಾಗ್ಯಮ್ಮ, ಮುತ್ತಮ್ಮ ಒಬ್ಬರ ಮುಖ ಒಬ್ಬರು ನೋಡಿಕೊಂಡರು.

ಮಾರನೆಯ ಬೆಳಿಗ್ಗೆ ಹನ್ನೆರಡು ಗಂಟೆಯವರೆಗೆ ಸರಸ್ವತಿ ಮಹಡಿ ಯಿಂದ ಕೆಳಗಿಳಿಯಲಿಲ್ಲ.

ಹನ್ನೆರಡು ಗಂಟೆಗೆ ಕೆಳಗಿಳಿದು ಬಂದು ಸ್ನಾನ ಮಾಡಿ, ಬಟ್ಟೆ ಹಾಕಿ ಕೊಂಡು ಹೊರಟಳು.

" ಅಡಿಗೆಯಾಗ್ಯೆತೆ - ಊಟ ಮಾಡ್ಕೊಂಡು ಓಗಮ್ಮ"

ಎಂದು ಮುತ್ತಮ್ಮ ಹೇಳಿದಳು. ' ನನಗೆ ಹಸಿವಿಲ್ಲ ' ಎಂದು ಹೇಳಿ ಸರಸ್ವತಿ ಹೊರಟುಬಿಟ್ಟಳು.

ಮಾರನೆಯ ಬೆಳಿಗ್ಗೆ ಸರಸ್ವತಿ ಹಿಂದಿರುಗಬಹುದೆಂದು ಮುತ್ತಮ್ಮ ನಿರೀಕ್ಷಿಸಿದಳು. ಸರಸ್ವತಿ ಬರಲಿಲ್ಲ.

ಅದರ ಮಾರನೆಯ ಬೆಳಿಗ್ಗೆ ಬರಬಹುದೆಂದು ನಿರೀಕ್ಷಿಸಿದಳು – ಅಂದೂ ಬರಲಿಲ್ಲ.

ಭಾಗ್ಯಮ್ಮನಿಗೆ ಗಾಬರಿಯಾಯಿತು,

" ಏನಾದ್ಲಮ್ಮ ಈಯಮ್ಮ."

" ಏನಾದ್ಲೋ – ನಿಂಗೆಷ್ಟು ಗೊತ್ತೊ ನಂಗೂ ಅಷ್ಟೇ ಗೊತ್ತು."

" ಆಯಪ್ಪನಂಗೆ ಈಯಮ್ಮನೂ ಕೆರೆ ಬಾವಿ ನೋಡ್ಕೊಂಡ್ಲೋ ?"

" ನಿಂಗೆಲ್ಲೊ ಉಚ್ಚು ಬಾಗ್ಯಮ್ಮ – ಈಯಮ್ಮ ಇನ್ನೂ ಎಷ್ಟು ಜನಕ್ಕೆ ಕೆರೆ ಬಾವಿ ತೋರಿಸಬೇಕಾಗ್ಯೆತೋ ?"

ಎಂದು ಮುತ್ತಮ್ಮ ತಿರಸ್ಕಾರದಿಂದ ನುಡಿದಳು. ಆದರೆ ಅವಳ ಮನಸ್ಸಿ ನಲ್ಲಿಯೂ ಶಾಂತಿಯಿರಲಿಲ್ಲ. ಸರಸ್ವತಿ ಹಿಂದಿರುಗಿದ ಕೂಡಲೆ ಒಳ್ಳೆಯ ಮಾತಿ ನಲ್ಲಿ ಅವಳನ್ನು ಮನೆಯಿಂದಾಚೆ ಕಳುಹಿಸಲು ಮುತ್ತಮ್ಮ ನಿರ್ಧರಿಸಿ ಕೊಂಡಿದ್ದಳು.

ಮಾರನೆಯ ದಿನ – ಸೋಮವಾರ – ಸರಸ್ವತಿ ಮನೆ ಬಿಟ್ಟು ಹೋಗಿ

ಮೂರು ದಿವಸಗಳಾಗಿದ್ದವು. ಅವಳ ಧ್ಯಾನವನ್ನೇ ಮಾಡುತ್ತ ಮುತ್ತಮ್ಮ ಬೆಳಿಗ್ಗೆ ಮನೆಯ ಮುಂಭಾಗವನ್ನು ಸ್ವಚ್ಛ ಮಾಡುತ್ತಿದ್ದಳು. ಒಂದು ಜಟಕಾ ಗಾಡಿ ಬಂದು ನಿಂತಿತು.

ಮುತ್ತಮ್ಮನ ಮನಸ್ಸಿಗೆ ನೆಮ್ಮದಿಯಾಯಿತು.

ಗಾಡಿಯಿಂದಿಳಿದು ಒಳಕ್ಕೆ ಬಂದವಳು ಸರಸ್ವತಿಯಲ್ಲ – ಅವಳ ಹಿರಿಯ ಮಗಳು ಮಂಜುಳಾ.

ಮಂಜುಳನನ್ನು ನೋಡಿ ಮುತ್ತಮ್ಮ ಅವಾಕ್ಕಾದಳು. ಮಂಜುಳ ಅವಳ ಹತ್ತಿರ ಬಂದು

" ನನ್ನ ಗುರುತು ಸಿಕ್ಕಲಿಲ್ಲವೇ ಮುತ್ತಮ್ಮ. ನಾನು ಮಂಜುಳಾ" ಎಂದಳು.

ಮುತ್ತಮ್ಮ ಅವಳನ್ನು ಕರೆದುಕೊಂಡು ಮನೆಯೊಳಗೆ ಬಂದು

" ಎಲ್ಲಿಂದ ಬರ್‍ತಾ ಇದ್ದೀಯಮ್ಮ."

" ಬೊಂಬಾಯಿನಿಂದ. ಅಮ್ಮ ಇದ್ದಾಳೆಯೇ ?"

" ನಿಮ್ಮಮ್ಮ ಇರೋದು ನಿಂಗೆ ಹ್ಯಾಗ್ಗೊತ್ತು."

" ಶಿವಮೊಗ್ಗೆಯಿಂದ ಅವಳು ಈ ಕಡೆ ಹೊರಟಳು–ನಾನು ಬೊಂಬಾಯಿ ಕಡೆ ಹೊರಟೆ – ಅವಳು ಇಲ್ಲಿಗೇ ಬಂದಿರಬೇಕೆಂದು ತರ್ಕಮಾಡಿಕೊಂಡೆ ಅಮ್ಮ ಇಲ್ಲವೇ ?"

" ಎಲ್ಲಿಗೋ ಓಗವ್ಳೆ – ಬರಭೋದು. ನಿನ್ನ ತಂಗಿ ಸುದಮ್ಮ ಇಲ್ಲೇ ಅವಳೆ !"

" ಇಲ್ಲೇ ಇದ್ದಾಳೆಯೇ? ಎಲ್ಲಿ ?"

" ಈಗೇನಮ್ಮ. ಅವಳು ಭೋ ಚಂದಾಕವಳೆ. ರಾಜಸೇಕರಪ್ಪ ಕಂಪೆನಿ ಮಾಡವ್ನೆ. ಅವಳು ದೊಡ್ಡ ಪಾಲ್ಟು ಮಾಡ್ತಾಳೆ. ಊರಿಗೆ ಊರೇ ಅವರ ನಾಟಕ ಒಗಳತ್ತೈತಮ್ಮ. ನೀನ್ಯಾಕಮ್ಮ ಈಗಾಗೋಗಿದ್ದೀ ?"

" ಹೇಗಾಗಿದ್ದೇನೆ ಮುತ್ತಮ್ಮ."

" ಸೀಕೊಂಡು ಓಗಿದ್ದೀಯಲ್ಲಮ್ಮ. ಕಿವಿ, ಕೈ, ಕುತ್ತಿಗೆಯೆಲ್ಲಾ ಆಳು ಆಳು ಸುರೀತೈತೆ."

"ಅದು ದೊಡ್ಡ ಕಥೆ – ನಿಧಾನವಾಗಿ ಹೇಳಬೇಕಮ್ಮ. ನಾನು ಬಹಳ ಕಷ್ಟಕ್ಕೆ ಸಿಕ್ಕಿಕೊಂಡು ಬಿಟ್ಟೆ."

"ಸಾಮಾನು ವ್ಯಾಕೇ ಮಡಗಿ, ಸಾನ ಮಾಡೇಳು. ಒಸಿ ನಾಷ್ಟಾ ಮಾಡಿ ಮನಿಗ್ಕೊಳೀವಂತೆ !"

ಮಂಜುಳನ ಸಾಮಾನೆಲ್ಲಾ ಒಂದು ಕೈ ಚೀಲದಲ್ಲಡಗಿತ್ತು. ಅದನ್ನೇ ಮೇಲಕ್ಕೆ ತೆಗೆದುಕೊಂಡು ಹೋಗಿಟ್ಟು ಕೆಳಗಿಳಿದು ಬಂದು ಸ್ನಾನ, ಉಪಾಹಾರ ಮುಗಿಸಿಕೊಂಡು ಪುನಃ ಮಹಡಿಯ ಮೇಲೆ ಹೋಗಿ ಸರಸ್ವತಮ್ಮನ ಹಾಸಿಗೆಯನ್ನೇ ಹಾಸಿಕೊಂಡು ಮಲಗಿದಳು.

"ಇವಳೂ ಒಕ್ಕರಿಸಿದಳಲ್ಲನ್ಮ" ಎಂದಳು ಭಾಗ್ಯಮ್ಮ.

"ಚಿಕ್ಕಪುಟ್ಟಾ ಉಡುಗಿ ಬರ್ಲಿ ಸಮ್ಕಿರು"

"ಅವಳಾಗಿರೋದು ನೋಡು – ಒಣಗ್ಕೊಂಡು ಓಗವ್ಳೇ ?"

"ಕಷ್ಟಕ್ಕೆ ಸಿಕ್ಕೊಂಡೇಂತ ಏಳವಳಲ್ಲ. ನಾಕು ದಿವ್ಸ ಉಪಚಾರ ಮಾಡಿದ್ರೆ ಸರಿ ಓಗ್ತಾಳೆ."

ಹನ್ನೆರಡು ಗಂಟೆಯ ವೇಳೆಗೆ ಮಂಜುಳನನ್ನು ಊಟಕ್ಕೆಬ್ಬಿಸಲೇ ಎಂದು ಭಾಗ್ಯಮ್ಮ ಮುತ್ತಮ್ಮನನ್ನು ಕೇಳಿದಳು.

"ಬೇಡ ಸುಮ್ಕಿರು - ರಾತ್ರಿಯೆಲ್ಲಾ ರೈಲ್ನಲ್ಲಿ ಬಂದವ್ಳೆ - ಮನಗಿರಲಿ- ನಾಷ್ಟಾ ಮಾಡವ್ಳೆ – ಎದ್ದ ವ್ಯಾಕೇ ಉಣ್ಣಲಿ." ಎಂದಳು.

ಮೂರು ಗಂಟೆಯ ಸುಮಾರಿಗೆ ಸರಸ್ವತಿ ಮನೆಗೆ ಬಂದಳು. ಅವಳು ಈ ಮೂರು ದಿವಸ ಎಲ್ಲಿ - ಹೇಗೆ ಕಳೆದಳೆಂಬುದನ್ನು ಯಾರೂ ಕೇಳಬೇಕಾಗಿಯೇ ಇರಲಿಲ್ಲ. ಅವಳ ಮುಖದ ಮೇಲೆ ಶಾಸನ ಬರದಂತೆ ಬರೆದಿತ್ತು- ಅವಳ ಜೀವನರಹಸ್ಯ. ಕಣ್ಣುಗಳು ಗುಳಿಬಿದ್ದಿದ್ದವು - ಕಣ್ಣುಗಳ ಕೆಳಗೆ ಹೆಪ್ಪುಗಟ್ಟಿತ್ತು. ಕಣ್ಣಂಚಿನಲ್ಲಿ ಕಾಕರೇಖೆಗಳು ಮೂಡಿದ್ದವು. ಮುಖ ಸುಕ್ಕುಗಟ್ಟಿತ್ತು. ಮುತ್ತಮ್ಮ ಅವಳನ್ನೇ ದಿಟ್ಟಿಸಿ ನೋಡಿ

"ಊಟ ಆಯ್ತೇನಮ್ಮ" ಎಂದಳು.

"ಹೋಟಲಲ್ಲಿ ಊಟಮಾಡಿ ಬಂದೆ."

"ವ್ಯಾಕೆ ನೋಡು - ನಿನ್ನ ಉಡಿಕ್ಕೊಂಡು ಯಾರೋ ಬಂದವ್ರೆ !"

"ಯಾರು ?"

" ಯಾರೋ ನಂಟರು ! "

" ನಂಟರು ! "

ಎಂದು ಆಶ್ಚರ್ಯಗೊಂಡು ಸರಸ್ವತಿ ಧಾವಿಸಿ ಮೇಲಕ್ಕೆ ಹೋದಳು. ತನ್ನ ಹಾಸಿಗೆಯ ಮೇಲೆ ಮಲಗಿ ಸುಖವಾಗಿ ನಿದ್ರಿಸುತ್ತಿದ್ದ ಮಗಳನ್ನು ನೋಡಿ ಅವಳಿಗೆ ಆನಂದ, ಆಶ್ಚರ್ಯವಾಯಿತು. ಮನಸ್ಸು ತಡೆಯಲಿಲ್ಲ. ಮಗಳನ್ನೆಬ್ಬಿಸಿ

" ಮಂಜೂ " ಎಂದು ಅಪ್ಪಿದಳು.

ತಾಯಿಯನ್ನಪ್ಪಿ ಮಂಜುಳಾ ಅವಳ ಹೆಗಲ ಮೇಲೆ ತಲೆಯಿಟ್ಟು ಗಟ್ಟಿಯಾಗಿ ಅತ್ತು ಬಿಟ್ಟಳು.

ಸ್ವಲ್ಪ ಹೊತ್ತಾದ ಮೇಲೆ ಸರಸ್ವತಿ

" ಬೊಂಬಾಯಿಯಿಂದ ಬಂದೆಯಾ ? "

" ಕೆಟ್ಟ ಮುಖ ಹೊತ್ತುಕೊಂಡು ಬಂದೆ."

" ಏನಾಯಿತು."

ಶಿವಮೊಗ್ಗೆ ಬಿಟ್ಟ ಮೇಲೆ ಕುಮಾರನ ನೃತ್ಯಶಾಲೆ ಸೇರುವವರೆಗೆ ನಡೆದುದನ್ನು ಮಂಜುಳಾ ವಿವರಿಸಿದಳು.

" ನಿನ್ನ ಒಡವೆ, ಹಣ ಎಲ್ಲಾ ಹೊತ್ತುಕೊಂಡು ಹೋದನೇ ? "

" ಏನೂ ಉಳಿಸಲಿಲ್ಲ."

" ಪೋಲೀಸಿಗೆ ಕಂಪ್ಲೇಂಟ್ ಕೊಡಬೇಕಾಗಿತ್ತು."

" ಕುಮಾರರೂ ಅದೇ ಹೇಳಿದರು. ಪೋಲೀಸಿನವರ ಕೈಗೆ ಸಿಕ್ಕಿಕೊಂಡು ಎಲ್ಲಿ ನರಳುವುದು ಎಂದು ಸುಮ್ಮನಾದೆ."

" ಆ ಮೇಲೆ . . ."

" ಕುಮಾರರ ಶಾಲೆಯಲ್ಲಿದ್ದೆ. ಅವರ ಡೈರೆಕ್ಟರ್ ಮೋರಾ ಅವರ ಪರಿಚಯ ಮಾಡಿಕೊಟ್ಟರು. ಮೋರಾ ನನ್ನ ಬಹಳ ಹಚ್ಚಿಕೊಳ್ಳಲಿಲ್ಲ. ಮುಂದೆ ಅವರೇ ಬೇರೆ ಬೇರೆಯವರ ಪರಿಚಯ ಮಾಡಿಕೊಟ್ಟರು. ಸಂಪಾದನೆ ತಾವೇ ಇಟ್ಟುಕೊಳ್ಳುತ್ತಿದ್ದರು. ಸಂಪಾದನೆ ಇಲ್ಲದ ದಿನ ನನ್ನ ಮೇಲೆ ರೇಗಿ ಬೀಳುತ್ತಿದ್ದರು. ಕೊನೆಗೆ ನನ್ನ ದುರದೃಷ್ಟಕ್ಕೆ ಹಾಸಿಗೆ ಹಾಸಿ ಮಲಗಿಬಿಟ್ಟೆ."

" ಏನಾಗಿತ್ತು ಕಾಹಿಲೆ."

"ಆಗುವುದೇನು ಗೊತ್ತೇಯಿದೆ. ಮೈಯೆಲ್ಲಾ ವ್ರಣವಾಯಿತು. ನಲವತ್ತು ಇಂಜಕ್ಷನ್ ಆಗಬೇಕೂಂದ್ರು ಡಾಕ್ಟರು. ಆ ಹೊತ್ತಿನಲ್ಲಿ ಕುಮಾರರು ನನ್ನ ಮನೆ ಬಿಟ್ಟು ಹೋಗು ಎಂದರು. ನಾನು ಮೊಂಡು ಬಿದ್ದು ಅಲ್ಲೇ ಕುಳಿತೆ. ನನ್ನ ಕಾಹಿಲೆ ವಾಸಿಯಾಗಲಿ ಹೋಗುತ್ತೇನೆ ಎಂದು ಹೇಳಿದೆ."

"ಅದಕ್ಕೊಪ್ಪಿದನೇ ?"

"ಒಪ್ಪದೆ ನಿರ್ವಾಹವೇ ಇರಲಿಲ್ಲ. ಇಪ್ಪತ್ತು ಇಂಜಕ್ಷನ್ ತೆಗೆದು ಕೊಂಡೆ. ಹುಣ್ಣು ಮಾಗಿತು. ಇನ್ನು ಕುಮಾರರ ಆಶ್ರಯದಲ್ಲಿರುವುದು ಗೌರವವಲ್ಲವೆಂದು ನಾನೇ ಹೊರಟುಬಿಟ್ಟೆ."

"ಔಷಧ, ಡಾಕ್ಟರು ಇದರ ಖರ್ಚು ವೆಚ್ಚ."

"ಮೈ ಮೇಲೆ ಅಲ್ಪ ಸ್ವಲ್ಪ ಒಡವೆ ಉಳಿದಿತ್ತು – ಟ್ರಂಕಿನಲ್ಲಿ ಹತ್ತಾರು ಒಳ್ಳೆಯ ಸೀರೆಗಳಿದ್ದವು ; ಸದ್ಯಃ ಅಣ್ಣಯ್ಯ ಸೀರೆಗಳನ್ನೂ ಹೊತ್ತುಕೊಂಡು ಹೋಗಿರಲಿಲ್ಲ – ಬೊಂಬಾಯಿಯಲ್ಲಿ ಕುಮಾರನಿಗೆ ತಿಳಿಯದ ಹಾಗೆ ಸಂಪಾದಿಸಿದ ದುಡ್ಡೂ ಸ್ವಲ್ಪ ಇತ್ತು. ಎಲ್ಲಾ ತೆತ್ತು ತಕ್ಕ ಮಟ್ಟಿಗೆ ಗುಣಮಾಡಿ ಕೊಂಡು ಬಂದೆ. ಬರುವಾಗ ಊರಿಗೆ ಟಿಕೆಟ್ಟನ್ನು ಕುಮಾರರೇ ತೆಗೆದು ಕೊಟ್ಟು ಉಪಕಾರ ಮಾಡಿದರು."

"ನಮ್ಮ ಋಣ ತಿಂದು ಕುಮಾರ ಇಷ್ಟು ಅನ್ಯಾಯ ಮಾಡಿದನೇ ?"

"ಅವರನ್ನು ಏತಕ್ಕೆ ಆಕ್ಷೇಪಿಸಲಿ. ಪ್ರಪಂಚ ಇರುವುದೇ ಅನ್ಯಾಯ ದಲ್ಲಿ. ಒಬ್ಬರನ್ನು ಒಬ್ಬರು ನುಂಗುತ್ತಿರಬೇಕು. ಗಟ್ಟಿಯಾಗಿರುವವರು ಉಳಿದುಕೊಳ್ಳುತ್ತಾರೆ – ಮೆತ್ತಗಿರುವವರು ನಾಶವಾಗುತ್ತಾರೆ."

"ಹೇಗಾದರೂ ಆಗಲಿ – ಇಲ್ಲಿಗೆ ಬಂದೆಯಲ್ಲ! ದೇವರು ಮಾಡಿಸಿದ್ದಾ ಗುತ್ತದೆ ಸುಮ್ಮನಿರು. ಸುಧಾ ವಿಷಯ ಕೇಳಿದೆಯಾ ?"

"ಮುತ್ತಮ್ಮ ಹೇಳಿದಳು. ಈಗವಳು ಚೆನ್ನಾಗಿದ್ದಾಳಂತೆ. ರಾಜ ಶೇಖರನ ಕಂಪೆನಿ ಒಳ್ಳೆ ಅದ್ಧೂರಿಯಾಗಿ ನಡೆದಿದೆಯಂತೆ!"

"ಅವಳನ್ನು ಈಗ ಊರಿಗೆ ಊರೇ ಕೊಂಡಾಡುತ್ತಿದೆ. ಕೈ ತುಂಬ ಕಾಸು ಮಾಡಿಕೊಂಡಿದ್ದಾಳಂತೆ – ಒಡವೆಗಳನ್ನೂ ಮಾಡಿಸಿಕೊಂಡಿ ದ್ದಾಳಂತೆ!"

"ಅಮ್ಮ – ನಾನೊಂದು ಮಾತು ಹೇಳುತ್ತೇನೆ. ಮನಸ್ಸಿಟ್ಟು ಕೇಳು. ಈ ವಿಷಯದಲ್ಲಿ ಮಾತ್ರ ನೀನು ನನ್ನ ಮಾತು ಮೀರಲಾಗದು."

"ಅಂಥಾದ್ದೇನು ಹೇಳು."

"ನಿನ್ನ ಜೀವನ ನೀನೇ ಹಾಳುಮಾಡಿಕೊಂಡೆ – ನನ್ನ ಜೀವನವನ್ನೂ ಹಾಳುಮಾಡಿದೆ. ಆದ್ದು ಆಗಿಹೋಯಿತು. ಒಣಗಿದ ಮರ ಮತ್ತೆ ಚಿಗುರ ಬೇಕೆಂದರೆ ಸಾಧ್ಯವಿಲ್ಲ. ಸಾಧ್ಯವಾದರೂ ನನಗೆ ಬೇಡವಾಗಿದೆ. ನಿನ್ನೊಂದಿಗೆ ನನ್ನ ಬಾಳು ತಳ್ಳಲು ನಾನು ಬಂದಿದ್ದೇನೆ. ನಮ್ಮಿಬ್ಬರ ಬಾಳು–ಅಭಿರುಚಿ–ಮನಸ್ಸು ಒಂದೇ ಆಗಿರುವುದರಿಂದ ಭಿನ್ನಾಭಿಪ್ರಾಯ ಬರಲು ಸಾಧ್ಯವಿಲ್ಲ. ಆದರೆ ನನಗೂ ನಿನಗೂ ಒಂದು ವ್ಯತ್ಯಾಸವಿದೆ – ನಿನಗೆ ಈ ವೃತ್ತಿಯಲ್ಲಿ ವಿಶ್ವಾಸವಿದೆ – ನನಗೆ ವಿಶ್ವಾಸವಿಲ್ಲ ; ನಿನಗೆ ಭೋಗ ಇನ್ನೂ ಬೇಕು – ನನಗೆ ಬೇಕಾದುದು ಸಾವು. ಆದರೆ ಸಾಯುವ ಧೈರ್ಯ ನನಗಿಲ್ಲ. ಬೊಂಬಾಯಿಯಲ್ಲಿ ನಾನು ಅನುಭವಿಸುತ್ತಿದ್ದುದನ್ನು ನೀನು ಕಂಡಿದ್ದರೆ 'ಇವಳು ಸತ್ತು ಸುಖವಾಗಿರಬಾರದೇ' ಎಂದು ನೀನೇ ಅನ್ನುತ್ತಿದ್ದೆ. ನಾನೂ ನೀನೂ ಬದುಕ ಬೇಕಾಗಿರುವುದರಿಂದ ಅದಕ್ಕೆ ಬೇಕಾದುದು ಮಾಡಲು ನಾನು ಸಿದ್ಧಳಾಗಿದ್ದೇನೆ- ಆದರೆ - ಸುಧನನ್ನು ನೀನು ಮರೆತುಬಿಡಬೇಕು. ನ್ಯಾಯವಾದ ಮಾರ್ಗ ಹಿಡಿದು ಆ ಪುಡುಗಿ ತನ್ನ ಬಾಳು ರೂಪಿಸಿಕೊಳ್ಳುತ್ತಿದೆ. ಅದನ್ನೆಂದಿಗೂ ನಮ್ಮ ಮಾರ್ಗಕ್ಕೆ ಎಳೆಯುವ ಪ್ರಯತ್ನ ಮಾಡಬೇಡ - ನಾವು ಜೀವಂತರಾಗಿಲ್ಲ ಎಂದುಕೊಂಡು ಅವಳಿಂದ ದೂರವಿರಬೇಕು. ಇಷ್ಟು ಮಾಡುವೆಯಲ್ಲವೇ ?"

"ನನ್ನ ಮಗಳನ್ನು ನಾನು ನೋಡಕೂಡದೇ ?"

"ನೋಡು - ಬೇಡವೆಂದವರು ಯಾರು ? ದಿನವೂ ನಾಟಕದಲ್ಲಿ ಪಾರ್ಟು ಮಾಡುತ್ತಿದ್ದಾಳಂತೆ. ಅವಳನ್ನು ನೋಡಬೇಕೆಂದೆನಿಸಿದ ದಿನ ಎಂಟಾಣೆಕೊಟ್ಟು ಟಿಕೇಟ್ ಕೊಂಡು ನಾಟಕದಲ್ಲಿ ಅವಳನ್ನು ಕಣ್ತುಂಬ ನೋಡಿ ಬಾ. ಆದರೆ ಅವಳೆದುರಿಗೆ ಸುಳಿಯಬೇಡ."

"ಹಾಗೇ ಆಗಲಿ ಮಂಜೂ."

"ಅವಳನ್ನು ನೀನು ಈ ದಾರಿಗೆಳೆಯುವುದನ್ನು ಕಂಡರೆ ನಾನೇ ನಿನ್ನ ಹೆಮ್ಮಾರಿಯಾಗುತ್ತೇನೆ."

" ಇಲ್ಲ ಮಂಜೂ - ನೀನು ಹೇಳಿದ ಹಾಗೆ ಮಾಡುತ್ತೇನೆ"

ಎಂದು ಸರಸ್ವತಮ್ಮ ವಚನವಿತ್ತಳು.

" ಊಟಮಾಡಿದೆಯಾ ಮಂಜೂ."

" ಇಲ್ಲ. ಬಂದವಳು ಸ್ನಾನಮಾಡಿ, ತಿಂಡಿ ತಿಂದು ಮಲಗಿದೆ."

" ಬಾ - ಊಟಮಾಡುವೆಯಂತೆ"

ಎಂದು ಸರಸ್ವತಮ್ಮ ಮಗಳನ್ನು ಕರೆದುಕೊಂಡು ಕೆಳಗಿಳಿದು ಹೋದಳು. ತಾಯಿ, ಮಗಳಿಬ್ಬರ ನೆರವು ದೊರಕಿದುದಕ್ಕೆ ಸಂತೋಷದಿಂದಿದ್ದ ಮುತ್ತಮ್ಮ ಅವರನ್ನು ಉಪಚರಿಸಿದಳು.

ಮುತ್ತಮ್ಮನ ಮನಸ್ಸಿನಲ್ಲಿದ್ದ ಬಹು ದಿನಗಳ ಆಸೆ ಒಂದು ದಿನ ಪೂರೈಸಿತು. ಸರಸ್ವತಿ, ಮಂಜುಳಾ ಮನೆಯಲ್ಲಿದ್ದಾಗಲೇ ವೀರಣ್ಣ, ಸದಾ ಶಿವಯ್ಯ ಬಂದರು. ಮುತ್ತಮ್ಮ ಪರಸ್ಪರ ಪರಿಚಯ ಮಾಡಿಸಿದಳು.

ಸದಾಶಿವಯ್ಯನ ಮೇಲೆ ಸರಸ್ವತಿ ಪ್ರಭಾವ ಬೀರಲು ಪ್ರಯತ್ನಿಸಿದಳು. ತನ್ನ ಬತ್ತಳಿಕೆಯಲ್ಲಿದ್ದ ಅಸ್ತ್ರಗಳನ್ನು ಒಂದೊಂದಾಗಿ ಪ್ರಯೋಗಿಸಿದಳು. ಸದಾಶಿವಯ್ಯ ತನಗೆಷ್ಟು ಬೇಕೋ ಅಷ್ಟೇ ಸ್ವೀಕರಿಸಿದ. ಸರಸ್ವತಿ ನುಲಿಯುತ್ತ ನುಲಿಯುತ್ತ

" ನಿಮ್ಮೂರಿಗೆ ನನ್ನ ಏಕೆ ಕರ್ಕೊಂಡು ಹೋಗಬಾರದು " ಎಂದಳು.

ಸದಾಶಿವಯ್ಯ ನಕ್ಕ.

" ನಗುತ್ತೀರೇಕೆ ? ಕರ್ಕೊಂಡು ಹೋಗಬಾರದೇನು ?"

" ಕರ್ಕೊಂಡು ಹೋಗಿ ಲಗ್ನ ಮಾಡಿಕೊಳ್ಳಲೋ - ಕೂಡಿಕೆ ಮಾಡಿ ಕೊಳ್ಳಲೋ ?"

" ಯಾವುದಕ್ಕೂ ನಾನು ಸಿದ್ಧ."

" ನಾನು ಸಿದ್ಧವಾಗಿಲ್ಲವಲ್ಲ."

" ಒಬ್ಬನೇ ಇದ್ದೀನಿ ಎಂದು ಹೇಳಿದಿರಿ."

" ಹೌದು - ಅದಕ್ಕೇನು ಮಾಡಬೇಕು ?"

" ನಾನಿರುವಾಗ ನೀವೊಬ್ಬರೇ ಏಕಿರಬೇಕು."

" ನಾನು ಯಾರ ಜತೆಯೂ ಬಾಳುವೆ ಮಾಡಲು ಇಷ್ಟವಿಲ್ಲ."

" ನಮ್ಮ ಸಂಬಂಧ ಇಲ್ಲಿಗೇ ಮುಗಿಯಬೇಕು."

"ಏಕೆ - ನಾನು ಬರುತ್ತಿರುತ್ತೇನೆ - ಬಂದಾಗ ಇರುತ್ತೇನೆ."

"ಅಷ್ಟೇ ! . . ."

"ಹೌದು – ಅದಕ್ಕಿಂತ ಹೆಚ್ಚು ನಿರೀಕ್ಷಿಸಬೇಡ ಸರಸ್ವತಿ."

ಎಂದು ಖಂಡಿತವಾಗಿ ನುಡಿದ.

ಸರಸ್ವತಿಗೂ ತನಗೂ ನಡೆದ ಸಂಭಾಷಣೆಯನ್ನು ಸದಾಶಿವಯ್ಯ ಗೆಳೆಯ ವೀರಣ್ಣನಿಗೆ ನಿರೂಪಿಸಿದಾಗ

"ನೀನು ಶುದ್ಧ ಒರಟ ಕಣೋ ಸದಾಶಿವ. ಪೋಲೀಸ್ ಡಿಪಾರ್ಟ್‌ಮೆಂಟ್ ಸೇರಿದ ಮೇಲೆ ಪಶುವಾಗಿ ಬಿಟ್ಟೆ" ಎಂದ.

"ಇದು ಪಶುಗಳ ಪ್ರಪಂಚ – ವೀರಣ್ಣ. ನಿನ್ನ ಸ್ವಾಮಿಗಳನ್ನು ಕೇಳಿ ನೋಡು – ಅವರು ನನ್ನ ಮಾತು ಒಪ್ಪುತ್ತಾರೋ ಇಲ್ಲವೋ ?"

"ಈ ಮಾತಿಗೆ ಸ್ವಾಮಿಗಳನ್ನೇಕೆ ಎಳೀತೀಯೋ ?"

"ಸುಳ್ಳು ಶಿಷ್ಯನಿಗೆ – ಕಳ್ಳ ಸ್ವಾಮಿ ತಾನೇ ಗಂಟು."

"ನಮ್ಮ ಸ್ವಾಮಿಗಳು ಹಾಗಲ್ಲಪ್ಪಾ, ಸಾಕ್ಷಾತ್ ಪರಮೇಶ್ವರ ಸ್ವರೂಪಿಗಳು."

"ಆ ಸರಕೆಲ್ಲಾ ಹೊರಗಿನವರಿಗಿಡು ವೀರಣ್ಣ – ನಾನು ಪೋಲೀಸ್ ಡಿಪಾರ್ಟ್‌ಮೆಂಟಿನವನು. ನಿಮ್ಮ ಸ್ವಾಮಿಗಳ ವಿಷಯ ನನಗೆ ಚೆನ್ನಾಗಿ ಗೊತ್ತಿದೆ."

ವೀರಣ್ಣ ಅವನೊಂದಿಗೆ ಚರ್ಚೆ ಬೆಳಸಲಿಲ್ಲ.

## ೨೫

ಎರಡನೆಯ ತಿಂಗಳು ನಾಟಕಗಳ ಉತ್ಪನ್ನ ಮೊದಲನೆಯ ತಿಂಗಳಿಗಿಂತ ಸ್ವಲ್ಪ ಹೆಚ್ಚಿತು. ಮೊತ್ತವಾಗಿದ್ದ ಇಪ್ಪತ್ತೆಂಟು ಸಾವಿರ ರೂಪಾಯಿಗಳ ಲೆಕ್ಕ ಕಂಪೆನಿಯವರಿಗೆ ರಾಜಶೇಖರ ಒಪ್ಪಿಸಿ

"ಈ ತಿಂಗಳು ಬಂಡವಾಳಕ್ಕೆ ಖೋತಾ ಮಾಡಬೇಕಾಗಿಲ್ಲ. ಮೂಲ ಧನದ ನಾಲ್ಕಾಣೆ ಭಾಗ, ಖರ್ಚು ತೆಗೆದರೆ ಉಳಿಯುವುದು ಒಟ್ಟು

ರೂ. ೧೯,೫೦೦. ಒಬ್ಬೊಬ್ಬರಿಗೆ ಈ ತಿಂಗಳು ರೂ. ೧೨೧೮-೧೨-೦ ಬರುತ್ತದೆ. ಈಸಾರೆ ಸ್ವಲ್ಪ ಹೆಚ್ಚು ಕೊಡಲು ಸಾಧ್ಯವಾದುದಕ್ಕೆ ಸಂತೋಷಪಡುತ್ತೇನೆ"

ಎಂದು ಹೇಳಿ ಹಣ ಹಂಚುವಂತೆ ಪರಮೇಶ್ವರಯ್ಯನಿಗೆ ಹೇಳಿದ. ಪರಮೇಶ್ವರಯ್ಯ ಹಣ ವಿನಿಯೋಗ ಮಾಡುತ್ತಿದ್ದಾಗ ಅವನ ಕಿವಿಯಲ್ಲೇನೋ ಹೇಳಿ ತಾನು ರಂಗಸ್ವಾಮಿಯನ್ನು ಕರೆದುಕೊಂಡು ಹೊರಟ. ಸುಧಾ ಹತ್ತಿರ ಬಂದು

"ಅಣ್ಣಯ್ಯನವರ ಮನೆಗೆ ಹೊರಟಿರಾ ?" ಎಂದು ಕೇಳಿದಳು.

"ಹೌದು - ಏಕೆ ?"

"ನಾನೂ ಬರುತ್ತೇನೆ. ಅಕ್ಕ ಒಬ್ಬರೇ ಇರುತ್ತಾರೆ."

"ನಾನು ಬರುವವರೆಗೆ ನೀನು ಇಲ್ಲೇ ಇರು ಸುಧಾ"

ಎಂದು ಹೇಳಿ ರಂಗಸ್ವಾಮಿಯ ಜತೆಯಲ್ಲಿ ಹೊರಟ. ರಾಜಶೇಖರನ ನಡತೆ ರಂಗಸ್ವಾಮಿಗೆ ವಿಚಿತ್ರವೆನ್ನಿಸಿತು.

ರಂಗಸ್ವಾಮಿ, ರಾಜಶೇಖರ ಬಂದುದನ್ನು ಕಂಡ ಕೂಡಲೆ ಸೌಭಾಗ್ಯಮ್ಮ ಅಡಿಗೆ ಮನೆಗೆ ಹೋಗುವುದಕ್ಕೆ ಮೇಲಕ್ಕೆದ್ದಳು. ರಾಜಶೇಖರ ಅವಳನ್ನು ಕರೆದು

"ಅಕ್ಕ - ಇಲ್ಲಿ ಬನ್ನಿ. ಈಗ ಕಾಫಿ ಮಾಡುವುದಕ್ಕೆ ಹೋಗಬೇಡಿ. ನಿಮ್ಮ ಜತೆ ಮಾತನಾಡುವುದಕ್ಕೆ ನಾನಿಲ್ಲಿಗೆ ಬಂದಿರುವುದು."

"ಸುಧಮ್ಮ ಬರಲಿಲ್ಲವೇ ?"

"ಬೇಕೆಂತಲೇ ಅವಳನ್ನು ಕರೆದುಕೊಂಡು ಬರಲಿಲ್ಲ."

"ಡಿಕಾಕ್ಷನ್ ಇಟ್ಟಿದ್ದೇನೆ - ಬಿಸಿಮಾಡಿ ಕಾಫಿ ತಂದುಬಿಡುತ್ತೇನೆ."

"ನನಗೆ ಕಾಫಿ ಹುಯ್ದು ಹೊರತೂ ನಿಮಗೆ ಸಮಾಧಾನವಿಲ್ಲ. ಆಗಲಿ - ಬೇಗ ತಂದುಬಿಡಿ"

ಎಂದು ಹೇಳಿ ರಂಗಸ್ವಾಮಿಯ ಜತೆ ಕುಳಿತ. ಐದೇ ನಿಮಿಷಗಳಲ್ಲಿ ಸೌಭಾಗ್ಯಮ್ಮ ಕಾಫಿ ಸಿದ್ಧ ಮಾಡಿಕೊಂಡು ಬಂದಳು.

ಕಾಫಿ ಕುಡಿಯುವ ಪ್ರಕರಣ ಮುಗಿದ ಮೇಲೆ ರಾಜಶೇಖರ ಸುಮ್ಮನೆ ಕುಳಿತುದನ್ನು ಕಂಡು ಸೌಭಾಗ್ಯಮ್ಮ

"ಏನೋ ಮಾತನಾಡಬೇಕೆಂದಿರಿ."

"ನಿಮ್ಮ ತಂದೆಯವರು ಬರಲಿ ಎಂದು ಕಾಯುತ್ತಿದ್ದೇನೆ."

"ದೊಡ್ಡ ಮಂತ್ರಾಲೋಚನೆ ಇದ್ದ ಹಾಗಿದೆಯಲ್ಲ !"

"ಮಂತ್ರಾಲೋಚನೆಯಲ್ಲ ತಾಯಿ - ಆಪ್ತಾಲೋಚನೆ. ಮನೆಯಲ್ಲಿ ಮಕ್ಕಳಿಲ್ಲವೇ ?"

"ಇಲ್ಲ. ಎಲ್ಲರೂ ಆಡುವುದಕ್ಕೆ ಹೋಗಿದ್ದಾರೆ."

"ಒಳ್ಳೆಯದಾಯಿತು. ನನಗೆ ಆ ಗಯ್ಯಾಳಿ ಸ್ವರ್ಣನದೇ ಭಯ. ನಮ್ಮ ಮಾತೆಲ್ಲಾ ಪಾಠ ಮಾಡಿಕೊಂಡು ಬಿಡುತ್ತಾಳೆ."

ಸೌಭಾಗ್ಯಮ್ಮ ಅವನ ಮಾತಿಗೆ ನಕ್ಕಳು.

ಪರಮೇಶ್ವರಯ್ಯ ಬಂದು ಕುಳಿತ.

"ಎಲ್ಲರಿಗೂ ಹಣ ಬಟವಾಡೆಯಾಯಿತೇ ?"

"ಆಯಿತು ಮಾರಾಯ. ಇಂಥ ಯಜಮಾನನ್ನ ನಾನು ಎಲ್ಲಿಯೂ ನೋಡಲಿಲ್ಲಪ್ಪ."

"ಏಕೆ ಪರಮೇಶ್ವರಯ್ಯನವರೇ."

"ಬಂದದ್ದನ್ನೆಲ್ಲಾ ಯಾರು ಹೀಗೆ ಹಂಚುತ್ತಾರಯ್ಯಾ. ನಾಳೆ ನಿನ್ನ ಗತಿಯೇನು ?"

"ನಾನೂ ಎರಡು ತಿಂಗಳಲ್ಲಿ ಎರಡು ಸಾವಿರ ಸಂಪಾದಿಸಿದ್ದೇನಲ್ಲ. ಜತೆಗೆ ನನ್ನ ಬಂಡವಾಳ ಬೇರೆ ಇದೆ."

"ಸರಿ ಬಿಡಪ್ಪ - ಲಕ್ಷ್ಮೀಪುತ್ರನಾದೆ."

"ಸೌಭಾಗ್ಯವೇ ನನ್ನ ತಾಯಿಯಾಗಿರುವಾಗ ನನಗೆ ಯಾವದಕ್ಕೆ ಕೊರತೆ ಪರಮೇಶ್ವರಯ್ಯನವರೇ."

"ನೀನು ಮಾತಾಡಿ ನನ್ನ ಹೊಟ್ಟೆ ಉರಿಸಬೇಡ – ಸುಮ್ಮನಿರು ಮಾರಾಯ"

ಎಂದು ಪರಮೇಶ್ವರಯ್ಯ ಕಳಕಳಿಯಿಂದ ಹೇಳಿದ. ರಾಜಶೇಖರ ಅವನ ಮಾತಿಗೆ ನಕ್ಕ.

"ಪುಟ್ಟಣ್ಣನನ್ನು ನೀವು ನೋಡಿರುವಿರಲ್ಲವೇ ?"

"ನೋಡಿದ್ದೇನೆ" ಎಂದು ಸೌಭಾಗ್ಯಮ್ಮ ಹೇಳಿದಳು.

" ಅವನ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು ?"

" ಒಳ್ಳೆಯ ಹುಡುಗನ ಹಾಗೆ ಕಾಣುತ್ತಾನೆ. ತುಂಬ ಮರ್ಯಾದಸ್ಥ."

" ಅಲ್ಲಾ ರಾಜಶೇಖರ್ ಪುಟ್ಟಣ್ಣನನ್ನು ನಿಮ್ಮ ಮನೆಗೇಕೆ ಬರ ಮಾಡಿದಿರಿ " ಎಂದು ರಂಗಸ್ವಾಮಿ ಕೇಳಿದ.

" ಅವನಿಗೆ ಜ್ವರ ಬರುತ್ತಿತ್ತು."

" ಅಷ್ಟೇ ಕಾರಣವಿರಲಾರದು."

" ಇದೇ ರಂಗಸ್ವಾಮಿಗಳೇ. ಆ ವಿಷಯದಲ್ಲಿ ನಿಮ್ಮ ಸಲಹೆ ಕೇಳುವುದಕ್ಕಾಗಿಯೇ ಇಲ್ಲಿಗೆ ಬಂದಿದ್ದೇನೆ."

" ಪುಟ್ಟಣ್ಣ ಏನಾದರೂ ತರಲೆ ಮಾಡ್ತಾ ಇದ್ದಾನೇನಪ್ಪ "

ಎಂದು ಪರಮೇಶ್ವರಯ್ಯ ಕೇಳಿದ. ರಾಜಶೇಖರ ನಗುತ್ತಾ

" ಇಲ್ಲಾ ಪರಮೇಶ್ವರಯ್ಯನವರೇ ಅಂಥಾದ್ದೇನೂ ಇಲ್ಲ. ನನಗೆ ಬಹಳ ದಿವಸಗಳಿಂದ ಸುಧನ ಯೋಚನೆಯೇ ಆಗಿದೆ. ಆ ಹುಡುಗೀಗೆ ಒಳ್ಳೆಯ ವಯಸ್ಸು - ಸರಿಯಾದ ಗಂಡು ನೋಡಿ ಅವಳಿಗೆ ಮದುವೆ ಮಾಡಬೇಕಾಗಿದೆ."

" ಅವಳು ಮದುವೆ ಮಾಡಿಕೊಳ್ಳುವುದಿಲ್ಲವಂತೆ "

ಎಂದು ಸೌಭಾಗ್ಯಮ್ಮ ಹೇಳಿದಳು.

" ಹಿಂದೆ ಏನೋ ಪ್ರಸ್ತಾಪ ಬಂದಾಗ ನನ್ನಲ್ಲಿಯೂ ಹಾಗೇ ಹೇಳಿದಳು. ಮದುವೆ – ಗಂಡ – ಸಂಸಾರ ಎಂದರೆ ಬೇಸರಪಟ್ಟುಕೊಳ್ಳುವುದಕ್ಕೆ ಅವಳ ಜೀವನದ ಹಿನ್ನೆಲೆಯೇ ಕಾರಣ. ಅವಳ ಮನಸ್ಸು ಕದಡಿಹೋಗಿದೆ."

" ಇದೇನು ಒಳ್ಳೆಯ ಲಕ್ಷಣವಲ್ಲ" ಎಂದು ರಂಗಸ್ವಾಮಿ ಟೀಕಿಸಿದ.

" ಒಳ್ಳೆಯ ಲಕ್ಷಣವಲ್ಲ - ಅದಕ್ಕಾಗಿಯೇ ಅವಳ ಮದುವೆಯ ವಿಷಯ ನಾನು ಆಳವಾಗಿ ಯೋಚನೆ ಮಾಡುತ್ತಿದ್ದೇನೆ. ಇಲ್ಲಿ ಹೊರಗಿನವರು ಯಾರೂ ಇಲ್ಲದಿರುವುದರಿಂದ ಅವಳ ಬಾಳು ಕಹಿಯಾಗಲು ಕಾರಣ ತಿಳಿಸುತ್ತೇನೆ "

ಎಂದು ವಿವರವಾಗಿ ಸುಧೆಯ ಕಥೆ ನಿರೂಪಿಸಿ

" ಈಗೇನು ಮಾಡಬೇಕೆನ್ನುವಿರಿ ?"

" ಅವಳ ಮನಸ್ಸಿಗೆ ಶಾಂತಿ ದೊರಕಬೇಕಾದರೆ ಮದುವೆ ಮಾಡುವುದು ಅಗತ್ಯ "

ಎಂದು ಸೌಭಾಗ್ಯಮ್ಮ ತೀರ್ಪು ಕೊಟ್ಟಳು.

"ನೀನು ಪುಟ್ಟಣ್ಣನನ್ನು ಕರೆದು ಮನೆಯಲ್ಲಿಟ್ಟುಕೊಂಡಾಗಲೇ ಈ ವಿಷಯ ನನಗೆ ಹೊಳೆಯಿತು" ಎಂದು ಪರಮೇಶ್ವರಯ್ಯ ಹೇಳಿದ.

ರಂಗಸ್ವಾಮಿ ದೀರ್ಘವಾಗಿ ಯೋಚಿಸುತ್ತಾ

"ನಾನು ಬೇರೆ ತಿಳಿದುಕೊಂಡಿದ್ದೆ ರಾಜಶೇಖರವರೇ ?"

"ಏನು ತಿಳಿದುಕೊಂಡಿದ್ದಿರಿ."

"ಒಂದಲ್ಲ ಒಂದು ದಿನ ಸುಧಾ ಮತ್ತು ನಿಮ್ಮ ಲಗ್ನವಾಗುತ್ತದೆಂದು. ನಾನೂ ಅವಳೂ ಅದನ್ನೇ ಬಹಳ ಸಲ ಮಾತನಾಡಿಕೊಂಡಿದ್ದೇವೆ."

"ನನ್ನ ವಿಷಯ ಈ ವೇಳೆಗಾಗಲೇ ನಿಮಗೆ ತಿಳಿಸಬೇಕಾಗಿತ್ತು ರಂಗಸ್ವಾಮಿಗಳೇ. ಆ ದುರಂತ ಕಥೆ ಹೇಳಿ ನಿಮ್ಮೆಲ್ಲರ ಮನಸ್ಸಿಗೇಕೆ ವೃಥಾ ನೋವುಂಟುಮಾಡಲಿ ಎಂದು ಸುಮ್ಮನಿದ್ದೆ."

ಎಂದು ತನ್ನ ಕಥೆಯನ್ನು ಸಾದ್ಯಂತವಾಗಿ ನಿರೂಪಿಸಿದ.

ರಂಗಸ್ವಾಮಿ, ಪರಮೇಶ್ವರಯ್ಯ ಅವಾಕ್ಕಾಗಿ ಕುಳಿತರು.

ಸೌಭಾಗ್ಯಮ್ಮ ಕಣ್ಣೀರು ಹಾಕಿದಳು.

"ಸುಧಾ ನನ್ನ ಮರೆ ಹೊಕ್ಕಳು. ನನ್ನನ್ನು 'ಅಣ್ಣಾ' ಎಂದು ಕರೆದಳು. ಅವಳ ಜೀವನ ನೆಟ್ಟಗಾಗಬೇಕೆಂಬ ಪ್ರಬಲ ಆಕಾಂಕ್ಷೆ ನನ್ನಲ್ಲಿ ಮೂಡಿತು. ನಾನು ಆರಂಭಿಸಿರುವ ಕೆಲಸ ನೀವು ಮುಗಿಸಿ ನನ್ನ ಮನಸ್ಸಿಗೆ ಶಾಂತಿ ನೀಡಬೇಕು."

"ಸುಧೆಯ ಜೀವನ ನೆಟ್ಟಗಾಗಬೇಕೆಂದು ನೀವು ಬಯಸುವಂತೆ, ನಿಮ್ಮ ಜೀವನವೂ ನೆಟ್ಟಗಾಗಬೇಕೆಂದು ಅವಳೂ ಬಯಸುತ್ತಾಳಲ್ಲ. ಅವಳಿಗೇನು ಸಮಾಧಾನ ಹೇಳುವಿರಿ ?" ಎಂದು ಸೌಭಾಗ್ಯಮ್ಮ ಕೇಳಿದಳು.

"ತಾಯೀ – ನನ್ನ ವಿಷಯ ಬೇರೆ, ಅವಳ ವಿಷಯ ಬೇರೆ. ನಾಲ್ಕು ದಿವಸವಾದರೂ ನಾನು ದಾಂಪತ್ಯ ಜೀವನ ಅನುಭವಿಸಿದ್ದೇನೆ. ಅದರಲ್ಲಿನ ಸುಖ – ದುಃಖ ಎರಡರ ಪರಿಚಯವೂ ನನಗಿದೆ. ಸುಧಾ ಇನ್ನೂ ಮಗು. ತನ್ನವರ ನಡತೆ ನೋಡಿ ನೋಡಿ ಜೀವನವೆಲ್ಲಾ ಬೇವಿನ ಮುದ್ದೆ ಎನ್ನುವ ನಿರ್ಧಾರಕ್ಕೆ ಅವಳು ಬಂದಿದ್ದಾಳೆ – ಇನ್ನೂ ಒಂದು ವಿಷಯ. ಈ ಜನ್ಮಕ್ಕಾಗುವಷ್ಟು ಕೆಲಸ ನನ್ನ ಕೈಯಲ್ಲಿದೆ. ರಂಗಭೂಮಿಯ ಸೇವೆಯಲ್ಲಿ ನನ್ನನ್ನು

ನಾನು ಮರೆಯಬಲ್ಲೆ – ಇದರಲ್ಲಿಯೇ ನನ್ನ ಸಮಸ್ತ ಕಲ್ಯಾಣ, ಶಾಂತಿ, ಶ್ರೇಯಸ್ಸನ್ನು ದೊರಕಿಸಿಕೊಳ್ಳಬಲ್ಲೆ. ಆದರೆ ಹೆಣ್ಣು ಜನ್ಮ ಹಾಗಲ್ಲ ತಾಯೀ – ತಾಯ್ತನವನ್ನು ಅನುಭವಿಸದ ಹೆಣ್ಣು ಜನ್ಮ ಅಪೂರ್ಣ. ಗಂಡಸಿಗೆ ಲೋಕ ತನ್ನ ಮನೆ – ಹೆಣ್ಣಿಗೆ ತನ್ನ ಮನೆಯೇ ಇಡೀ ಲೋಕ. ಸೃಷ್ಟಿ ಗಂಡಸಿಗೆ ಸೇರಿದಂತೆ ಸ್ಥಿತಿ ಹೆಣ್ಣಿಗೆ ಸೇರಿದೆ. ಈ ಲೋಕಕ್ಕೆ ಕಲಾವಿದರ ಅಗತ್ಯವೆಷ್ಟಿದೆಯೋ ಅಷ್ಟೇ ಒಳ್ಳೆಯ ತಾಯಂದಿರ ಅಗತ್ಯವೂ ಇದೆ. ಆ ತಾಯಿಯ ಉದರದಲ್ಲಿಯೇ ಅಲ್ಲವೇ ನಾಳಿನ ಕಾಳಿದಾಸ, ಷೇಕ್ಸ್‌ಪಿಯರ್, ತ್ಯಾಗರಾಜ, ರತ್ನಾಕರವರ್ಣಿ ಹುಟ್ಟುವುದು. ಜಗತ್ತಿನ ಸಕಲ ಶ್ರೇಯಸ್ಸಿಗೆ ತಾಯಿಯೇ ತಾಯಿಬೇರು – ಹೆಣ್ಣನ್ನು ಪ್ರೇಯಸಿ ಎಂದು ನೋಡುವ ಕಾಲ ನನಗೆ ಹೋಯಿತು. ನನ್ನ ಜೀವನದ ದುರಂತವಾದ ಮೇಲೆ ಹೆಣ್ಣನ್ನು ತಾಯಿಯೆಂದು ಅಂಗೀಕರಿಸಿದೆ. ಗೌರಿಯ ಪಾದ ಮುಟ್ಟಿ ಪ್ರಮಾಣ ಮಾಡಿದ್ದೇನೆ.... ನನ್ನ ಮಾತು ಬಿಡಿ. ಸುಧೆಯನ್ನೊಪ್ಪಿಸುವ ಕೆಲಸ ನಿಮ್ಮದು."

"ಸುಧೆಯನ್ನೊಪ್ಪಿಸುವ ಕೆಲಸ ನನಗಿರಲಿ - ಪುಟ್ಟಣ್ಣನನ್ನು ಒಪ್ಪಿಸಿರುವಿರಾ ?"

"ನಿಮ್ಮನ್ನು ಕೇಳಿ ವಿಷಯ ಅವನ ಹತ್ತಿರ ಪ್ರಸ್ತಾಪಿಸಬೇಕೆಂದಿದ್ದೆ. ಮಾತನಾಡುತ್ತೇನೆ. ಸುಧೆಯ ಬಗ್ಗೆ ಅವನಿಗೂ ವಿಶ್ವಾಸವಿರುವಂತಿದೆ."

ಎಂದು ಎದ್ದ. ಪರಮೇಶ್ವರಯ್ಯ ತನ್ನ ಭಾವನೆಗಳಿಗೆ ಕಡಿವಾಣ ಹಾಕಿ

"ಊರಿನ ಯೋಗಕ್ಷೇಮವೆಲ್ಲಾ ನೋಡಿಕೊಳ್ಳುತ್ತೀಯಪ್ಪಾ . . . ನಿನ್ನ ಯೋಗಕ್ಷೇಮ . . ."

"ಅದು ನಿಮಗೆ ಸೇರಿದ್ದಲ್ಲವೇ !"

ಎಂದು ಹೇಳಿ ಹೊರಟುಬಿಟ್ಟ.

ಪುಟ್ಟಣ್ಣನನ್ನು ಒಪ್ಪಿಸುವ ಕೆಲಸ ರಾಜಶೇಖರನಿಗೆ ಕಷ್ಟವಾಗಲಿಲ್ಲ. ಪುಟ್ಟಣ್ಣನಿಗೆ ರಾಜಶೇಖರನ ಸೂಚನೆ 'ರೋಗಿ ಬಯಸಿದ್ದು ಹಾಲೂ ಅನ್ನ–ವೈದ್ಯ ಹೇಳಿದ್ದು ಹಾಲೂ ಅನ್ನ'ವಾಯಿತು. ಆದರೆ ಈ ವಿಷಯ ಸ್ವಲ್ಪ ಕಾಲ ಗೋಪ್ಯವಾಗಿಟ್ಟಿರಬೇಕೆಂದು ರಾಜಶೇಖರ್ ಪುಟ್ಟಣ್ಣನಿಗೆ ಎಚ್ಚರಿಕೆಯಿತ್ತ.

ಒಂದು ವಾರ ಕಳೆಯಿತು. ಬೆಳಿಗ್ಗೆ ರಾಜಶೇಖರ ರೇಡಿಯೋ ತಿರುಗಿಸುತ್ತಾ ರೂಮಿನಲ್ಲಿ ಕುಳಿತಿದ್ದ. ಪುಟ್ಟಣ್ಣ ತರಕಾರಿ ತರುವುದಕ್ಕೆ ಮಾರ್ಕೆ

ಟ್ಟಿಗೆ ಹೋಗಿದ್ದ. ಸುಧಾ ಮೆಲ್ಲನೆ ರೂಮಿನೊಳಗೆ ಬಂದಳು. ರಾಜಶೇಖರ ರೇಡಿಯೋ ನಿಲ್ಲಿಸಿ ಅವಳ ಕಡೆ ತಿರುಗಿ

"ಯಾಕಮ್ಮ - ಇಷ್ಟು ಬೇಗ ಎದ್ದು ಬಿಟ್ಟೆ ?" ಎಂದು ಕೇಳಿದ.

"ರಾತ್ರಿ ನಾನು ಕಣ್ಣು ಮುಚ್ಚಲೇ ಇಲ್ಲ."

"ದಿನಾ ನಾಟಕವಾಗಿದೆ - ಒಂದೆರಡು ದಿನ ಬೇಕಾದರೆ ನಾಟಕ ನಿಲ್ಲಿಸೋಣ. ಎಲ್ಲರೂ ವಿಶ್ರಾಂತಿ ತೆಗೆದುಕೊಳ್ಳಿ."

"ಸಂಜೆ ಮೂರು ನಾಲ್ಕು ಗಂಟೆ ತಾನೇ ನಾಟಕ – ವಿಶ್ರಾಂತಿಗೆ ಬೇಕಾದಷ್ಟು ಅವಕಾಶವಿದೆ."

"ಇನ್ನೇನು ಕಾರಣ ?"

ಸುಧೆಯ ಗಂಟಲುಬ್ಬಿ ಬಂತು. ರಾಜಶೇಖರನ ಕುರ್ಚಿಯ ಪಾದದ ಬಳಿ ಬಂದು ಕುಳಿತು, ಕಣ್ಣೀರು ಹಾಕುತ್ತ

"ಅಣ್ಣಾ, ನಾನು ನಿಮಗೆ ಬೇಡವಾದೆನೆ ?" ಎಂದಳು.

"ಏಕೆ ?"

"ನನ್ನ ಹೊರಗೆ ಹಾಕಬೇಕೆಂದು ಏಕೆ ಯೋಚನೆ ಮಾಡುತ್ತಿರುವಿರಿ ?"

"ಏನು ಮಾತನಾಡುತ್ತಿರುವೆ ಸುಧಾ."

"ಸೌಭಾಗ್ಯಮ್ಮ ಎಲ್ಲಾ ಹೇಳಿದ್ದಾರೆ."

"ಓಹೋ ! ಅದೋ ! ಅವರಿಗೇನು ಉತ್ತರ ಕೊಟ್ಟೆ."

"ಏನೂ ಹೇಳಲಿಲ್ಲ."

"ಸುಧಾ, ಕತ್ತೆತ್ತಿ ನೋಡು – ನಿನ್ನ ಯೋಗಕ್ಷೇಮ ನನಗೆ ಒಪ್ಪಿಸಿರುವೆಯಲ್ಲವೇ ?"

"ಎಂದೋ ಒಪ್ಪಿಸಿರುವೆ."

"ನಿನ್ನ – ನನ್ನ ಹಿತವನ್ನು ಅನುಲಕ್ಷಿಸಿಯೇ ಈ ನಿರ್ಧಾರಕ್ಕೆ ನಾನು ಬಂದಿದ್ದೇನೆ. ಈವರೆಗೆ ನನ್ನ ಯಾವ ಮಾತು ನೀನು ತೆಗೆದು ಹಾಕಿಲ್ಲ – ಈ ಮಾತಿಗೂ ಗೌರವಕೊಡು."

"ನೀವು ಎಲ್ಲಿಗೆ ಹೋಗುವಿರಿ ?"

"ಹುಚ್ಚಿ - ನಿನ್ನ ಬಿಟ್ಟು ಎಲ್ಲಿಗೆ ಹೋಗಲಿ. ಪರಮೇಶ್ವರಯ್ಯನವರಿಗೆ ಸೌಭಾಗ್ಯಮ್ಮ ರಂಗಸ್ವಾಮಿಗಳು ಹೇಗೋ ಹಾಗೇ ನನಗೆ ನೀನೂ ಪುಟ್ಟಣ್ಣ."

"ನಾನು ಮದುವೆಮಾಡಿಕೊಂಡರೆ ನಿಮಗೆ ಸಂತೋಷವಾಗುತ್ತದೆಯೇ?"

"ಕನ್ಯಾದಾನ ಮಾಡಿದ ಪುಣ್ಯ ನೀನು ಕಟ್ಟಿಕೊಟ್ಟಂತಾಗುತ್ತದೆ – ನಿನ್ನ ಮನಸ್ಸಿನಲ್ಲಿ ಏನಿದೆ ಸ್ಪಷ್ಟವಾಗಿ ಹೇಳು."

"ನಿಮ್ಮ ಸಂತೋಷವೇ ನನ್ನ ಸಂತೋಷ."

"ಪುಟ್ಟಣ್ಣ ಒಪ್ಪಿಗೆಯಾಗದಿದ್ದರೆ ತಿಳಿಸು – ಬಲವಂತವಾಗಿ ನಿನ್ನನ್ನು ಅವನಿಗೆ ಕಟ್ಟುವುದು ನನ್ನ ಉದ್ದೇಶವಲ್ಲ."

"ಅವರಿಗೆ ನನ್ನ ಪೂರ್ವ ಚರಿತ್ರೆ – ನನ್ನ ತಾಯಿ, ಅಕ್ಕನ ವಿಷಯ ಗೊತ್ತಿದೆಯೇ ?"

"ಗೊತ್ತಿದೆ. ಎಲ್ಲವನ್ನೂ ನಾನೇ ಹೇಳಿದ್ದೇನೆ."

"ಏನು ಹೇಳಿದರು ?"

"'ಸುಧಾ ಸರಿಯಾಗಿರುವಾಗ ಅವರ ವಿಷಯ ಕಟ್ಟಿಕೊಂಡು ನನಗೆ ಆಗಬೇಕಾದುದೇನು' ಎಂದು ಹೇಳಿದ . . . ಪುಟ್ಟಣ್ಣನ ಮೇಲೆ ನಿನಗೆ ವಿಶ್ವಾಸ ಹುಟ್ಟುವುದು ಸಾಧ್ಯವಿಲ್ಲದಿದ್ದರೆ ತಿಳಿಸು.'

"ಅಂಥದ್ದೇನೂ ಇಲ್ಲ. . . ."

"ಹಾಗಾದರೆ . . . ನಾನು ನಿನ್ನನ್ನು ಎಂದಾದರೂ ಮದುವೆಯಾಗಬಹುದೆಂಬ ನಿರೀಕ್ಷಣೆ ಇಟ್ಟುಕೊಂಡಿದ್ದೆಯಾ ?"

"ಇಲ್ಲಣ್ಣ – ನೀವು ಯಾವತ್ತೂ ನನ್ನ ಅಣ್ಣ – ನನ್ನ ತಂದೆ – ನನ್ನ ದೇವರು."

"ಈ ಅಲ್ಪನಿಗೆ ಅಷ್ಟೊಂದು ಭಕ್ತಿ, ಗೌರವ ತೋರಿಸಬೇಡ ತಂಗೀ."

ರಾಜಶೇಖರನ ಅಂತಃಕರಣದ ಮೇಲೆ ಬಿರುಗಾಳಿ ಬೀಸಿದಂತಾಗಿತ್ತು. ಪುಟ್ಟಣ್ಣ ತರಕಾರಿ ತೆಗೆದುಕೊಂಡು ಒಳಕ್ಕೆ ಹೋದುದನ್ನು ಕಂಡು, ರಾಜಶೇಖರ ಅವನನ್ನು ಕೂಗಿ ಕರೆದ. ಪುಟ್ಟಣ್ಣ ಬಂದು ಬಾಗಿಲಲ್ಲಿ ನಿಂತುಕೊಳ್ಳಲು

"ಒಳಗೆ ಬಾ ಪುಟ್ಟಣ್ಣ" ಎಂದು ಕರೆದು "ಪುಟ್ಟಣ್ಣ, ಸುಧಾ ನನ್ನ ತಂಗಿ – ನನ್ನ ಮಗಳು, ಇವಳನ್ನು ಸಾಕಿದ ಹೆಮ್ಮೆ ನನಗಿದೆ. ಇವಳನ್ನು ಇಂದು ನಿನಗೊಪ್ಪಿಸುತ್ತಿದ್ದೇನೆ." ಎಂದು ಸುಧೆಯ ಕೈಯನ್ನು ಪುಟ್ಟಣ್ಣನ ಕೈಯಲ್ಲಿಟ್ಟು "ನೀವೇ ನನ್ನ ಸಂಸಾರ – ನಿಮ್ಮ ಸುಖವೇ ನನ್ನ ಸುಖ, ನಿಮ್ಮ

ದುಃಖವೇ ನನ್ನ ದುಃಖ. – ಸುಧೆ ಚಿನ್ನದಂಥ ಮಗು – ಅವಳ ಮನಸ್ಸಿಗೆ ನೋವಾಗದಂತೆ ನಡೆದುಕೊಂಡು ಹೋಗು."

ಎಂದು ಹೇಳಿದ. ಸುಧಾ, ಪುಟ್ಟಣ್ಣ ರಾಜಶೇಖರನ ಪಾದಮುಟ್ಟಿ ನಮಸ್ಕರಿಸಿದರು.

"ಆ ಮನೆಗೆ ಹೋಗಿ ಪೂಜ್ಯರು ಪರಮೇಶ್ವರಯ್ಯನವರು, ಅಣ್ಣ ರಂಗ ಸ್ವಾಮಿ, ಅಕ್ಕ ಸೌಭಾಗ್ಯಮ್ಮ ಇವರಿಗೆ ನಮಸ್ಕಾರಮಾಡಿ ಅವರ ಆಶೀರ್ವಾದ ಪಡೆದು ಬನ್ನಿ."

ಎಂದು ಹೇಳಿದ. ಪುಟ್ಟಣ್ಣ, ಸುಧಾ ಹೊರಟರು.

ರಾಜಶೇಖರನ ಕಣ್ತುಂಬ ನೀರು ತುಂಬಿತು. ರೇಡಿಯೋ ಮೇಲಿದ್ದ ದೇವಿಯ ಚಿತ್ರ ನೋಡಿ.

"ನಿನ್ನ ಆಟ ನಿನಗೇ ಗೊತ್ತು ತಾಯಿ" ಎಂದ.

## ೨೬

ದೇವರಾಜನ ಪ್ರಕರಣ ಸರಸ್ವತಿ ನಿರೀಕ್ಷಿಸಿದುದಕ್ಕಿಂತಲೂ ಹೆಚ್ಚಾಗಿ ಅವಳ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡಿತು. 'ಅವರನ್ನು ಬನ್ನಿ ಎಂದು ನಾನು ಕರೆದೆನೇ - ನನ್ನ ನೋಡಿ ಬುದ್ಧಿ ಕೆಡಿಸಿಕೊಳ್ಳಿ ಎಂದು ಹೇಳಿದೆನೇ - ಮದರಾಸಿಗೆ ಕರೆದುಕೊಂಡು ಹೋಗಿ ಎಂದು ಕೇಳಿಕೊಂಡೆನೇ- ಮದರಾಸಿನಲ್ಲಿ ಸಾವಿರಾರು ರೂಪಾಯಿ ಕುದುರೆ ಜೂಜಿನಲ್ಲಿ ಕಳೆಯಿರಿ ಎಂದು ಹೇಳಿದೆನೇ - ಸರ್ಕಾರದ ಹಣ ಕದ್ದು ತನ್ನಿ ಎಂದು ನಾನು ಪ್ರೇರೇಪಿಸಿದೆನೇ' ಎಂದು ತನ್ನ ಮನಸ್ಸಿಗೆ ಸುಳ್ಳು ಸಮಾಧಾನ ಮಾಡಿಕೊಳ್ಳಲೆತ್ನಿಸಿದಳು. ಆದರೆ ಘೋರ ಸತ್ಯದ ಎರಡು ಮುಖ ಅವಳನ್ನು ಭೂತದಂತೆ ಕಾಡ ತೊಡಗಿತು.

ದೇವರಾಜ್ ಅಪಮಾನಕ್ಕೆ ಅಂಜಿ ಆತ್ಮಹತ್ಯ ಮಾಡಿಕೊಂಡ!

ಅವನ ಹೆಂಡತಿ – ಮೂರು ಜನ ಮಕ್ಕಳು ನಿರ್ಗತಿಕರಾದರು! ತಪ್ಪು

ಯಾರದು ! - ಅವರದೇ ತಪ್ಪಲ್ಲವೇ ? - ಅವರ ಜವಾಬ್ದಾರಿ ಅವರಿಗಲ್ಲದೆ ನನಗೆ ಹೇಗೆ ಗೊತ್ತಾಗಬೇಕು.

ಚಿತ್ತಕ್ಕೆ ಸ್ವಾಸ್ಥ್ಯವಿಲ್ಲ !
ಮನಕ್ಕೆ ಶಾಂತಿಯಿಲ್ಲ !
ಜೀವಕ್ಕೆ ಸುಖವಿಲ್ಲ !

ಸ್ವಾಸ್ಥ್ಯ – ಶಾಂತಿ - ಸುಖ ದೊರಕಿಸಿಕೊಳ್ಳುವುದಕ್ಕೆ ಸರಸ್ವತಿಗೆ ತೋರಿದುದು ಒಂದೇ ಉಪಾಯ - ಸೆನ್‌ರೈಸ್ ಹೋಟೆಲ್.

ಮಗಳನ್ನು ಕರೆದುಕೊಂಡು ಹೊಟೇಲಿಗೆ ಹೊರಟಳು.

ತಾಯಿ - ಮಗಳಿಬ್ಬರಿಗೂ ಗಣೇಶರಾಯನ ಕೃಪಾಶ್ರಯ ದೊರೆಯಿತು.

ಹೊಟೇಲಿನಲ್ಲಿ ಪರಿಚಯವಾದ ಮಿತ್ರರನ್ನು ಸರಸ್ವತಿ ಮನೆಗೂ ಬರ ಮಾಡಿಕೊಳ್ಳುತ್ತಿದ್ದಳು.

ಸರಸ್ವತಿಯ ವ್ಯವಹಾರ ಲಾಭದಾಯಕವಾಗಿದ್ದುರಿಂದ ಮುತ್ತಮ್ಮನೂ ಆಕ್ಷೇಪವೆತ್ತಿರಲಿಲ್ಲ.

ಸರಸ್ವತಿ, ಮಂಜುಳಾ ಇವರ ಚಲನವಲನಕ್ಕೆ ಬೆಂಗಳೂರು ಸಾಲದಾಯಿತು. ಅವರ ಬಳಗ ದಿನ ದಿನಕ್ಕೆ ಬೆಳೆಯುತ್ತ ಬಂತು.

ರಾಮರಾಜಪ್ಪ ಸೂಕ್ಷ್ಮವಾಗಿ ಎರಡು ಮೂರು ಸಲ ಮುತ್ತಮ್ಮನಿಗೆ ಎಚ್ಚರಿಕೆ ಕೊಟ್ಟ. ಆದರೆ ಮನೆಯಲ್ಲಿದ್ದ ಕಾಮಧೇನು, ನಂದಿನಿಗಳನ್ನು ಮುತ್ತಮ್ಮ ರಾಮರಾಜಪ್ಪನ ಒಣಮಾತಿಗೆ ಮರುಳಾಗಿ ಹೊಡೆದಟ್ಟಲು ಸಿದ್ಧಳಾಗಿರಲಿಲ್ಲ.

ಪಿಳ್ಳಣ್ಣ ಮುತ್ತಮ್ಮನ ಮನೆಯಿಂದ ದೂರವಾದಂತೆ ರಾಮರಾಜಪ್ಪನೂ ದೂರವಾದ. ಮುತ್ತಮ್ಮ ಅದಕ್ಕೆ ಹೆಚ್ಚು ಮನಸ್ಸುಕೊಡಲಿಲ್ಲ.

ಮುತ್ತಮ್ಮನ ಮನೆಯಲ್ಲಿ ಪಾರ್ಟಿಗಳು ಬೆಳೆಯುತ್ತಾ ಬಂದವು. ಸರಸ್ವತಿಗೆ ನಿತ್ಯ ಪಾನೀಯಗಳು ಬೇಕಾಗುತ್ತಿದ್ದವು. ಮಂಜುಳಾ ತಾಯಿಯ ಮೇಲ್ಪಂಕ್ತಿಯನ್ನೇ ಅನುಸರಿಸಿ ತಾಯಿಯನ್ನೂ ಮೀರಿಸಿದ್ದಳು.

ರಾತ್ರಿಯೆಲ್ಲಾ ಮುತ್ತಮ್ಮನ ಮನೆಯಲ್ಲಿ ಹುಯಿಲೋ ಹುಯಿಲು. ಸರಸ್ವತಿ, ಮಂಜುಳಾ, ಅವರ ಗೆಳೆಯರು ಮುತ್ತಮ್ಮನ ಮನೆಯನ್ನು 'ಕಾಮನ ಗರಡಿ' ಮಾಡಿದರು.—

ಮನೆಯ ಮಾಲಿಕನಿಗೆ ನೆರೆಹೊರೆಯವರಿಂದ ದೂರುಗಳು ಹೋದವು. ಮನೆ ಬಿಟ್ಟುಬಿಡಲು ಅವನು ಮುತ್ತಮ್ಮನಿಗೆ ಸೂಚನೆಯಿತ್ತ. ಮುತ್ತಮ್ಮ ಬಾಯಿ ದೊಡ್ಡದು ಮಾಡಿ, ಅವನನ್ನು ಹೆದರಿಸಿ ಕಳುಹಿಸಿ ಬಿಟ್ಟಳು.

'ಸನ್‌ರೈಸ್ ಹೋಟೆಲಿ'ನಲ್ಲಿ ಪರಿಚಯವಾದ ಇಬ್ಬರು ಅರಸೀಕೆರೆ, ಸಾಹುಕಾರರಿಗೆ ಮುತ್ತಮ್ಮನ ಮನೆಯಲ್ಲಿ ಒಂದು ದಿನ 'ಪಾರ್ಟಿ' ವ್ಯವಸ್ಥೆ ಯಾಗಿತ್ತು. ಮಧ್ಯರಾತ್ರಿಯ ವೇಳೆಗೆ ಮುತ್ತಮ್ಮ. ಭಾಗ್ಯಮ್ಮ, ಸರಸ್ವತಿ, ಮಂಜುಳಾ, ಸಾಹುಕಾರರು ಸಾಕಷ್ಟು ಪಾನೀಯ ಸ್ವೀಕರಿಸಿ ಗೋಷ್ಠಿಗಾನ ಆರಂಭಿಸಿದ್ದರು.

ಎಲ್ಲಿಯೋ ದೂರದಲ್ಲಿ ಮೋಟಾರಿನ ಶಬ್ದವಾಯಿತು. ಅತ್ತ ಯಾರ ಲಕ್ಷ್ಯವೂ ಹೋಗಲಿಲ್ಲ.

ಸ್ವಲ್ಪ ಹೊತ್ತಿನಲ್ಲಿಯೇ ಯಾರೋ ಬಾಗಿಲು ಧಡ ಧಡ ಬಡಿದರು. ಅದನ್ನು ಯಾರೂ ಗಮನಿಸಲಿಲ್ಲ. ಬಾಗಿಲು ಮುರಿದು ಹೋಗುತ್ತದೋ ಏನೋ ಎನ್ನುವ ಮಟ್ಟಿಗೆ ಬಾಗಿಲು ಬಡಿದ ಶಬ್ದವಾಯಿತು. ಮುತ್ತಮ್ಮ ಬೇಸರದಿಂದ ಭಾಗ್ಯಮ್ಮನಿಗೆ

"ನೋಡು ಬಾಗ್ಯಮ್ಮ – ಯಾರು ಆಳು ಮುಂಡೇಮಕ್ಕಳು." ಎಂದಳು.

ಭಾಗ್ಯಮ್ಮ ತೂಗಾಡಿಕೊಂಡು ಹೋಗಿ ಬಾಗಿಲು ಚಿಲಕ ತೆಗೆದಳು. ಹೊರಗಿದ್ದವರೇ ಬಾಗಿಲು ನೂಕಿಕೊಂಡು ಒಳಗೆ ಪ್ರವೇಶಿಸಿದರು,

"ಪೋಲೀಸಿನವರು !" ಎಂದು ಭಾಗ್ಯಮ್ಮ ಚಿಟ್ಟನೆ ಚೀರಿದಳು.

ಸಾಹುಕಾರರಿಬ್ಬರೂ ಹಿಂದುಗಡೆ ಬಾಗಿಲಿನಲ್ಲಿ ಪರಾರಿಯಾಗಲೆತ್ನಿಸಿದರು ಅಲ್ಲಿ ಕಾವಲು ಕಾಯುತ್ತಿದ್ದ ಪೋಲೀಸಿನವರು ಅವರ ಕುತ್ತಿಗೆ ಹಿಡಿದು ಒಳಗೆ ದಬ್ಬಿಕೊಂಡು ಬಂದರು.

ಎಲ್ಲರನ್ನೂ ಪೋಲೀಸ್ ವ್ಯಾನಿಗೆ ಪೋಲೀಸಿನವರು ತುಂಬಿಕೊಂಡರು. ಮಲಗಿ ನಿದ್ರಿಸುತ್ತಿದ್ದ ಪುಟ್ಟಿಯನ್ನು ಒಬ್ಬ ಪೋಲೀಸಿನವನು ಬೂಟ್ಸ್ ಕಾಲಿನಲ್ಲಿ ಒದೆದು, ಅವಳನ್ನೂ ವ್ಯಾನಿಗೆ ಅಟ್ಟಿದ.

ಪೋಲೀಸಿನವರು ಮೂರನೆಯ ಮಧ್ಯಾಹ್ನ ಬೆಂಚ್ ಮ್ಯಾಜಿಸ್ಟ್ರೇಟರ ಕೋರ್ಟಿನಲ್ಲಿ ಎಲ್ಲರನ್ನೂ ಸಾಲಿಗೆ ನಿಲ್ಲಿಸಿದರು. ಸಾಹುಕಾರರಿಬ್ಬರೂ ಕತ್ತು ತಗ್ಗಿಸಿ ನಿಂತರು.

ಪ್ರಾಸಿಕ್ಯೂಟಿಂಗ್ ಇನ್ಸ್‌ಪೆಕ್ಟರು ಆಪಾದಿತರ ಮೇಲೆ ಸಿದ್ಧ ಮಾಡಿದ್ದ ಚಾರ್ಜ್‌ಷೀಟ್ ಓದಿದರು. ಆಪಾದಿತರ ಹೇಳಿಕೆಯೇನಾದರೂ ಇದೆಯೇ ಎಂದು ಮ್ಯಾಜಿಸ್ಟ್ರೇಟರು ಕೇಳಿದರು.

ಆಪಾದಿತರು ಏನೂ ಇಲ್ಲವೆಂದರು.

"ಚಾರ್ಜುಗಳನ್ನು ಒಪ್ಪಿಕೊಳ್ಳುವಿರಾ, ನಿರಾಕರಿಸುವಿರಾ"

ಎಂದು ಮ್ಯಾಜಿಸ್ಟ್ರೇಟರು ಕೇಳಿದರು.

ಚಾರ್ಜುಗಳನ್ನು ಒಪ್ಪಿಕೊಂಡರೆ ಶಿಕ್ಷೆ ಕಡಿಮೆಯಾಗುವುದೆಂದು ಪೋಲೀಸಿನವರು ಹೇಳಿದ್ದುದು ಆಪಾದಿತರ ನೆನಪಿಗೆ ಬಂದಿತು. ಎಲ್ಲರೂ ಚಾರ್ಜುಗಳನ್ನೊಪ್ಪಿಕೊಂಡರು.

ಮ್ಯಾಜಿಸ್ಟ್ರೇಟರು ಎಲ್ಲರಿಗೂ ಐವತ್ತು ರೂಪಾಯಿಗಳಂತೆ ಜುಲ್ಮಾನೆ ವಿಧಿಸಿ, ಜುಲ್ಮಾನೆ ಕೊಡದೆ ಹೋದರೆ ಹದಿನೈದು ದಿವಸಗಳು ಸಜಾ ಅನುಭವಿಸಬೇಕೆಂದು ಆಜ್ಞೆ ಮಾಡಿದರು. ಪುಟ್ಟಿಯನ್ನು ನಿರಪರಾಧಿಯೆಂದು ಮ್ಯಾಜಿಸ್ಟ್ರೇಟರು ಬಿಟ್ಟುಬಿಟ್ಟರು.

ಸಾಹುಕಾರರು ಬಾಯಿಮುಚ್ಚಿಕೊಂಡು ಎಲ್ಲರ ಜುಲ್ಮಾನೆ ಹಣ ಒಟ್ಟು ಮುನ್ನೂರು ರೂಪಾಯಿ ತೆತ್ತು ಅಲ್ಲಿಂದ ಪಾರಾದರು.

ಮನೆಗೆ ಹಿಂದಿರುಗುವವರೆಗೂ ಯಾರ ಬಾಯಲ್ಲಿಯೂ ಮಾತು ಹೊರಡಲಿಲ್ಲ.

ಮನೆಯಲ್ಲಿ ಕಾಲಿಟ್ಟ ಕೂಡಲೆ ಮುತ್ತಮ್ಮನಿಂದ ಏನು ಬರಬಹುದೆಂಬುದನ್ನು ಸರಸ್ವತಿ ನಿರೀಕ್ಷಿಸಿದಳು. ಅದೇ ರೀತಿ ಮುತ್ತಮ್ಮ

"ನೀವಿಬ್ಬರೂ ಇಲ್ಲಿಂದ ಈಗಲೇ ಒಲ್ಡಿ" ಎಂದಳು.

"ನಿಂತ ಗಳಿಗೆಯಲ್ಲಿ ಹೊರಡು ಎಂದರೆ ಎಲ್ಲೀಗೆ ಹೋಗೋಣ ಮುತ್ತಮ್ಮ."

"ಎಲ್ಲೀಗಾನ ಓಗಿ. ನಂಗೇನು ?"

"ಎರಡು ದಿವಸ ಟೈಮು ಕೊಡಮ್ಮ—ಮನೆ ನೋಡಿಕೊಂಡು ಹೋಗುತ್ತೇವೆ"

ಎಂದು ಸರಸ್ವತಿ ಅಂಗಲಾಚಿದಳು. ಮುತ್ತಮ್ಮ ಗೊಣಗಿಕೊಳ್ಳುತ್ತ ಸಮ್ಮತಿಯಿತ್ತಳು.

ಮನೆಯ ಮಾಲಿಕನೂ ಆಗಲೇ ಅವತರಿಸಿ, ‘ ಮನೆ ಕೂಡಲೆ ಖಾಲಿ ಮಾಡಿ ’ ಎಂದು ವರಾತ ಹಚ್ಚಿದ. ಮುತ್ತಮ್ಮ ಅವನ ಕಾಲ ಮೇಲೆ ಬಿದ್ದು ಮೂರು ದಿನಗಳ ವಾಯಿದೆ ತೆಗೆದುಕೊಂಡಳು.

ಮುತ್ತಮ್ಮ ಭಾಗ್ಯಮ್ಮ ಒಂದು ಕಡೆ, ಸರಸ್ವತಿ ಮಂಜುಳಾ ಒಂದು ಕಡೆ ಮನೆ ಹುಡುಕಲಾರಂಭಿಸಿದರು.

ಅದೇ ಸಂಜೆ ಹೊರಬಿದ್ದ ‘ ತಾಯಿನಾಡು ’ ಪತ್ರಿಕೆಯಲ್ಲಿ ಮುತ್ತಮ್ಮ-ಸರಸ್ವತಿ ಪ್ರಕರಣ ಕೂಲಂಕಷವಾಗಿ ವರದಿಯಾಗಿತ್ತು. ಕಂಪೆನಿ ಮನೆಗೆ ಬಂದ ಪೇಪರನ್ನು ಸುಧೆಯೇ ತೆಗೆದುಕೊಂಡು ನೋಡಿ ಅದನ್ನು ರಾಜಶೇಖರನ ಕೈಯಲ್ಲಿತ್ತಳು. ರಾಜಶೇಖರ ಓದಿಕೊಂಡು, ಪೇಪರ್ ಮುಚ್ಚಿ ಒಳಗಿಟ್ಟ.

ನಟರೆಲ್ಲಾ ಕಂಪೆನಿಮನೆಯಿಂದ ಹೋದ ಮೇಲೆ ಸುಧಾ

“ ಇವರಿಬ್ಬರೂ ಇನ್ನೂ ಏನೇನು ಮಾಡುತ್ತಾರೋ ” ಎಂದಳು.

ರಾಜಶೇಖರನ ಕಣ್ನೋಟ ಸಹಾನುಭೂತಿಯನ್ನು ವ್ಯಕ್ತಮಾಡಿತು.

ಮುತ್ತಮ್ಮ ಕೊಟ್ಟಿದ್ದ ಗಡುವು ತೀರುತ್ತ ಬಂದಿತ್ತು. ಸರಸ್ವತಿ, ಮಂಜುಳಾ ಮನೆಗಾಗಿ ಅಲೆದಲೆದು ಬೇಸತ್ತಿದ್ದರು. ಶಂಕರಪುರ ಮಾವಳ್ಳಿ, ವಿಶ್ವೇಶ್ವರಪುರ, ಚಾಮರಾಜಪೇಟೆ, ಬಸವನಗುಡಿ, ವಿಲ್ಸನ್ ಗಾರ್ಡನ್ಸ್ ಎಲ್ಲಾ ಶೋಧಿಸಿದ್ದರು. ನೂರೈವತ್ತು, ಇನ್ನೂರು ರೂಪಾಯಿಯ ಮನೆಗಳು ಸಿಕ್ಕುತ್ತಿದ್ದವು. ಸಣ್ಣ ಮನೆಗೆ ಮಾತ್ರ ಎಲ್ಲೆಲ್ಲಿಯೂ ಅಭಾವ.

ಸರಸ್ವತಿ ಬಸವನಗುಡಿಯಲ್ಲಿ ಹೊಸ ಮನೆ ಕಟ್ಟಿಸುತ್ತಿದ್ದ ಒಬ್ಬ ಕಂಟ್ರಾಕ್ಟರನ್ನು ಅದೇ ಸಂಜೆ ಮನೆಗಾಗಿ ಕೇಳಿದಳು.

“ ಇಲ್ಲೆಲ್ಲೂ ಇಪ್ಪತ್ತೈದು, ಮೂವತ್ತಕ್ಕೆ ಮನೆ ಸಿಕ್ಕಲ್ರವ್ಮ - ನರಸಿಂಹ ರಾಜಾ ಕಾಲೊನಿಯಲ್ಲಿ ಹೊಸಮನೆಗಳಾಗಿವೆ. ಅಲ್ಲಿ ವಿಚಾರಿಸಿ. ಸಿಕ್ಕಿದರೂ ಸಿಕ್ಕಬಹುದು.”

ಎಂದು ಹೇಳಿದ. ಇಬ್ಬರ ಮನಸ್ಸಿನಲ್ಲಿಯೂ ಆಶಾಕಿರಣ ಮೂಡಿತು. ನರಸಿಂಹರಾಜಾ ಕಾಲೊನಿಯಲ್ಲಿ ಸುತ್ತಾಡಿ ಕೊನೆಗೆ ಹೊಸದಾಗಿ ಕಟ್ಟಲ್ಪಟ್ಟಿದ್ದ ಸಾಲುಮನೆಗಳ ಬಳಿಗೆ ಬಂದು ಮೇಸ್ತ್ರಿಯನ್ನು ಮಾತನಾಡಿಸಿದರು.

“ ಬಾಡಿಗ್ಗೆ ಕೊಡ್ತಾರವ್ವಾ.” ಎಂದ.

“ ಯಾರನ್ನ ಕೇಳ್ಬೇಕಪ್ಪಾ ? ”

" ಅಲ್ಲಿ ನೋಡಿ - ಅದೇ ಯಜಮಾನರ ಮನೆ. ಅವರನ್ನ ಕೇಳಿ."

ಎಂದ. ಮನೆಯ ಯಜಮಾನರ ಮನೆಗೆ ಬಂದು ವಿಚಾರಿಸಿದರು. ಯಜಮಾನರು ಮನೆಯಲ್ಲಿರಲಿಲ್ಲ. ಯಜಮಾನಿತಿ ಗೌರಮ್ಮನವರು ತೊಟ್ಟಿಯಲ್ಲಿ ಚಾಪೆ ಹಾಕಿ ಅವರನ್ನು ಕೂಡಿಸಿ

" ಏನಮ್ಮ ಬಂದಿದ್ದಿರಿ ? " ಎಂದು ಕೇಳಿದರು.

" ಮನೆ ಬೇಕಾಗಿತ್ತು, ಹುಡುಕಿಕೊಂಡು ಬಂದೆವು. ಅಲ್ಲಿ ಕಟ್ಟಿಸುತ್ತಿರುವ ಹೊಸಮನೆಗಳು ನಿಮ್ಮದಂತೆ."

" ಹೌದು. ನಮ್ಮದೇ. ಬಾಡಿಗೆಗೆ ಕೊಡೋಕೆ ಕಟ್ಟಿಸಿದ್ದೇವೆ."

" ದಯವಿಟ್ಟು ನಮಗೊಂದು ಮನೆಕೊಟ್ಟರೆ ಉಪಕಾರ ಮಾಡಿದಂತಾಗುತ್ತದೆ."

" ಇದುವರೆಗೆ ನೀವು ಎಲ್ಲಿದ್ದಿರಿ ?"

" ಶಂಕರಪುರದಲ್ಲಿ."

" ಇರುವ ಮನೆಯೇಕೆ ಬಿಡುತ್ತಿದ್ದೀರಿ."

" ಆ ಮನೆ ಯಜಮಾನರು ತೀರಿಕೊಂಡರು. ಕೆಟ್ಟ ನಕ್ಷತ್ರ ಮನೆ ಬಿಡಬೇಕಾಗಿದೆ."

" ನೀವು ಎಷ್ಟು ಜನ ಇದ್ದೀರಿ ?"

" ನಾನೂ ನನ್ನ ಮಗಳು - ನನ್ನ ಅಳಿಯ."

" ಅಳಿಯಂದಿರು ಏನು ಮಾಡುತ್ತಿದ್ದಾರೆ."

" ಮೈಸೂರಿನಲ್ಲಿ ಓದುತ್ತಾ ಇದ್ದಾರೆ."

" ನೀವು . . ."

" ನನ್ನ ಯಜಮಾನರು ಎರಡು ವರ್ಷಗಳ ಕೆಳಗೆ ತೀರಿಕೊಂಡರು. ಮಾರಾಯರು ಸಾಕಷ್ಟು ಆಸ್ತಿ ಮಾಡಿಟ್ಟು ಹೋಗಿದ್ದಾರೆ. ಸುಮ್ಮನೆ ಕೂತು ಏಕೆ ತಿನ್ನೋದೂಂತ ನಾನು ಸಂಗೀತ ಪಾಠ ಹೇಳುತ್ತೀನಿ."

" ಯಜಮಾನರು ಬರ್ತಾರೆ – ಮಾತಾಡಿ."

" ನೀವು ಅವರಿಗೆ ಹೇಳಿ ನಮಗೆ ಮನೆ ಕೊಡಿಸಬೇಕಮ್ಮ."

" ಆಗಲಿ - ಅವರು ಬರಲಿ."

" ಬಾಡಿಗೆಯೆಷ್ಟು ?"

" ಮನೆ ನೋಡಿದಿರಾ ?"

" ಇಲ್ಲ - ಮನೆಯಲ್ಲಿ ಏನೇನಿದೆ ?"

" ಒಂದು ಹಾಲು, ಎರಡು ರೂಮು, ಅಡಿಗೆ ಮನೆ, ಬಚ್ಚಲ ಮನೆ."

" ಬಾಡಿಗೆ ?"

"ಮೂವತ್ತೈದು ಎಂದು ಹೇಳಿದ್ದಾರೆ. ಲೈಟಿನದು ಬೇರೆ ಕೊಡಬೇಕು."

" ಮೂವತ್ತಕ್ಕೆ ಮಾಡಿಸಿಕೊಡಿಯಮ್ಮ."

" ಆಗಲಿ – ಯಜಮಾನರು ಬರಲಿ."

ಸ್ವಲ್ಪ ಹೊತ್ತು ಕಳೆದ ಮೇಲೆ ಯಜಮಾನರು ಕೈಯಲ್ಲಿ ದೊಣ್ಣೆ ಹಿಡಿದು ಬಂದರು. ಯಜಮಾನಿತಿ ಅವರಿಗೆ ಎಲ್ಲಾ ವಿವರಿಸಿದ ಮೇಲೆ,

" ಬಾಡಿಗೆ ಕಡಿಮೆ ಮಾಡೋದಿಕ್ಕೆ ಆಗೋದಿಲ್ಲಮ್ಮ."

ಎಂದು ಯಜಮಾನರು ಖಡಾಖಂಡಿತವಾಗಿ ನುಡಿದರು. ಮನೆಯೆಲ್ಲಿ ತಪ್ಪಿ ಹೋಗುತ್ತದೆಯೋ ಎಂದು ಹೆದರಿ ಸರಸ್ವತಿ ಒಪ್ಪಿಕೊಂಡು

" ಬೀಗದ ಕೈ ಯಾವಾಗ ಕೊಡುತ್ತೀರಿ ?"

" ಬೆಳಿಗ್ಗೆ ಬನ್ನಿ."

" ಬೆಳಿಗ್ಗೆ ನಾವು ಈಗಿರೋ ಮನೆ ಬಿಡಲೇ ಬೇಕಾಗಿದೆ. ಅಡ್ವಾನ್ಸ್ ತೆಗೆದುಕೊಂಡು ನೀವು ಬೀಗದಕೈ ಕೊಟ್ಟರೆ ಬೆಳಿಗ್ಗೆ ಸಾಮಾನು ಸಾಗಿಸಿಕೊಂಡು ಬಂದು ಬಿಡುತ್ತೇವೆ."

ಯಜಮಾನರು ಅನುಮಾನಿಸಿ ಒಪ್ಪಿಕೊಂಡು, ಹನ್ನೊಂದು ತಿಂಗಳಿಗೆ ಕರಾರು ಪತ್ರ ಬರೆದು, ಎರಡು ತಿಂಗಳ ಬಾಡಿಗೆ ಅಡ್ವಾನ್ಸ್ ವಸೂಲ್ಮಾಡಿ ಕೊಂಡು ಸರಸ್ವತಿ, ಮಂಜುಳನನ್ನು ಹೊಸ ಮನೆಗಳ ಬಳಿಗೆ ಕರೆದೊಯ್ದು ಬಾಗಿಲು ತೆಗೆದು ತೋರಿಸಿ, ಬೀಗದ ಕೈ ಅವರ ಕೈಯಲ್ಲಿತ್ತರು.

ಸರಸ್ವತಿ ವಿಜಯೋತ್ಸಾಹದಿಂದ ಮನೆಗೆ ಬಂದು ಮುತ್ತಮ್ಮನಿಗೆ ಸುದ್ದಿ ತಿಳಿಸಿದಳು.

ಮಾರನೆಯ ದಿನ ಬೆಳಿಗ್ಗೆ ಸರಸ್ವತಿ, ಮಂಜುಳಾ ನರಸಿಂಹರಾಜಾ ಕಾಲೋನಿಗೆ ಬಂದರು. ಅದೇ ಸಂಜೆ ಮುತ್ತಮ್ಮ, ಭಾಗ್ಯಮ್ಮ, ಪುಟ್ಟಿ ಶ್ರೀರಾಮಪುರಕ್ಕೆ ಹೋದರು.

ಸರಸ್ವತಿಗೆ ಮನೆಸಿಕ್ಕಿತು - ಆದರೆ ಹೊಸ ಹೊಸ ಸಮಸ್ಯೆಗಳು ಹುಟ್ಟಿ

ಕೊಂಡವು. ಮುತ್ತಮ್ಮನ ಮನೆಗಿದ್ದ ಅನುಕೂಲ ಈ ಮನೆಗಿರಲಿಲ್ಲ. ಅಲ್ಲಿ ಸುತ್ತಮುತ್ತ ಯಾರ ಮನೆಯೂ ಇರಲಿಲ್ಲ – ಸ್ವಚ್ಛಂದವಾಗಿರಬಹುದಾಗಿತ್ತು. ಯಾರು ಯಾವ ಹೊತ್ತಿನಲ್ಲಿ ಬೇಕಾದರೂ ಬಂದು ಹೋಗಬಹುದಾಗಿತ್ತು. ಈ ಮನೆಯ ಸುತ್ತ ನಾಲ್ಕು ಕಡೆಯೂ ಮನೆಗಳು - ಸಾಲುಮನೆಗಳಿಗೆ ಸದ್ಯಕ್ಕೆ ಜನ ಬಂದಿರಲಿಲ್ಲ, ಆದರೆ ಒಂದು ವಾರದೊಳಗಾಗಿ ಅವು ತುಂಬುವುದರಲ್ಲಿ ಸಂದೇಹವಿರಲಿಲ್ಲ.

ಮನೆಯನ್ನು ವಾಸದ ಮನೆಯನ್ನಾಗಿಯೇ ಇಟ್ಟುಕೊಂಡು ವೃತ್ತಿಯನ್ನು ಬೇರೆ ಕಡೆ ಮಾಡುವುದೆಂದು ಸರಸ್ವತಿ ಯೋಚಿಸಿದಳು. ಹೋಗುವುದೆಲ್ಲಿಗೆ? ಮುತ್ತಮ್ಮನ ಮನೆಗೆ ಕಾಲಿಡುವಂತಿರಲಿಲ್ಲ. ಕೋರ್ಟಿನಲ್ಲಾದ ಗೌರವ 'ಸನ್‌ರೈಸ್ ಹೊಟೇಲಿ'ಗೂ ತಿಳಿದೇ ಇರಬೇಕು. ಅಲ್ಲಿಗೆ ಹೋಗುವುದೂ ಸಾಧ್ಯವಿಲ್ಲ.

ಉಳಿದುದು ಒಂದೇ ಜಾಗ – ರಾಘವಾಚಾರ್ಯರ ಶಾಲೆಯಲ್ಲಿ ಬೆಳಿಗ್ಗೆ ಕಳೆಯುವುದು. ರಾತ್ರಿ - ಕತ್ತಲು ಕವಿದ ಮೇಲೆ ಗೆಳೆಯರನ್ನು ಮನೆಗೆ ಬರ ಮಾಡಿಕೊಳ್ಳುವುದು ಎಂದು ಸರಸ್ವತಿ ನಿರ್ಧರಿಸಿದಳು.

ಈ ಸಮಸ್ಯೆಗಳನ್ನೆದುರಿಸುವಷ್ಟರಲ್ಲಿ ಮತ್ತೊಂದು ಆರಂಭವಾಯಿತು. ಮನೆಯ ಮಾಲಿಕರ ಹೆಂಡತಿ, ಸರಸ್ವತಿ, ಮಂಜುಳಾ ಇಬ್ಬರೇ ಇರುವುದನ್ನು ಕಂಡು ಅವರ ಮೇಲೆ ಕನಿಕರ ತೋರಿಸಲಾರಂಭಿಸಿದರು. ಆಗಾಗ್ಗೆ ಬಂದು ಸರಸ್ವತಿಯ ಮನೆಯಲ್ಲಿ ಕುಳಿತು ಹರಟೆ ಹೊಡೆಯುತ್ತಿದ್ದರು. ಮನೆಯಲ್ಲಿ ಮಾಡಿದ ಹುಳಿ, ಪಲ್ಯ, ಕಲಸಿದ ಅನ್ನ ತಂದು ಕೊಡುತ್ತಿದ್ದರು.

ಯಜಮಾನಿತಿಯ ಆದರ ಸರಸ್ವತಿಯ ಕುತ್ತಿಗೆಗೆ ಉರುಲಾಗಿತ್ತು. ಒಂದು ದಿನ ಯಾರೋ ಗೆಳೆಯರೊಂದಿಗೆ ಮಂಜುಳಾ ರೂಮಿನಲ್ಲಿದ್ದಳು. ಮನೆಯ ಯಜಮಾನಿತಿ ಒಂದು ಸಣ್ಣ ಡಬ್ಬದಲ್ಲಿ ಚಟ್ನಿಪುಡಿ ಹಾಕಿಕೊಂಡು ಬಂದೇ ಬಿಟ್ಟರು.

" ಮನೇಗೆ ಚಟ್ನಿಪುಡಿ ಮಾಡಿಸಿದ್ದೆ – ನಿಮಗೂ ಸ್ವಲ್ಪ ಕೊಟ್ಟು ಹೋಗೋಣಾಂತ ಬಂದೇ ಕಣ್ರೀ " ಎಂದರು.

" ಬನ್ನೀಯಮ್ಮಾ. ಇದೆಲ್ಲಾ ಯಾಕೆ ತೊಂದರೆ ತೆಗೆದುಕೊಳ್ಳುತ್ತೀರಿ ಹೇಳಿ."

"ತೊಂದರೆಯೇನು ಬಂತು. ನಿಮಗಾಗಿ ನಾನು ಮಾಡಿಸಿದನೇ- ಮಂಜುಳಮ್ಮ ಎಲ್ಲಿ ?"

"ಇದ್ದಾಳೆ."

"ಯಾರೋ ಬಂದ ಹಾಗಿತ್ತು."

"ಅವಳ ಯಜಮಾನರು ಊರಿಂದ ಬಂದಿದ್ದಾರೆ."

"ಅವರು ಕಾಲೇಜಿನಲ್ಲಿ ಓದುತ್ತಾ ಇದ್ದಾರೆ ಎಂದಿರಿ."

"ಹೌದು. ಹೆಂಡತಿ ನೆನಪು ಬಂದರೆ ಓಡಿ ಬಂದು ಬಿಡುತ್ತಾರಮ್ಮಾ."

"ಕಾಲ ಬದಲಾಯಿಸ್ತಮ್ಮ ಏನು ಮಾಡೋದು ? ನಮ್ಮ ಕಾಲದಲ್ಲಿ ಗಂಡನ ಮುಖ ನೋಡಬೇಕಾದರೆ ರಾತ್ರಿಯಾಗುವವರೆಗೆ ಕಾದಿದ್ದು-ಎಲ್ಲಾರೂ ಮಲಗುವುದನ್ನೇ ನೋಡಿಕೊಂಡಿದ್ದು ಕದ್ದು ಗಂಡನ ಬಳಿಗೆ ಹೋಗ ಬೇಕಾಗಿತ್ತು. ಈಗೇನು ಹಾಡು ಹಗಲಿನಲ್ಲಿ ಅಪ್ಪ ಅಮ್ಮನ ಎದುರಿಗೇ ಗಂಡ ಹೆಂಡತಿ ಒಬ್ಬರ ಹೆಗಲಮೇಲೆ ಒಬ್ಬರು ಕೈ ಹಾಕಿಕೊಂಡು ಓಡಾಡುತ್ತಾರೆ."

ಯಜಮಾನಿತಿಯ ಮುಗ್ಧತನ ಕಂಡು ಸರಸ್ವತಿಗೆ ಹಿಡಿಸಲಾರದಷ್ಟು ನಗೆ ಬಂದಿತು.

ಗೌರಮ್ಮನವರ ಕಾಟ ಸರಸ್ವತಿ ಸಹಿಸಿಕೊಳ್ಳುತ್ತಿದ್ದಳು. ಆಕೆಯ ಮುಖ ನೋಡಿದರೆ ಮಂಜುಳ ಬೇಸರಪಟ್ಟುಕೊಳ್ಳುತ್ತಿದ್ದಳು. ಒಂದೊಂದು ದಿನ ಗೌರಮ್ಮನವರು ಊಟಮುಗಿಸಿಕೊಂಡು ಬಂದು ಕುಳಿತುಬಿಟ್ಟರೆ ಸಂಜೆಯವರೆಗೆ 'ಜಪ್ಪಯ್ಯ' ಎನ್ನುತ್ತಿರಲಿಲ್ಲ. ಆ ಸಮಯದಲ್ಲಿ ಬಂದ ಗೆಳೆಯರಿಗೆ ಸಂಜ್ಞೆಮಾಡಿ ಸರಸ್ವತಿ ಕಳುಹಿಸಬೇಕಾಗುತ್ತಿತ್ತು.

ಒಂದು ದಿನ ಇಬ್ಬರು ಗೆಳೆಯರ ಆತಿಥ್ಯ ಮಾಡುತ್ತಾ ಸರಸ್ವತಿ, ಮಂಜುಳಾ ಒಳಗಿದ್ದಾರೆ. ಯಥಾ ಪ್ರಕಾರ ಗೌರಮ್ಮನವರು ಬಂದು ಬಾಗಿಲು ತಟ್ಟಿದರು.

ಒಳಗಿದ್ದ ಗೆಳೆಯ ಮೆಲ್ಲನೆ ಸರಸ್ವತಿಯನ್ನು 'ಯಾರದು ?' ಎಂದು ಕೇಳಿದ. 'ಮನೆ ಮಾಲಿಕರ ಹೆಂಡತಿ, ಈಕೆದೊಂದು ನನಗೆ ಕಾಟ' ಎಂದಳು. ಗೆಳೆಯ ಸಂಶಯಗ್ರಸ್ತನಾಗಿ 'ಮನೆ ಮಾಲಿಕಳೋ - ಮಾಲಿಕನೋ' ಎಂದ. ಸರಸ್ವತಿಯ ಮುಖ ವಿವರ್ಣವಾಯಿತು. ಗೌರಮ್ಮನವರು ಬಾಗಿಲು

ಮತ್ತೊಮ್ಮೆ ತಟ್ಟಿ 'ಸರಸ್ವತಮ್ಮನವರೇ.' ಎಂದು ಕೂಗಿದರು. ಸರಸ್ವತಿ ಗೆಳೆಯನಿಗೆ 'ಧ್ವನಿ ಗಂಡಸರದೋ. ಹೆಂಗಸರದೋ ನೋಡಿ' ಎಂದಳು.

ಮಂಜುಳನಿಗೂ ಇದೇ ಅನುಭವವಾಗಿತ್ತು

ಈ ಕಾಟ ಕಳೆದುಕೊಳ್ಳುವುದು ಹೇಗೇಂದು ಸರಸ್ವತಿ ವಿಚಾರ ಮಾಡುತ್ತಿರುವಲ್ಲಿ ಮಂಜುಳಾ ಅಸಂತುಷ್ಟಿ ತೋರುತ್ತಾ

"ಈ ಮನೆ ಬಿಡದಿದ್ದರೆ ಗತಿಯೇ ಇಲ್ಲಮ್ಮ. ಗೌರಮ್ಮನವರು ಹೀಗೆ ಕಾಡುತ್ತಿದ್ದರೆ ನಾವು ಮಣ್ಣು ತಿನ್ನಬೇಕಾಗುತ್ತದೆ."

"ನಿಂತ ಗಳಿಗೆಯಲ್ಲಿ ಬೇರೆ ಮನೆ ಎಲ್ಲಿ ಸಿಕ್ಕತ್ತೆ ಮಂಜೂ. ಸ್ವಲ್ಪ ಕಷ್ಟವಾದರೂ ಇಲ್ಲಿ ಒಂದು ಬಗೆಯ ರಕ್ಷಣೆಯಿದೆ. ಕೋರ್ಟಿನ ಹೊಸಲು ತುಳಿದು ಬಂದಿರುವ ನಾವು ಬೇರೆ ಕಡೆ ಹೋದರೆ ಗಲಾಟೆಯಾಗುತ್ತದೆ."

"ತಿಂಗಳಾದ ಕೂಡಲೆ ಬಾಡಿಗೆ ಹಣ ಎಣಿಸಬೇಕಲ್ಲ."

"ಏನಾದರೂ ಉಪಾಯ ಮಾಡಿ ಗೌರಮ್ಮನವರು ಇಲ್ಲಿಗೆ ತುಕ್ಕುವುದನ್ನು ಕಡಿಮೆ ಮಾಡೋಣ ಸುಮ್ಮನಿರು"

ಎಂದು ಸಮಾಧಾನ ಹೇಳಿದಳು.

ಮಾರನೆಯ ದಿನ ಮಧ್ಯಾನ್ಹ ಯಥಾವಿಧಿಯಂತೆ ಗೌರಮ್ಮನವರು ಒಂದು ಕಾಗದದಲ್ಲಿ ಹುರಿಗಾಳು ಪೊಟ್ಟಣ ಕಟ್ಟಿಕೊಂಡು ಬಂದು ಸರಸ್ವತಿಯ ಮನೆಯಲ್ಲಿ ಕುಳಿತರು. ಹರಟೆ ಸಾಗಿತ್ತು - ಹುರಿಗಾಳು ಮುಗಿಯಿತು. ಸರಸ್ವತಿ ಆ ಮಾತು ಈ ಮಾತು ಆಡುತ್ತಾ

'ನಮ್ಮ ಮಂಜೂ ವಿಚಿತ್ರ ಹುಡುಗಿ ನೋಡಿ ಗೌರಮ್ಮನವರೇ "ಎಂದಳು.

"ಏನು ಮಾಡುತ್ತಾಳಮ್ಮಾ."

"ಗಂಡನ ಮನೆಯಲ್ಲಿ ನನಗೆ ಅತ್ತಿಗೆ ನಾದಿನಿಯರ ಕಾಟ ವಿಪರೀತವಾಗಿತ್ತು. ಅದರಲ್ಲಿಯೂ ಮನೆತಪ್ಪಿದ ನನ್ನ ಅತ್ತಿಗೆ ಒಬ್ಬಳಿದ್ದಳು ನೋಡಿ ಪುಣ್ಯಾತ್ಗಿತ್ತಿ - ತಾಟಗಿತ್ತಿ ಎಲ್ಲಿ ಎನ್ನಬೇಕಾಗಿರಲಿಲ್ಲ. ಮಂಜೂನೇ ಚೊಚ್ಚಲ ಮಗು. ಅವಳ ಬಸುರಿಯಲ್ಲಿ ನಿತ್ಯ ಅಳೋದೇ ನನ್ನ ಕೆಲಸವಾಯಿತು. ಯಜಮಾನರು ತುಂಬ ಒಳ್ಳೆಯವರು - ತಂಪು ಹೊತ್ತಿನಲ್ಲಿ ಅವರನ್ನು ನೆನಸಿಕೊಳ್ಳಬೇಕು - ನನಗೆ ಎಷ್ಟೋ ಸಮಾಧಾನ ಹೇಳುತ್ತಿದ್ದರು. ನನಗೆ ಬಯಕೆ. ಯಜಮಾನರು ಕಛೇರಿ ಮುಗಿಸಿಕೊಂಡು ಬರುವಾಗ

ಹೋಟಲಿನಿಂದ ತಿಂಡಿ ತಂದು ಮುಚ್ಚಿಕೊಡುತ್ತಿದ್ದರು. ನಾನು ರಾತ್ರಿ ಎಲ್ಲರೂ ಮಲಗಿದ ಮೇಲೆ ಅದನ್ನು ತಿನ್ನುತ್ತಿದ್ದೆ. ಒಂದು ದಿನ ನಮ್ಮ ರೂಮಿನಲ್ಲಿ ಕಾರಾಸೇವೆ, ಕಾರಾಬೂಂದಿ ಕಾಳು ಬಿದ್ದಿತ್ತು. ಬೆಳಿಗ್ಗೆ ಯಾತಕ್ಕೋ ರೂಮಿನೊಳಗೆ ಬಂದವಳು ನೋಡಿಬಿಟ್ಟಳು. ಏನು ಹೇಳಲಿ ನನ್ನ ಅವಸ್ಥೆ ಅವತ್ತು - ನನ್ನ ಜನ್ಮ ಜಾಲಾಡಿ ಬಿಟ್ಟಳು ಮಹಾರಾಯಿತಿ. ತಿಂಡಿ ತರ ಬೇಡಿ ಎಂದು ಯಜಮಾನರಿಗೆ ಹೇಳಿದೆ. ಆವಾಗ ಏನಾಯಿತೋ ಏನೋ ಮಂಜೂ ಹೆರಿಗೆಯಾದ ಮೇಲೆ ನಾನು ನವೆಕೊಂಡೇ ಹೋದೆ - ಮಗು ಹಂಚಿ ಕಡ್ಡಿ ಇದ್ದ ಹಾಗಿತ್ತು. ನರದೌರ್ಬಲ್ಯ ಎಂದು ಡಾಕ್ಟರು ಹೇಳಿದರು."

"ಆಗಲೇ ಒಳ್ಳೆಯ ಔಷಧ ಕೊಡಿಸಲಿಲ್ವೇ ?"

"ಕೊಡಿಸದೆ ಇರುತ್ತಾರೆಯೇ ? ಆ ನರದೌರ್ಬಲ್ಯ ನನಗೆ ವಾಸಿಯಾ ಯಿತು - ಅವಳಿಗೆ ಹೋಗಲೇ ಇಲ್ಲ ನೋಡಿ. ಇದ್ದಕ್ಕಿದ್ದಂತೆ ಹುಚ್ಚು ಹುಚ್ಚಾಗಿ ಆಡುವುದಕ್ಕಾರಂಭಿಸುತ್ತಾಳೆ. ಬಿಸಿಲೇರಿ, ತಂಪಾಗುವವರೆಗೆ ನನಗೆ ಜೀವದಲ್ಲಿ ಜೀವ ಇರುವುದಿಲ್ಲ."

"ಇವತ್ತಿಗೂ ಹಾಗೇ ಇದೆಯೇ ?

"ಮೊನ್ನೆ ನೀವು ಬಂದು ಹೋದರಲ್ಲಾ - ಅವತ್ತೇ ಮನೇತುಂಬ ನಂಟರು, ನಮ್ಮ ಯಜಮಾನರ ಅಣ್ಣ ತಮ್ಮ ಬಂದಿದ್ದರು. ನಮ್ಮ ಆಸ್ತಿಯ ನ್ನೆಲ್ಲಾ ನುಂಗಿ ನೀರು ಕುಡಿದದ್ದು ಸಾಲದೆ ಉಳಿದಿರುವ ಇನ್ನೊಂದು ತುಂಡು ಜಮೀನು ಮಾರಬೇಕೂಂತ ಮಸಲತ್ತು ಮಾಡಿಕೊಂಡು ಬಂದಿದ್ದರು. ಅವ ರನ್ನು ನೋಡಿದ ಕೂಡಲೇ ಮಂಜುಳನಿಗೆ ಪಿತ್ಥ ಕೆರಳಿ ಬಿಟ್ಟಿತು. ಒಳಗೆ ಅವ ರಿದ್ದಾರೆ - ಮಂಜುಳ ಆಡುತ್ತಿದ್ದ ಮಾತು ಅವರ ಕಿವಿ ಮೇಲೆ ಬಿದ್ದರೆ ರಂಪ ರಾದ್ಧಾಂತವಾಗುತ್ತದೆ - ನೀವಿಲ್ಲಿ ಬಾಗಿಲು ಬಡಿಯುತ್ತಿದ್ದೀರಿ - ಮಂಜುಳನ ಬಾಯಿ ಮುಚ್ಚಿಸಬೇಕಾದರೆ ನನಗೆ ಸಾಕು ಸಾಕಾಗಿ ಹೋಯಿತು."

"ಇದು ನನಗೆ ಗೊತ್ತಿರಲಿಲ್ಲರೀ . ನಿಮಗೆ ತುಂಬಾ ತೊಂದರೆ ಕೊಟ್ಟೆ."

"ಏನೂ ಇಲ್ಲಮ್ಮ. ನೀವು ಬಂದು ಒಂದುಗಳಿಗೆ ಕುಳಿತಿದ್ದು ಹೋದರೆ ನನ್ನ ಮನಸ್ಸಿಗೆಷ್ಟೋ ನೆಮ್ಮದಿ. ಆದರೆ ಈ ಹುಡುಗಿ ಯಾವ ಹೊತ್ತಿನಲ್ಲಿ ಏನು ಮಾಡುತ್ತಾಳೋ ಎಂದು ಭಯ."

"ಒಂದು ಸಲ ಮಂತ್ರಾಲಯಕ್ಕಾದರೂ ಕರೆದುಕೊಂಡು ಹೋಗಿ ಬರ ಬಾರದೇ?"

"ಹೋಗಬೇಕು - ಅನುಕೂಲವಾಗಬೇಕಲ್ಲ. ಹೊಟ್ಟೆಯ ಪಾಡು ಮನೆ ಬಾಡಿಗೆ - ಬಟ್ಟೆ ಬರೆ - ಬರೋದು ಹೋಗೋದು."

"ಹೌದಮ್ಮ ಹೌದು - ಕಷ್ಟ. ಕಾಲ ಬಲೆನಾಜೋಕಾಯಿತು. ನಿಮ್ಮ ಮನೇಗೂ ಬರೋದು ಹೋಗೋದು ಹೆಚ್ಚು."

"ಯಜಮಾನರ ಕಾಲದಿಂದಲೂ ನಡೆದು ಬಂದು ಬಿಟ್ಟದೆ. ಈಗ ಬೇಡ ಎಂದರೆ ಕೇಳುತ್ತಾರೆಯೇ? ರೂಪಾಯಿಗೆ ಎರಡು ಸೇರು ಅಕ್ಕಿ ತಂದು ಏನು ಪೂರೈಸುವುದು ಗೌರಮ್ಮನವರೇ?"

ಸರಸ್ವತಿ ಅಕ್ಕಿ ಎಲ್ಲಿ ಕೇಳುತ್ತಾಳೋ ಎಂದು ಹೆದರಿ ಗೌರಮ್ಮನವರು ಮೆಲ್ಲನೆ ಕುಳಿತಿದ್ದ ಜಾಗ ಬಿಟ್ಟು ಕದಲಿದರು; ಅಂದಿನಿಂದ ಅವರ ಕಾಟ ಕಡಿಮೆಯಾಯಿತು.

ಸರಸ್ವತಿ, ಮಂಜುಳನ ಕಷ್ಟ ಅಲ್ಲಿಗೇ ಬಗೆಹರಿಯಲಿಲ್ಲ. ಸಾಲು ಮನೆ ಗಳಿಗೆ ಜನ ಬಾಡಿಗೆಗೆ ಬಂದರು. ಎದುರು ಬದುರು ಕಿಟಕಿಗಳು - ಕಿಟಕಿ ಮುಚ್ಚುವಂತೆಯೂ ಇರಲಿಲ್ಲ, ತೆರೆದಿಡಲೂ ಸಾಧ್ಯವಿರಲಿಲ್ಲ. ಬೇರೆ ಮನೆ ಹುಡುಕುವ ಉದ್ಯಮ ಮತ್ತೆ ತಾಯಿ, ಮಗಳಿಗೆ ಗಂಟುಬಿತ್ತು.

ರಾಘವಾಚಾರ್ಯರ ಮರೆಹೋಗುವುದೊಂದೇ ಸರಸ್ವತಿಗೆ ಉಳಿದಿದ್ದ ಮಾರ್ಗ. ಒಂದು ದಿನ ಮಧ್ಯಾಹ್ನ ಅವರ ಶಾಲೆಗೆ ಬಂದಳು. ಆಚಾರ್ಯರು ದೇಶಾವಾರದ ಸ್ವಾಗತ ಬಯಸಿದರು. ಅವರ ಸ್ವಾಗತದಲ್ಲಿ ಯಾವ ಉತ್ಸಾಹವೂ ಇಲ್ಲದಿದ್ದುದನ್ನು ಕಂಡು ಸರಸ್ವತಿಯ ಚೇತನವೇ ಉಡುಗಿ ಹೋಯಿತು. ತನ್ನ ಕಷ್ಟ ಪರಂಪರೆಯನ್ನೆಲ್ಲಾ ಸಾದ್ಯಂತವಾಗಿ ಆಚಾರ್ಯರಿಗೆ ನಿರೂಪಿಸಿದಳು.

"ನನ್ನ ಏನುಮಾಡೂಂತ ಹೇಳ್ತೀರಮ್ಮ" ಎಂದು ಆಚಾರ್ಯರು ಗಡುಸಾಗಿ ಕೇಳಿದರು

"ನಾನು ಹೇಳುವುದು ಹೇಳಿದ್ದೀನಲ್ಲ - ಇನ್ನುಳಿದಿರುವುದು ನಿಮ್ಮ ಕೆಲಸ."

"ಮೊದಲಿನ ಹಾಗೆ ನನಗೆ ಪುರಸತ್ತಿಲ್ಲಮ್ಮ. ಜೂನಿಯರ್ ಪರೀಕ್ಷೆಗೆ ಹದಿನಾಲ್ಕು ಹುಡುಗರನ್ನು ಕಟ್ಟಸಿದ್ದೇನೆ, ಸೀನಿಯರ್ ಪರೀಕ್ಷೆಗೆ ಐದು

ಹುಡುಗರನ್ನು ಕಟ್ಟಿಸಿದ್ದೇನೆ. ಅವರು ಫೇಲಾದರೆ ಹೊಟ್ಟೆಯ ಮೇಲೆ ನಾನು ಒದ್ದೆಯ ಬಟ್ಟೆ ಹಾಕಿಕೊಳ್ಳಬೇಕಾಗುತ್ತದೆ."

"ಜೀವಣ್ಣರಾಯರಿಗೆ ಒಂದು ಮಾತು ಹೇಳುವುದಕ್ಕಾಗುವುದಿಲ್ಲವೇ ಅವರು ಹೇಗೆ ಹೇಳಿದರೆ ಹಾಗೆ ಇರುವುದಕ್ಕೆ ಸಿದ್ಧವಾಗಿದ್ದೇನೆ. ಮನೆಯ ಬಾಗಿಲಿಗೆ ಇನ್ನೊಬ್ಬರನ್ನು ಸೇರಿಸುವುದಿಲ್ಲ."

"ಜೀವಣ್ಣರಾಯನ್ನ ಹೇಗಾದರೂ ನಾನು ದಾರಿಗೆ ತರುತ್ತಿದೆ, ನೀವು ಮುತ್ತಮ್ಮನ ಮನೆಯಲ್ಲಿ ಗಲಾಟೆ ಮಾಡಿಕೊಂಡು ಬೆಂಚ್‌ಕೋರ್ಟ್ ಕಟ್ಟೆ ಹತ್ತಿ ಬಂದಿದ್ದೀರಿ. ಪೇಪರುಗಳಲ್ಲೆಲ್ಲಾ ಢಣಾಡಂಗುರವಾಗಿ ಹೋಯಿತು. ನಿಮ್ಮ ವಿಷಯ ಪುನಃ ಜೀವಣ್ಣನ ಹತ್ತಿರ ನಾನು ಪ್ರಸ್ತಾಪಿಸಿದರೆ ಅವನು ಕಪಾಳಕ್ಕೆ ಹೊಡೆದಾನು !"

"ನನ್ನ ಗತಿಯೇನು ಮೇಸ್ಟ್ರರೇ. ಮಂಜುಳ ಬೇರೆ ನನ್ನ ಕೊರಳಿಗೆ ಗಂಟುಬಿದ್ದಿದ್ದಾಳೆ."

"ನಾನೇನು ಮಾಡಲಮ್ಮಾ! ನಿಮ್ಮ ಕಷ್ಟ ನೋಡಿ ನನಗೆ ತುಂಬ ದುಃಖವಾಗುತ್ತದೆ."

ಸರಸ್ವತಿಯ ಮನಸ್ಸಿನಲ್ಲಿ ಆಶೆ ಮೊಳಕೆ ಹಾಕಿತು.

"ನನಗೊಂದು ಉಪಕಾರ ಮಾಡುವಿರಾ ?"

"ಏನು ಹೇಳಿ - ಸಾಧ್ಯವಾದರೆ ಮಾಡುತ್ತೇನೆ."

"ಮಧ್ಯಾಹ್ನ ನಿಮ್ಮ ಸ್ಕೂಲಿನ ರೂಮು ನನ್ನ ವಶಕ್ಕೆ ಕೊಡಿ."

"ಒಳ್ಳೆಯ ಮಾತು ಹೇಳ್ತೀರಮ್ಮ. ನೀವು ಇಲ್ಲಿಗೆ ಬಂದು ಹೋಗುವುದೇ ನನ್ನ ಪ್ರಾಣಕ್ಕೆ ಬಂದಿದೆ. ಒಂದೆರಡು ಪಾಠವೂ ತಪ್ಪಿ ಹೋಯಿತು - ನೀವು ದಿನಾ ಇಲ್ಲಿ ಬಂದು ಸಿಕ್ಕಿದವರನ್ನು ಕರೆದುಕೊಂಡು ಬರುವದಕ್ಕಾರಂಭಿಸಿದರೆ ನಾನು ಈ ಊರೇ ಬಿಟ್ಟು ಹೋಗಬೇಕಾಗುತ್ತದೆ. ನನ್ನ ಹೊಟ್ಟೆಯ ಮೇಲೆ ಹೊಡೆಯುವ ಪ್ರಯತ್ನ ಮಾಡಬೇಡಿ."

ಸರಸ್ವತಿಗೆ ದುಃಖ, ಕೋಪ ಉಕ್ಕಿಬಂತು. 'ನನ್ನ ಮೈ ದುಡಿಸಿಕೊಂಡೇ ನೀವಿಷ್ಟು ದೊಡ್ಡ ಹೊಟ್ಟೆ ಬೆಳೆಸಿಕೊಂಡಿರುವುದು' ಎಂದು ಆಚಾರ್ಯರ ಮುಖಭಂಗ ಮಾಡಬೇಕೆಂದೆನಿಸಿತು. ಆದರೆ ಕೋಪಕ್ಕೆ ಕಡಿವಾಣ ಹಾಕಿ

"ನಿಮ್ಮ ಸ್ಕೂಲಿಗೆ ನಾನೂ ಬರಬೇಡವೇನು ?" ಎಂದು ಕೇಳಿದಳು.

"ಬನ್ನಿ – ಯಾವಾಗಲಾದರೊಮ್ಮೆ ಬಂದರೆ ಪರವಾಯಿಲ್ಲ. ಆದರೆ ಜತೆಯಲ್ಲಿ ಯಾರನ್ನೂ ಕರೆದುಕೊಂಡು ಬರಬೇಡಿ"

ಎಂದು ಖಂಡಿತವಾಗಿ ನುಡಿದರು. ಸರಸ್ವತಿ ಬಂದ ಕೆಲಸ ಮುಗಿದಿತ್ತು. 'ಮೇಷ್ಟ್ರು ನನ್ನ ಕೈಬಿಟ್ಟರಲ್ಲ' ಎಂದು ಮನಸ್ಸಿಗೆ ತಳಮಳವಾಯಿತು.

ಮನೆಗೆ ಬಂದವಳೇ ಸರಸ್ವತಿ ಮಲಗಿಬಿಟ್ಟಳು. ಮನಸ್ಸಿಗಾದ ಉದ್ವೇಗ, ವ್ಯಥೆ ಅವಳ ದೇಹದ ಮೇಲೆ ಪರಿಣಾಮ ಬೀರಿತು. ಜ್ವರವೇರಿ ಮೈ ಸುಡುವುದಕ್ಕಾರಂಭಿಸಿತು.

ಬೆಳಿಗ್ಗೆ ಎಂಟು ಗಂಟೆಯಾದರೂ ಸರಸ್ವತಿ ಮೇಲಕ್ಕೇಳಲಿಲ್ಲ. ಮಂಜುಳಾ ಕಾಫಿ ಮಾಡಿ ತಾನು ಒಂದು ಲೋಟಾ ಕುಡಿದು ತಾಯಿಯನ್ನು ಕಾಯುತ್ತ ಕುಳಿತಳು. ಸರಸ್ವತಿ ಹಾಸಿಗೆ ಬಿಟ್ಟೇಳಲಿಲ್ಲ. ಮಂಜುಳಾ ಒಂದು ಕಪ್ ಕಾಫಿ ಕೈಯಲ್ಲಿ ತೆಗೆದುಕೊಂಡು ತಾಯಿಯ ರೂಮಿಗೆ ಬಂದಳು.

ಅಲ್ಲಿ ಕಂಡ ದೃಶ್ಯ ಅವಳ ಧೈರ್ಯವನ್ನುಡುಗಿಸಿ ಬಿಟ್ಟಿತು. ಕಾಫಿ ಲೋಟ ಕೈ ಜಾರಿ ಕೆಳಗೆ ಬಿದ್ದಿತು.

ಮಂಜುಳಾ ತಾಯಿಯ ಬಳಿಗೆ ಬಂದು

"ಏನಾಯಿತೇ ಅಮ್ಮ" ಎಂದು ಕೇಳಿದಳು.

ಸರಸ್ವತಿಯ ಬಾಯಿ ಕಟ್ಟಿ ಹೋಗಿತ್ತು. ಕಣ್ಣುಗಳಿಂದ ನೀರು, ಬಾಯಿಂದ ಜೊಲ್ಲು ಸುರಿಯುತ್ತಿತ್ತು. ಮಂಜುಳಾ ಭೀತಳಾಗಿ ಓಡಿಹೋಗಿ ಗೌರಮ್ಮನವರನ್ನೂ, ಅವರ ಯಜಮಾನರನ್ನೂ ಕರೆತಂದರು.

ಗೌರಮ್ಮನವರ ಯಜಮಾನರು ಸರಸ್ವತಿಯ ಸ್ಥಿತಿ ನೋಡಿ ತಲೆಯಳ್ಳಾಡಿಸಿದರು. ಗೌರಮ್ಮನವರು ಗಾಬರಿಗೊಂಡು

"ಏನಾಗಿದೆಯಂದ್ರೆ" ಎಂದು ಕೇಳಿದರು.

"ಪಾರ್ಶ್ವವಾಯು, ಬಲಭಾಗ ಬಿದ್ದು ಹೋಗಿದೆ."

ಮಂಜುಳಾ ಹೊದಿಕೆಯೆಳೆದು ತಾಯಿಯ ಬಲಗೈಯಳ್ಳಾಡಿಸಿದಳು. ಅದು ಮರದ ಕೊರಡಾಗಿತ್ತು.

"ಡಾಕ್ಟರನ್ನಾದರೂ ಕರೆದುಕೊಂಡು ಬನ್ನಿ"

ಎಂದು ಗೌರಮ್ಮನವರು ಯಜಮಾನರಿಗೆ ಅಪ್ಪಣೆ ಮಾಡಿದರು.

ಈಶ್ವರಯ್ಯನವರು ಓಡಿಹೋಗಿ ಡಾ. ಚಿದಂಬರಂ ಅವರನ್ನು ಕೂಡಲೆ ಕರೆದು ಕೊಂಡು ಬಂದರು.

ಡಾಕ್ಟರು ರೋಗಿಯನ್ನು ಪರೀಕ್ಷಿಸಿ

" ಪೆರಾಲಿಸಿಸ್ " ಎಂದರು.

" ಹಾಗಂದರೇನು ಡಾಕ್ಟರೇ ?" ಎಂದು ಗೌರಮ್ಮ ಕೇಳಿದರು.

" ಪಾರ್ಶ್ವವಾಯು " ಎಂದು ಈಶ್ವರಯ್ಯ ಉತ್ತರ ಹೇಳಿದರು.

" ಸ್ಪೂಟಮ್, ಬ್ಲಡ್, ಯೂರಿನ್ (Sputum, Blood, Urine) ಟೆಸ್ಟಾಗಬೇಕು - ಎಕ್ಸರೇ ಫೋಟೋಗ್ರಾಫ್ ತೆಗೆಸಬೇಕು."

" ಏನು ಮಾಡಬೇಕೋ ಮಾಡಿ ಡಾಕ್ಟರೇ "

ಎಂದು ಮಂಜುಳಾ ಬೇಡಿಕೊಂಡು

" ಗುಣವಾಗುವುದು ತಾನೆ " ಎಂದಳು.

" ಈಗಲೇ ಹೇಳಲಾರೆನಮ್ಮ. ಟೆಸ್ಟ್‌ಗಳು ಮುಗಿದು ರಿಸಲ್ಟ್ ಬಂದ ಮೇಲೆ ಹೇಳುತ್ತೇನೆ. ಪೂರ್ಣ ಗುಣವಾಗುವ ಸಂಭವವಿಲ್ಲ."

" ಅಯ್ಯೋ ! ಏನಾದರೂ ಮಾಡಿ ಡಾಕ್ಟರೇ ?"

" ನನ್ನ ಕೈಯಲ್ಲಿ ಸಾಧ್ಯವಾಗುವದನ್ನೆಲ್ಲಾ ಮಾಡುತ್ತೇನಮ್ಮ "

ಎಂದು ಡಾಕ್ಟರು ಆಶ್ವಾಸನ ಕೊಟ್ಟು ಒಂದು ಇಂಜಕ್ಷನ್ ಚುಚ್ಚಿ, ಟೆಸ್ಟುಗಳಿಗೆ ಬೇಕಾದ ಸಿದ್ಧತೆ ವಿವರಿಸಿ ಹೋದರು.

ಧೈರ್ಯಗೆಟ್ಟು ಅಳುತ್ತ ನಿಂತಿದ್ದ ಮಂಜುಳನನ್ನು ಗೌರಮ್ಮನವರು ಸಮಾಧಾನ ಮಾಡಲೆತ್ನಿಸಿದರು.

ಪ್ರತಿನಿತ್ಯ ಡಾಕ್ಟರು ಬಂದು ರೋಗಿಯನ್ನು ನೋಡಿಕೊಂಡು, ಗುಳಿಗೆ, ಮಿಕ್ಸಚರ್, ಇಂಜಕ್ಷನ್ ಕೊಟ್ಟು ಹೋಗುತ್ತಿದ್ದರು.

ನಾಲ್ಕು ದಿವಸಗಳು ಕಳೆದ ಮೇಲೆ ಮಂಜುಳನೇ ಡಾಕ್ಟರ ಚಿಕಿತ್ಸಾ ಲಯಕ್ಕೆ ಹೋದಳು. ಟೆಸ್ಟ್‌ಗಳು ಬಂದಿದ್ದವು.

" ಟೆಸ್ಟಿನ ರಿಸಲ್ಟು ತುಂಬಾ ನಿರಾಶಾಜನಕವಾಗಿದೆಯಮ್ಮ "

ಎಂದು ಡಾಕ್ಟರು ಹೇಳಿದರು. ಮಂಜುಳನಿಗೆ ಕಣ್ಣುಗತ್ತಲೆ ಕವಿ ಯುತ್ತ ಬಂತು.

" ಧೈರ್ಯಗೆಡಬೇಕಾದ ಕಾರಣವಿಲ್ಲ. ಮನುಷ್ಯ ಪ್ರಯತ್ನ ಮೀರಿ ದುದು ಯಾವದೂ ಇಲ್ಲ."

" ಕೈಕಾಲು ಪುನಃ ಸ್ವಾಧೀನಕ್ಕೆ ಬರುತ್ತವೆಯೇ ?"

" ರಕ್ತ ನೀರಾಗಿ ಹೋಗಿದೆಯಮ್ಮ. ದೇಹದಲ್ಲಿ ಹಳೆಯ ಕಾಯಿಲೆ ಕುಳಿತಿದೆ."

" ಅವರನ್ನು ಬಿಟ್ಟು ನನಗೆ ಯಾರೂ ದಿಕ್ಕಿಲ್ಲ ಡಾಕ್ಟರೇ."

" ನನ್ನ ಶಕ್ತಿಮೀರಿ ಪ್ರಯತ್ನಿಸುತ್ತೇನೆ. ನೀನು ಧೈರ್ಯವಾಗಿರಮ್ಮ" ಎಂದು ಹೇಳಿದರು. ಧೈರ್ಯವಾಗಿರಬೇಕೆಂದು ಮಂಜುಳಾ ಪ್ರಯತ್ನಿಸಿದಳು. ಗೌರಮ್ಮನವರೂ ಧೈರ್ಯ ಹೇಳುತ್ತಿದ್ದರು.

ಎಷ್ಟು ಪ್ರಯತ್ನಿಸಿದರೂ ಮನಸ್ಸಿಗೆ ಧೈರ್ಯ ಬರಲೊಲ್ಲದು.

ತಾಯಿ ಕಾಯಿಲೆ ಮಲಗಿದ ಮೇಲೆ ವೃತ್ತಿ ಅವಲಂಬಿಸಲು ಅವಕಾಶವೇ ಆಗುತ್ತಿರಲಿಲ್ಲ.

ವೃತ್ತಿಯಿಲ್ಲ - ಸಂಪಾದನೆಯಿಲ್ಲ ; ಖರ್ಚುಗಳು ಏರುತ್ತಿದ್ದವು. ಮನೆಯ ಬಾಡಿಗೆ – ಔಷಧೋಪಚಾರದ ಖರ್ಚು – ಸಂಸಾರದ ಖರ್ಚು.

ಖರ್ಚು - ಖರ್ಚು - ಖರ್ಚು ; ಹಣ - ಹಣ - ಹಣ !!

ಸುಧಾ ಅನುಕೂಲವಾಗಿದ್ದಳು. ತಾಯಿಯ ಯೋಗಕ್ಷೇಮ ನೋಡಿಕೊಳ್ಳುವುದು ಅವಳಿಗೆ ಕಷ್ಟವಾಗಿರಲಿಲ್ಲ. ಅವಳಿಗೆ ಜನಬಲವೂ ಇತ್ತು-ಧನಬಲವೂ ಇತ್ತು.

' ಒಮ್ಮೆ ಹೋಗಿ ಸುಧೆಯನ್ನು ಕಾಣಲೇ ? ತಾಯಿಯ ಸ್ಥಿತಿಯನ್ನು, ಮನೆಯ ಸಂಸಾರದ ಗತಿಯನ್ನು ಅವಳಿಗೆ ಹೇಳಲೇ ' ಎಂದು ಮಂಜುಳಾ ಯೋಚಿಸಿದಳು.

' ಸುಧಾ ನನಗಿಂತ ಚಿಕ್ಕವಳು. ನಾನು ಹೋಗಿ ಅವಳನ್ನು ಬಿಕ್ಷೆ ಬೇಡಲೇ ? ಕಾಹಿಲೆ ಬಿದ್ದಿರುವ ತಾಯಿಯನ್ನು ನೋಡಿಕೊಳ್ಳುವ ಯೋಗ್ಯತೆ ನನಗಿಲ್ಲವೆಂದು ಒಪ್ಪಿಕೊಳ್ಳಲೇ ? '

' ಸುಧಾ ತನ್ನ ಪಾಡಿಗೆ ತಾನು ಸುಖವಾಗಿದ್ದಾಳೆ . . . ನಾನೂ ಅಮ್ಮ ಸತ್ತು ಹೋಗಿರಬಹುದೆಂದೇ ಅವಳು ಭಾವಿಸಿಕೊಂಡಿರಬಹುದು. ಅವಳಿಗೆ ನಾವು ಇದುವರೆಗೆ ಮಾಡಿರುವ ಉಪಕಾರವಾದರೂ ಏನು ? ಒಂದು ನೇರ

ವಾದ ದಾರಿಯಲ್ಲಿ ಹೋಗುತ್ತಿರುವ ಅವಳನ್ನು ನಾನೇ ಏಕೆ ಈ ಪಾಪಕೂಪಕ್ಕೆ ಳೆಯಬೇಕು ?'

'ಸುಧೆಯನ್ನು ಈ ವಿಷವ್ಯೂಹಕ್ಕೆ ಎಳೆಯ ಕೂಡದೆಂದು ನಾನೇ ಅಮ್ಮನಿಗೆ ಎಚ್ಚರಕೊಟ್ಟದ್ದೆ . . . ಈಗ ಆ ಕೆಲಸ ನಾನೇ ಮಾಡಲೇ ?"

ಎಂದು ಅಳೆದು ಸುರಿದು, ಸುಧೆಯ ಗೋಜಿಗೆ ಹೋಗದಿರುವುದೇ ಶ್ರೇಯಸ್ಕರವೆಂದು ಮಂಜುಳಾ ನಿರ್ಧರಿಸಿದಳು.

ಸರಸ್ವತಿ ಸುಧೆಯನ್ನು ನೆನಸಿಕೊಂಡು ಕಣ್ಣೀರುಗರೆಯುತ್ತಿದ್ದಳು. ವಾಯು ಸೆಳೆತಕ್ಕೆ ಸಿಕ್ಕಿದ ಅವಳ ನಾಲಿಗೆ ಬಹಳ ಕಷ್ಟದಿಂದ 'ಸು . . ಸು.... ದಾ....ದಾ....' ಎಂಬಕ್ಷರಗಳನ್ನು ಕೊರೆಯುತ್ತಿತ್ತು. 'ಓಡಿ ಹೋಗಿ ಸುಧೆಯನ್ನು ಕರೆದುಕೊಂಡು ಬರಲೇ' ಎಂದು ಮಂಜುಳಾ ಯೋಚಿಸುತ್ತಿದ್ದಳು. ಮರುಕ್ಷಣವೇ ಮನಸ್ಸು 'ಬೇಡ'ವೆನ್ನುತ್ತಿತ್ತು.

'ಮುಂದೇನು ಗತಿ - ಏನು ಗತಿ' ಎನ್ನುವ ಚಿಂತೆ ಮಂಜುಳನನ್ನು ಸದಾ ಕಾಡುತ್ತಿತು.

೨೭

'ಕರ್ನಾಟಕ ನವೋದಯ ನಾಟಕಮಂದಿರ' ಎರಡು ತಿಂಗಳು ಯಶಸ್ವಿಯಾಗಿ 'ಪತಿತ ಪರಿವರ್ತನ' ನಾಟಕ ಪ್ರದರ್ಶನ ನಡೆಸಿ ಮೂರನೆಯ ತಿಂಗಳಲ್ಲಿ ಪದಾರ್ಪಣೆ ಮಾಡಿತ್ತು. ಆದರೆ ಮೂರನೆಯ ತಿಂಗಳ ಆದಾಯ ಮೊದಲೆರಡು ತಿಂಗಳ ಆದಾಯಕ್ಕೆ ಸರಿಗಟ್ಟರಲಿಲ್ಲ. ಶನಿವಾರ, ಭಾನುವಾರ ಉಳಿದು ಇತರ ದಿವಸಗಳಲ್ಲಿ ಆದಾಯ ದಿನಕ್ಕೆ 'ಇನ್ನೂರು, ಮುನ್ನೂರಕ್ಕೆ ಇಳಿದಿತ್ತು. 'ಅಬಲಾಶ್ರಮ' - 'ಸ್ತ್ರೀ ಸೇವಾ ಸಮಾಜ' - ದೀನ ಸೇವಾಶ್ರಮ'ಗಳಿಗೆ ಮೂರು ಬೆನಿಫಿಟ್ ನಾಟಕಗಳು ಕೊಡತಕ್ಕದೆಂದು ನಿಶ್ಚಯವಾಗಿತ್ತು.

'ಪತಿತ ಪರಿವರ್ತನ' ನಾಟಕದ ಶತಮಾನೋತ್ಸವ ಮುಗಿಸಿ ಸುದರ್ಶನರ 'ಶ್ರೀ ರಾಮ ಪಾದುಕಾ ಪಟ್ಟಾಭಿಷೇಕ' ಆರಂಭಿಸುವುದೆಂದು ಕಂಪೆನಿ

ನಿರ್ಧರಿಸಿತ್ತು. ಪಟ್ಟಾಭಿಷೇಕ ನಾಟಕಕ್ಕೆ ಬೇಕಾಗುವ ಸೀನರಿ, ಬಟ್ಟೆ ಮೊದಲಾದ ರಂಗಪರಿಕರಗಳನ್ನು ಸಿದ್ಧಗೊಳಿಸುವ ಕೆಲಸವೂ ಹುರುಪಿನಿಂದ ಸಾಗಿತ್ತು.

'ಪಟ್ಟಾಭಿಷೇಕ' ನಾಟಕವನ್ನು ರಾಜಶೇಖರ ಒಂದೇ ಸಮನಾಗಿ ಸುದರ್ಶನರಿಗೆ ಗಂಟುಬಿದ್ದೇ ತಂದಿದ್ದ. 'ಪತಿತ ಪರಿವರ್ತನ' ದಲ್ಲಿ ಸಮಾಜದ ಹೊಲಬನ್ನು ಚಿತ್ರಿಸಿದಂತೆ, 'ಪಟ್ಟಾಭಿಷೇಕ' ನಾಟಕದಲ್ಲಿ ಒಬ್ಬ ಉದಾತ್ತವ್ಯಕ್ತಿಯ ಆದರ್ಶ ಜೀವನವನ್ನು ಚಿತ್ರಿಸಬೇಕೆಂಬ ಪ್ರಬಲಾಕಾಂಕ್ಷೆ ರಾಜಶೇಖರನಲ್ಲಿ ಮೂಡಿತ್ತು.

ದಶರಥನ ಪಾತ್ರ ಪರಮೇಶ್ವರಯ್ಯನವರೇ ಮಾಡಬೇಕೆಂದು ರಾಜಶೇಖರ ನಿರ್ಧರಿಸಿ ಅವರನ್ನು ಬಲವಂತದಿಂದ ಒಪ್ಪಿಸಿದ್ದ. 'ನನಗೇಕಪ್ಪಾ ಇಷ್ಟು ದೊಡ್ಡ ಪಾರ್ಟು. ಚಿಕ್ಕ ಪುಟ್ಟವರಿಗೆ ಕೊಡು' ಎಂದು ಪರಮೇಶ್ವರಯ್ಯ ತಪ್ಪಿಸಿಕೊಳ್ಳಲೆತ್ನಿಸಿದ್ದರೂ ಸಾಧ್ಯವಾಗಲಿಲ್ಲ. ರಂಗಸ್ವಾಮಿ, ಸೌಭಾಗ್ಯಮ್ಮ, ಪುಟ್ಟಣ್ಣ, ಸುಧಾ ಎಲ್ಲರೂ ಪರಮೇಶ್ವರಯ್ಯನವರ ಮೇಲೆ ಒತ್ತಾಯ ಹೇರಿದರು. ರಾಜಶೇಖರ, ಸುಧಾ ; ರಾಮ, ಸೀತೆ - ಚನ್ನಬಸವ, ಮಾಲತಿ; ಲಕ್ಷ್ಮಣ, ಊರ್ಮಿಳಾ - ರಂಗನಾಯಕಿ; ಮಂಥರೆ - ಬೇಲೂರಯ್ಯ, ಸುಶೀಲಾ; ಗುಹ, ಜ್ವಾಲಾ - ಪುಟ್ಟಣ್ಣ, ಅನಂತಾಚಾರಿ; ಭರತ, ಶತ್ರುಘ್ನರು- ಎಂದು ಪಾತ್ರಗಳನ್ನು ಹಂಚಲಾಗಿತ್ತು. ರಿಹರ್ಸಲ್ ಒಳ್ಳೆಯ ಭರದಲ್ಲಿಸಾಗಿತ್ತು.

ಹುಬ್ಬಳ್ಳಿ ಕ್ಯಾಂಪು ಮುಗಿಸಿಕೊಂಡು ಹಿರಣ್ಣಯ್ಯನವರು ಬೆಳಗಾಂವಿಗೆ ಹೋದುದರಿಂದ ಥಿಯೇಟರ್ ಮತ್ತೆ ಎರಡು ತಿಂಗಳು ಸಿಕ್ಕಿತು.

'ಪಟ್ಟಾಭಿಷೇಕ' ಆರಂಭಿಸಿದ ಕೂಡಲೆ, ಒಳ್ಳೆಯ ದಿನ ನೋಡಿ ಪುಟ್ಟಣ್ಣ - ಸುಧೆಯ ವಿವಾಹಸಮಾರಂಭ ಮುಗಿಸಿ ಬಿಡಬೇಕೆಂದು ರಾಜಶೇಖರ ಯೋಚಿಸಿಕೊಂಡಿದ್ದ.

ತನ್ನ ಮದುವೆಯ ದಿನಗಳು ಸಮೀಪಿಸುತ್ತಿರುವುದನ್ನು ಗ್ರಹಿಸಿದ ಸುಧಾ ಮನಸ್ಸು ಸಹಜವಾಗಿ ತಾಯಿ, ಅಕ್ಕನನ್ನು ಬಯಸತೊಡಗಿತು.

ಅವರು ಬೆಂಗಳೂರಿನಲ್ಲಿಯೇ ಎಲ್ಲಿಯೋ ತಲೆಮರೆಸಿಕೊಂಡಿದ್ದಾರೆಂದು ಸುಧನಿಗೆ ಗೊತ್ತಿತ್ತು. ಅವರನ್ನು ಹುಡುಕಲು ಮನಸ್ಸಾಗಲಿಲ್ಲ - ರಾಜಶೇಖರನಲ್ಲಿ ಈ ವಿಷಯ ಹೇಳಲು ಧೈರ್ಯವಾಗಲಿಲ್ಲ.

'ಕೋರ್ಟಿನಲ್ಲಿ ನಿಂತು. ಊರೆಲ್ಲರ ಸಮಕ್ಷಮದಲ್ಲಿ ಕುಲಟೆಯೆನ್ನಿಸಿಕೊಂಡವಳನ್ನು ನಾನು ತಾಯಿಯೆಂದು ಒಪ್ಪಿಕೊಳ್ಳಲೇ ? '

'ನಾನು ತಾಯಿಯೆಂದು ಒಪ್ಪಿಕೊಳ್ಳಬಹುದು. ನಾನು ಸರಸ್ವತಿಯ ಮಗಳೆಂದು ಗೊತ್ತಾದರೆ ಲೋಕ ನನ್ನನ್ನು ಬಾಳಗೊಡುವುದೇ ? '

'ನನಗಾಗಿ ನಾನು ಯೋಚಿಸಬೇಕಾದದ್ದಿಲ್ಲ. ಅವರ ಕೈಹಿಡಿಯುತ್ತೇನೆ. ನನ್ನ ತಾಯಿಯ ದುಷ್ಟಜೀವನದ ಪರಿಣಾಮವನ್ನು ಅವರೇಕೆ ಅನುಭವಿಸಬೇಕು ? - ನಾನು ಸರಸ್ವತಿಯ ಮಗಳು, ನಾನು ಅನುಭವಿಸಬೇಕಾದುದು ಸಹಜ. ಆದರೆ ಅವರು ಯಾವ ಅಪರಾಧ ಮಾಡಿದ್ದಾರೆ. ನನ್ನ ಮೇಲೆ ವಿಶ್ವಾಸ ತೋರಿ, ನಾನು ಕುಲಟೆಯ ಮಗಳೆಂಬುದನ್ನು ಪರಿಗಣಿಸದೆ ನನ್ನನ್ನು ಧನ್ಯಳನ್ನಾಗಿ ಮಾಡಿರುವವರ ಜೀವನವನ್ನೇ ನಾಶಮಾಡಲೇ ? '

'ನನ್ನ ಕೈಯಲ್ಲಿ ಹಣವಿದೆ. ನ್ಯಾಯವಾದ ದಾರಿಯಲ್ಲಿ ದುಡಿದು ನಾನೇ ಸಂಪಾದಿಸಿರುವ ಹಣ. ನನ್ನ ಹಣಕ್ಕೆ ಯಾವ ಪಾಪದ ಸೋಂಕೂ ತಗಲಿಲ್ಲ. ಇದರಿಂದ ನನ್ನ ತಾಯಿ, ಅಕ್ಕನ ಭವಿಷ್ಯ ಉತ್ತಮವಾಗುವುದಾದರೆ ಕೊಡಲು ನಾನು ಸಿದ್ಧ. ನಾನು ಹಣಗೊಟ್ಟರೆ ತಾಯಿ, ಅಕ್ಕನ ಭವಿಷ್ಯ ಸುಗಮವಾಗುತ್ತದೆಯೆ ? ಭ್ರಮರದಂತೆ ಗಂಡಸಿನಿಂದ ಗಂಡಸಿಗೆ ಹಾರುವ ತಾಯಿ ಒಂದೆಡೆ ನಿಂತು ಮರ್ಯಾದೆಯಾಗಿ ಬಾಳುವಳೇ ? ಅವಳನ್ನು ಒಂದು ದಾರಿಗೆ ತರಬೇಕೆಂದು ಮುಂಜಯ್ಯ, ನಂಜಪ್ಪ, ಶ್ರೀರಂಗರಾಯರು ಪ್ರಯತ್ನಿಸಿದರು . . . ಅವಳಿಗೆ ಅಡಿಗೆ ನಾರಾಯಣನ ಜತೆ ಪ್ರಣಯಕೇಳಿ ಬೇಕಾಗಿತ್ತು. ನಾಯಿ ಬಾಲಕ್ಕೆ ದೆಬ್ಬೆಕಟ್ಟಿ ಡೊಂಕು ಹೋಗಲಾಡಿಸಲು ಯಾರಿಗೆ ಸಾಧ್ಯ ? ಮುಂಜಯ್ಯ, ನಂಜಪ್ಪ, ಶ್ರೀರಂಗರಾಯರಿಗೆ ಸಾಧ್ಯವಾಗದುದು ನನಗೆ ಸಾಧ್ಯವಾಗುತ್ತದೆಯೇ ?'

ಸುಧೆಯ ಮನಸ್ಸು ಅಶಾಂತವಾಗಿರುವುದು ರಾಜಶೇಖರನ ಗಮನಕ್ಕೆ ಬಂದಿತು. 'ತಾಯಿಯ ವಿಷಯ ಯೋಚಿಸುತ್ತಿರಬಹುದೇ ' ಎಂದುಕೊಂಡ. ಅದನ್ನು ಬಾಯಿಬಿಟ್ಟು ಕೇಳಿ ಸುಧೆಯ ಮನಸ್ಸಿಗೆ ಮತ್ತಷ್ಟು ವ್ಯಥೆಯನ್ನುಂಟು ಮಾಡಬಾರದೆಂದು ಸುಮ್ಮನಾದ.

ಸರಸ್ವತಿಯ ಸ್ಥಿತಿ ಕೆಡುತ್ತ ಬಂದಿತ್ತು. ಡಾಕ್ಟರ ಪ್ರಯತ್ನ ಹೆಚ್ಚು ಫಲಕಾರಿಯಾಗಿರಲಿಲ್ಲ.

ಹುಣ್ಣಿನ ಮೇಲೆ ಬೊಕ್ಕೆಯೆದ್ದಂತೆ ಮಂಜುಳನ ಕಷ್ಟಗಳು ಹೆಚ್ಚುತ್ತ ಹೋದವು. ಡಾ. ಚಿದಂಬರಂ ಪ್ರಬಲ ಬೇನೆಗೆ ತುತ್ತಾಗಿ ಮನೆಯಲ್ಲಿ ಮಲಗಿ ಬಿಟ್ಟಿದ್ದರು. ಅವರ ಗೆಳೆಯರೊಬ್ಬರು ಡಾ. ಕೃಷ್ಣಮೂರ್ತಿ 'ಚಿಕಿತ್ಸಾಲಯ' ನೋಡಿಕೊಳ್ಳುತ್ತಿದ್ದರು.

ಡಾ. ಚಿದಂಬರಂ ಅವರ ಕಾಂಪೌಂಡರಿಂದ ಆ ಸುದ್ದಿ ಕೇಳಿದಾಗ ಮಂಜುಳನಿಗೆ ಶಿಡಿಲು ಬಡಿದಂತಾಯಿತು. ನಿತ್ಯವೂ ಮನೆಗೆ ಬಂದು ಸರಸ್ವ ತಮ್ಮನ ಆರೋಗ್ಯ ವಿಚಾರಿಸಿಕೊಂಡು ಹೋಗುತ್ತಿದ್ದ ಡಾ. ಚಿದಂಬರಂ ಒಂದು ದಿನ ಬರಲಿಲ್ಲ. ಮಾರನೆಯ ಬೆಳಿಗ್ಗೆ ಮಂಜುಳನೇ ಚಿಕಿತ್ಸಾಲಯಕ್ಕೆ ಹೋದಳು. ಡಾಕ್ಟರು ಇರಲಿಲ್ಲ. ಕಾಂಪೌಂಡರು ಇದ್ದ. ಅವನನ್ನೇ ಕೇಳಿದಳು.

" ಡಾಕ್ಟರೆಲ್ಲಿ."

" ಅವರಿಲ್ಲ."

ಕಾಂಪೌಂಡರಿನ ಧ್ವನಿಯಲ್ಲಿ ನಯ ವಿನಯದ ಸೂಚನೆಯೂ ಇರಲಿಲ್ಲ.

" ಇವತ್ತು ಬರುವುದಿಲ್ಲವೇ ?"

" ಗೊತ್ತಿಲ್ಲ."

" ನಾಳೆ ಬರುತ್ತಾರೆಯೇ ?"

" ಅವರ ಜೀವ ಉಳಿದರೆ ನಾಳೆ ಬರಬಹುದು – ಇಲ್ಲ ನಾಳೆ ವರ್ಷ ಬರಬಹುದು."

" ಡಾಕ್ಟರಿಗೆ ಏನಾಗಿದೆ ?"

" ಏನಾಗಿದೆಯೋ – ಬೆನ್ನುಹುರಿಗೆ ಗೆದ್ದಲು ಹತ್ತಿದೆ."

" ಹಾಗಂದರೆ . . ."

" ನನ್ನೇನು ಕೇಳುವಿರಿ - ಡಾಕ್ಟರನ್ನೇ ಹೋಗಿ ಕೇಳಿ "

ಎಂದು ಮುಖ ತಿರುವಿಕೊಂಡ.

ಅದೇ ಸಂಜೆ ಮನೆಯ ಮಾಲಿಕರು ಈಶ್ವರಯ್ಯನವರು ಮಂಜುಳನ ಮನೆ ಬಾಗಿಲು ತಟ್ಟಿದರು.

ಮಂಜುಳ ಹೊರಗೆ ಬಂದು,

" ಒಳಗೆ ಬನ್ನಿ" ಎಂದು ಕರೆದಳು.

" ಒಳಗೆ ಬರಬೇಕಾದ ಅಗತ್ಯವಿಲ್ಲ. ನೀನು ನಾಳೆ ಸಾಯಂಕಾಲದ ಒಳಗೆ ಮನೆ ಖಾಲಿ ಮಾಡಿಬಿಡಬೇಕಮ್ಮ."

" ಏಕಪ್ಪಾ – ಹೀಗೆ ಹೇಳುತ್ತಿರುವಿರಿ ?"

" ಏಕೂ ಇಲ್ಲ. ಒಳ್ಳೆಯ ಮಾತಿನಿಂದ ಮನೆ ಖಾಲಿ ಮಾಡಿಬಿಡು ಬಾಡಿಗೆ ಬಾಕಿಯಂತೂ ಬರುವುದಿಲ್ಲ ಗೊತ್ತಿದೆ. ನೀನು ಮನೆಬಿಟ್ಟು ಹೋದರೆ ಸಾಕು."

" ತಾಯಿ ಕಾಹಿಲೆ - ನೀವೇ ನೋಡುತ್ತಿರುವಿರಿ - ಹೆಣ್ಣು ಹೆಂಗಸು, ಕಾಹಿಲೆ ಮನುಷ್ಯಳನ್ನು ಕರೆದುಕೊಂಡು ಎಲ್ಲಿಗೆ ಹೋಗಲಿ."

" ಅದೆಲ್ಲಾ ನನಗೆ ಬೇಕಿಲ್ಲಮ್ಮ – ಮನೆ ಖಾಲಿ ಮಾಡಿಬಿಡಬೇಕು. ಗಂಡಸರಿಲ್ಲ ಎಂದು ಗೊತ್ತಾದ ಕೂಡಲೆ ನಾನೇ ತಿಳಿದುಕೊಳ್ಳಬೇಕಾಗಿತ್ತು. ಅವಳ ಮಾತು ಕೇಳಿ ನಿಮಗೆ ಮನೆ ಕೊಟ್ಟದ್ದೇ ತಪ್ಪಾಯಿತು."

" ನಾವೇನು ಅಪರಾಧ ಮಾಡಿದೆವು. ಈ ತಿಂಗಳ ಬಾಡಿಗೆ ಕೊಟ್ಟಿಲ್ಲ- ಕೊಡುತ್ತೇನೆ."

" ನಿನ್ನ ಬಾಡಿಗೇನೂ ಬೇಡ ಏನೂ ಬೇಡ ಮಹಾತಾಯಿ, ಮನೆ ಬಿಟ್ಟುಬಿಡು - ಹೆಮ್ಮಾರಿಗೆ ಮನೆ ಕೊಟ್ಟ ಹಾಗಾಯಿತು. ಹೆಚ್ಚು ಅನಾಹುತ ಮಾಡುವುದಕ್ಕೆ ಮುಂಚೆ ಇಲ್ಲಿಂದ ಹೊರಟು ಬಿಡು ನಮ್ಮಮ್ಮ."

" ನಾನೇನು ಅನಾಹುತ ಮಾಡಿದೆನಪ್ಪಾ !"

" ಏನೂ ಇಲ್ಲ - ಡಾಕ್ಟರ್ ಚಿದಂಬರಂ ಸಾಯುತ್ತಾ ಇದ್ದಾರೆ. ಅಷ್ಟೇ ಸಾಕು . . . ನಾಳೆ ಸಂಜೆ ಮನೆ ಬಿಟ್ಟುಬಿಡಲೇಬೇಕು."

ಎಂದು ಅಲ್ಲಿ ನಿಲ್ಲದೆ ಹೊರಟುಹೋದರು.

ಮಂಜುಳಾ ಗೌರಮ್ಮನವರನ್ನು ನೋಡುವ ಪ್ರಯತ್ನ ಮಾಡಿ ವಿಫಲಳಾದಳು.

ಮಾರನೆಯ ಬೆಳಿಗ್ಗೆ ಮಂಜುಳಾ ಮನೆ ಹುಡುಕಿ ಹುಡುಕಿ ಬೇಸತ್ತು, ಕೊನೆಗೆ ಗವೀಪುರ ಗುಟ್ಟಹಳ್ಳಿಯಲ್ಲಿ, ಕಾರ್ಮಿಕರು ವಾಸಮಾಡುತ್ತಿದ್ದೆಡೆ ನಾಲ್ಕುರೂಪಾಯಿಗೆ ಒಂದು ತಗಡಿನ ಮನೆ ಗೊತ್ತುಮಾಡಿಕೊಂಡು ಬಂದು ಸಂಜೆಗೆ ತಾಯಿಯೊಂದಿಗೆ ಅಲ್ಲಿಗೆ ಹೋದಳು.

ತನ್ನ ಸಹವಾಸ ಮಾಡಿಯೇ ಡಾ. ಚಿದಂಬರಂ ಮೃತ್ಯುಶಯ್ಯೆಯೇರಿದ

ಸುದ್ದಿ ಕೇಳಿ ಮಂಜುಳನಿಗೆ ವಿಷಾದವಾಗಲಿಲ್ಲ. ಸಹಜವಾಗಿ ಅವಳ ಮನಸ್ಸಿನಲ್ಲಿ, ಏಳಬೇಕಾಗಿದ್ದ ಅನುಕಂಪ ಏಳಲಿಲ್ಲ. ವಿಕಟಾಟ್ಟಹಾಸದಿಂದ ನಕ್ಕಳು. ಅಣ್ಣಯ್ಯ ಮಾಡಿದ ಅನ್ಯಾಯ ನೆನೆದು 'ಇದೇ ಪುರುಷ ವರ್ಗದ ಮೇಲೆ ನನ್ನ ಪ್ರತಿಕಾರ' ಎಂದುಕೊಂಡಳು.

ಮನೆಯಲ್ಲಿ ಉಳಿದಿದ್ದ ಅಲ್ಪಸ್ವಲ್ಪ ಬಟ್ಟೆಬರೆ, ಪಾತ್ರೆ ಪದಾರ್ಥ ಮಾರಿ ತಿಂದದ್ದಾಯಿತು ; ತಾಯಿಗೆ ಔಷಧ ಕೊಡಿಸಿದ್ದಾಯಿತು.

ಮಂಜುಳಾ ಅಂದಿನ ಅನ್ನ ಅಂದು ಸಂಪಾದಿಸಬೇಕಾಗಿತ್ತು.

ಕತ್ತಲಾದ ಮೇಲೆ ಬೀದಿಗಳಲ್ಲಿ ಸುಳಿದಾಡಿ ದೇವಸ್ಥಾನಗಳ ಮುಂದೆ ಓಡಿಯಾಡಿ ಸಿಕ್ಕಿದವರನ್ನು ಮನೆಗೆ ಕರೆತರುತ್ತಿದ್ದಳು. ಅವರು ಕೊಡುತ್ತಿದ್ದ ಎರಡು, ಮೂರು ರೂಪಾಯಿಗಳಲ್ಲಿ ಜೀವನ - ತಾಯಿಯ ಆರೈಕೆ.

ಸರಸ್ವತಮ್ಮನ ಸ್ಥಿತಿ ದಿನದಿನಕ್ಕೆ ಕೆಡುತ್ತ ಬಂದಿತು. ತಾನು ಉಳಿಯುವುದಿಲ್ಲವೆನ್ನುವುದು ಅವಳ ಮನಸ್ಸಿಗೆ ಖಚಿತವಾಯಿತು. ಮಂಜುಳನನ್ನು ಹತ್ತಿರ ಕರೆದು

"ಸುಧೆಯ ಮುಖ ಒಂದು ಸಲ ತೋರಿಸಿಬಿಡು. ಅವಳನ್ನು ನೋಡಿ ನಿರಾತಂಕವಾಗಿ ಪ್ರಾಣಬಿಡುತ್ತೇನೆ" ಎಂದು ಹೇಳಿದಳು.

ಮಂಜುಳನ ಮನಸ್ಸು ಅಲ್ಲೋಲ ಕಲ್ಲೋಲವಾಯಿತು.

'ಈ ಸ್ಥಿತಿಯಲ್ಲಿ ಹೋಗಿ ಸುಧೆಯನ್ನು ನೋಡುವುದೇ ?'

'ನೋಡಬೇಕು - ನೋಡದಿದ್ದರೆ ವಿಧಿಯಿಲ್ಲ. ಅಮ್ಮ ಉಳಿಯುವುದಿಲ್ಲ ಸುಧೆಯನ್ನು ನೋಡಬೇಕೆಂಬ ಅವಳ ಕೊನೆಯಾಸೆಯನ್ನು ನಾನೇಕೆ ನಿರಾಕರಿಸಲಿ'

ಎಂದು ಮನಸ್ಸು ಕಲ್ಲು ಮಾಡಿಕೊಂಡಳು.

ರಾತ್ರಿ ಕಾಲೆಳೆದುಕೊಂಡು ಥಿಯೇಟರ್ ಬಳಿ ಹೋದಳು. ಹೊರಗೆ ದೀಪವಿಲ್ಲ

"ನಾಟಕ ಮುಗಿಯಿತೇ" ಎಂದು ಗೇಟಿನಲ್ಲಿದ್ದವರನ್ನು ಕೇಳಿದಳು.

"ಇನ್ನೇನು ಮುಗಿಯುತ್ತದಮ್ಮಾ" ಎಂದು ಅವರು ಹೇಳಿದರು.

ಥಿಯೇಟರ್ ಒಳಗೆ ಹೋಗಿ ಒಂದು ಕತ್ತಲೆಯ ಮೂಲೆಯಲ್ಲಿ ಮಂಜುಳಾ ಅಡಗಿ ಕುಳಿತಳು.

ನಾಟಕ ಮುಗಿಯಿತು. ನಟರೊಂದು ಕಡೆ ನಟಿಯರೊಂದು ಕಡೆ ಮೇಕಪ್ ಅಳಿಸಲು ತೆರಳಿದರು- ಮಂಜುಳಾ ಸ್ಟೇಜ್ ಮೇಸ್ತ್ರಿಯನ್ನು ಕರೆದು ' ಸುಧಮ್ಮನವರನ್ನು ನೋಡುವುದಕ್ಕೆ ಬಂದಿದ್ದೇನೆ. ಸ್ವಲ್ಪ ಬರ ಹೇಳಪ್ಪಾ ' ಎಂದಳು.

ತಲೆಗೆದರಿಕೊಂಡು, ಹರಿಕಲು ಚಿಂದಿ ಸೀರೆ ಧರಿಸಿ ಬಂದಿದ್ದ ಮಂಜುಳ ನನ್ನು ಮೇಸ್ತ್ರಿ ಆಪಾದ ಮಸ್ತಕ ನೋಡಿದ.

" ಹೋಗಿ ಹೇಳು ಪರವಾಯಿಲ್ಲ. ನಾನೇನು ಹುಚ್ಚಿಯಲ್ಲ "

ಎಂದ ಅಣಕವಾಡಿದಳು.

ಮೇಕಪ್ ಅಳಿಸಿಕೊಳ್ಳಲು ಕೈಗೆ ಕೊಬ್ಬರಿ ಎಣ್ಣೆ ತೆಗೆದುಕೊಂಡಿದ್ದ ಸುಧಾ, ಕೈಯೊರಸಿಕೊಂಡು ಮೇಸ್ತ್ರಿಯ ಹಿಂದೆಯೇ ಬಂದಳು.

ಮಂಜುಳನನ್ನು ಮಾತನಾಡಿಸಲು ಸುಧಾ ಹೋದುದನ್ನು ವಿಂಗ್ಸ್‌ನಿಂದ ನೋಡಿದ ರಾಜಶೇಖರ, ಮರೆಯಲ್ಲಿ ನಿಂತ.

" ನನ್ನ ಗುರುತು ಸಿಕ್ಕಿತೇ ಸುಧಾ ? " ಎಂದು ಮಂಜುಳ ಕೇಳಿದಳು.

" ಅಕ್ಕಾ – ನೀನೇ. ಇಲ್ಲಿಗೆ ಹೇಗೆ ಬಂದೆ. ಮೆಲ್ಲಗೆ ಮಾತನಾಡು."

" ನಿನ್ನ ನೋಡಲು ಬಂದೆ."

" ಸಹಾಯ ಬೇಕಾಗಿತ್ತೇ ? "

" ಅಮ್ಮ ಕಾಹಿಲೆ . . . "

" ಸ್ವಲ್ಪ ಇಲ್ಲಿಯೇ ಇರು – ಮರೆಯಲ್ಲಿ ಕುಳಿತುಕೊ "

ಎಂದು ಹೇಳಿ ಕಛೇರಿಗೆ ಹೋಗಿ ಪರಮೇಶ್ವರಯ್ಯನವರಿಂದ ಐವತ್ತು ರೂಪಾಯಿ ತೆಗೆದುಕೊಂಡು ಬಂದು ಮಂಜುಳನ ಕೈಯಲ್ಲಿತ್ತು

" ಈಗ ಹೋಗು. ಇಲ್ಲಿ ನಿಲ್ಲಬೇಡ "

ಎಂದು ಅವಳನ್ನು ಹೊರಗೆ ಕಳುಹಿಸಿ ಮತ್ತೆ ಬಣ್ಣದ ಕೋಣೆಗೆ ಬಂದಳು.

ರಾಜಶೇಖರ ತನ್ನ ಮೇಕಪ್ ಅಳಿಸಿಕೊಂಡು ಸುಧೆಯನ್ನು ಕಾಯುತ್ತ ಕುಳಿತ. ಅವಳು ಮೇಕಪ್ ತೆಗೆದು, ತನ್ನ ಉಡುಗೆ ಉಟ್ಟು ಬಂದು

" ಹೋಗೋಣವೇ " ಎಂದಳು.

" ಹೋಗೋಣ - ಸ್ವಲ್ಪ ಕೂಡು." ಎಂದ.

ಪುಟ್ಟಣ್ಣನೂ ಮೇಕಪ್ ಅಳಿಸಿಕೊಂಡು ಬಂದ. ರಾಜಶೇಖರ

ಅವನನ್ನು ಹತ್ತಿರ ಕರೆದು ಕಿವಿಯಲ್ಲಿ ' ಒಂದು ಟ್ಯಾಕ್ಸಿ ಗೊತ್ತುಮಾಡಿಕೊಂಡು ಬಾ ' ಎಂದು ಹೇಳಿದ-

" ಅವರನ್ನು ಎಲ್ಲಿಗೆ ಕಳುಹಿಸಿದಿರಿ ? "

" ಸ್ವಲ್ಪ ಕೆಲಸವಿತ್ತು ಕಳಿಸಿದ್ದೇನೆ."

" ನಾವು ಹೋಗೋಣ. ಅವರು ನಿಧಾನವಾಗಿ ಬರುತ್ತಾರೆ."

" ಬರಲಿ – ಎಲ್ಲರೂ ಜತೆಯಲ್ಲಿ ಹೋಗೋಣ."

ಪುಟ್ಟಣ್ಣ ಹಿಂದಿರುಗಿ ಬರಲು ರಾಜಶೇಖರ, ಸುಧೆಯನ್ನೂ ಅವನನ್ನೂ ಕರೆದುಕೊಂಡು ಟ್ಯಾಕ್ಸಿಯಲ್ಲಿ ಬಂದು ಕುಳಿತು ಡ್ರೈವರಿಗೆ ಹೋಗಬೇಕಾದ ಎಡೆಯನ್ನು ತಿಳಿಸಿದ.

" ಎಲ್ಲಿಗೆ ಹೋಗುವುದು ? " ಎಂದು ಸುಧಾ ಕೇಳಿದಳು.

" ನಿನ್ನ ತಾಯಿ ಮನೆಗೆ."

" ಅವರ ಮನೆ ನಿಮಗೆ ಹೇಗೆ ಗೊತ್ತಾಯಿತು ? "

" ಮಂಜುಳನನ್ನು ಕೇಳಿ ತಿಳಿದುಕೊಂಡೆ."

" ಯಾವಾಗ ?

" ನೀನು ಪರಮೇಶ್ವರಯ್ಯನವರ ಹತ್ತಿರ ಹಣ ಕೇಳಿ ತರುವುದಕ್ಕೆ ಹೋದಾಗ."

" ಈಗಲ್ಲಿಗೆ ಏಕೆ ಹೋಗಬೇಕು ? "

" ನಿನ್ನ ತಾಯಿ ಮೃತ್ಯುಶಯ್ಯೆಯಲ್ಲಿದ್ದಾರೆ - ಗೊತ್ತೋ ? – ಮಂಜುಳನ ಯೋಗಕ್ಷೇಮ ವಿಚಾರಿಸುವುದೂ ನಿನಗೆ ಬೇಕಾಗಲಿಲ್ಲ."

ಗುಟ್ಟಪಳ್ಳಿಯ ರಾಜಬೀದಿಯಲ್ಲಿ ಟ್ಯಾಕ್ಸಿ ನಿಲ್ಲಿಸಿ, ರಾಜಶೇಖರ, ಸುಧಾ ಪುಟ್ಟಣ್ಣನೊಂದಿಗೆ ಒಂದು ಅಡ್ಡರಸ್ತೆಯಲ್ಲಿ ಹೊರಟು ಮಿಲ್ ಕಾರ್ಮಿಕರ ತಗಡಿನ ಮನೆಗಳ ಬಳಿಗೆ ಬಂದು ಮಂಜುಳನ ಮನೆ ಪತ್ತೆಮಾಡಿ, ಬಾಗಿಲು ತಟ್ಟಿದ.

ಒಳಗಿನಿಂದ ಒಂದು ದುರ್ಬಲ ಧ್ವನಿ ' ಯಾರು ? ' ಎಂದಿತು.

" ನಾನಮ್ಮ ಬಾಗಿಲು ತೆಗೆ "

ಮಂಜುಳಾ ಬಾಗಿಲು ತೆಗೆದಳು.

ರಾಜಶೇಖರ, ಸುಧಾ ಪುಟ್ಟಣ್ಣನೊಂದಿಗೆ ಒಳಗೆ ಪ್ರವೇಶಿಸಿದ. ಒಂದೇ

ಕೋಣೆ - ಅಲ್ಲಿಯೇ ಒಂದು ಮೂಲೆಯಲ್ಲಿ ಮಡಕೆಗಳಲ್ಲಿ ಅಡಿಗೆ - ಇನ್ನೊಂದು ಮೂಲೆಯಲ್ಲಿ ಮಣ್ಣಿನ ಪಣತೆಯ ದೀಪ – ಮತ್ತೊಂದು ಮೂಲೆಯಲ್ಲಿ ನೆಲದ ಮೇಲೊಂದು ಈಚಲ ಚಾಪೆ, ಅದರ ಮೇಲೆ ಗೋಣಿ ತಟ್ಟುಗಳನ್ನು ಹಾಸಿಕೊಂಡು, ಒಂದು ಕೊಳಕಲು ಪರಕು ಮಗ್ಗಲು ಹಾಸಿಗೆ ಹೊದೆದು ಕೊಂಡು ಸರಸ್ವತಮ್ಮ ಮಲಗಿದ್ದಳು.

ಸುಧಾ ಹೋಗಿ ತಾಯಿಯ ಬಳಿ ಕುಳಿತಳು.

ಮನೆಯಲ್ಲಿ ದುರ್ಗಂಧ ನಾರುತ್ತಿತ್ತು.

ರಾಜಶೇಖರ ಪುಟ್ಟಣ್ಣನನ್ನು ಹೊರಗೆ ಕರೆದೊಯ್ದು ‘ ಟ್ಯಾಕ್ಸಿಯನ್ನು ಇಲ್ಲಿಗೇ ತೆಗೆದುಕೊಂಡು ಬಾ’ ಎಂದು ಹೇಳಿದ.

ಸರಸ್ವತಿ ತನ್ನ ರೋಗಜೀರ್ಣ–ದುರ್ಬಲ–ಎಡದಕೈಯನ್ನು ಸುಧೆಯ ಮುಖದ ಮೇಲೆ ಆಡಿಸಿ

“ ಬಂದೆಯಾ – ಸುಧಾ ” ಎಂದಳು.

ಕತ್ತಲೆಯಷ್ಟೇ ಗಾಢವಾದ ಮೌನವಾವರಿಸಿತ್ತು.

ಟ್ಯಾಕ್ಸಿ ಬಂದು ನಿಂತ ಶಬ್ದವಾಯಿತು.

“ ಬಟ್ಟೆಗಳನ್ನು ತೆಗೆದುಕೊಂಡು ಹೊರಡು ಮಂಜುಳಾ ”

ಎಂದು ರಾಜಶೇಖರ ಹೇಳಿದ.

ಪುಟ್ಟಣ್ಣ ಒಳಗೆ ಬರಲು, ಅವನ ನೆರವು ಪಡೆದು ರಾಜಶೇಖರ ಮೆಲ್ಲನೆ ಸರಸ್ವತಿಯನ್ನು ಟ್ಯಾಕ್ಸಿಯ ಹಿಂದಿನ ಸೀಟಿಗೆ ಸಾಗಿಸಿ ಅಲ್ಲಿ ಮಲಗಿಸಿದ. ಮಂಜುಳಾ, ಸುಧಾ ತಾಯಿಯ ಪಕ್ಕದಲ್ಲಿ ಕುಳಿತರು. ಡ್ರೈವರ್ ಪಕ್ಕದಲ್ಲಿ ರಾಜಶೇಖರ, ಪುಟ್ಟಣ್ಣ ಕುಳಿತರು.

ಮನೆಯ ಮುಂದೆ ಟ್ಯಾಕ್ಸಿ ನಿಂತೊಡನೆಯೇ ರಾಜಶೇಖರ ಸುಧೆಗೆ

“ ಒಳಗೆ ಹೋಗಿ ಹಾಸಿಗೆ ಹಾಸು ”

ಎಂದು ಹೇಳಿ, ಸರಸ್ವತಿಯನ್ನು ಪುಟ್ಟಣ್ಣನ ನೆರವಿನಿಂದ ಮೆಲ್ಲನೆ ಒಳಗೆ ಕರೆತಂದು ಮಲಗಿಸಿದ.

ಮಲಗಿದೆಡೆಯಿಂದಲೇ ಸರಸ್ವತಿ ಆರ್ತಳಾಗಿ ರಾಜಶೇಖರನ ಕಡೆ ನೋಡಿದಳು. ರಾಜಶೇಖರ ಅವಳ ಸಮೀಪದಲ್ಲಿ ಕುಳಿತ. ಸರಸ್ವತಿ ಅವನ ಮುಖ ನೇವರಿಸಿ, ಏನೋ ಹೇಳಲು ಪ್ರಯತ್ನಿಸಿದಳು. ಸಾಧ್ಯವಾಗಲಿಲ್ಲ.

ರಾಜಶೇಖರ ಸುಧೆಯ ಕಡೆ ನೋಡಿದ.

ಸುಧೆ ಕಣ್ಣು ತಗ್ಗಿಸಿ ನಿಂತಿದ್ದಳು. ಅವಳ ಕಣ್ಣಿಂದ ಕೋಡಿ ಹರಿಯುತ್ತಿತ್ತು

" ಸುಧಾ – ನಿಮ್ಮಕ್ಕನಿಗೆ ಸ್ನಾನಮಾಡಿಸಿ – ಬೇರೆ ಬಟ್ಟೆಕೊಡು "

ಎಂದು ಹೇಳಿ ಪುಟ್ಟಣ್ಣನ ಕೈಯಲ್ಲಿ ಹಾಲು ತರಿಸಿ, ಸ್ವಲ್ಪ ಸ್ವಲ್ಪವಾಗಿ ಸರಸ್ವತಿಗೆ ಕುಡಿಸಿದ.

ಸರಸ್ವತಿಯ ಕೈ ಮೆಲ್ಲನೆ ರಾಜಶೇಖರನ ಕಾಲು ಹುಡುಕಿತು. ರಾಜಶೇಖರ ಅವಳು ಕಾಲು ಮುಟ್ಟಲು ಅವಕಾಶ ಕೊಡದೆ, ಅದನ್ನು ಗಟ್ಟಿಯಾಗಿ ಹಿಡಿದು

" ಆ ಕೆಲಸ ಮಾಡಬೇಡ ತಾಯಿ. ನಾನು ನಿಮ್ಮ ಮಗ. ಮಗನ ಕಾಲು ತಾಯಿ ಮುಟ್ಟಬಾರದು."

ಎಂದು ಸರಸ್ವತಿಯ ಕಾಲು ಮುಟ್ಟಿ ಕಣ್ಣಿಗೊತ್ತಿಕೊಂಡ. ಆ ನೋಟ ನೋಡಲಾರದೆ ಸರಸ್ವತಿ ಮುಖವನ್ನತ್ತ ತಿರುಗಿಸಿದಳು.

ಪುಟ್ಟಣ್ಣ ಅಲ್ಲಿ ನಿಲ್ಲಲಾರದೆ ಹೊರಗೆ ಬಂದು ಕುಳಿತು ಕಂಬನಿ ಸುರಿಸತೊಡಗಿದ.

ಪರಮೇಶ್ವರಯ್ಯ ಬಂದು ಹತ್ತಿರ ಕುಳಿತು ಪುಟ್ಟಣ್ಣನನ್ನಪ್ಪಿಕೊಂಡು

" ಬೆಳಕು – ಕಣ್ಣು ಚುಚ್ಚುತ್ತದೆಯಲ್ಲವೇ ?" ಎಂದು ಕೇಳಿದ.

## ೨೮

ಸಾವಿನೊಂದಿಗೆ ಹೋರಾಡಲು ನಿಂತಿದ್ದವರು ಡಾ|| ಆನಂದರಾವ್ ಅವರಲ್ಲ; ಸ್ವಯಂ ರಾಜಶೇಖರ. ಸರಸ್ವತಿಯನ್ನು ಬದುಕಿಸಿಕೊಳ್ಳಲು ಅವನು ಯಾವ ಪ್ರಯತ್ನವನ್ನೂ ಉಳಿಸಲಿಲ್ಲ.

ತೊಟ್ಟಿಯ ಪಕ್ಕದಲ್ಲಿದ್ದ ರೂಮನ್ನೇ ಸರಸ್ವತಿಯ ವಾಸಕ್ಕೆ ಅಣಿ ಮಾಡಲಾಗಿತ್ತು. ಮಂಚ ಅದರ ಮೇಲೆ ಶುಭ್ರವಾದ ಹಾಸಿಗೆ, ಶುಭ್ರವಾದ

ಮಗ್ಗಲು ಹಾಸಿಗೆ, ಹೊದಿಕೆ. ಸರಸ್ವತಿಯ ಹಳೆಯ ವಸ್ತ್ರಗಳನ್ನು ಮೂಲೆಗೆ ಹಾಕಿ, ಹೊಸ ಶುಭ್ರವಾದ ವಸ್ತ್ರಗಳನ್ನು ಸುಧಾ ಕೊಟ್ಟಿದ್ದಳು.

ಸುಧಾ ಸರಸ್ವತಮ್ಮನ ಆರೈಕೆ ನೋಡಿಕೊಳ್ಳುತ್ತಿದ್ದಳು. ಸಂಜೆ ಅವಳು ನಾಟಕಕ್ಕೆ ಹೋಗಿ ಹಿಂದಿರುಗುವವರೆಗೆ ಸೌಭಾಗ್ಯಮ್ಮ ಅಲ್ಲಿಯೇ ಇದ್ದು ಸರಸ್ವತಿಯ ಯೋಗಕ್ಷೇಮ ವಿಚಾರಿಸಿಕೊಳ್ಳುತ್ತಿದ್ದರು.

ಸರಸ್ವತಿಯ ಜತೆಗೆ ಮಂಜುಳನಿಗೂ ಚಿಕಿತ್ಸೆಯಾಗುತ್ತಿತ್ತು. ಡಾಕ್ಟರು ಪ್ರತಿನಿತ್ಯ ಅವಳಿಗೆ ಇಂಜಕ್ಷನ್ ಕೊಡುತ್ತಿದ್ದರು.

ಸಾವಿಗೆ ಸ್ವಾಗತ ಬಯಸುತ್ತಿದ್ದ ಸರಸ್ವತಮ್ಮ ಸಾಯಲಂಜಿದಳು. ಅವಳಿಗೆ ನರಕಕೂಪದಿಂದೆದ್ದು ಸ್ವರ್ಗಧಾಮಕ್ಕೆ ಬಂದಂತಾಗಿತ್ತು. ರಾಜ ಶೇಖರನ ಕಳಕಳಿ, ಸೌಭಾಗ್ಯಮ್ಮ, ಪುಟ್ಟಣ್ಣನ ಆದರ ಸುಧೆಯ ಅಂತಃಕರಣ ಅವಳಿಗೆ ಹೊಸ ಬಾಳೊಂದರ ಪರಿಚಯ ಮಾಡಿಸಿತ್ತು. ವಿಮಲಾ ಎದುರಿಗೆ ಆಡಿಕೊಳ್ಳುತ್ತಿದ್ದಳು, ಸ್ವರ್ಣ ಆಗಾಗ್ಗೆ ಬಂದು ಹಾಡು ಕುರುಕುತ್ತಿದ್ದಳು, ಶಂಕರ ಅಲ್ಲಿಗೇ ಬಂದು ತನ್ನ ಅಂದಿನ ಸಾಹಸ ಚರಿತ್ರೆಯನ್ನು ತಾಯಿಗೆ ವರದಿ ಒಪ್ಪಿಸುತ್ತಿದ್ದ. ಚಂದ್ರ, ರಂಗಸ್ವಾಮಿ ಪರಮೇಶ್ವರಯ್ಯ ಮೇಲಿಂದ ಮೇಲೆ ಬಂದು ಸರಸ್ವತಿಯ ಆರೋಗ್ಯ ನೋಡಿಕೊಂಡು ಹೋಗುತ್ತಿದ್ದರು 'ಇದೇ ಜೀವನ' ಎಂದು ಸರಸ್ವತಿ ಮಂದಹಾಸ ತಳೆಯುತ್ತಿದ್ದಳು.

ಯಾರು ಎಷ್ಟು ಪ್ರಯತ್ನಪಟ್ಟರೂ ತಾನು ಉಳಿಯುವ ಸಂಭವವಿಲ್ಲ ವೆಂದು ಸರಸ್ವತಿಗೆ ಚೆನ್ನಾಗಿ ಗೊತ್ತು. ಅವಳ ಬಾಳಪಾತ್ರೆ ಬರಿದಾಗಿತ್ತು. ಮೃತ್ಯು ಅವಳ ಹಿಂಬದಿಯಲ್ಲಿ ನಿಂತು ಕ್ಷಣಕ್ಷಣಗಳನ್ನು ಎಣಿಸುತ್ತಿದ್ದ.

ಸರಸ್ವತಿಯ ಬುದ್ಧಿ ತಿಳಿಯಾಗಿತ್ತು. ತನ್ನ ಸಮಸ್ತ ಜೀವನ ಎಳೆ ಎಳೆಯಾಗಿ, ಬಿಡಿಬಿಡಿಯಾಗಿ ಚಿತ್ತಫಲಕದ ಮೇಲೆ ಸುಳಿಯುತ್ತಿತ್ತು.

'ಇನ್ನೂ ಸಣ್ಣ ಹುಡುಗಿ. ಲಂಗಹಾಕಿಕೊಳ್ಳುತ್ತಿದ್ದ ವಯಸ್ಸು. ಒಂದು ಬೊಂಬೆಯನ್ನೆತ್ತಿಕೊಂಡು, ಅದನ್ನೇ ಸಿಂಗರಿಸಿ, ಅದಕ್ಕೆ ನೀರೆರೆದು ಉಣಬಿಟ್ಟು ಗಂಡನೆಂದು ಉಪಚರಿಸುತ್ತಿದ್ದುದು—

'ಸುಬ್ಬಣ್ಣ ತನ್ನ ರೂಪಕ್ಕೆ ಮರುಳಾಗಿ, ತಂದೆ ತಾಯಿಗಳ ಮನಸ್ಸಿಗೆ ವಿರೋಧವಾಗಿ ತನ್ನನ್ನು ಮದುವೆಯಾದುದು—

'ತುಮಕೂರಿನಲ್ಲಿ ತಾನು ಮೊಟ್ಟ ಮೊದಲಿಗೆ ಸುಬ್ಬಣ್ಣನ ಸ್ನೇಹಿತ

ನೊಬ್ಬನ ಸಹವಾಸ ಮಾಡಿದುದು – ತುಮಕೂರಿನಲ್ಲಿಯೇ ಹಲವರ ಸ್ನೇಹ ವಾದುದು—

‘ ತನ್ನ ಗುಟ್ಟು ಬಯಲಾಗಿ ಸುಬ್ಬಣ್ಣ ಆಗ್ರಹಗೊಂಡುದು—

‘ ಸುಬ್ಬಣ್ಣನ ದುರಂತ ಜೀವನ - ಸಾವು—

‘ ಮಂಜಯ್ಯ, ನಂಜಪ್ಪ, ರಾಮರಾಜಪ್ಪ, ಪೀತಾಂಬರ, ಶ್ರೀರಂಗ ರಾಯರು, ಶ್ರೀಕಂಠಮೂರ್ತಿ, ನಾರಾಯಣ—

‘ ಈ ಮಧ್ಯೆ ಜೀವಣ್ಣರಾಯನ ಸ್ನೇಹ—

‘ ಕಂಪೆನಿ ಬಿಟ್ಟು ಬಂದದ್ದು.

‘ ಸನ್‌ರೈಸ್ ಹೊಟೇಲ್ - ಗಣೇಶರಾಯ, ಆದಿರಾಜಯ್ಯ, ಇನ್ನೂ ಯಾರು ಯಾರೋ—

‘ ಮುತ್ತಮ್ಮನ ಮನೆಯಲ್ಲಿ ವಾಸ – ದೇವರಾಜ್—

‘ ದೇವರಾಜನ ದುರಂತ—

‘ ಪೋಲೀಸಿನವರ ಕೈಗೆ ಸಿಕ್ಕಿ, ಒಂದು ರಾತ್ರಿ ಪೋಲೀಸ್ ಸ್ಟೇಷನ್ನಿನಲ್ಲಿ ಕೊಳೆಯುತ್ತ ಬಿದ್ದಿದ್ದದ್ದು – ಕೋರ್ಟಿನಲ್ಲಿ ಶಿಕ್ಷೆ—

‘ ಈಶ್ವರಯ್ಯನವರ ಮನೆಗೆ ಬಂದಿದ್ದು—

‘ ಕಾಹಿಲೆ – ಅಲ್ಲಿಂದ ತಗಡಿನ ಮನೆಯ ವಾಸ—

‘ ಕೊನೆಗೆ ಇಲ್ಲಿಗೆ ಬಂದದ್ದು—’

ಕಪ್ಪು ಹಲಗೆಯ ಮೇಲೆ ಉಲ್ಲೇಖವಾಗಿದ್ದ ಈ ಅನಿಷ್ಟ ಜೀವನವನ್ನು ಅಳಿಸಿ ಮತ್ತೆ ಜೀವನ ಆರಂಭಿಸಲು ಸಾಧ್ಯವಾಗಿದ್ದರೆ . . . ? ಎಂದುಕೊಳ್ಳುವಳು.

ಪಶ್ಚಾತ್ತಾಪ ಅವಳ ಹೃದಯವನ್ನು ಕೊರೆದು ಕೊರೆದು ಬರಿಗೂಡು ಮಾಡತೊಡಗಿತು.

ಔಷಧ, ಉಪಚಾರ, ಟಾನಿಕ್ಕು, ಇಂಜಕ್ಷನ್ ಎಲ್ಲವೂ ನಿರರ್ಥಕ ವಾಗುತ್ತ ಬಂದಿತು.

ಸರಸ್ವತಿಯ ಮನೋವ್ಯಾಧಿಯನ್ನು ಪರಿಹರಿಸಿದ ಹೊರತೂ ಅವಳ ದೇಹಸ್ಥಿತಿ ಉತ್ತಮಗೊಳ್ಳುವುದಿಲ್ಲವೆಂಬುದನ್ನು ರಾಜಶೇಖರ ಗ್ರಹಿಸಿ, ಒಂದು ದಿನ ಅವಳ ಸಮೀಪದಲ್ಲಿ ಬಂದು ಕುಳಿತು

" ನೀವು ಹೀಗೆ ಹೆಚ್ಚು ದಿನ ಮಲಗಿರಲು ಸಾಧ್ಯವಿಲ್ಲಮ್ಮ." ಎಂದ.

" ಏಕಪ್ಪಾ ?"

" ಸುಧಾ ಮದುವೆ ನಿಶ್ಚಯವಾಗಿದೆ. ನೀವು ಎದ್ದು ಓಡಿಯಾಡ ಬೇಡವೇ ?"

ಸರಸ್ವತಿಯ ಮುಖ ಪ್ರಸನ್ನವಾಯಿತು. ತನ್ನ ಮಕ್ಕಳನ್ನು ಮದುವೆ ಯಾಗುವ ಪುಣ್ಯಾತ್ಮರಿದ್ದಾರಲ್ಲಾ ಎಂದುಕೊಂಡು

" ಸುಧಾ ಮದುವೆಯೇ ? " ಎಂದಳು.

" ಅಳಿಯ ಯಾರು ಗೊತ್ತಿಲ್ಲವೇ ? "

" ಇಲ್ಲ."

ರಾಜಶೇಖರ ಪುಟ್ಟಣ್ಣನನ್ನು ಕರೆದು

" ನಿಮ್ಮ ಅತ್ತೆಯವರಿಗೆ ನಮಸ್ಕಾರಮಾಡಿ, ಅವರ ಆಶೀರ್ವಾದ ಪಡೆದು ಕೊಳ್ಳಯ್ಯ "

ಎಂದು ಹೇಳಿದ. ಪುಟ್ಟಣ್ಣ ಸರಸ್ವತಿಗೆ ನಮಸ್ಕಾರಮಾಡಿ ಒಂದೆಡೆ ನಿಂತ. ಸುಧಾ, ಮಂಜುಳಾ ತಾಯಿಯ ಇಕ್ಕೆಲಗಳಲ್ಲಿ ಕುಳಿತಿದ್ದರು.

" ಇವರ ತಾಯಿ ನಾನಲ್ಲ ರಾಜಶೇಖರ್ – ನೀನು."

" ಮಾತೃದೇವೋ ಭವ."

" ನಾನು ಮಾತೃದೇವಿಯಲ್ಲ - ಮೃತ್ಯುದೇವಿ. ನೋಡು – ಮಂಜುಳ ನನ್ನು ಯಾವ ಸ್ಥಿತಿಗೆ ಇಳಿಸಿದ್ದೇನೆ."

" ಪ್ರಾಚೀನ ಕರ್ಮ – ಯಾರೇನು ಮಾಡಲು ಸಾಧ್ಯ ? "

" ಕರ್ಮ ನನಗೇನೂ ಮಾಡಲಿಲ್ಲ ರಾಜಶೇಖರ್ - ಎಲ್ಲಾ ಸ್ವಯಂ ಕೃತಾಪರಾಧ. ಗಂಡ, ಮಕ್ಕಳು ಎಲ್ಲರಿಗಿಂತ ನನ್ನ ಸುಖವೇ ಹೆಚ್ಚಿನದೆಂದು ಭಾವಿಸಿದೆ. ನನ್ನ ಸುಖದ ಫಲವಾಗಿ ಎಲ್ಲರನ್ನೂ ಬಲಿಗೊಟ್ಟೆ. ರಾಜ ಶೇಖರ್, ನೀನು ಇಲ್ಲಿಗೆ ನನ್ನ ಕರೆದುಕೊಂಡು ಬಂದು ಮಹೋಪಕಾರ ಮಾಡಿದೆ."

" ನನ್ನ ಕರ್ತವ್ಯ ನಾನು ಮಾಡಿದೆ."

" ನನ್ನನ್ನು ಉದ್ಧರಿಸಬೇಕಾದ ಅಗತ್ಯವಿರಲಿಲ್ಲ. ನಾನು ನಿನಗೆ ಯಾವ ಉಪಕಾರವನ್ನೂ ಮಾಡಿಲ್ಲ."

“ನಾನೂ ಸುಧಾ ರಂಗದಮೇಲೆ ಎಲ್ಲರಿಗೂ ದೊಡ್ಡ ಉಪದೇಶ ಮಾಡುತ್ತಿದ್ದೇವೆ. ಅದನ್ನು ಕಾರ್ಯೋನ್ಮುಖ ಮಾಡಿ ತೋರಿಸಬೇಕಾಗಿತ್ತು.”

“ನಿನ್ನ ನಾಟಕ ನಾನು ನೋಡಲಿಲ್ಲ. ಅದರಲ್ಲಿ ನನ್ನದಾಗಿ ಒಂದು ಮಾತು ಸೇರಿಸುವೆಯಾ ?”

“ಹೇಳಿ”

“ಮನುಷ್ಯ ಸುಖಬೇಕೆಂದು ಬಯಸುವುದು ಸ್ವಾಭಾವಿಕ. ಆದರೆ ಆ ಸುಖ ಎಂಥದು ಎಂದವನು ನಿರ್ಧರಿಸಿಕೊಳ್ಳಬೇಕು. ಸುಖ, ಅದನ್ನು ಸಾಧಿಸುವ ಮಾರ್ಗ ಎರಡೂ ಶುದ್ಧವಾಗಿರಬೇಕು. ಲೋಕದ ಸುಖವೇ ತನ್ನ ಸುಖ ಎಂದು ತಿಳಿಯುವವನೇ ನಿಜವಾದ ಸುಖಿ. ತನ್ನ ಸುಖವನ್ನಷ್ಟೇ ಹುಡುಕುವವನಿಗೆ ಅದು ಮಾಯಾಸ್ವರ್ಣಮೃಗವಾಗುತ್ತದೆ . . . ನನ್ನ ಬಾಳಿನ ಈ ಕೊನೆಯ ಗಳಿಗೆಯಲ್ಲಿ ಸುಖದ ರಹಸ್ಯ ನನಗೆ ಅರ್ಥವಾಗಿದೆ – ನಿಮ್ಮೆಲ್ಲರ ಪ್ರೇಮ – ವಿಮಲಾ, ಸ್ವರ್ಣರ ಮುದ್ದು ಮಾತು - ಸೌಭಾಗ್ಯಮ್ಮನವರ ಅಂತಃಕರಣ ಇಲ್ಲೇ ಅಲ್ಲವೇ ಸುಖದ ಅಸ್ತಿಭಾರ ಇರುವುದು.”

ಎಂದು ಮಂಜುಳನನ್ನು ಹತ್ತಿರ ಕರೆದು

“ಮಂಜೂ, ನಿನಗೆ ನಾನು ಮಾಡಬಾರದ ಅನ್ಯಾಯ ಮಾಡಿದೆ. ಕ್ಷಮಿಸು. ಆದರೆ ಈಗಲೂ ಕಾಲ ಮಿಂಚಿಹೋಗಿಲ್ಲ. ಈ ನಿನ್ನ ಅಣ್ಣ ನಿನ್ನ ಕಾಪಾಡುತ್ತಾನೆ – ಸನ್ಮಾರ್ಗ ತೋರಿಸುತ್ತಾನೆ – ಕಳೆದು ಹೋದ ಬಾಳನ್ನು ಮರೆತು ಬಿಡು. ನಿನ್ನ ಕೆಟ್ಟ ತಾಯನ್ನು ಜ್ಞಾಪಿಸಿಕೊಳ್ಳಬೇಡ. ಭಗವಂತ ಕೊಟ್ಟಿರುವ ಆಯುಷ್ಯವನ್ನು ಅವನ ಸೇವೆಗೆ ಮೀಸಲಾಗಿಡು.”

ಎಂದೆನ್ನುತ್ತಿರುವಂತೆ ಕಣ್ಣು ಮುಚ್ಚಿದಳು. ಅವಳ ಮುಖದ ಮೇಲೆ ತೆಳುವಾಗಿ ತಿಳಿನಗೆಯ ಬೆಳದಿಂಗಳು ಪಸರಿಸಿತು. ಯಾವ ಶಾಂತಿಯನ್ನು ಆ ಜೀವ ಬಯಸುತ್ತಿತ್ತೋ ಅದು – ಆಗ ಲಭಿಸಿತು.

* * *

ಅಂದು ರಾಜಶೇಖರ ‘ಪತಿತ ಪರಿವರ್ತನ’ ಪ್ರದರ್ಶನ ನಿಲ್ಲಿಸಿದ.

೨೯

ಶ್ರೀರಾಮಪುರದ ಕೂಲಿಗಾರರ ಓಣಿಯಲ್ಲಿ ಒಂದು ವಠಾರದಲ್ಲಿ ಮುತ್ತಮ್ಮನಿಗೆ ಮನೆ ಸಿಕ್ಕಿತ್ತು. ಅಲ್ಲಿಯೇ ನಾಲ್ಕಾರು ಕೂಲಿಗಾರರ ಸಂಸಾರ. ದರಿದ್ರಲಕ್ಷ್ಮಿ ಅಲ್ಲಿಯೇ ಬಂದು ನೆಲಸಿದ್ದಳು.

ಎತ್ತ ನೋಡಿದರೂ ಹೊಲಸು – ಹಸಿವು. ಮಗುವೊಂದು ಚೂರು ರೊಟ್ಟಿ ಹಿಡಿದು ಹೊರ ಬಂದರೆ ನಾಲ್ಕು ಮಕ್ಕಳು ಮುತ್ತಿ ಅದನ್ನು ಕಿತ್ತುಕೊಳ್ಳುತ್ತಿದ್ದವು. ಮಕ್ಕಳ ಪಕ್ಷ ಹಿಡಿದು ಅವುಗಳ ತಾಯಂದಿರು ವ್ಯಾಜಕ್ಕೆ ನಿಲ್ಲುತ್ತಿದ್ದರು. ವ್ಯಾಜ್ಯ ಮಾರಾಮಾರಿಯಾಗುತ್ತಿತ್ತು. ಹೆಂಗಸರ ಪಕ್ಷ ವಹಿಸಿ ಗಂಡಸರು ವ್ಯಾಜಕ್ಕೆ ನಿಲ್ಲುತ್ತಿದ್ದರು. ಹೆಂಡದ ಅಮಲಿನಲ್ಲಿ ಯಾರಿಗೂ ಮೈ ಮೇಲೆ ಪ್ರಜ್ಞೆಯಿಲ್ಲ.

ಮನೆಯಲ್ಲಿ ಹೆಂಗಸರು ಮಕ್ಕಳು, ಉಪವಾಸ - ಪಡಖಾನೆಯ ಮುಂದೆ ಅವರ ಗಂಡಸರ ವಿಲಾಸ.

ನಾಲ್ಕು ದಿನ ಕೈಯಲ್ಲಿದ್ದುದನ್ನು ಖರ್ಚು ಮಾಡಿಕೊಂಡು ಮುತ್ತಮ್ಮ, ಭಾಗ್ಯಮ್ಮ ತಿನ್ನುತ್ತ ಕುಳಿತರು.

ಮುತ್ತಮ್ಮನಿಗೆ ಹೊಟ್ಟೆ ಪಾಡಿನ ಯೋಚನೆಯ ಜತೆಗೆ ಪುಟ್ಟಿಯ ಯೋಚನೆ. 'ಈ ಚಂದಣದ ಬೊಂಬೆಗೇನು ಗತಿ' ಎಂದು ಯೋಚಿಸುವಳು ಆ ಸಮಯದಲ್ಲಿ ಎದುರಿಗೆ ಪುಟ್ಟಿ ಸುಳಿದರೆ ಅವಳನ್ನು ಹೀನಾಮಾನ ಬಯ್ಯುವಳು. ಪುಟ್ಟಿ ರಾಗ ತೆಗೆದು ಹುಯ್ಯಲಿಡುತ್ತಿದ್ದಳು.

ಭಾಗ್ಯಮ್ಮನಿಗೊಂದು ದಿನ ಮುತ್ತಮ್ಮ ಹೇಳಿದಳು

"ಇಂಗೆ, ಇರೋದು ತಿನ್ಕೋತಾ ಕುಂತರೆ ಆಗ್ತೈತಾ ಬಾಗ್ಯಮ್ಮ."

"ಏನ್ಮಾಡಾದಮ್ಮ."

"ಕೈಲಿದ್ದ ಕಾಸೂ ಮುಗೀತಾ ಬಂತು."

"ಔದು - ಏನ್ಮಾಡಾಣಾ ಏಳು ?"

"ಪಿಳ್ಳಣ್ಣನ್ನ ಬಾಂತ ಏಳಾಕೆ ಆಗಾಕಿಲ್ವಾ ?"

"ಪಿಳ್ಳಣ್ಣ !"

" ಊ ! ಅಪರಂಜೀನೂ ಬಾಂತ ಏಳು."

" ತಿರುಗಿ ಇದೇ ಕಸುಬು ಮಾಡಾದಾ ಮುತ್ತಮ್ಮ. ಮರ್‍ವಾದೆ ಆದ್ದು ಸಾಲ್ದಾ. ಆ ಅಳೀಮಗ ಪೋಲೀಸಿನೋನು ಬೂಡ್ಸ್‌ಕಾಲಲ್ಲಿ ನಮ್ಮಿಬ್ಬರನ್ನೂ ಒದ್ದನೇ ?"

" ಅವನ ಕಾಲ್ಗೇ ಉಳ ಬೀಳ್ತೈತೆ ಸುಮ್ಕಿರು."

" ಏನಾದ್ರಾ ಚಾಕ್ರಿಮಾಡಿ ಒಟ್ಟೆ ತುಂಬ್ಕೋಳ್ಳೋಣ ಮುತ್ತಮ್ಮ."

" ಏನು ಚಾಕರಿ ?"

" ಯಾರ ಮನೇಲಾದ್ರು ಮುಸುರೆ ತಿಕ್ಕಿದರಾಯ್ತು. ತಂಗಳನ್ನ ಚಿಕ್ತೈತೆ - ಕೈಗೆ ನಾಲಕ್ಕು ಕಾಸೂ ಕೊಡ್ತಾರೆ."

" ನೀನೂ ನಾನೂ ಚಾಕರಿ ಮಾಡಾಕೆ ಆಗ್ತೈತಾ ಬಾಗ್ಯಮ್ಮ. ಅಬ್ಯಾಸವಿಲ್ದ ಆರವ ಓಮ ಮಾಡಿ ಗಡ್ಡ ಮಿಸೆ ಸುಟ್ಟಕೊಂಡನಂತೆ. ನಮಗಿರೋದೆ ನಮ್ಮ ಕಸುಬು. ಅದನ್ನ ಬಿಟ್ಟರೆ ಬಗವಂತ ಮೆಚ್ತಾನಾ."

" ಕೋರ್ಟಿನ ಮುಖ ಕಂಡು ಬಂದಾಯ್ತು - ಈ ಸಾರಿ ಜೇಲೊಳಗೇ ಕುಂತಿರ್ಬೇಕಾಗ್ತೈತೆ."

" ಅದೂ ಒಳ್ಳೇದಾಯ್ತು ಬುಡು. ಜೇಲಿನೋರು ನಮ್ಗೆ ಒಟ್ಟೆಗಾಕಿ-ಬಟ್ಟೆ ಕೊಡ್ತಾರೆ."

" ನಮ್ದು ಓಗಲಿ ಮುತ್ತಮ್ಮ - ಪುಟ್ಟನ್ನೇನು ಮಾಡ್ತೀ ?"

" ಯಾರನ್ನಾದ್ರೂ ಉಡ್ಕಿ ಮದ್ವೆ ಮಾಡ್ಬೇಕು. ಈ ಸೀಕಲ ಮುಂಡೇದ್ನ ಯಾವೋನು ಕಟ್ಕೊಂತಾನೆ ಏಳು. ದುಡ್ಡೈತಾ - ಇದ್ಯ ಐತಾ - ಬುದ್ದಿ ಐತಾ - ಒಳ್ಳೇ ಮನ್ತನ ಐತಾ -?"

" ಅವಳ ಗತಿ ? "

" ನನ್ನ ಕಸಬು ಐತಲ್ಲಾ."

" ನಮ್ಗೆ ಬೇರೆ ದಿಕ್ಕೇ ಇಲ್ವಾ ಮುತ್ತಮ್ಮ."

" ದಿಕ್ಕು ತೋರೋವರ್‍ಗೆ ಕಸುಬು ಮಾಡ್ತಾ ಇರಾದು. ಆ ಮ್ಯಾಕೆ ಬುಟ್ಟು ಬುಡೋದು. ಎಲ್ಲಾ ಕಸುಬಿಗೂ ಕಷ್ಟ ಇದ್ದೇ ಇರತೈತೆ - ಅಂಗೇ

ನಮ್ಮ ಕಸುಬಿಗೂ ಕಷ್ಟ ಐತೆ - ಪೋಲೀಸಿನೋರ ಕಾಟ ಐತೆ - ನಾವು ಉಷಾರೀಲಿ ಮಾಡ್ಬೇಕು - ಪೋಲೀಸ್ನೋರೂ ಮನುಸರು ತಾನೇ - ಅವರಿಗೇನು ನಮ್ಮ ಕಸುಬು ಬ್ಯಾಡ್ವಾ ? "

ಭಾಗ್ಯಮ್ಮನಿಗೆ ಉತ್ತರ ಹೊಳೆಯಲಿಲ್ಲ.

ಅಂದೇ ಪಿಳ್ಳಣ್ಣನನ್ನು ಹುಡುಕಿಕೊಂಡು ಹೊರಟಳು.

ಪುಟ್ಟ ತಲೆಗೆದರಿಕೊಂಡಿದ್ದುದನ್ನು ಕಂಡು ಮುತ್ತಮ್ಮ

" ತಲೆ ಬಾಚ್ಕೊಳ್ಳೇ ಬೇವಾರ್ಸಿ - ನೀನೊಂದು ಸನೇಸ್ವರ "

ಎಂದು ಆರ್ಭಟಿಸಿದಳು.



